# ಪೀಠಿಕೆ

ಪಂಪಮಹಾಕವಿಯ ಆದಿಪುರಾಣವು ದಿವಂಗತ ಪಂಡಿತ ಎಸ್. ಜಿ. ನರಸಿಂಹಾಚಾರ್ಯರಿಂದ ಮೊದಲು ಸಲ ಪರಿಷ್ಕೃತವಾಗಿ ಮೈಸೂರ ಸರಕಾರದ ಪೌರ್ವಾತ್ಯ-ಗ್ರಂಥಾಲಯ-ಮಾಲೆಯಲ್ಲಿ ( Oriental Library Series) ೧೯೦೦ ರಲ್ಲಿ ಅಚ್ಚಾಗಿ ಪ್ರಕಟವಾಯಿತು. ಈ ಐವತ್ತು ವರ್ಷಗಳ ಅವಧಿಯಲ್ಲಿ ಅದರ ಎಲ್ಲ ಪ್ರತಿಗಳು ಮುಗಿದು ಹೋಗಿ ಗ್ರಂಥವು ದುರ್ಲಭವಾಯಿತು. ಅದರ ಬಗೆಗೆ ಬೇಡಿಕೆಯು ಮಾತ್ರ ಕಡಿಮೆ ಪ್ರಮಾಣದಿಂದ ಹೆಚ್ಚುತ್ತ ಬಂದಿತು. ಶ್ರೀ. ಜಿನಸೇನಾಚಾರ್ಯರ ಪೂರ್ವಪುರಾಣವನ್ನು ಇದಕ್ಕೆ ಸರಿಹಚ್ಚಿ ಓದುತ್ತಿರುವಾಗ ಪೂರ್ವಪುರಾಣದೊಳಗಿನ ಪದ್ಯಗಳನ್ನೂ, ಉಪಮೆಗಳನ್ನೂ, ಕೂಡುನುಡಿಗಳನ್ನೂ, ಗಾದೆಗಳನ್ನೂ ಪಂಪನು ಈ ಪುರಾಣದಲ್ಲಿ ಹೇರಳವಾಗಿ ಉಪಯೋಗಿಸಿಕೊಂಡುದು ಕಂಡುಬಂದಿತು. ಈ ಕಾರಣಗಳಿಂದಾಗಿ ಆದಿಪುರಾಣವನ್ನು ಮತ್ತೊಮ್ಮೆ ಸಂಪಾದಿಸಿ ಪ್ರಕಟಿಸುವ ಕಲ್ಪನೆ ತಲೆದೋರಿತು. ಈ ಸಂದರ್ಭದಲ್ಲಿ ಹಸ್ತಲಿಖಿತ ಪ್ರತಿಗಳನ್ನು ದೊರಕಿಸುವ ಕಠಿಣಕಾರ್ಯವು ದಿವಾಣ ಬಹಾದ್ದೂರ ಚೌಗುಲೆಯವರಿಂದ ಸುಗಮವಾಯಿತು. ಅವರು ಮೂಡಬಿದರೆಯ ಜೈನಮಠದ ಶ್ರೀ. ಚಾರುಕೀರ್ತಿ ಭಟ್ಟಾರಕ ಪಟ್ಟಾಚಾರ್ಯರ ಶ್ರುತಭಾಂಡಾರದೊಳಗಿನ ಎರಡು ಓಲೆಗರಿಯ ಪ್ರತಿಗಳನ್ನು ದೊರಕಿಸಿಕೊಂಡು ಬಂದರು. ಅವುಗಳ ಸಹಾಯದಿಂದ ಅಚ್ಚಿನ ಪ್ರತಿಯನ್ನು ಸಿದ್ಧಗೊಳಿಸಲು ಅನುಕೂಲವಾಯಿತು.

ಕೊಲ್ಹಾಪೂರ ರಾಜಾರಾಮ ಕಾಲೇಜದ ಪ್ರಾಧ್ಯಾಪಕರಾದ ಡಾ. **ಎ. ಎನ್. ಉಪಾಧ್ಯೆ**ಯವರು ಕಾಲಕಾಲಕ್ಕೆ ತಕ್ಕ ಸಲಹೆಸೂಚನೆಗಳನ್ನು ನೀಡಿ ಗ್ರಂಥದಲ್ಲಿ ದೋಷಗಳು ಕಡಿಮೆಯಾಗಲು ಸಹಾಯ ಮಾಡಿದುದಲ್ಲದೆ ಸಂಸ್ಕೃತ ಪ್ರಾಕೃತಕೃತಿಗಳಲ್ಲಿರುವ ಆದಿಪುರಾಣಗಳ ಪಟ್ಟಿಯನ್ನು ಒದಗಿಸಿಕೊಟ್ಟು ಉಪಕರಿಸಿದರು. ಅವರಿಗೆ ನಮ್ಮ ಅನಂತ ವಂದನೆಗಳು. ಸೊಲ್ಲಾಪುರದ ಪಂಡಿತ ಶ್ರೀ. **ಜಿನದಾಸ ಫಡಕುಲೆ** ಶಾಸ್ತ್ರಿಯವರು ಪಾರಿಭಾಷಿಕ ಕೋಶವನ್ನು ತಯಾರಿಸುವಲ್ಲಿ ನಮಗೆ ತುಂಬಾ ಸಹಾಯಮಾಡಿದರು. ಪ್ರಿ. ಡಾ. **ಎಸ್. ಸಿ. ನಂದಿ**ಮಠರವರು ಉಪೋದ್ಘಾತವನ್ನು ಬರೆಯುವಲ್ಲಿ ಅನೇಕ ಸಲಹೆಗಳನ್ನು ನೀಡಿ ತಮ್ಮ ಸಹಾನುಭೂತಿಯನ್ನು ತೋರಿದರು. ರಾಣಿ ಪಾರ್ವತಿದೇವಿ ಕಾಲೇಜದ ವನಸ್ಪತಿಶಾಸ್ತ್ರದ ಪ್ರಾಧ್ಯಾಪಕರಾದ ಶ್ರೀ. ಬಿ. ಆರ್. **ಪಂಡಿತರವರು** ಅನೇಕ ವನಸ್ಪತಿಗಳನ್ನು ಕಂಡು ಹಿಡಿಯಲು ಸಹಾಯನಾಗಿ ಮುಂದೆ ಬಂದರು. ಈ ಎಲ್ಲ ಮಹನೀಯರಿಗೆ ನಮ್ಮ ಕೃತಜ್ಞತೆಯ ವಂದನೆಗಳು.

ಈ ಗ್ರಂಥದ ಅಚ್ಚಿನ ಪ್ರತಿಯನ್ನು ತಯಾರಿಸುತ್ತಿದ್ದಾಗ **ಶ್ರೀ. ಎನ್. ಎಸ್. ಲೋಕೂರ,** ಬಿ. ಎ., ಎಲ್ಎಲ್ ಬಿ., ಮುಂಬಯಿ ಹಾಯಕೋರ್ಟಿನ ನಿವೃತ್ತ ನ್ಯಾಯಮೂರ್ತಿಗಳವರು ಆ ಕಾರ್ಯವನ್ನು ಪ್ರತ್ಯಕ್ಷ ಕಂಡು ಸಹಾನುಭೂತಿಯಿಂದ ಅದಕ್ಕೆ ಮುನ್ನುಡಿಯನ್ನು ಬರೆದುಕೊಡುವುದಾಗಿ ವಚನವಿತ್ತರು. ಅದರಂತೆ ತಮ್ಮ ಕಾರ್ಯಬಾಹುಲ್ಯದಲ್ಲಿ ಅನುವುಮಾಡಿಕೊಂಡು ಸಕಾಲದಲ್ಲಿ ತಮ್ಮ ಮುನ್ನುಡಿಯನ್ನು ಕಳುಹಿದರು. ಅವರಿಗೆ ನಾವು ಚಿರಋಣಿಗಳು.

ಈ ಗ್ರಂಥವು ಯಶಸ್ವಿಯಾಗಿ ಪ್ರಕಟವಾಗಲೆಂದು ತಮ್ಮ ವರದಹಸ್ತವನ್ನು ನಮ್ಮ ತಲೆಯ ಮೇಲಿರಿಸಿ ಆಶೀರ್ವದಿಸಿದ ಕೊಲ್ಹಾಪುರದ ಜೈನಮಠದ ಶ್ರೀಲಕ್ಷ್ಮೀಸೇನ ಭಟ್ಟಾರಕ-ಪಟ್ಟಾಚಾರ್ಯರಿಗೆ ನಮ್ಮ ಕೃತಜ್ಞತೆಯ ನಮೋಸ್ತುಗಳು.

ಸ್ವಸ್ತಿಶ್ರೀ ೧೦೮ ಪಾಯಸಾಗರ-ದಿಗಂಬರಾಚಾರ್ಯರಿಗೆ ಅಚ್ಚಾದ ಆದಿಪುರಾಣದ ಒಂದು ಪ್ರತಿಯನ್ನು ಕೊಡಲಾಗಿತ್ತು. ಅದನ್ನು ಅವರು ಓದಿಕೊಂಡು ಆನಂದಿಸಿ, ಶ್ರೀಕ್ಷೇತ್ರ ಸ್ತವನಿಧಿಯಲ್ಲಿ ೨೪-೧೦-೧೯೫೨ ರಂದು ನಡೆದ ತಮ್ಮ ಕೇಶಲೋಚನಮಹೋತ್ಸವದಲ್ಲಿ ನೆರೆದ ಸುಮಾರು ೫೦೦೦ ಶ್ರಾವಕರ ಮುಂದೆ ಈ ಗ್ರಂಥದ ವಿಷಯಕವಾದ ತಮ್ಮ ತೃಪ್ತಿಯನ್ನು ವಿಶದಪಡಿಸಿದುದಲ್ಲದೆ ಎಲ್ಲರೂ ಇದರ ಪ್ರತಿಗಳನ್ನು ಸಂಗ್ರಹಿಸಬೇಕೆಂದು ಬೋಧಿಸಿದರು. ಮತ್ತು ಸಂಪಾದಕರಿಗೆ ಆಯುರಾರೋಗ್ಯವನ್ನು ಬಯಸಿ ಅವರಿಂದ ಇನ್ನೂ ಹೆಚ್ಚಿಗೆ ಸಮಾಜಸೇವೆ, ಸಾಹಿತ್ಯಸೇವೆ ನಡೆಯಲೆಂದು ಆಶೀರ್ವದಿಸಿದರು. ಅವರಿಗೆ ನಮ್ಮ ಕೃತಜ್ಞತೆಯ ನಮೋಸ್ತುಗಳು.

ಈ ಗ್ರಂಥವನ್ನು ಪ್ರಕಟಿಸುವ ಕಾರ್ಯದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಅಧಿಕಾರಿಗಳು ಸಹಾಯಧನವನ್ನು ಕೊಟ್ಟು ಅಂಶತಃ ಸಹಾಯಮಾಡಿದ ಬಗೆಗೆ ಅವರಿಗೆ ನಮ್ಮ ಕೃತಜ್ಞತೆಗಳನ್ನು ಅರ್ಪಿಸುತ್ತೇವೆ.

ಗ್ರಂಥವು ಅಚ್ಚಾಗುತ್ತಿದ್ದಾಗ **ಶ್ರೀ. ಪ್ರ. ಗೋ. ಕುಲಕರ್ಣಿಯವರು** ಅಚ್ಚಿನ ಕರಡುಗಳನ್ನು ಓದಿಕೊಟ್ಟು ತುಂಬಾ ಸಹಾಯಮಾಡಿದರು. ಅವರಿಗೆ ನಮ್ಮ ಅನಂತ ವಂದನೆಗಳು.

ಶ್ರೀ ಚಂದ್ರಪ್ರಭ-ಅಚ್ಚುಕೂಟದ ಒಡೆಯರಾದ **ಅನಂತರಾವ ಚೌಗುಲೆ**ಯವರು ಗ್ರಂಥವನ್ನು ಪರಿಶ್ರಮಪೂರ್ವಕ ಅಚ್ಚುಮಾಡಿಸಿ ಕೊಟ್ಟಿದ್ದಾರೆ. ಅವರ ಋಣವನ್ನು ಮರೆಯಲಾರೆವು.

ಗ್ರಂಥವನ್ನು ಸರ್ವಾಂಗಸುಂದರಗೊಳಿಸಬೇಕೆಂದು ನಾವು ಹೊರಟಿದ್ದರೂ ನಮ್ಮ ಉದ್ದೇಶವು ಸಫಲವಾಗಿಲ್ಲವೆಂಬುದನ್ನು ನಾವು ಒಪ್ಪುತ್ತೇವೆ. ದೋಷಗಳು ಹೆಚ್ಚಾಗಿ ಉಳಿದಿರುವುದು ಸಂಸ್ಕೃತಪದ್ಯಗಳಲ್ಲಿ ಮತ್ತು ಸಂಸ್ಕೃತಭೂಯಿಷ್ಠವಾದ ಕನ್ನಡದ ಭಾಗಗಳಲ್ಲಿ. ಈ ಸಂದರ್ಭಗಳಲ್ಲಿ ಹಸ್ತಲಿಖಿತಗಳಿಂದ ನಮಗೆ ಸಹಾಯವಾಗಲೇ ಇಲ್ಲ. ತತ್ತ್ವಾರ್ಥಸೂತ್ರ, ಪೂರ್ವಪುರಾಣ, ಯಶಸ್ತಿಲಕಚಂಪು, ಚಂದ್ರಪ್ರಭ ಪುರಾಣ, ಶಾಂತಿಪುರಾಣ ಮುಂತಾದ ಗ್ರಂಥಗಳ ಆಧಾರದಿಂದ ಕೆಲವು ತಿದ್ದುಪಡಿಗಳನ್ನು ಮಾಡಿಕೊಂಡಿದ್ದೇವೆ. ಕಾಗದದ ಕೊರತೆಯ ಮೂಲಕವಾಗಿ ಉಪೋದ್ಘಾತವನ್ನು ಅನಿವಾರ್ಯವಾಗಿ ಸಂಕ್ಷೇಪಿಸಬೇಕಾಯಿತು. ಈ ಸಂದರ್ಭದಲ್ಲಿ ಓದುಗರು ನಮ್ಮನ್ನು ಕ್ಷಮಿಸಬೇಕೆಂದು ಪ್ರಾರ್ಥನೆ. ಮತ್ತೆ ಸಹೃದಯರಾದ ಪಂಡಿತರು ತಾವು ಗ್ರಂಥದಲ್ಲಿ ಕಂಡು ಹಿಡಿಯುವ ದೋಷಗಳನ್ನೂ ಅವುಗಳಿಗೆ ಪರಿಹಾರಗಳನ್ನೂ ಸೂಚಿಸಬೇಕೆಂದು ಅವರನ್ನು ಕೇಳಿಕೊಳ್ಳುತ್ತೇವೆ.

ಬೆಳಗಾವಿ
೧೬-೧-೧೯೫೩

ಕೆ. ಜಿ. ಕುಂದಣಗಾರ,
ಎ. ಪಿ. ಚೌಗುಲೆ.

## ಸಮರ್ಪಣೆ

**ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರಾದ**

## ಶ್ರೀಜಯಚಾಮರಾಜ ಒಡೆಯರ್ ಬಹಾದ್ದೂರ

ಜಿ. ಸಿ. ಬಿ. ಜಿ., ಸಿ. ಎಸ್. ಆಯ್

**ಮಹಾಸ್ವಾಮಿಯವರಿಗೆ**

ಮಹಾಸ್ವಾಮಿಯವರ ಅಪ್ಪಣೆ ಪಡೆದು

**ಪಂಪ ಮಹಾಕವಿಯ ‘ ಆದಿಪುರಾಣ ’ ಮಹಾಗ್ರಂಥವನ್ನು**

ಅವರ ಸಾಹಿತ್ಯಾಭಿರುಚಿಯ ಮತ್ತು ವಿದ್ವದಭಿಮಾನದ ಗೌರವಕ್ಕಾಗಿ

**ಭಕ್ತಿಪ್ರೇಮಾದರಗಳಿಂದ ಸಮರ್ಪಿಸಲಾಗಿದೆ.**

**ಬೆಳಗಾವಿ**
೨-೩-೧೯೫೩.

**ಪ್ರೊ. ಕೆ. ಜಿ. ಕುಂದಣಗಾರ.**
**ದಿವಾಣ ಬಹಾದ್ದೂರ : ಎ. ಪಿ. ಚೌಗುಲೆ.**
ಸಂಪಾದಕರು.



ಮೈಸೂರು ಸಂಸ್ಥಾನದ ರಾಜಪ್ರಮುಖರಾದ
**ಶ್ರೀಜಯಚಾಮರಾಜ ಒಡೆಯರ್ ಬಹಾದ್ದೂರವರು,**
ಜಿ. ಸಿ. ಬಿ. ಜಿ., ಸಿ. ಎಸ್. ಆಯ್

# ಪರಿವಿಡಿ

# ಗ್ರಂಥಸಂಕೇತಗಳ ವಿವರ

| | |
|---|---|
| ಅ. ನಾ. ಪು. | ಅನಂತನಾಥಪುರಾಣಂ |
| ಅ. ಪು. | ಅಜಿತತೀರ್ಥಂಕರಪುರಾಣತಿಲಕಂ |
| ಆ. ಪು. | ಆದಿಪುರಾಣಂ |
| ಕು. ಸಂ. | ಕುಮಾರಸಂಭವಂ |
| ಗ. ಯು. | ಗದಾಯುದ್ಧಂ |
| ಚಂ. ಪ್ರ. ಪು. | ಚಂದ್ರಪ್ರಭಪುರಾಣಂ |
| ಪ. ಪು. | ಪದ್ಮಪುರಾಣಂ (ರವಿಷೇಣ) |
| ಪಂ. ರಾ. | ಪಂಪರಾಮಾಯಣಂ |
| ಪೂ. ಪು. | ಪೂರ್ವಪುರಾಣಂ |
| ಮ. ಪು. | ಮಲ್ಲಿನಾಥಪುರಾಣಂ |
| ರ. ವಂ. | ರಘುವಂಶಂ |
| ಶಾ. ಪು. | ಶಾಂತಿಪುರಾಣಂ |
| ಶಾ. ಸ. | ಶಾಸ್ತ್ರಸಾರಸಮುಚ್ಚಯಂ |
| | ವಿಷಾಪಹಾರಂ |
| | ದ್ವಿಸಂಧಾನಂ |

**ಇತರ ಸಂಕೇತ**

| | |
|---|---|
| ಅ. ಟಿ. | ಅಡಿಟಿಪ್ಪಣಿ. |

# FOREWORD.

The classics of any land, and in any language, possess a perennial interest not only for their polished expression and tested ideas, but also for the pattern of human characters and their behaviour under given conditions. In the Dravidian group of Indian languages, it is Tamil and Kannada that reached a high literary excellence and poetic dignity in the early and middle ages of the literary history of India. Some of these works can be favourably compared with Sanskrit and Prakrit models; and these by their poetic and literary excellence surpass the contemporary achievements in any modern Indian language.

In the literary history of Karnataka, the 10th century is a remarkable period. The rulers of Ganga and Rashtrakuta dynasties and their feudatories not only minded the prosperity of their kingdoms but also patronised poets, artists and artisans to enable them to enrich the cultural heritage of the land. The Rashtrakuta king Nripatunga was a great patron of learning and himself a man of letters to whom is ascribed the Kannada work Kavi-raja-marga. This work sheds abundant light on the prosperity of early Kannada literature, though unfortunately earlier works have not survived for us. Soon after that there flourished Pampa, who not only eclipsed his predecessors in Kannada poetry but also inaugurated a new period, the Augustan Age, in Kannada literature. In 641 A. D. Pampa composed his Adipurana, and Vikramarjuna-Vijaya in Kannada which testify to his high

proficiency and fluency of diction both in Sanskrit and Kannada. In about 950 A. D. Ponna wrote his Shanti-purana. About the same time Indranandi wrote his Jvalinikalpa ( in 939 A.D. ) in Sanskrit at Manyakheta ( modern Malakheda ). At the same place the great poet Pushpadanta finished his Mahapurana in Apabhramsha in 965 A. D. In the year 959 A. D., during the reign of Krishna III of the Rashtrakuta dynasty, Somadeva finished his great Sanskrit romance on family tragedy, namely, the Yashastilakachampu on which lately Professor K. K. Handiqui, Vice—Chancellor of the Gauhati University, has contributed a learned dissertation. These are just a few outstanding poets of that age, and their contributions possess a significant value in Indian literature. Pampa not only belonged to an age of great poets, but was himself great enough to be a pioneer in Kannada literature.

It gives me great pleasure to be associated with this critical edition of Adipurana of Pampa by writing this foreword. Such critical editions are the solid foundation on which all further studies can be safely based. Both the editors are too well-known to need any special introduction from me. Throghout the period of fortyfive years during which I have known Dewan Bahadur A. P. Ghaugule, he, in spite of his lucrative and busy practice at the bar, has all along been a keen student of Sanskrit and Kannada lanuages and literature. He even went so far as to start a press for publishing literary and religious works. Prof. K. G. Kundaegar has been working as a Professor of

Kannada for more than a quarter of a century. I am glad that the co-operative labours of these Kannada scholars have given us such an authentic and critical edition of a great literary masterpiece in Kannada.

The editors have taken pains in discovering and studying various manuscripts and have presented the Kannada text of Adipurana in a critical manner. They have given different readings in the foot-notes and to facilitate its further study they have appended valu-able suppliments such as the analysis of contents, the explanation of technical terms and various appendices. The learned introduction pools together all the infor-mation about Pampa and his indebtedness to earlier sources and his influene on some subsequent works, and does credit to the scholarship of the erudite editors.

Our great auhors iike Ashvaghosha and Kalidasa have made so little reference about themselves in their literary works that we know very little of their authen-tic biography. It is, therefore, gratifying to find that Pampa gives some vivid autobiographical details.

Nowadays a serious effort is being made in this country to enrich the different regional languages and thus make them more pliable for the facile expres-sion of various shades of ideas. In order to fulfil this object, I wish that some scholars will come for-ward and undertake to render into simple and homely Kannada the classical works like the present one. This would certainly enrich the language and also enable the common reader to acquaint himself

with the great literary treasures of yore. An edition like this should give fresh impetus to the study of classical works in Kannada. Otherwise the study of the valuable works of such high class writers as Pampa will not be within the easy reach of the ordinary modern Kannadigas, and they will be missing a good deal of the beauty of Kannada literature. The Kannadigas owe a debt of gratitude to the learned editors for presenting such a nice critical edition of Pampa's Adi-Purana.

MADRAS,
16-1-1953.

**N. S. LOKUR.**
Judge High Court,
Bombay. ( *retired.* )

# ಮುನ್ನುಡಿ

( ಇಂಗ್ಲೀಷದ ಅನುವಾದ )

ನಯವಾದ ವಾಕ್ಸರಣಿಯ ಮತ್ತು ಸ್ಥಿರರೂಪುಗೊಂಡ ಕಲ್ಪನೆಗಳ ಮೂಲಕವಾಗಿ ಮಾನವರ ಸ್ವಭಾವವಾದರಿಗಾಗಿ ಮತ್ತು ವಿಶಿಷ್ಟ ಪರಿಸ್ಥಿತಿಯಲ್ಲಿ ಅವರ ವರ್ತನೆಗಾಗಿ ಒಂದಾನೊಂದು ದೇಶದ ಮತ್ತು ಒಂದಾನೊಂದು ಭಾಷೆಯೊಳಗಿನ ಉದ್ಗ್ರಂಥಗಳು ನಿರಂತರ ಪ್ರಯೋಜನವುಳ್ಳವುಗಳಾಗಿರುತ್ತವೆ. ಹಿಂದುಸ್ತಾನದ ಸಾಹಿತ್ಯೇತಿಹಾಸದ ಪ್ರಾಚೀನ ಮತ್ತು ಮಧ್ಯ ಯುಗಗಳಲ್ಲಿ ದ್ರಾವಿಡ ಭಾಷಾವರ್ಗದೊಳಗಿನ ತಮಿಳ ಮತ್ತು ಕನ್ನಡ ಭಾಷೆಗಳು ಅತ್ಯುಚ್ಚ ಶಾಶ್ವತ ಮೇಲ್ಮೆಯನ್ನೂ ಕಾವ್ಯಪ್ರೌಢಿಯನ್ನೂ ಪಡೆದಿದ್ದುವು. ಇವೆರಡೂ ಭಾಷೆಗಳೊಳಗಿನ ಕೆಲವು ಗ್ರಂಥಗಳನ್ನು ಸಂಸ್ಕೃತ-ಪ್ರಾಕೃತ-ಭಾಷೆಗಳೊಳಗಿನ ಉದ್ಗ್ರಂಥಗಳಿಗೆ ಅಚ್ಚುಮೆಚ್ಚಿನಿಂದ ಹೋಲಿಸಿ ತೋರಿಸಬಹುದು. ಈ ಗ್ರಂಥಗಳು ತಮ್ಮೊಳಗಿನ ಕವಿತ್ವದ ಮತ್ತು ಸಾಹಿತ್ಯಿಕ ಮೇಲ್ಮೆಯಿಂದ ಭಾರತದ ಯಾವುದೇ ಆಧುನಿಕ ಭಾಷೆಯೊಳಗಿನ ಕೃತಿಗಳನ್ನು ಮಿಕ್ಕಿ ನಿಲ್ಲುವುವು.

ಕರ್ನಾಟಕದ ಸಾಹಿತ್ಯೇತಿಹಾಸದಲ್ಲಿ ೧೦ ನೆಯ ಶತಮಾನವು ಅಸಾಧಾರಣವಾದುದು. ಗಂಗ ಮತ್ತು ರಾಷ್ಟ್ರಕೂಟ ರಾಜರು ಮತ್ತು ಅವರ ಸಾಮಂತರು ತಮ್ಮ ರಾಜ್ಯದ ಅಭಿವೃದ್ಧಿಯನ್ನು ಗಮನಿಸಿದುದಲ್ಲದೆ ಕವಿಗಳಿಗೆ, ಕಲೆಗಾರರಿಗೆ ಮತ್ತು ಶಿಲ್ಪಿಗಳಿಗೆ ಆಶ್ರಯಕೊಟ್ಟು ರಾಜ್ಯದ ಸಾಂಸ್ಕೃತಿಕ ಗತವೈಭವವನ್ನು ಉಜ್ವಲಗೊಳಿಸಿದ್ದಾರೆ. ರಾಷ್ಟ್ರಕೂಟರಾಜನಾದ ನೃಪತುಂಗನು ದೊಡ್ಡ ಪಾಂಡಿತ್ಯ ಪೋಷಕನಾಗಿದ್ದನು. ತಾನೂ ಪಂಡಿತನಾಗಿ ಕನ್ನಡದಲ್ಲಿ ಕವಿರಾಜಮಾರ್ಗವೆಂಬ ಗ್ರಂಥವನ್ನು ರಚಿಸಿದ್ದಾನೆ. ಪ್ರಾಚೀನ ಕನ್ನಡಸಾಹಿತ್ಯದ ಮೇಲೆ ಈ ಗ್ರಂಥವು ಸಾಕಷ್ಟು ಪ್ರಕಾಶವನ್ನು ಬೀರುತ್ತದೆ. ಆದರೆ ನಮ್ಮ ದುರ್ದೈವದಿಂದ ಆ ಗ್ರಂಥಗಳು ನಮ್ಮ ತನಕ ಉಳಿದುಬಂದಿಲ್ಲ. ಆತರುವಾಯ ಸ್ವಲ್ಪಾವಧಿಯಲ್ಲಿಯೇ ಪಂಪನು ಜನಿಸಿದನು. ಆತನು ತನ್ನ ಕನ್ನಡ ಕಾವ್ಯಗಳಿಂದ ಪೂರ್ವದ ಕವಿಗಳನ್ನು ಮರೆಯಿಸಿ ಬಿಟ್ಟನು. ಅವನಿಂದ ಕನ್ನಡ ಸಾಹಿತ್ಯದಲ್ಲಿ ಸುವರ್ಣಯುಗವೇ ಆರಂಭವಾಯಿತು. ಕ್ರಿ. ಶ. ೯೪೧ ರಲ್ಲಿ ಆತನು ತನ್ನ ಆದಿಪುರಾಣವನ್ನೂ ಆ ತರುವಾಯ ವಿಕ್ರಮಾರ್ಜುನವಿಜಯವನ್ನೂ ರಚಿಸಿದನು. ಅವುಗಳಲ್ಲಿ ಸಂಸ್ಕೃತ ಕನ್ನಡಗಳಲ್ಲಿನ ನಿರರ್ಗಳವಾದ ವಾಕ್ಸರಣಿಯ ಬಗೆಗೆ ಆತನ ಅತ್ಯುಚ್ಚ ಸಾಮರ್ಥ್ಯವು ಕಂಡುಬರುತ್ತದೆ. ಸು. ೯೫೦ ರಲ್ಲಿ ಪೊನ್ನನು ತನ್ನ ಶಾಂತಿಪುರಾಣವನ್ನು ಬರೆದನು. ಅದೇ ಸಮಯದಲ್ಲಿ ( ೯೭೩ ಕ್ರಿ. ಶ. ) ಮಾನ್ಯಖೇಟ(ಈಗಿನ

# ಉಪೋದ್ಘಾತ

ಈ ಗ್ರಂಥದ ಅಚ್ಚಿನ ಪ್ರತಿಯನ್ನು ಮೂರು ಪ್ರತಿಗಳ ಸಹಾಯದಿಂದ ಸಿದ್ಧಗೊಳಿಸಲಾಯಿತು. ಅವುಗಳಲ್ಲಿ ಮೊದಲನೆಯದು ಮೈಸೂರ ಓರಿಯಂಟಲ್ ಲಾಯಬ್ರರಿ ಸಿರೀಜಿನಲ್ಲಿ ದಿವಂಗತ ಪಂಡಿತ ಎಸ್. ಜಿ. ನರಸಿಂಹಾಚಾರ್ಯರವರಿಂದ ಕ್ರಿ. ಶ, ೧೯೦೦ ರಲ್ಲಿ ಪ್ರಕಟಿತವಾದುದು. ಇದನ್ನು (ಚ) ಎಂದು ಹೆಸರಿಸಲಾಗಿದೆ. ಎರಡನೆಯದು ಮೂಡಬಿದರೆಯ ಜೈನಮಠದ ಶ್ರುತ ಭಾಂಡಾರದಿಂದ ಬಂದುದು. ಇದಕ್ಕೆ ಆ ಭಾಂಡಾರದಲ್ಲಿ ೪೧೦ ನಂಬರು ಕೊಡಲಾಗಿದೆ. ಇದು ಓಲೆಗರಿಯ ಪ್ರತಿ. ಇದು ತಕ್ಕಮಟ್ಟಿಗೆ ಶುದ್ಧವಾಗಿದೆ. ಇದನ್ನು (ಅ) ಎಂದು ಹೆಸರಿಸಲಾಗಿದೆ. ಮೂರನೆಯ ಪ್ರತಿಯಾದರೂ ಅದೇ ಮಠದಿಂದ ಬಂದುದು. ಅದರ ನಂಬರು ೧೧೪. ಇದರಲ್ಲಿ ದೋಷಗಳಿವೆ. ಇದನ್ನು (ಬ) ಎಂದು ಹೆಸರಿಸಿದ್ದೇವೆ.

(ಅ) ಪ್ರತಿಯಲ್ಲಿ ೧೦೯ ಓಲೆಗಳಿವೆ. ಗ್ರಂಥಾಂತ್ಯದಲ್ಲಿ ಪ್ರತಿಮಾಡಿದವರ ಹೆಸರೂ ಕಾಲವೂ ಹೇಳಲಾಗಿಲ್ಲ, ' ಮಂಗಲ ಮಹಾ ಶ್ರೀ ಶ್ರೀ ಶ್ರೀ ' ಎಂದು ಮುಗಿದಿದೆ. ಪ್ರತಿ ಓಲೆಯ ಮಾರ್ಜಿನ್ನಿನಲ್ಲಿ ಪಾಠಾಂತರಗಳೂ ಶಬ್ದಾರ್ಥಗಳೂ ಕೊಡಲಾಗಿರುವುದರಿಂದ ಗ್ರಂಥಪಾಠಗಳನ್ನು ನಿರ್ಣಯಿಸಲು ಮತ್ತು ಶಬ್ದಕೋಶವನ್ನು ತಯಾರಿಸಲು ಇವರಿಂದ ಬಹುಮಟ್ಟಿಗೆ ಅನುಕೂಲವಾಯಿತು. ಪ್ರತಿಯೊಂದು ಗರಿಯಲ್ಲಿ ಒಂಬತ್ತು ಸಾಲುಗಳಿವೆ. ಪ್ರತಿಸಾಲಿನಲ್ಲಿ ೯೦ ರಿಂದ ೧೧೭ ರ ವರೆಗೆ ಅಕ್ಷರಗಳಿವೆ. ಹೊದಿಕೆಯ ಕಟ್ಟಿಗೆಗಳ ಒಳಭಾಗದಲ್ಲಿ ೨೪ ತೀರ್ಥಂಕರರ ಮತ್ತು ಶಾಸನದೇವತೆಗಳ ವರ್ಣಚಿತ್ರಗಳಿವೆ. (ಬ) ಪ್ರತಿಯಲ್ಲಿ ೧೨೨ ಓಲೆಗಳಿವೆ. ಗ್ರಂಥಾಂತ್ಯದಲ್ಲಿ ' ಶ್ರೀಮದಾದಿ ಪರಬ್ರಹ್ಮಣೇ ನಮೋ ನಮಃ ॥ ಶ್ರೀಮದನಂತ ಯತಿಪುಂಗವಾಯ ನಮಃ ॥ ' ಶ್ರೀ ಶ್ರೀ ಶ್ರೀ ಶ್ರೀ ಶ್ರೀ ' ಎಂಬ ಪಾಠವಿದೆ. ಇಲ್ಲಿ ಪ್ರತಿ ಮಾಡಿದವರ ಹೆಸರೂ ಕಾಲಗಳೂ ಹೇಳಲಾಗಿಲ್ಲ ಇದರಲ್ಲಿಯೂ ಕೆಲವೆಡೆ ಶಬ್ದಾರ್ಥಗಳು ಕೊಡಲಾಗಿವೆ. ಇದರ ಪ್ರತಿಯೊಂದು ಗರಿಯಲ್ಲಿ ಎಂಟು ಸಾಲಗಳಿವೆ. ಪ್ರತಿ ಸಾಲಿನಲ್ಲಿ ೯೫ ರಿಂದ ೧೦೪ ರ ವರೆಗೆ ಅಕ್ಷರಗಳಿವೆ. ಕಟ್ಟಿಗೆಯ ಹೊದಿಕೆಯ ಒಳಭಾಗದಲ್ಲಿ ಚಿತ್ರಗಳಿಲ್ಲ. ಅಥವಾ ರೇಖಾಚಿತ್ರಗಳಿಲ್ಲ. (ಅ) ಪ್ರತಿಯು ೧೯¾ ಅಂಗುಲ ಉದ್ದ, ೩ ಅಂಗುಲ ಅಗಲವಿದೆ. (ಬ) ಪ್ರತಿಯು ೧೮¾ ಅಂಗುಲ ಉದ್ದ ೨½ ಅಂಗುಲ ಅಗಲವಿದೆ. ಇವೆರಡೂ ಪ್ರತಿಗಳನ್ನು ಹೆಬಳೇ ಚೆನ್ನಾಗಿ ಸಂರಕ್ಷಿಸಿಡಲಾಗಿದೆ. (ಅ) ಪ್ರತಿಯ ಕಟ್ಟಿಗೆಯ ಹೊದಿಕೆಗಳ ಮೇಲೆ ಬಟ್ಟೆಯ ಆವರಣವಿದ್ದು ಅದು ಜೀರ್ಣವಾಗಿದೆ.

ಈ ಮೂರೂ ಪ್ರತಿಗಳ ಸಹಾಯದಿಂದ ಅಚ್ಚಿನ ಪ್ರತಿಯನ್ನು ತಯಾರಿಸುವಾಗ (ಚ) ಪ್ರತಿಯೊಳಗೆ ಅಡಿಟಿಪ್ಪಣಿಯಲ್ಲಿ ಕೊಟ್ಟ ಎಲ್ಲ ಪಾಠಾಂತರಗಳನ್ನು ಗಮನಿಸಲಾಯಿತು. ಅದರಂತೆ (ಅ) ಪ್ರತಿಯೊಳಗಿನ ಪಾಠಾಂತರಗಳನ್ನು ಗಮನಿಸಲಾಗಿದೆ. ಆಗ ಅರ್ಥ, ಛಂದಸ್ಸು, ಉಪಮೆ, ಬಂಧ ಮುಂತಾದ ವಿಷಯಗಳಿಗೆ ಸರಿಹೋಗುವ ಪಾಠಗಳನ್ನು ಇರಿಸಿಕೊಂಡು ಮಿಕ್ಕ ಪಾಠಗಳನ್ನು ಅಡಿಟಿಪ್ಪಣಿಯಲ್ಲಿ ಕೊಡಲಾಗಿವೆ. ವ್ಯಾಕರಣದೋಷಗಳುಳ್ಳ ಪಾಠಗಳನ್ನೂ ಅನಾವಶ್ಯಕವೆನಿಸಿದ ಪಾಠಗಳನ್ನೂ ಬಿಟ್ಟುಬಿಟ್ಟಿದೆ. ವರ್ಣನಾವಿಭಾಗಗಳಿಗೆ ಸರಿಹೋಗುವ ಭಾಗಗಳು ಸಂಸ್ಕೃತಗ್ರಂಥಗಳಲ್ಲಿ ಕಂಡು ಬಂದಲ್ಲಿ ಅವುಗಳ ಸಹಾಯವನ್ನು ಪಡೆಯಲಾಯಿತು. ಉದಾಹರಣೆಗಾಗಿ ಭದ್ರಜಾತಿಯ ಆನೆಯ ವರ್ಣನೆ ಸೋಮದೇವಸೂರಿಯ ಯಶಸ್ತಿಲಕಚಂಪುವಿನಲ್ಲಿ ಬಂದಿದೆ. ಆದಿಪುರಾಣದೊಳಗಿನ ಭರತಚಕ್ರವರ್ತಿಯ ವಿಜಯಪರ್ವತಗಜೇಂದ್ರದ ವರ್ಣನೆ (೧೨–೫೬ ವ.) ಅದಕ್ಕೆ ಅತ್ಯಂತವಾಗಿ ಹೋಲುತ್ತದೆ. ಸೋಮದೇವನು ಪಂಪನಿಂದ ಸು. ೨೦ ವರುಷ ಈಚೆಯವನು. ಆತನು ಪಂಪನ ಆದಿಪುರಾಣವನ್ನು ಓದಿದ್ದನೋ ಅಥವಾ ಇಬ್ಬರ ಅನುಕರಣೆಗೆ ಆಧಾರವಾದ ಇನ್ನೊಂದು ವರ್ಣನೆ ಮತ್ತಾವ ಗ್ರಂಥದಲ್ಲಿಯಾದರೂ ಇದ್ದಿತೋ ತಿಳಿಯದು. ಅದು ಏನೇ ಇದ್ದರೂ ಸೋಮದೇವನ ವರ್ಣನೆಯಿಂದ ಈ ಭಾಗದೊಳಗಿನ ದೋಷಗಳನ್ನು ಕೆಲಮಟ್ಟಿಗೆ ತಿದ್ದಿಕೊಳ್ಳಲು ಅನುಕೂಲವಾಯಿತು. ಈ ಸಂದರ್ಭದಲ್ಲಿ ಅಚ್ಚಾದ ಪ್ರತಿಯಿಂದ ಮತ್ತು ಓಲೆಗರಿಯ ಪ್ರತಿಗಳಿಂದ ನಮಗೆ ಸಹಾಯ ದೊರೆಯಲಿಲ್ಲ. ಪಾರಿಭಾಷಿಕ ಶಬ್ದಗಳಲ್ಲಿನ ದೋಷಗಳನ್ನು ಜಿನಸೇನಾಚಾರ್ಯರ ಪೂರ್ವಪುರಾಣ, ಜಿನಸೇನಾಚಾರ್ಯರ ಹರಿವಂಶ, ಅಸಗನ ಶಾಂತಿನಾಥಪುರಾಣ, ಮಾಘನಂದ್ಯಾಚಾರ್ಯರ ಶಾಸ್ತ್ರಸಾರಸಮುಚ್ಚಯ ಮುಂತಾದ ಗ್ರಂಥಗಳ ಸಹಾಯದಿಂದ ಸರಿಪಡಿಸಿ ಆ ಆ ಆಧಾರಗಳನ್ನು ಅಡಿಟಿಪ್ಪಣಿಯಲ್ಲಿ ಕೊಟ್ಟಿದ್ದೇವೆ, ಒಂದೆರಡು ಸಲ ಉಂಟಾದ ಶಬ್ದದೋಷಗಳಿಗೆ ನಮ್ಮ ಸೂಚನೆಗಳನ್ನು [ ] ಈ ಸಂಕೇತದಲ್ಲಿ ಕೊಡಲಾಗಿದೆ. ಅಚ್ಚಿನ ದೋಷಗಳನ್ನು ಸರಿಪಡಿಸಿಕೊಳ್ಳಲು ಓಪ್ಪೋಲೆಯನ್ನು ಕೊಟ್ಟಿದ್ದೇವೆ. ಹೀಗೆ ಸಾಧ್ಯವಿದ್ದಷ್ಟು ಪ್ರಯತ್ನಿಸಿ ತಕ್ಕಮಟ್ಟಿಗೆ ಶುದ್ಧಪ್ರತಿಯನ್ನು ಓದುಗರ ಕೈಯಲ್ಲಿರಿಸಲು ಪ್ರಯತ್ನಿಸಿದ್ದೇವೆ.

# ಪಂಪನ ಜೀವನ-ಚರಿತ್ರೆ

ಪುರಾತನ ಕಾಲದಲ್ಲಿ ವೆಂಗಿಪಟುವಿನಲ್ಲಿ 'ವಸಂತ, ಕೊಟ್ಟೂರು, ನಿಡಗುಂದಿ, ವಿಕ್ರಮಪುರ' ಎಂಬ ಅಗ್ರಹಾರಗಳಿದ್ದವು. ಈ ಅಗ್ರ ಹಾರಗಳಿಗೆ ಅಗ್ರಗಣ್ಯನಾದ, ಊರ್ಜಿತಪುಣ್ಯನಾದ (ಪಂ. ಭಾ. ೧೪-೪೧), ನಯಶಾಲಿಯಾದ ಸಕಳ-ಶಾಸ್ತ್ರಾರ್ಥವಿನಿಶ್ಚಯಮತಿಯಾದ ಮಾಧವಸೋಮಯಾಜಿ ಎಂಬ ಅಗ್ನಿಹೋತ್ರಿ ಬ್ರಾಹ್ಮಣನು (ಪಂ. ಭಾ. ೧೪-೪೨) ಒಂಬತ್ತನೆಯ ಶತಮಾನದ ಆರಂಭದಲ್ಲಿ ಹೆಸರುವಾಸಿಯಾಗಿದ್ದನು. ಆತನು ವತ್ಸಗೋತ್ರದವನು. ಆತನ ಹೋಮಮಂತ್ರ ಕ್ರಮವು ನಡೆದಾಗ ತುಸು ಮಿಡುಕಿದರೆ ಎಲ್ಲಿ ಶಾಪಕೊಡುವನೋ ಎಂದು ಅಂಜಿ ಇಂದ್ರ-ಚಂದ್ರ-ಸೂರ್ಯ-ವಾಯುದೇವರು ಯಾವಾಗಲೂ ಆತನ ಅಪ್ಪಣೆ ಪಾಲಿಸುವಲ್ಲಿ ನಿರತರಾಗಿರುತ್ತಿದ್ದರು. ಹೀಗೆ ಒಂದೇ ಸವನೆ ಯಜ್ಞಮಾಡಿ ಸಂಪತ್ಪದವಿಗೇರಿದ ಕಾರಣ ಆತನು ಸರ್ವಕ್ರತುಯಾಜಿಯಾದನು (ಪಂ. ಭಾ. ೧೪-೪೩). ಆತನ ಯಜ್ಞಕುಂಡಗಳಿಂದ ಹೊರಹೊರಟ ಹೋಮಧೂಮವು ದಿಗ್ವನಿತೆಯರಿಗೆ ಕೃತಕ ಕುರುಳಿನಂತೆ, ತ್ರಿಭುವನ ಕಾಂತೆಗೆ ಕಂಠಾಭರಣದಂತೆ ಶೋಭಿಸುವುದಾಗಿದ್ದರೂ ಅವುಗಳಲ್ಲಿ ಆಹುತಿಮಾಡಿದ ಪಶುಹತ್ಯಾದೋಷದಿಂದ ಆತನ ಧವಲಕೀರ್ತಿಯನ್ನು ಕರಿದು ಮಾಡಿಬಿಟ್ಟಿತು (ಪಂ. ಭಾ ೧೪-೪೪).೧

ಮಾಧವಸೋಮಯಾಜಿಯ ಮಗನು ಅಭಿಮಾನಚಂದ್ರನು. ಈತನು ಬೇಡಿದವರಿಗೆ ಆನೆ, ಕುದುರೆ, ರತ್ನ, ಹೊನ್ನ ಮುಂತಾದ ಸಾರ ವಸ್ತುಗಳನ್ನು ಕೊಟ್ಟು ಹೆಸರುವಾಸಿಯಾದನು (ಪಂ. ಭಾ. ೧೪-೪೫). ಆದುದರಿಂದ ಅವನು ಪುರುಷೋತ್ತಮನನ್ನು ಮಿಕ್ಕಿದವನಾದನು.

ಭುವನಭವನಖ್ಯಾತನಾದ ಅಭಿಮಾನಚಂದ್ರನಿಗೆ ಕೊಮರಯ್ಯನೆಂಬ ಮಗನಾದನು. ಆತನು ಸಮಸ್ತ ವೇದವೇದಾಂಗಗಳನ್ನು ತಿಳಿದುಕೊಂಡು ಯೋಗ್ಯವಾದ ಪುರಾತನಾಚಾರಗಳನ್ನು ಪಾಲಿಸುತ್ತಿದ್ದನು (ಪಂ. ಭಾ. ೧೪-೪೬) ಆ ಕೊಮರಯ್ಯನ ಮಗನು ಅಭಿರಾಮದೇವರಾಯ. ಆತನ ಕೀರ್ತಿ ಭೂವ್ಯೋಮಾಕಾಶಗಳನ್ನು ವ್ಯಾಪಿಸಿದ್ದಿತು. ಆತನು ಗುಣಮಣಿರತ್ನಾಕರನಾಗಿದ್ದನು (ಪಂ. ಭಾ. ೧೪-೪೭). 'ಜಾತಿಗಳಲ್ಲೆಲ್ಲ ಬ್ರಾಹ್ಮಣ ಜಾತಿ ಉತ್ತಮವಾದುದು, ಮತ್ತು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವನು ಧರ್ಮವನ್ನು ನಂಬಬೇಕಾದರೆ

೧. ಈ ಮಾತನ್ನು ಕೇಳುವಾಗ ಪಂಪನು ಬಹು ಮಟ್ಟಿಗೆ ನೊಂದುಕೊಂಡಿರಬೇಕು.

ಜಿನಧರ್ಮವೇ ಸರಿಯಾದುದು, ಎಂದು ಅದನ್ನು ನಂಬಿ ಧರ್ಮಾಂತರಮಾಡಿ, ಜೈನನಾಗಿ, ಅದನ್ನು ಅಭಿವೃದ್ಧಿಗೊಳಿಸಿ, ಪ್ರಸಿದ್ಧಿಪಡೆದನು. ಆತನ ಮಗನೇ ನಮ್ಮ ಕವಿ ಆದಿಪಂಪನು ( ಪಂ. ಭಾ. ೧೪–೪೮ ). ಮೇಲಿನ ಸಂಗತಿಗಳ ಆಧಾರದಿಂದ ಪಂಪನ ವಂಶಾವಳಿಯನ್ನು ಹೀಗೆ ಕೊಡಬಹುದು:

ಮಾಧವಸೋಮಯಾಜಿ ( ಸರ್ವಕ್ರತುಯಾಜಿ )
ಅಭಿಮಾನಚಂದ್ರ ( ಎರೆದರ್ಗಿತ್ತವಂ )
ಕೊಮರಯ್ಯ ( ಭುವನಭವನಖ್ಯಾತಂ )
ಅಭಿರಾಮದೇವರಾಯ ( ಗುಣಮಣಿರತ್ನಾಕರಂ )
ಪಂಪ ( ಕವಿತಾಗುಣಾರ್ಣವಂ ).

ಪಂಪನು ತನ್ನ ರೂಪಗುಣಗಳನ್ನೂ ವಿದ್ಯಾಭ್ಯಾಸವನ್ನೂ ಆದಿಪುರಾಣದಲ್ಲಿ ಹೇಳಿಕೊಂಡಿದ್ದಾನೆ. ಅವುಗಳ ಆಧಾರದಿಂದ ಅವನ ಚರಿತ್ರೆಯ ಭಾಗವನ್ನು ಇಲ್ಲಿ ರೂಪಿಸಲಾಗಿದೆ. ಪಂಪನು ಶಾ. ಶ. ೮೨೩ ಅಂದರೆ ಕ್ರಿ. ಶ. ೯೦೧ ದುಂದುಭಿ ಸಂವತ್ಸರದಲ್ಲಿ ಹುಟ್ಟಿದನು ( ದುಂದುಭಿಸಂವತ್ಸರೋದ್ಭವಂ ಆ. ಪು. ೧–೩೩ ). ಆತನ ಮೈಬಣ್ಣವು ಬಾಳೆಯ ಸುಳಿಯ ಹಾಗೆ ನಸಗಪ್ಪಾಗಿದ್ದಿತು ( ಕದಳೀಗರ್ಭಶ್ಯಾಮಂ ಆ. ಪು. ೧–೨೯ ). ಆತನದು ಸರೋರುಹವದನ; ಆತನ ತಲೆಗೂದಲು ರೇಶಿಮೆಯಂತೆ ಮೃದುವಾಗಿ ಗುಂಗುರುಗುಂಗುರುವಾಗಿದವು; ನಿಲುವಿಕೆ ಮಧ್ಯಮವಾಗಿತ್ತು; ದೇಹವು ಕೋಮಲವಾಗಿತ್ತು. ಆತನು ಲಲಿತಾಲಂಕರಣನೂ ಪಂಚಶರೈಕರೂಪನೂ ಆಗಿದ್ದನು. ಧ್ವನಿ ದುಂದುಭಿನಿಸ್ವನದಂತೆ ಗಂಭೀರವಾಗಿತ್ತು. ಒಟ್ಟಾರೆ ಹೇಳುವುದಾದರೆ ಆತನದು ಲಲಿತಮಧುರಸುಂದರರೂಪು. ಅದರಿಂದ ಆತನು ಎಲ್ಲರಿಗೂ ಮುದ್ದುಮುದ್ದಾಗಿದ್ದನು. ಸ್ತ್ರೀಯರಿಗಂತೂ ಆತನು ಮುದ್ದಿನ ಕಣಿ, ಮೋಹದ ಆರಗಿಣಿ. ನೋಡಿದ ಸ್ತ್ರೀಯರು ಆತನನ್ನು ಎತ್ತಿಕೊಂಡು ಮುದ್ದಾಡುತ್ತಿದ್ದರು. ಆದುದರಿಂದ ಸುಂದರಿಯರು ನಟ್ಟ ನೋಟದಿಂದ ಆತನನ್ನು ನೋಡುತ್ತಿರುವಾಗ ಅವರ ಕಣ್ಣುಗಳು ಆನಂದದಿಂದ ಅರಳುತ್ತಿದ್ದುವು. ( ವನಿತಾಕಟಾಕ್ಷಕುವಲಯವನಚಂದ್ರ ); ನೋಡಿದ ತರುಣಿಯರು ಬಿಡದೆ ಆತನನ್ನು ಎತ್ತಿಕೊಂಡು ಟೊಂಕದಲ್ಲಿ ಕುಳ್ಳಿರಿಸಿಕೊಳ್ಳುತ್ತಿದ್ದುದರಿಂದ ಆತನು ಯುವತೀಜಘನಕಾಂಚೀರತ್ನನಾಗಿದ್ದನು ( ಆ. ಪು. ೧–೩೧ ). ಕರ್ನಾಟಕದೊಳಗಿನ ಸ್ತ್ರೀಯರಲ್ಲದೆ ಆತನು ಕೇರಳ–ಮಲಯ–ಆಂಧ್ರಸುಂದರಿಯರಿಗೂ ಅಲಂಕಾರಪ್ರಾಯನಾಗಿದ್ದನು ( ಆ. ಪು. ೧–೩೨ ).

ಕಾರಣಾಂತರದಿಂದ ಅಭಿರಾಮದೇವರಾಯನು ದೇಶಪರ್ಯಟನ ಮಾಡಬೇಕಾಯಿತೋ ಏನೋ! ಈ ಸಂದರ್ಭದಲ್ಲಿ ಪಂಪನು ತೀರ ಚಿಕ್ಕವನಿರುವಾಗ ಅಭಿರಾಮದೇವರಾಯನು ಕೇರಳ ಪ್ರಾಂತದ ವರೆಗೆ ಸಂಚರಿಸಿರಬೇಕು. ಆದುದರಿಂದ ಪಂಪನು ತನ್ನ ಆದಿಪುರಾಣದಲ್ಲಿ 'ಕೇರಳವಿಟೀಕಟೀಸೂತ್ರಾರುಣಮಣಿ.' (೧—೩೨). ಎಂದು ಹೇಳಿಕೊಂಡಿದ್ದಾನೆ. ಪಂಪನ ಬಾಲ್ಯವೂ ತಾರುಣ್ಯವೂ ಕರ್ನಾಟಕದಲ್ಲಿ, ಪ್ರಾಮುಖ್ಯವಾಗಿ ಬನವಾಸಿ ದೇಶದಲ್ಲಿ ಕಳೆದಿವೆ. ಈ ದೇಶದ ವನಸೌಂದರ್ಯವು ಆತನಮನಸ್ಸಿನ ಮೇಲೆ ಅಚ್ಚಳಿಯದ ಮುದ್ರೆಯನ್ನೊತ್ತಿದೆ. ಇದನ್ನು ಆತನು ತನ್ನ ಭಾರತದಲ್ಲಿ

ನಾಗವಿಭೂಷಣಪ್ರತತಿ ನಾಗರಖಂಡಮಪೂರ್ವಮಪ್ಪ ಪುನ್ನಾಗದ ಬಾಸಿಗಂ ಬಗೆದ ಬಣ್ಣದ ಪುಟ್ಟಿಗೆ ನಾಗಜಾಲಂ........ (೪—೧೭.) ಎಂದೂ

ಗೋಕರ್ಣನಾಥನಂ ಗೌರೀನಾಥನನವನಿಪವನ.... ತುಹಿನಕರಯಜಮಾನ ಮೂರ್ತಿಯಂ ತ್ರಿಳೋಕ್ಯೈಕಸಂಗೀತಕೀರ್ತಿಯಂ ಕಂಡು ಕೆಯ್ಗಳಂ ಮುಗಿದು— (೪—೨೬ ವ.) ಎಂದೂ

ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿಸಿನಿಂಪುಗ—
ಳ್ಗಾಗರಮಾದ ಮಾನಸರೆ ಮಾನಸರಂತವರಾಗಿ ಪುಟ್ಟಲೇ!

ನಾಗಿಯುಮೇನೊ ತೀರ್ದಪುದೆ ತೀರದೊಡಂ ಮಱಿದುಂಬಿಯಾಗಿ ಮೇಣ್
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿದೇಶದೊಳ್—
(೪-೨೮) ಎಂದೂ ವರ್ಣಿಸಬೇಕಾದರೆ ಈ ದೇಶದ ವನಸೌಂದರ್ಯವು ಆತನಿಗೆ ಹುಚ್ಚುಹಿಡಿಸಿರಬೇಕು.

ಪಂಪನ ವಿದ್ಯಾಭ್ಯಾಸವು ಶ್ರವಣಬೆಳುಗೊಳದಲ್ಲಿ ಪೂರ್ತಿಯಾಗಿರಬೇಕು. 'ಗುರುದೇವೇಂದ್ರಮುನೀಂದ್ರಂ' ಎಂದು ಹೇಳಿಕೊಂಡಿರುವುದರಿಂದ ದೇವೇಂದ್ರ ಮುನಿಗಳು ಈತನ ಗುರುಗಳಾಗಿರಬೇಕು. ಈ ಮುನಿ ಬಹಳೇ ಪ್ರಖ್ಯಾತನಾಗಿದ್ದಂತೆ ಶ್ರವಣಬೆಳುಗೊಳದ ೪ನೆಯ ಶಾಸನದಿಂದ ತಿಳಿದು ಬರುತ್ತದೆ. ತನ್ನ ಗುರುಭಕ್ತಿಯ ಕಾಣಿಕೆಯನ್ನು ಸಲ್ಲಿಸಲು ಆದಿಪುರಾಣದ ಪ್ರತಿ ಆಶ್ವಾಸಾಂತ್ಯಗದ್ಯದ ಆರಂಭದಲ್ಲಿ ಇವರನ್ನು ಸ್ಮರಿಸುತ್ತಾನೆ. ಪಂಪನು ಉಭಯಭಾಷಾ (ಕನ್ನಡ-ಸಂಸ್ಕೃತ) ಪ್ರವೀಣನಾಗಿದ್ದಂತೆ ಆತನ ಆದಿಪುರಾಣದಿಂದ ತಿಳಿದು ಬರುತ್ತದೆ. ಅದರ ೧೬ನೆಯ ಆಶ್ವಾಸದಲ್ಲಿ ೨೪ ತೀರ್ಥಂಕರರನ್ನೂ ಅಕೃತ್ರಿಮ ಚೈತ್ಯಾಲಯಗಳನ್ನೂ ಸಂಸ್ಕೃತ ಪದ್ಯಗಳಿಂದ ಸ್ತುತಿಸಿದ್ದಾನೆ. ಈ ಪುರಾಣವನ್ನು ಆತನು ತನ್ನ ಸಂಸ್ಕೃತದ ಅಭ್ಯಾಸವು ಮುಗಿದ ಕೂಡಲೆ ರಚಿಸಿರಬೇಕು. ಏಕೆಂದರೆ ಅದರ ಕನ್ನಡ ಭಾಷೆಯ ಮೇಲೆ

ಸಂಸ್ಕೃತದ ಪ್ರಭಾವವು ತುಂಬಾ ಆಗಿರುವುದು ಕಂಡುಬರುತ್ತದೆ. ಆತನು ಭಾಷಾಭ್ಯಾಸ ಮಾಡುತ್ತಿರುವಾಗ ಜಿನಸೇನಾಚಾರ್ಯರ ಪೂರ್ವಪುರಾಣವು ಆತನನ್ನು ಮಂತ್ರಮುಗ್ಧಗೊಳಿಸಿದಂತಿದೆ. ಆ ಗ್ರಂಥವು ಆತನ ಆದಿಪುರಾಣದಲ್ಲಿ ತನ್ನ ಪ್ರಭಾವವನ್ನು ಆದ್ಯಂತವಾಗಿ ಬೀರಿದೆ.

ಸಾಮಾನ್ಯವಾಗಿ ಧರ್ಮಾಂತರ ಮಾಡಿದವರು ತಮ್ಮ ಧರ್ಮದ ಅಭಿಮಾನಿಗಳಾಗಿರುತ್ತಾರೆ. ಮತ್ತು ಆ ಧರ್ಮದ ತತ್ವಗಳನ್ನು ಈರ್ಷೆಯಿಂದ ಅಭ್ಯಸಿಸುತ್ತಾರೆ. ಪಂಪನೂ ಜಿನಧರ್ಮತತ್ವಗಳನ್ನು ಕೂಲಂಕಷವಾಗಿ ಅಭ್ಯಾಸಿಸಿದ್ದಾನೆ. ಅವನ ಕಾಲಕ್ಕೆ ಈ ಸಂದರ್ಭದಲ್ಲಿ ಈತನನ್ನು ಸರಿಗಟ್ಟುವವರು ಯಾರೂ ಇದ್ದಿರಲಿಕ್ಕಿಲ್ಲ. ಈ ಉಕ್ತಿಗೆ ಆತನ ಆದಿಪುರಾಣವು ಉತ್ಕೃಷ್ಟ ಉದಾಹರಣೆಯಾಗಿದೆ. ಈ ಕಾರಣದಿಂದಲೇ ಮಾಘಣಂದ್ಯಾಚಾರ್ಯರು ತಮ್ಮ ಶಾಸ್ತ್ರಸಾರಸಮುಚ್ಚಯದಲ್ಲಿ ಆದಿಪುರಾಣದೊಳಗಿನ ಅನೇಕಭಾಗಗಳನ್ನು ಉದಾಹರಿಸಿದ್ದಾರೆ. ನೋಡಿ:

| **ಆದಿ ಪುರಾಣ.** | **ಶಾಸ್ತ್ರಸಮುದಾಯಸಮುಚ್ಚಯ** |
|---|---|
| ೧ ಹಾಟಕಭಿತ್ತಿಸಮನ್ವಿತ । ನಾಟಕಶಾಲೆಗಳ........ಮಿಥುನತತಿಗೆ ಗೃಹಮಹಿಜಾತಂ ॥ ೫-೩೭ ॥ | ಹಾಟಕಭಿತ್ತಿಸಮನ್ವಿತ । ನಾಟಕಶಾಲೆಗಳ.... .... ಮಿಥುನತತಿಗೆ ಗೃಹಮಹಿಜಾತಂ ॥ ಪು ೭; ಪ. ೨೫ ॥ |
| ೨ ಅನತಿಶಯಸೌಖ್ಯಭಾಜನ । .... ... ....ಭಾಜನಾಂಗತರುಕುಡುತಿರ್ಕುಂ॥ ೫-೩೮ ॥ | ಅನತಿಶಯಸೌಖ್ಯಭಾಜನ........ ಭಾಜನಾಂಗತರು ಕೊಡುತಿರ್ಕುಂ ॥ ಪು. ೬; ಪ. ೩ ॥ |
| ೩ ಅಮರ್ದಿನ ಸವಿಯೊಳಗೀಸವಿ । ....ಭೋಜನಾಂಗ-ಕಲ್ಪಾವನಿಜಂ ॥ ೫-೩೯ ॥ | ಅಮರ್ದಿನ ಸವಿಯೋಳ್ಸವಿ।....ಭೋಜನಾಂಗಕಲ್ಪಾವನಿಜಂ ॥ ಪು. ೬; ಪ. ೪ ॥ |
| ೪ ಕುಡಿದೊಡೆ ಸೊರ್ಕಿಸದವುನಾ । ಣ್ಗಿಡಿಸದವು .... ಕುಡುಗುಮುಚಿತಮದ್ಯಾಂಗಕುಜಂ ॥ ೫-೩೨ ॥ | ಕುಡಿವಡೆ ಸೊರ್ಕಿಸದವು ನಾ । ಣ್ಗಿಡಿಸದವು .... ಕುಡುಗುಮುಚಿತಮದ್ಯಾಂಗಕುಜಂ ॥ ಪು. ೬; ಪ. ೫ ॥ |
| ೫ ಪಟು ಚಿತ್ರಾವಳಿ ಭೋಗಂ । .... ಪೋಲ್ತು ವಿಶದವಸನಾಂಗಕುಜಂ ॥ ೫-೩೪ ॥ | ಪಳಿಚಿತ್ರಾಳಿಭೋಗಂ ।........ಪೋಲ್ತು ವಿಸದವಸನಾಂಗಕುಜಂ ॥ ಪು. ೬; ಪ. ೬ ॥ |
| ೬ ಮಗಮಗಿಪ ಜಾದಿ ಪೊಂಗೇ । ದಗೆ ....ಪೋಲ್ತುದಗ್ರಮಾಲ್ಯಮಹೀಜಂ॥ ೫-೩೬ ॥ | ಮಘಮಘಿಪ ಜಾದಿ ಪೊಂಗೇ । ದಗೆ .... ಪೋಲ್ತುದಗ್ರಮಾಲ್ಯಮಹೀಜಂ ॥ ಪು. ೭; ಪ. ೭॥ |

| ಆ. ಪು. | ಶಾ. ಸಾ. ಸ. |
|---|---|
| ೭ ಮಕುಟಂ ಕೇಯೂರಂ ಕ। ರ್ಣ ಕುಂಡಲಂ........ಭೂಷಣಾಂಗತರು ಕುಡುತಿರ್ಕುಂ ॥ ೫–೩೩ ॥ | ಮಕುಟಂ ಕೇಯೂರಂ ಕ। ರ್ಣ ಕುಂತಲಂ .... .... ಭೂಷಣಾಂಗತರು ಕುಡುತಿರ್ಕುಂ ॥ ಪು. ೭; ಪ. ೮ ॥ |
| ೮ ಆಪ್ರೊತ್ತುಂ ಮಣಿದೀಪಕ। ಲಾಪ್ರೋದ್ಯಜ್ಜ್ಯೋತಿಗಳ್........ ದೀಪಾಂಗ ಜ್ಯೋತಿರಂಗಕಲ್ಪಕುಜಂಗಳ್ ॥ ೫–೪೦ | ಆಪ್ರೊತ್ತುಂ ಮಣಿದೀಪಕ। ಲಾಪ್ರೋದ್ಯಜ್ಯೋತಿಗಳು........ದೀಪಾಂಗಜ್ಯೋತಿರಂಗಕಲ್ಪಕುಜಂಗಳ್ ಪು. ೭; |
| ೯ ಅತಿಮೃದುರವದಾಯಿಗಳಂ ತತಘನಸುಷಿರಾವನದ್ಧ........ ವೀರ್ಯತೂರ್ಯಕ್ಷ್ಮಾಜಂ ॥ ೫–೩೫ ॥ | ಅತಿಮೃದುರವದಾಯಿಗಳಂ। ತತಘನಸುಷಿರಾವನದ........ ವೀರ್ಯತೂರ್ಯಕ್ಷ್ಮಾಜಂ ಪು. ೭; ಪ. ೧೦ |

ಇವು ಶಾ. ಸಾ. ಸ. ದಲ್ಲಿ '**ದಶವಿಧಕಲ್ಪದ್ರುಮಾಃ ॥ ೪ ॥**' ಎಂಬ ಸೂತ್ರದ ಕೆಳಗೆ ಉದಾಹರಿಸಲಾಗಿವೆ.

ಮತ್ತೆ—

| ಆ. ಪು. | ಶಾ. ಸಾ. ಸ. |
|---|---|
| ೧೦ ಗಜವೃಷಭಾಂಕುಶಚಕ್ರಾಂ! ಬುಜಹಂಸ........ ಧ್ವಜಂಗಳಿಂ ಧ್ವಜಮಹೀತಳಂ ಸೊಗಯಿಸಗುಂ ೧೦-೩೩ | ಗಜಸಿಂಹವೃಷಭಗರುಡಾಂ। ಬುಜಮಾಲಾಹಂಸ........ಧ್ವಜವುಂ ಧ್ವಜಭೂಮಿಯೋಳ್ ವಿರಾಜಿಸುತ್ತಿರ್ಕುಂ॥ ಪು. ೪೪; ಪ. ೧೪ ॥ |
| ೧೧ ದೇವೋತ್ತರಕುರುಗಳೆ........ಕಲ್ಪಾವನಿರುಹಭೂಮಿಭಾಗಮತಿರಮಣೀಯಂ ॥ ೧೦–೩೪ ॥ | ದೇವೋತ್ತರಕುರುಗಳ್........ ಕಲ್ಪಾವನೀತಲಂ ಸೊಗಯಿಸುಗುಂ ಪು. ೪೪; ಪ. ೧೫ ॥ |

ಈ ಪದ್ಯಗಳು '**ಸಮವಸರಣೈಕಾದಶಭೂಮಯಃ**' ಎಂಬ ಸೂತ್ರದ ಕೆಳಗೆ ಉದಾಹರಿಸಲಾಗಿವೆ.

ಮತ್ತೆ—

| ಆ. ಪು. | ಶಾ. ಸಾ. ಸ. |
|---|---|
| ೧೨ ತೆಱೆಯದೆ ಮುನ್ನಕೆತ್ತ ಪಡಿಗಳ್ ........ಭೋಂಕನಾತನ ಪುರಾತನ ಪುಣ್ಯಫಲಪ್ರಭಾವವದಿಂ॥ ೨–೬೩॥ | ನೆರೆಯದೆ ಮುನ್ನಕೆತ್ತ ಪಡಿಗಳು.... ಭೋಂಕನಾತನ ಪುರಾತನ ಪುಣ್ಯಫಲಪ್ರಭಾವದಿಂದ ॥ ಪು. ೧೧೪; ಪ. ೫೬॥ |
| ೧೩ ಪೂತಜಂಗಮಲತೆಗಳಂತೆಱಗಿ ತನ್ನ ಮುಂದೆ ಬಂದಾಡುವಚ್ಚರಸಿಯರು | ಘಾತಜಂಘಮಲತೆಗಳನೆರಗಿ ತಂದು ಮುಂದೆ ಬಂದಾಡುವಚ್ಚಗಸಯರುವು |

| ಆ. ಪು. | ಶಾ. ಸಾ. ಸ. |
| --- | --- |
| ಮನನೇಕಭಂಗಿಭೃಂಗಾರಮಣಿ ದರ್ಪಣಕನಕಕಲಶಚಾರುಚಾಮ ರಾತಪತ್ರಪವಿತ್ರಿತಕರಪಲ್ಲವೆಯ ರಾಗಿ ಸೇಸೆಯನಿಕ್ಕಲೆಂದು ಬಂದ ಸುರಪುರಂಧ್ರಿಯರುಮನಾಲೋ ಕನಮಾತ್ರದೊಳೆ ಮನಮನುಗಿ ಬಗಿಮಾಡಿಮುಸೆದ ಮದನನ ಪೊಳೆ ವಲರ್ಗಣೆಗಳಂತೆ ಕಣ್ಗೊಳ್ ಬೆಳೆ ದೆಳಸಿ ಬಂದಿರ್ದ ಪಾಟದಾಟದ ಮುದ್ದಿನ ಬರ್ದಿನ ಪರಿವಾರ ದೇವಿಯರುಮ ನತಿ ಲಲಿತವೇಷ ಚತುರ ಭಾಷಾ ವಿಶೇಷಕುಶಲೆ ಯರಪ್ಪ ದೇವವಿಳಾಸಿನಿಯರು ಮಂ ಭೋಂಕೆನೆ ಕಂಡು ಆ. ಪು. ೨-೬೫ ವ. | ನೇಕ ಭಂಗಿಭೃಂಗಾರ ಮಣಿದರ್ಪಣ ಕನಕಕಲಶಚಾಮರಾತಪತ್ರತ್ರಯಕರ ಪಲ್ಲವೆಯರಾಗಿ ಸೇಸೆಯನಿಕ್ಕಲೆಂದು ಬಂದ ಸುರಪುರಂಧ್ರಿಯರುಮನಾಲೋಕ ಮಾತ್ರದಿಂದಲೇ ಮನಮನಿಬ್ಬಗಿಮಾಡಿ ಮುಸೆದ ಮದನನಲರ್ಗಣೆಯಂತೆ ಕಣ್ಗೊ ಳೆಳದೆಳ ಬಂದಿರ್ದ ಪಾಟದಾಟದ ಮುದ್ದಿ ನ ಬಿದ್ದಿನ ದೇವಿಯರುಮಂ ಪರಿವಾರದೇವಿ ಯರುಮನತಿಲಲಿತ ಚತುರಭಾಷಾ ವಿಶೇ ಷಕುಸಲೆಯರುಮಪ್ಪ ದೇವವಿಳಾಸಿನಿ ಯರುಮಂ ಭೋಂಕನೆ ಕಂಡು, ಪು. ೧೧೪; ೧೧೫ \|\| |

ಮತ್ತೆ ಇದರ ಮುಂದಿನ

೧೪ "ಆನಾರ್ಗಿರ್ದ ವಿಮಾನಮಾವುದಿವರಾರೀ ಲೋಕಮೇನೆಂಬುದಾ
ನೇ ನೋಂತಿಲ್ಲಿಗೆ ವಂದೆನೀವಿಭವಮಿಂತಾರಿಂದಮಾಯ್ತೆಂಬುದಂ
ತಾನಾಗಳ್ ಬಗೆವನ್ನೆಗಂ ಮನದೊಳಾದೇವಂ ಭವಪ್ರತ್ಯಯ
ಜ್ಞಾನಂ ತೊಟ್ಟನೆ ಪುಟ್ಟೆ"…. ಆ. ಪು. ೨-೬೬.

ಈ ಪದ್ಯಭಾಗವನ್ನು ಶಾಸ್ತ್ರಸಾರಸಮುಚ್ಚಯದಲ್ಲಿ.

"ಆನಾರ್ಗೀಲೋಕಮಾವುದಾಮುಂನೇನಂ ಮಾಡಿಯಿಲ್ಲಿ ಪುಟ್ಟಿದೆನೆಂಬಂನೆಗಂ ಭವಪ್ರತ್ಯಯಜ್ಞಾನಂ ತೊಟ್ಟನೆ ಪುಟ್ಟಲೊಡಂ ಎಂದು ಗದ್ಯರೂಪಕ್ಕೆ ತಿರುಗಿಸಿಕೊಳ್ಳಲಾಗಿದೆ (ಪು. ೧೧೫).

ಮಾಘಣಂದ್ಯಾಚಾರ್ಯರು ಎತ್ತಿಕೊಂಡ ಪಂಪನ ಆದಿಪುರಾಣದೊಳಗಿನ ಅನೇಕ ಉದಾಹರಣೆಗಳನ್ನು ತೋರಿಸಿಕೊಡಬಹುದು. ಆದರೆ ವಿಸ್ತಾರಭಯದಿಂದ ಅದನ್ನು ನಿಲ್ಲಿಸಬೇಕಾಗಿದೆ. ಮಾಘಣಂದ್ಯಾಚಾರ್ಯರು ಸಿದ್ಧಾಂತಚಕ್ರೇಶ್ವರರು. ಇಂತಹ ಘನವಿದ್ವಾಂಸರು ಆದಿಪುರಾಣದೊಳಗಿನ ಭಾಗಗಳನ್ನು ಉದಾಹರಿಸಬೇಕಾದರೆ ಪಂಪನು ನಿಜಕ್ಕೂ ಕೃತಕೃತ್ಯನು. 'ಆದಿಪುರಾಣದೊಳರಿವುದು ಕಾವ್ಯ-ಧರ್ಮಮಂ ಧರ್ಮಮುಮಂ' (೧-೩೮) ಎಂಬ ಆತನ ಮಾತು ಇದರಿಂದ ಸಾರ್ಥಕವಾಗಿದೆ.

ಪಂಪನಕವಿತ್ವಸಾಮರ್ಥ್ಯವು ಕಾರಣವಾಗಿ ಆತನಿಗೆ ' ಸುಕವಿಜನಮನೋಮಾನಸೋತ್ತಂಸಹಂಸ, ಕವಿತಾಗುಣಾರ್ಣವ, ಸಂಸಾರಸಾರೋದಯ, ಸರಸ್ವತೀಮಣಿಹಾರ ಮತ್ತು ಪುರಾಣಕವಿ ' ಎಂಬ ಬಿರುದುಗಳು ದೊರೆತುವು. ಈ ಬಿರುದುಗಳಿಗೆ ಸರಿಯಾದ ಸಂದರ್ಭಸೂಚನೆಗಳನ್ನು ತಾನೇ ಆದಿಪುರಾಣದಲ್ಲಿ ಹೇಳಿದ್ದಾನೆ:

........ಕೋಮಲಮತಿಸುಭಗಂ ಸುಂದರಂ ಸೂಕ್ತಿಗರ್ಭಂ
ಮೃದುಸಂದರ್ಭಂ ವಿಚಾರಕ್ಷಮಮುಚಿತಪದಂ ಶ್ರವ್ಯಮವ್ಯಾಕುಲಂ ವ್ಯಾ-।
ಪ್ತದಿಗಂತಂ ಕಾವ್ಯಮೆಂದನ್ವಿತಸುಕವಿಜನಂ ಮೆಚ್ಚೆ..........
....ನೆಟ್ಟನೀತಂ **ಸುಕವಿಜನಮನೋಮಾನಸೋತ್ತಂಸಹಂಸಂ** ||ಆ.ಪು.೧-೨೬

ಇದು ನಿಚ್ಚಂ ಪೊಸತರ್ಣವಂಬೊಲತಿಗಂಭೀರಂ ಕವಿತ್ವಂ ಜಗ-
ಕ್ಕೆದಱಿಂದಂ **ಕವಿತಾಗುಣಾರ್ಣವಂ** || ಆ. ಪು. ೧-೨೭ ||
.... .... .... ಸಂಸಾರದೊಳ್ ಸಾರವ-
ಪ್ಪುದು ತಾಂ ಧರ್ಮಮದಂ ನಿಮಿರ್ಚುವುದಱಿಂ **ಸಂಸಾರಸಾರೋದಯಂ**||
|| ಆ. ಪು. ೧-೨೭ ||

ಅತಿಸುಭಗಗೆ ಸಂದ ಸರ । ಸ್ವತಿಗೀತನ ಲಲಿತವಾಗ್ವಿಳಾಸಮೆ ದಲಲಂ- ||
ಕೃತಿಯುವೊಲೆಸೆದಪುದು ಜಗತ್ । ಪ್ರತೀತನೀತನೆ **ಸರಸ್ವತೀಮಣಿಹಾರಂ** ||
|| ೧-೨೮ ||

ಆದಿಪುರಾಣವನ್ನು ಬರೆದ ಕಾರಣ **ಪುರಾಣ**ಕವಿಯಾದನು.

ಈ ಬಿರುದುಗಳಲ್ಲಿ **'ಕವಿತಾಗುಣಾರ್ಣವ'** ನೆಂಬ ಬಿರುದು ಕವಿಗೆ ಬಹು ಪ್ರಿಯವಾಗಿದ್ದಿತು. ಯಾಕೆಂದರೆ ಇದನ್ನು ಆತನು ತನ್ನ ಆದಿಪುರಾಣದ ಮತ್ತು ಭಾರತದ ಆಶ್ವಾಸಾಂತ್ಯಗದ್ಯಗಳಲ್ಲಿ ತಪ್ಪದೆ ಉಪಯೋಗಿಸಿದ್ದಾನೆ. **'ಸರಸ್ವತೀಮಣಿಹಾರಂ'** ಎಂಬುದು ಆದಿಪುರಾಣದೊಳಗಿನ ಪ್ರತಿ ಆಶ್ವಾಸದ ಮೊದಲನೆಯ ಪದ್ಯದಲ್ಲಿ ಬರುತ್ತದೆ, ಮತ್ತು ಆಶ್ವಾಸಗಳ ಕೊನೆಯ ಎರಡು ಪದ್ಯಗಳಲ್ಲಿ ' ಸುಕವಿಜನ-ಮನೋಮಾನಸೋತ್ತಂಸಹಂಸಂ ' ಮತ್ತು ಸಂಸಾರಸಾರೋದಯಂ ಎಂಬುವು ಕ್ರಮವಾಗಿ ಬರುತ್ತವೆ.

ಪಂಪನು ಕವಿಯುಷ್ಟೇ ಅಲ್ಲದೆ ಶೂರನಾಗಿದ್ದನು. ಆತನು ' ಅಪಗತಪಾಪನೂ ಧಾತ್ರೀವಳಯನಿಳಂಪನೂ ಆಗಿದ್ದರೂ ಆತನಲ್ಲಿ ಕ್ಷತ್ರಿಯನಲ್ಲಿರಬೇಕಾದ ಶೌರ್ಯ-ಧೈರ್ಯಾದಿಗುಣಗಳಿದ್ದುವು. ಯಾಕೆಂದರೆ ತನ್ನನ್ನು ' **ಚತುರಂಗಬಳಭಯಂ-ಕರಣಂ ನಿಷ್ಕಂಪಂ**' ಎಂದು ಸಂಬೋಧಿಸಿಕೊಂಡಿರುವುದಲ್ಲದೆ

ಕವಿತೆ ನೆಗಟ್ತೆಯುಂ ನಿಜಱಸೆ ಜೋಳದ ಪಾಱಿ ನಿಜಾಧಿನಾಥನಾ
**ಹವದೊಳರಾತಿನಾಯಕರ ಪಟ್ಟನೆ ಪಾಱಸೆ ಸಂದ ಪೆಂಪು ಭೂ** |
**ಭುವನದೊಳಾಗಳುಂ ಬೆಳಗೆ** ನಿಕ್ಕಭಿಮಾನದ ಮಾತು ಕೀರ್ತಿಯುಂ |
ವಿವರಿಸೆ ಸಂದನೇಂ **ಕಲಿಯೊ** ಸತ್ಕವಿಯೊ ಗುಣಾರ್ಣವಂ || ಪಂಪ
ಭಾರತ ೧೪-೫೦ ||

ಎಂದಿರುವುದರಿಂದ ತನ್ನ ಅರಸು ಅರಿಕೇಸರಿಗಾಗಿ ವೈರಿಗಳನ್ನುಎದುರಿಸಿ ಅವರನ್ನು ಸೋಲಿಸಿ ವಿಜಯವನ್ನೂ ದಿಗಂತ ಕೀರ್ತಿಯನ್ನೂ ಸಂಪಾದಿಸಿದ ಕಲಿಯಾಗಿದ್ದನು. ಆದುದರಿಂದ **ಕಲಿ** ಮತ್ತು **ಕವಿ** ಎಂಬ ಎರಡೂ ಶಬ್ದಗಳು ಪಂಪನಿಂದ ಕೃತಾರ್ಥವಾಗಿವೆ. ಪಂಪನ ಕಾಲವು ಕ್ಷಾತ್ರಯುಗವು. ತಾನೇ ಚಾವುಂಡರಾಯನನ್ನು ನೋಡಿ. ಅವನೂ ಕಲಿಯಾಗಿದ್ದನು, ಕವಿಯಾಗಿದ್ದನು. ಪಂಪನಿಗೆ ಆಶ್ರಯವು ಯಾವಾಗ ದೊರಕಿತೆಂಬುದು ನಿಶ್ಚಯವಾಗಿ ತಿಳಿದು ಬಂದಿಲ್ಲ. ಬಹುತರವಾಗಿ ಆದಿಪುರಾಣವನ್ನು ಬರೆದ ಮೇಲೆ ಪಂಪನ ಕೀರ್ತಿ ಹಬ್ಬಿ ಅರಿಕೇಸರಿಯ ವರೆಗೆ ಹೋಗಿರಬೇಕು. ಆತನು ಪಂಪನನ್ನು ಕರೆಯಿಸಿಕೊಂಡು ಆತನಿಗೆ ಆಶ್ರಯವನ್ನಿತ್ತಿರಬೇಕು. ಅರಿಕೇಸರಿಯು ತನ್ನ ದಾಳಿಗಳಲ್ಲಿ ಪಂಪನನ್ನು ಸಂಗಡ ಕರೆದುಕೊಂಡು ಹೋಗಿರಬೇಕು. ಆತನು ಶೂರನಾಗಿದ್ದುದರಿಂದ ತನ್ನ ಶೌರ್ಯವನ್ನು ಪೋಷಕನಿಗೆ ತೋರಿಸಲು ಸುಲಭವಾಗಿ ಅವಕಾಶ ದೊರೆತಿರಬೇಕು. ಇದು ಊಹೆ ಮಾತ್ರ. ನಿಜ ಸಂಗತಿ ಸಂಶೋಧಿತವಾಗಬೇಕಾಗಿದೆ.

ಆದಿಪುರಾಣದ ಪ್ರಶಂಸೆಯನ್ನು ಕೇಳಿ ಅರಿಕೇಸರಿಯು ಪಂಪನಿಂದ ವಿಕ್ರಮಾರ್ಜುನವಿಜಯವನ್ನು ಬರೆಯಿಸಿದನು. ಕವಿ ಅದನ್ನು ಆರು ತಿಂಗಳಲ್ಲಿ ಬರೆದು ಮುಗಿಸಿದನು. ಭಾರತವನ್ನು ಕೇಳಿ ದೊರೆಯು ಸಂತುಷ್ಟನಾಗಿ, ಕವಿಗೆ ಪಂಚರತ್ನಗಳನ್ನೂ ಉಡುಗೋರೆಗಳನ್ನೂ ಗ್ರಾಮಗಳನ್ನೂ ವೆಗ್ಗಳವಾಗಿ ದಯಪಾಲಿಸಿ, 'ಪಿರಿದಪ್ಪ ಗೌರವದ ಮೈಮೆಯ ಮನ್ನಣೆಯೊಳ್ಪಿನಟ್ಟಿಱಿಂ'ದ ಕವಿಯನ್ನು ಗೌರವಿಸಿ, ಬಚ್ಚಿಸಾಸಿರದ ಧರ್ಮಪುರಕ್ಕೆ ಸಾರವೆಂದು ಹೆಸರಿಟ್ಟು ಶಾಸನಾಗ್ರಹಾರವಾಗಿ ಕೊಟ್ಟನು. ಈ ಧರ್ಮಪುರವು ಪುಲಿಗೆರೆಯ ಹತ್ತಿರವಿರುವ **ಡಂಬಳ**ವೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಮತ್ತೆ ಕೆಲವರು ಅದು ಹೈದರಾಬಾದ (ದಕ್ಷಿಣ) ಪ್ರಾಂತದಲ್ಲಿ ಗೋದಾವರಿ ತೀರದಲ್ಲಿರುವ ಧರ್ಮಪುರವೆಂದು ಅಭಿಪ್ರಾಯ ಪಡುತ್ತಾರೆ. ಸಂಶೋಧನದಲ್ಲಿ ಸತ್ಯಾಂಶವನ್ನು ಕಂಡು ಹಿಡಿಯುವುದು ಸರಿಯಾದುದು. ಪ್ರಾಂತಾಭಿಮಾನದಿಂದ ಸತ್ಯವನ್ನು ಮರೆಯಬಾರದು. ಇದೇ ಮೇರೆಗೆ ಪಂಪನು ಹೇಳುವ ವಸಂತ, ಕೊಟ್ಟೂರು, ವಿಕ್ರಮಪುರ ಮುಂತಾದ ಊರುಗಳು ವಿಜಯಪುರ ಜಿಲ್ಲೆಯಲ್ಲಿರುವುದರಿಂದ ಪಂಪನು ಆ ಪ್ರಾಂತದವನು ಎಂದು ಕೆಲವರು ಹೇಳುತ್ತಾರೆ. ಆದರೆ ವಿಜಯಪುರದ ಈ ಭಾಗಕ್ಕೆ ತರ್ದವಾಡಿ ಎಂಬ ಹೆಸರಿತ್ತೇ ಹೊರ್ತು ವೆಂಗಿಮಂಡಲವೆಂದಲ್ಲ ಎಂಬುದನ್ನು ಅವರು ಗಮನಿಸಬೇಕು.

ಭಾರತವನ್ನು ಬರೆದ ನಂತರದ ಪಂಪನ ಚರಿತ್ರೆ ದೊರೆಯುವುದಿಲ್ಲ. ಆತನು ಮತ್ತೆ ಗ್ರಂಥಗಳನ್ನು ಬರೆದು ವಯೋವೃದ್ಧನಾಗಿ ಗತಿಸಿದನೋ ಅಥವಾ ರಣಭೂಮಿಯಲ್ಲಿ ಬಿದ್ದು ವೀರಸ್ವರ್ಗವನ್ನು ಪಡೆದನೋ ಹೇಳಲಾಗುವುದಿಲ್ಲ. ಹೈದರಾಬಾದ ಪ್ರಾಂತದಲ್ಲಿ ಅನೇಕ ಕನ್ನಡ ಶಾಸನಗಳು ಪ್ರಕಟವಾಗದೆ ಉಳಿದಿವೆ. ಅವು ಪ್ರಕಾಶವನ್ನು ಕಂಡರೆ ಪಂಪನ ಚರಿತ್ರೆಯು ಮೇಲೆಯೂ ಪ್ರಕಾಶಬೀಳಬಹುದು.

## ಆದಿಪುರಾಣಕಾರರು

ಆದಿನಾಥತೀರ್ಥಂಕರರ ಚರಿತ್ರೆಯನ್ನು ಅನೇಕ ಕವಿಗಳು ಸಂಸ್ಕೃತ, ಪ್ರಾಕೃತ, ಅಪಭ್ರಂಶ ಮತ್ತು ಕನ್ನಡದಲ್ಲಿ ಬರೆದಿದ್ದಾರೆ. ಇಂತಹ ಸಂಸ್ಕೃತ ಮತ್ತು ಪ್ರಾಕೃತ ಕವಿಗಳ ಮತ್ತು ಅವರ ಕಾಲಗಳ ಸಂಗತಿಗಳನ್ನು

೧. ಜೈನಗ್ರಂಥಾವಲೀ, ಮುಂಬಯಿ ಸಂವತ್ ೧೯೬೫
೨. ಜಿನರತ್ನಕೋಶ, ಎಚ್. ಡಿ. ವೇಲಣಕರ, ಪುಣೆ ೧೯೪೪
೩. ಜೈನಗ್ರಂಥ ಔರ ಗ್ರಂಥಕಾರ, ಬೇಲಾನಿ, ಬನಾರಸ ೧೯೫೦

ಈ ಮೂರು ಗ್ರಂಥಗಳಿಂದ ಶೇಖರಿಸಿ ಕೆಳಗೆ ಕೊಡಲಾಗಿದೆ:

| ಗ್ರಂಥದ ಹೆಸರು. | ಗ್ರಂಥಕಾರನ ಹೆಸರು. | ಕಾಲ ಸುಮಾರು. | ಭಾಷೆ. | ಶ್ವೇತಾಂಬರ ದಿಗಂಬರ. | ಶರಾ |
|---|---|---|---|---|---|
| ೧. ಪೂರ್ವ ಪುರಾಣ | ಜಿನಸೇನ | ೮೩೭ | ಸಂಸ್ಕೃತ | ದಿಗಂಬರ | |
| ೨. ಹರಿವಂಶ | ಜಿನಸೇನ | ೮೪೦ | ,, | ,, | ಹರಿವಂಶದ ಭಾಗ |
| ೩. ತ್ರಿಷಷ್ಟಿಶಲಾಕಾಪುರುಷ ಪುರಾಣ | ಹೇಮಚಂದ್ರ | ೧೩ ನೆಯ ಶ | ,, | ಶ್ವೇತಾಂಬರ | ತ್ರಿಷಷ್ಟಿಶಲಾಕಾ ಪುರುಷ ಪುರಾಣದ ಭಾಗ |
| ೪. ಆದಿನಾಥ ಪುರಾಣ | ಸಕಲಕೀರ್ತಿ | ೧೫ ನೆಯ ಶ | ,, | ದಿಗಂಬರ | |
| ೫. ಆದಿನಾಥ ಚರಿತ್ರ | ಅಮರಚಂದ್ರ ಸೂರಿ | .... | ,, | ಶ್ವೇತಾಂಬರ | |
| ೬. ಆದಿಪುರಾಣ | ಮಲ್ಲಿಷೇಣ | .... | ,, | ದಿಗಂಬರ | |
| ೭. ಋಷಭ ದೇವಚರಿತ್ರ | ವಾಗ್ಭಟ | .... | ,, | ,, | ಬರೆದಿರುವಂತೆ ತಿಳಿದಿದೆ. |
| ೮. ಆದಿಪುರಾಣ | ಧರ್ಮಕೀರ್ತಿ | .... | ,, | ,, | |
| ೯. ಆದಿನಾಥ ಪುರಾಣ | ಚಂದ್ರಕೀರ್ತಿ | .... | ,, | ,, | |
| ೧೦. ,, | ಶಾಂತಿದಾಸ | .... | ,, | ,, | |
| ೧೧. ಆದಿ ಪುರಾಣ | ಪುಷ್ಪದಂತ | ೯೬೫ | ಅಪಭ್ರಂಶ | ದಿಗಂಬರ | |

| ಗ್ರಂಥದ ಹೆಸರು | ಗ್ರಂಥಕಾರನ ಹೆಸರು | ಕಾಲ ಸುಮಾರು | ಭಾಷೆ | ಶ್ವೇತಾಂಬರ ದಿಗಂಬರ | ಶರಾ |
|---|---|---|---|---|---|
| ೧೨. ಆದಿನಾಥ ಚರಿತ್ರ | ವರ್ಧಮಾನ | ( ಸಂ ) ೧೧೬೦ | ಪ್ರಾಕೃತ | ಶ್ವೇತಾಂಬರ | |
| ೧೩. ಆದಿಪುರಾಣ | ರೈಧೂ ಅಥವಾ ಸಿಂಹಸೇನ | ೧೬ನೆಯ ಶ | ಅಪಭ್ರಂಶ | ದಿಗಂಬರ | |
| ೧೪. ಋಷಭದೇವಚ. | ಭುವನತುಂಗ | .... | ಪ್ರಾಕೃತ | ಶ್ವೇತಾಂಬರ | |
| ೧೫. ಆದಿನಾಥ ಚರಿತ್ರ | ವಿನಯಚಂದ್ರ | ( ಸಂ ) ೧೪೭೪ | .... | ,, | |

ಕನ್ನಡದಲ್ಲಿ ಆದಿನಾಥಚರಿತ್ರೆಯನ್ನು ಮತ್ತು ಅದರ ಭಾಗಗಳನ್ನು ಅನೇಕ ಕವಿಗಳು ಬಳಸಿಕೊಂಡಿದ್ದಾರೆ. ಅವರಲ್ಲಿ ಈಗ ತಿಳಿದ ಮಟ್ಟಿಗೆ ಪಂಪನೇ ಮೊದಲಿನವನು. ಚಾವುಂಡರಾಯನು ತನ್ನ ಚಾವುಂಡರಾಯಪುರಾಣದಲ್ಲಿ “ ಮಹಾಪುರಾಣವನ್ನು ಆದಿಯಲ್ಲಿ ಕೂಚಿಭಟ್ಟಾರಕನೂ, ನಂದಿಮುನೀಶ್ವರನೂ ವಿರಚಿಸಿದರು. ಅನಂತರ **ಕವಿಪರಮೇಶ್ವನು** ತ್ರಿಷಷ್ಟಿಶಲಾಕಾಪುರುಷಪುರಾಣವನ್ನು ಬರೆದನು. ಅದನ್ನೇ ಜಿನಸೇನಮುನೀಶ್ವರನು ಭವ್ಯಾಳಿಗೆ ಪೇಳ್ದನು ” ಎಂದು ಹೇಳಿದ್ದಾನೆ. ಕ. ಕ. ಚ. 1. ಪು. ೪೭ ಕವಿಪರಮೇಶ್ವರನ ಗ್ರಂಥವು ದೊರೆತಿಲ್ಲ. ಅದರೆ ಅದು ಸಂಸ್ಕೃತದಲ್ಲಿರಬೇಕೆಂದೂ ಚಾವುಂಡರಾಯ ಪುರಾಣದಲ್ಲಿ ದೊರೆಯುವ 'ಸಂಸ್ಕೃತ ಪದ್ಯಗಳು ಆಗ್ರಂಥದೊಳಗಿನವಿರಬೇಕೆಂದೂ ಪಂಡಿತರು ಅಭಿಪ್ರಾಯ ' ಪಡಹತ್ತಿದ್ದಾರೆ. ಕನ್ನಡದೊಳಗಿನ ಆದಿನಾಥಚರಿತ್ರೆಗೆ ಸಂಬಂಧಪಟ್ಟ ಗ್ರಂಥಗಳನ್ನೂ ಗ್ರಂಥಕಾರರನ್ನೂ ಕೆಳಗಿನ ಪಟ್ಟಿಯಲ್ಲಿ ಕೊಟ್ಟಿದೆ:

| ಗ್ರಂಥದ ಹೆಸರು | ಗ್ರಂಥಕಾರನ ಹೆಸರು | ಕಾಲ | ಶರಾ |
|---|---|---|---|
| ೧. ಆದಿಪುರಾಣ | ಪಂಪ | ೯೪೧ | ಪೂರ್ಣ ಚರಿತ್ರೆ |
| ೨. ಚಾವುಂಡರಾಯ ಪುರಾಣ | ಚಾವುಂಡರಾಯ | ೯೭೮ | ಚಾವುಂಡರಾಯ ಪುರಾಣದ ಪ್ರಥಮ ಭಾಗ |
| ೩. ಆದಿಪುರಾಣ | ಹಸ್ತಿಮಲ್ಲ | ೧೨೯೦ | ಪೂರ್ಣಚರಿತ್ರೆ |
| ೪. ಭರತೇಶ ವೈಭವ | ರತ್ನಾಕರವರ್ಣಿ | ೧೫೫೭ | ಉತ್ತರಭಾಗ |
| ೫. ಪುರಾಣ ಸ್ತೋತ್ರ | ಚಂದ್ರಸಾಗರ ವರ್ಣಿ | ೧೮೧೦ | ಸಂಕ್ಷೇಪವಾಗಿ ಒಂದೊಂದು ಪದ್ಯದಲ್ಲಿ ಒಬ್ಬೊಬ್ಬತೀರ್ಥಂಕರ ಚರಿತ್ರೆ |
| ೬. ಭುಜಬಲಿ ಚರಿತೆ | ಪಂಚಬಾಣ | ೧೬೧೪ | |
| ೭. ವೃಷಭಜಿನಸ್ತುತಿ | | ೧೫೦೦ | |

ಹೀಗೆ ಕವಿಪರಮೇಶ್ವರ-ಜಿನಸೇನಾಚಾರ್ಯರ ಪರಂಪರೆಯಿಂದ ಬಂದ ಆದಿನಾಥಚರಿತ್ರೆಯನ್ನೇ ಪಂಪನು ಎತ್ತಿಕೊಂಡಿದ್ದಾನೆ, ಮತ್ತು ಜಿನಸೇನಾಚಾರ್ಯರ ಪೂರ್ವಪುರಾಣವನ್ನು ಚಾಚೂ ತಪ್ಪದೆ ಅನುಸರಿಸಿದ್ದಾನೆ. "ಜಿನಸೇನರ ಪುರಾಣದ ಆಧಾರದಿಂದ ಈ ಗ್ರಂಥವು ಹುಟ್ಟಿದ ಹಾಗೆ ತಿಳಿಯಬರುವುದಿಲ್ಲ" ಎಂದು ದಿ. ಎಸ್. ಜಿ ನರಸಿಂಹಾಚಾರ್ಯರು ಅಭಿಪ್ರಾಯಪಟ್ಟಿದು ಸರಿಯಲ್ಲ. 'ಈ ಕಥೆ ಹಿಂದೆ ಪುರುದೇವಾದಿಜಿನೇಂದ್ರರು ಗಣಧರರು ಇವರ ಪರಂಪರೆಯಿಂದ ವೀರಸೇನಜಿನಸೇನಾಚಾರ್ಯಪರ್ಯಂತವಾಗಿ ಉಪದೇಶಕ್ರಮದಿಂ ದಬಂದಿತೆಂದು ಈ ಗ್ರಂಥದಲ್ಲಿ ಹೇಳಿದೆ' ಎಂದು ಉಲ್ಲೇಖಿಸಿಯೂ ಮೇಲಿನ ಅಭಿಪ್ರಾಯವನ್ನು ಅವರು ಕೊಟ್ಟಿದು ಅಸಮಂಜಸ. ಇಷ್ಟಕ್ಕೆ ನಿಲ್ಲದೆ "ವಿಕ್ರಮಾರ್ಜುನವಿಜಯದಲ್ಲಿ (೧೪-೬೨) 'ಸತ್ಕವಿವ್ಯಾಸಸಮಾಗಮಾನ್ವಿತಮನಾದಿಪುರಾಣಮನೆಯ್ದೆ ಪೇಟ್ದು ವಾಕ್ಶ್ರೀಸುಭಗಂ ಪುರಾಣಕವಿ'ಯೆಂದು ಹೇಳಿಕೊಂಡಿರುವುದರಿಂದ ವ್ಯಾಸನೆಂಬ ಕವಿಯ ಗ್ರಂಥದ ಆಧಾರದ ಮೇಲೆ ವಿರಚಿತವಾದಂತೆ ತೋರುತ್ತದೆ," ಎಂದೂ ಹೇಳಿದ್ದಾರೆ. ಇಲ್ಲಿ 'ಸತ್ಕವಿವ್ಯಾಸಸಮಾಗಮಾನ್ವಿತಮನಾದಿಪುರಾಣಮಂ' ಎಂಬ ಸಮಸ್ತ ಪದಕ್ಕೆ ಅರ್ಥ ಮಾಡುವಲ್ಲಿ ಆಚಾರ್ಯರು ಎಡಹಿದಂತೆ ತೋರುತ್ತದೆ. 'ಸತ್ಕವಿವ್ಯಾಸಸಮಾಗಮಾನ್ವಿತ' ಪದದಿಂದ ಆ ಕವಿವ್ಯಾಸನು ಪಂಪನ ಸಮಕಾಲೀನನೂ ಮಿತ್ರನೂ ಆಗಿದ್ದನೆಂದು ಸೂಚಿತವಾಗುತ್ತದೆ. ಆದಿಪುರಾಣವನ್ನು ಬರೆಯುವಲ್ಲಿ ಪಂಪನಿಗೆ ಆತನ ಸಹಾಯವಾಗಿರಬಹುದು, ಇಷ್ಟೇ. ಪಂಪನು ಜಿನಸೇನಾಚಾರ್ಯರನ್ನು ಅನುಸರಿಸಿದ್ದಾನೆಂಬ ನಮ್ಮ ಅಭಿಪ್ರಾಯವು ಕಥೆಯ ಮೂಲಕವಂತೂ ಸರಿಯೇ. ಇದನ್ನು ಮಿಕ್ಕು ಭಾಷಾಸರಣಿ ಉಪಮೆ-ವರ್ಣನೆಗಳಿಂದಲೂ ಅದು ಸಿದ್ಧವಾಗುತ್ತದೆ. ಈ ಹೋಲಿಕೆಯನ್ನು ತೋರಿಸುವ ಭಾಗಗಳನ್ನು ಮುಂದೆ ಕೊಡಲಾಗಿದೆ.

ಕವಿಪ್ರಶಸ್ತಿ—

ಕಾವ್ಯ ಬೀಜವು ಮೊಳೆತು, ಚಿಗಿತು, ಬೆಳೆದು, ಮರವಾಗಿ, ಹೂಬಿಟ್ಟು, ಕಾಯಾಗಿ, ರುಚಿಕರವಾದ ಹಣ್ಣುಗಳನ್ನು ಕೊಡಬೇಕಾದರೆ ಕವಿಯ ಮನೋಭೂಮಿಯು ಶಿಕ್ಷಣದಿಂದ, ಸೃಷ್ಟಿಸೌಂದರ್ಯಾನುಭವದಿಂದ, ಪ್ರಪಂಚಾನುಭವದಿಂದ ಹದವಾಗಬೇಕು, ಸಂಸ್ಕಾರದಿಂದ ಆತನು ರಸಿಕನಾಗಬೇಕು. ಪಂಪನಿಗೆ ದಕ್ಷಿಣದಲ್ಲಿ ದೇವೇಂದ್ರಮುನಿಗಳ ಪಾದದೆಡೆಯಲ್ಲಿ ಶಿಕ್ಷಣ ದೊರೆತಿದೆ, ಬನವಾಸಿದೇಶದ ಸೌಂದರ್ಯವು ಆತನನ್ನು ಮೋಹಗೊಳಿಸಿ ರಸಿಕತೆ ಸಂಸ್ಕಾರಗಳನ್ನು ನೀಡಿದೆ. ಆ ಸಂಸ್ಕಾರವನ್ನು ಆತನು ಭಾರತದಲ್ಲಿ ಹೀಗೆ ಹೇಳಿದ್ದಾನೆ:

ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ
ಳ್ಗಾಗರವಾದ ಮಾನಸರೆ ಮಾನಸರಂತವರಾಗಿ ಪುಟ್ಟಲೇ ।
ನಾಗಿಯುಮೇನೊ ತೀರ್ದಪುದೆ ತೀರದೊಡಂ ಮಱಿದುಂಬಿಯಾಗಿ ಮೇಣ್
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ಬನವಾಸಿದೇಶದೊಳ್ ॥ ೪–೨೯ ॥

ಇಲ್ಲಿ ತ್ಯಾಗ, ಭೋಗ, ಜ್ಞಾನ, ಸಂಗೀತ, ಸಂಭಾಷಣೆ ಮುಂತಾದವುಗಳ ಸೊಗಸುಮಾಧುರ್ಯಗಳ ಜೊತೆಗೆ ಸೃಷ್ಟಿಸೌಂದರ್ಯಾನುಭವವು ಸಂಸ್ಕಾರವೆಂದು ಕವಿ ಸೂಚಿಸಿದ್ದಾನೆ. ಈಮುಂದೆ ತೆಂಕನಾಡವರು ರಸಿಕರು. ಅವರ ಸಹವಾಸದಿಂದ ತನ್ನಲ್ಲುಂಟಾದ ರಸಿಕತೆಯನ್ನು ಮುಂದಿನ ಪದ್ಯದಿಂದ ಸೂಚಿಸುತ್ತಾನೆ:

ಅಮರ್ದಂ ಮುಕ್ಕಳಿಪಂತುಟಪ್ಪ ಸುಸಿಲೊಂದಿಂಪುಂ ತಗುಳ್ದೊಂದು ಗೇ ।
ಯಮುಮಾದಕ್ಕರಗೊಟ್ಟಿಯುಂ ಚದುರರೊಳ್ವಾತುಂ ಕುಳಿರ್ ಕೋೞ್ಪ ಜೊಂ ॥
ಪಮುಮೇವೇೞ್ಪುದನುಳ್ಳ ಮೆಯ್ಸುಕಮುಮಿಂತೆನ್ನಂ ಕರಂ ನೋಡಿ ನಾ
ಡೆ ಮನಂಗೊಡಿರೆ ತೆಂಕನಾಡ ಮಱಿಯಲ್ಕಿನ್ನೇಂ ಮನಂ ಬರ್ಕುಮೇ ॥ ೪–೩೧ ॥

ಹೀಗೆ ರಸಿಕತೆಯ ಸಂಸ್ಕಾರದ ನೀರೆರೆದುದರಿಂದ ಹದವಾದ ಆತನ ಮನೋಭೂಮಿಯಲ್ಲಿ ಕಾವ್ಯಬೀಜವು ನೆಡಲಾಯಿತು. ಅದು ಅಂಕುರಿಸಿ, ಬೆಳೆದು, ಮರವಾಗಿ ಆದಿಪುರಾಣವಿಕ್ರಮಾರ್ಜುನವಿಜಯಗಳೆಂಬ ಎರಡು ಅಮೃತಫಲಗಳನ್ನು ಕೊಟ್ಟಿದೆ. ಅವುಗಳ ಮಾಧುರ್ಯವನ್ನು ಎಲ್ಲರೂ ಈವರೆಗೆ ಸೇವಿಸುತ್ತ ಬಂದಿದ್ದರೂ ಅದು ಚಿರನೂತನವಾಗಿದೆ.

ಪಂಪನು ತನ್ನ ಕಾವ್ಯಗಳನ್ನು ಆತ್ಮವಿಶ್ವಾಸದಿಂದ ತಾನೇ ವಿಮರ್ಶಿಸಿದ್ದಾನೆ. ಅದನ್ನು ಇಲ್ಲಿ ಉದಾಹರಿಸಬಹುದು.

ತನ್ನ ಕವಿತೆ ಪುಲಿಗೆರೆಯ ತಿರುಳ ಕನ್ನಡದಲ್ಲಿ ಸ್ವಾಭಾವಿಕವಾದ ಮಾಟದಿಂದ ಮತ್ತು ಓಜೋಬಲದಿಂದ ರಚಿತವಾಗಿದೆ ಎಂದಿದ್ದಾನೆ:

ರಾಜ[ದ್ರಾ]ಜಕಮೆನಿಸಿದ
ಸಾಜದ ಪುಲಿಗೆಱೆಯ ತಿರುಳ ಕನ್ನಡದೊಳ್ ನಿ- ।
ರ್ವ್ಯಾಜದೆಸಕದೊಳೆ ಪುದಿದೊಂ
ದೋಜೆಯ ಬಲದಿನಿಯ ಕವಿತೆ ಪಂಪನ ಕವಿತೇ ॥ ಪಂ. ಭಾ. ೧೪–೨೮ ॥

ಕಾವ್ಯವು ಮನಸ್ಸನ್ನು ಹಿಡಿಯಬೇಕಾದರೆ ಧ್ವನಿಯಿಂದ ಕೂಡಿದ ಹೊಸ ಹೊಸ ಮಾತುಗಳೇ ಬೇಕು:

ಕಿವಿಯಿಂ ಬಗೆವುಗುವೊಡೆ ಕೊಂ-
ಕುವೆತ್ತ ಪೊಸನುಡಿಯೆ ಪುಗುಗುಂ....... ॥ ಆ. ಪು. ೧–೧೮ ॥

ಮಾತುಗಳಲ್ಲಿ ಮಾರ್ದವಮಾಧುರ್ಯಗಳಿರಬೇಕು. 'ಅವುಗಳನ್ನು ರಚಿಸುವಾಗ ಪ್ರಗಲ್ಭವಾದ ಅರ್ಥಪ್ರತೀತಿ ಕೇಳುತ್ತಿರುವ ಜನರಿಗೆ ಒದಗುತ್ತಿರಬೇಕು. ಕಾವ್ಯ ವನ್ನು ಓದುತ್ತಿರುವ ಹಾಗೆಯೇ ಅದು ಅವರ ಅನುಭವಕ್ಕೆ ಬರಬೇಕುಃ

ಮೃದುಮಧುರವಚನರಚನೆಯೊ-
ಳುದಾತ್ತಸುರ್ಥಪ್ರತೀತಿಯುಂ ಕೇಳ್ವ ಜನ ।
ಕ್ಕಿದಿರೊಳ್........ ॥ ಆ. ಪು. ೧–೧೯ ॥

ಕಾವ್ಯಾನಂದಾನುಭವವು ಚತುರ ಕವಿಗಳಿಗೆ ಮಾತ್ರ ಸಾಧ್ಯ. ಅದು ಶುಷ್ಕ ವೈಯಾಕರಣರಿಗೂ ಶುಷ್ಕ ತಾರ್ಕಿಕರಿಗೂ ವಿಷಯುವಲ್ಲಃ

ಇದು ಮರುಳೆ ಶುಷ್ಕವೈಯಾ
ಕರಣಂಗಂ ಶುಷ್ಕತಾರ್ಕಿಗಂಗಂ ಪೆಳ್ಳ- ।
ಕ್ಕರಿಗಂಗಂ ವಿಷಯುಮೇಕಾ-
ವ್ಯರತ್ನಮತಿಚತುರಕವಿಕದಂಬಕವಿಷಯಂ ॥ ಆ: ಪು. ೧–೨೪ ॥

'ತಾನು ಸುಕವಿಜನಮನೋಮಾನಸೋತ್ತಂಸಹಂಸ'ನಾಗಿದ್ದುದರಿಂದ ತನ್ನ ಬಿರುದಿಗೆ ಸರಿಹೋಗುವಂತೆ ತನ್ನ ಪುರಾಣಕಾವ್ಯವು ಹೀಗಿದೆ ಎಂದು ಹೇಳುತ್ತಾನೆಃ

ವಿದಿತಂ ಪ್ರಾತೀತಿಕಂ ಕೋಮಳಮತಿಸುಭಗಂ ಸುಂದರಂ ಸೂಕ್ತಿಗರ್ಭಂ
ಮೃದುಸಂದರ್ಭಂ ವಿಚಾರಕ್ಷಮಮುಚಿತಪದಂ ಶ್ರವ್ಯಮವ್ಯಾಕುಳಂ ವ್ಯಾ- ।
ಪ್ತದಿಗಂತಂ ಕಾವ್ಯಮೆಂದನ್ವಿತಸುಕವಿಜನಂ ಮೆಚ್ಚಿ........ ॥ ಆ. ಪು. ೧–೨೬ ॥

ತನ್ನ ಕಾವ್ಯವು (ಆದಿಪುರಾಣವು) ಸುಕವಿಗಳಿಗೆ ಅತ್ಯಾನಂದವನ್ನುಂಟುಮಾಡು ವುದು ಎಂದೂ ನುಡಿದಿದ್ದಾನೆಃ

ಇದುವೆ ಸುಕವಿಪ್ರಮೋದಪ್ರದಂ.... ॥ ಆ. ಪು. ೧–೩೮

ತನ್ನ ಭಾರತದಲ್ಲಿಯೂ ಇದೇ ಅರ್ಥವನ್ನು ಬೇರೆ ಮಾತುಗಳಿಂದ ಹೇಳಿದ್ದಾನೆಃ

ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದೋದಿ ದೇಸಿಯೊಳ್
ಪುಗುವುದು ಪೊಕ್ಕ ಮಾರ್ಗದೊಳೆ ತಳ್ವುದು ತಳ್ತೊಡೆ ಕಾವ್ಯಬಂಧಮೊ- ।
ಪ್ಪುಗುಂ........ ॥ ಪಂ. ಭಾ. ೧–೮ ॥

ಆಸಕಳಾರ್ಥಸಂಯುತಮಳಂಕೃತಿಯುಕ್ತಮುದಾತ್ತ[ವೃತ್ತಿ]ವಿ-
ನ್ಯಾಸಮನೇಕಲಕ್ಷಣಗುಣಪ್ರಭವಂ ಮೃದುಪಾದಮಾದ ವಾ- ।
ಕ್ಶ್ರೀಸುಭಗಂ ಕಳಾಕಳಿತಮೆಂಬ ನೆಗಟ್ತೆಯನಾಳ್ದ ಕಬ್ಬಮುಂ
ಕೂಸುಮನೀವುದೀವುದರಿಕೇಸರಿಗಲ್ಲದ ವಸ್ತುಗೀವುದೇ ॥ ಪಂ. ಭಾ. ೧–೯ ॥

ತನ್ನ ಪ್ರಶಸ್ತಿಯನ್ನೂ ಆತ್ಮವಿಶ್ವಾಸವನ್ನೂ ಕೆಳಗಿನ ಪದ್ಯಗಳಲ್ಲಿ ಅರುಹಿದ್ದಾನೆ:

ಇದು ನಿಚ್ಚಂ ಪೊಸತರ್ಣವಂಬೊಲತಿಗಂಭೀರಂ.... ॥ ಆ. ಪು. ೧–೨೭ ॥
ರಸಭಾವೋಪೇತಧರ್ಮಾಮೃತರಸಮಯದೊಳ್..... .
........ ವಾಗ್ವಧೂಮುದ್ರೆಯೊಳ್ ಮುದ್ರಿಸಿ ನಿಂದತ್ತು ॥ ಆ. ಪು. ೧೬–೭೯ ॥
ಕವಿತೆಯೊಳಗ್ಗಳಂ ಗುಣದೊಳಗ್ಗಳಮೆಲ್ಲಿಯುಮೀಗುಣಾರ್ಣವಂ ॥
ಪಂ. ಭಾ. ೧–೧೦.

ಕ್ಷಿತಿಗೆ ಸಮಸ್ತಭಾರತಮುಮಾದಿಪುರಾಣಮುಮೀಗಳೊಂದೆ ೞಂ-
ಕೃತಿಯವೊಲಿರ್ದುವೇಕಱಿಯ ಪೋದವರಾದವರೊಳ್ ಸರಸ್ವತೀ
ಮತಿ ಕವಿತಾಗುಣಕ್ಕೆ ಪದೆದೆಯ್ದಿವರಲ್ಕೆ ಕವೀಂದ್ರರಾರ್ ಸರ-
ಸ್ವತಿಗೆ ವಿಳಾಸಮಂ ಪೊಸತು ಮಾಡುವ ಪಂಪನ ವಾಗ್ವಿಲಾಸಮಂ ॥
ಪಂ. ಭಾ. ೧೪–೬೧ ॥

ಮುನ್ನಿನ ಕಬ್ಬಮನೆಲ್ಲಮಿಕ್ಕಿ ಮೆ-
ಟ್ಟಿದುವು ಸಮಸ್ತಭಾರತಮುಮಾದಿಪುರಾಣಮುಹಾಪ್ರಬಂಧಮುಂ ॥
ಪಂ. ಭಾ. ೧೪–೫೯ ॥

ಇಂತಹ ಆತ್ಮವಿಶ್ವಾಸವುಳ್ಳವನಾದ ಕವಿ ಭಾರತವನ್ನು ಆರು ತಿಂಗಳಲ್ಲಿ ಆದಿಪುರಾಣವನ್ನು ಮೂರು ತಿಂಗಳಲ್ಲಿ ರಚಿಸಿದೆನೆಂದು ತಾನೇ ಹೇಳಿಕೊಂಡಿರುವಲ್ಲಿ ಆತನ ಕಾವ್ಯಸಾಮರ್ಥ್ಯ ಅಗಾಧವಾಗಿರಬೇಕು:

ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮಂ ಸಮಸ್ತಭೂ-
ತಳಕೆ ಸಮಸ್ತಭಾರತಮುಮಾದಿಪುರಾಣಮುಮೆಂದು ಮೆಯ್ಯಸುಂ- ।
ಗೊಳುತಿರೆ ಪೂಣ್ದು ಪೂಣ್ದ ತೆಱ[ದೊಂ]ದಱುದಿಂಗಳೊಳೊಂದು ಮೂಱು ತಿಂ-
ಗಳೊಳೆ ಸಮಾಪ್ತಿಯಾದುದೆನೆ ಬಣ್ಣಿಸಿದಂ ಕವಿತಾಗುಣಾರ್ಣವಂ ॥ ೧೪–೬೦ ॥

ಕವಿತಾರಚನೆಯಿಂದ ಪಂಪನು ಅಪೇಕ್ಷಿಸುವ ಫಲವು ಇತರ ಕವಿಗಳು ಅಪೇಕ್ಷಿಸುತ್ತಿರುವಂತೆ ಪೂಜೆ, ನೆಗೞ್ತೆ, ಲಾಭ ಮುಂತಾದ ಲೌಕಿಕ ಪ್ರಾಪ್ತಿಗಳಾಗಿರದೆ ಜಿನೇಂದ್ರಗುಣಸ್ತುತಿಯಿಂದ ಪಡೆಯುವ ಇಂದ್ರಪೂಜೆ, ಭುವನಸ್ತುತಮಪ್ಪ ನೆಗೞ್ತೆ, ಮುಕ್ತಿ ಇವೇ ಹೆಚ್ಚಿನವು ಎನ್ನುತ್ತಾನೆ:

ಕವಿತೆಯೊಳಾಸೆಗೆಯ್ವ ಫಲಮಾವುದೊ ಪೂಜೆ ನೆಗೞ್ತೆ ಲಾಭಮೆಂ
ಬಿವೆ ವಲಮಿಂದ್ರಪೂಜೆ ಭುವನಸ್ತುತಮಪ್ಪ ನೆಗೞ್ತೆ ಮುಕ್ತಿ ಸಂ- ।
ಭವಿಸುವಲಾಭಮೆಂಬಿವೆ ಜಿನೇಂದ್ರಗುಣಸ್ತುತಿಯಿಂದೆ ತಾಮೆ ಸಾ-
ರವೆ ಪೆಱರೀವುದೇಂ ಪೆಱರ ಮಾಡುವುದೇಂ ಪೆಱರಿಂದಮಪ್ಪುದೇಂ ॥
ಆ. ಪು. ೧–೩೬ ॥

ಕಾವ್ಯ ರಚನೆಯ ಫಲವು ಪೂಜೆ-ನೆಗಟ್ಚಿ-ಲಾಭ ಎಂದು ಭೌತಿಕವಾಗಿರುವುದನ್ನು ಪಂಪನು ಹೇಳಿರುವಂತೆಯೇ ೧೨ನೆಯ ಶತಮಾನದಲ್ಲಿ ಆಗಿ ಹೋದ ಸಂಸ್ಕೃತ ಲಕ್ಷಣಗ್ರಂಥ(ಕಾವ್ಯ ಪ್ರಕಾಶ)ಕಾರನಾದ ಮಮ್ಮಟನು ಹೇಳಿದ್ದಾನೆ:

काव्यं यशसेऽर्थकृते व्यवहारविदे शिवेतरक्षतये ।
सद्यः परिनिर्वृतये कांतासम्मिततयोपदेशयुजे ॥

ಅದು ಹೇಗೆಯೇ ಇದ್ದರೂ ಆದಿಪುರಾಣದಂತಹ ಸುದೀರ್ಘವಾದ ಉದ್ಗ್ರಂಥವನ್ನು ಮೂರು ತಿಂಗಳಲ್ಲಿ ಬರೆದು ಮುಗಿಸುವುದೊಂದು ಅದ್ಭುತ ಕಾರ್ಯವೇ. ಇದಕ್ಕೆ ಕಥೆಯನ್ನು ಚೆನ್ನಾಗಿ ಹೊಂದಿಸಿಕೊಂಡಿರಬೇಕು; ಅದಕ್ಕನುಗುಣವಾಗುವಂತೆ ಧಾರ್ಮಿಕ ಮತ್ತು ಆಗಮಿಕ ಭಾಗಗಳನ್ನು ಅಳವಡಿಸಿಕೊಂಡಿರಬೇಕು; ಭಾಷಾಪ್ರಭುತ್ವವಿರಬೇಕು; ಪ್ರತಿಭೆಯಿರಬೇಕು; ಸ್ಫೂರ್ತಿಬೇಕು. ಇವೆಲ್ಲ ಗುಣಗಳು ಪಂಪನಿಗೆ ಜಿನಸೇನಾಚಾರ್ಯರ ಪೂರ್ವಪುರಾಣದ ಆಳವಾದ ಅಭ್ಯಾಸದಿಂದ ದೊರೆತಿರಬೇಕು. ಜಿನಸೇನಾಚಾರ್ಯರು ಪ್ರತಿಭಾಸಂಪನ್ನರಾದ ಉದ್ದಾಮಕವಿಗಳು. ವಾಲ್ಮೀಕಿರಾಮಾಯಣವು ಪುರಾಣವೂ ಕಾವ್ಯವೂ ಆಗಿರುವಂತೆ ಪೂರ್ವಪುರಾಣವು ಪುರಾಣವೂ ಕಾವ್ಯವೂ ಆಗಿದೆ. ಇದರ ಕಥೆಯನ್ನು ಹೇಳುವ ಕ್ರಮವು ಸ್ವಾರಸ್ಯಮಯವಾಗಿದೆ, ಹೃದಯಂಗಮವಾಗಿದೆ. ಪಂಪನು ಅದನ್ನು ಓದಿ, ಮತ್ತೆ ತಿರುಗಿ ಓದಿ, ಅದರ ಕತೆಯನ್ನು ಅರಗಿಸಿಕೊಂಡು, ಅದರ ಭಾಷೆಯೊಳಗಿನ ಶಬ್ದಸಾಮಗ್ರಿ-ವಾಕ್ಯ-ಅಲಂಕಾರ-ಕಲ್ಪನೆಗಳನ್ನು ಆರಂಭದಿಂದ ಅಂತ್ಯದ ವರೆಗೆ ಅಡೆತಡೆಯಿಲ್ಲದೆ ಉಪಯೋಗಿಸಿಕೊಳ್ಳುತ್ತ ಹೋಗಿದ್ದಾನೆ. ಹೀಗೆ ಮಾಡುವಲ್ಲಿ ಕೃತಿಚೌರ್ಯದೋಷವುಂಟಾಗುತ್ತದೆಂದು ಯಾರಾದರೂ ಭಾವಿಸಬಹುದು. ಅದು ಸರಿಯಲ್ಲ. ಸಂಸ್ಕೃತದ ಉದ್ದಾಮ ಕವಿಗಳ ಅಭಿಪ್ರಾಯಗಳನ್ನು ಭಾಷಾಂತರವೆಂದು ತೋರದಂತೆ ರಮ್ಯವಾಗಿ ಕನ್ನಡದಲ್ಲಿ ಪ್ರಚಾರಗೊಳಿಸಿದ್ದಾನೆ ಪಂಪನು. ಆದಿಪುರಾಣವನ್ನು ಓದುತ್ತಿರುವಾಗ ಈ ಭಾಗವು ಸಂಸ್ಕೃತಭಾಗದ ಪ್ರತಿಕೃತಿ ಎಂಬ ಕಲ್ಪನೆ ಸಹ ಬರುವುದಿಲ್ಲ. ಈ ಕಾರಣದಿಂದಲೇ ದಿ ಗ. ಎಸ್. ಜಿ. ನರಸಿಂಹಾಚಾರ್ಯರು 'ಆದರೂ ಜಿನಸೇನನ ಪುರಾಣದ ಆಧಾರದಿಂದ ಈ ಗ್ರಂಥವು ಹುಟ್ಟಿದ ಹಾಗೆ ತಿಳಿಯಬರುವುದಿಲ್ಲ' ಎಂದು ಭ್ರಮಿಸಿದ್ದಾರೆ. ಇಲ್ಲಿ ಇದೆ ಪಂಪನ ಕಲಾನೈಪುಣ್ಯ, ಕೌಶಲ್ಯ. ಈ ಸಂದರ್ಭದಲ್ಲಿ ಕೆಲವು ಉದಾಹರಣೆಗಳನ್ನು ಕೊಟ್ಟು ನಮ್ಮ ಅಭಿಪ್ರಾಯವನ್ನು ಪುಷ್ಟಿಗೊಳಿಸುತ್ತೇವೆ:

| ಆದಿಪುರಾಣಂ | ಪೂರ್ವಪುರಾಣಂ |
|---|---|
| ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ ನಗರಸಂಪತ್ಪರಿ | ಲೋಕೋ ದೇಶಃ ಪುರಂ ರಾಜ್ಯಂ ತೀರ್ಥಂ ದಾನತಪೋದ್ವಯಂ । ಪುರಾ |

| ಆ. ಪು. | ಪೂ. ಪು. |
| --- | --- |
| ವರ್ಣನಮುಂ .... ತಪೋದಾನವಿಧಾನ ವರ್ಣನಮುಂ ತತ್ಫಳಪ್ರಾಪ್ತಿಪ್ರಕಟನ ಮುಮೆಂದಿಂತವಯವಂಗಳೆಂಟಕ್ಕುಂ— ೧–೪೨ ವ. | ಹೇಷ್ವಷ್ಟಧಾಖ್ಯೇಯಂ ಗತಯಃ ಫಲ ಮಿತ್ಯಪಿ ೪-೩ \|\| |
| ಮತ್ತಮುಪರನೆ ತಿಳಿಪುವ ಬಗೆಯಿಂ ದೃಷ್ಟಶ್ರುತಾನುಭೂತಕಥೆಗಳಂ ತದನ್ವಯಸಂಬಂಧಿಗಳನಿಂತೆಂದು ಪೇೞಲ್ ತಗುಳ್ದಂ. ೨–೧೧ ವ. | ........ ತಸ್ಮಿನ್ನದಸ್ಯಸೌ । ದೃಷ್ಟಶ್ರುತಾನುಭೂತಾರ್ಥಸಂಬಂಧೀ ದನುಭಾಷತ ೫–೮೮ |
| ಹರಿಶ್ಚಂದ್ರಕುರುವಿಂದರೆಂಬ ನಿಜತನೂಜರೊಡನೆ ಖೇಚರಗೋಚರವಿಭವಮನನುಭವಿಸಿ ಬಹ್ವಾರಂಭಸಂರಂಭರೌದ್ರಧ್ಯಾನಪರಿಣತನುಪಾರ್ಜಿತನರಕಾಯುಷ್ಯಂ— ೨–೧೧ ವ. | ವಿಷಯಾನನ್ವಭೂದ್ದಿವ್ಯಾನಸೌ ಖೇಚರಗೋಚರಾನ್ । ಅಭೂತಾಂ ಹರಿಶ್ಚಂದ್ರಶ್ಚ ಕುರುವಿಂದಶ್ಚ ತತ್ಸುತೌ \|\| ೫–೯೧ \|\| ಸಬಹ್ವಾರಂಭಸಂರಂಭರೌದ್ರಧ್ಯಾನಾಭಿಸಂಧಿನಾ । ಬಬಂಧನರಕಾಯುಷ್ಯಂ.... \|\| ೫–೯೨ \|\| |
| ವಾರಿಜಮುಳಯುಜಮುಳಯುಸ। ಮೀರಣಚಂದ್ರಾಂಶುಚಂದ್ರಕಾಂತದ್ರವ ........ ಮೃಣಾಳಾದಿಗಳುಂ । ಬಾರಿಸಲಾಱವೆ ದಲವನ ದಾಹಜ್ವರಮಂ \|\| ೨–೧೩. | ಕಲ್ಹಾರವಾರಿಭಿರ್ಧೂತಶೀತಶೀತಲಿತಾನಿಲೈಃ । ನ ನಿರ್ವೃತಿಮಸೌ ಲೇಭೇ ಹಾರೈಶ್ಚ ಹರಿಚಂದನೈಃ \|\| ೫–೯೪ \|\| |
| ವಿಷಯಾಮಿಷಲಂಪಟತೆಯೆ । ವಿಷಧರನೆನಿಸಿದುದು ನಿನ್ನನೆಲೆ ವಿಷಧರ ನೀಂ\|\| ವಿಷಧರನಾಗದೆ ಬೇಗಂ । ವಿಷಯಾಮಿಷವಿಷಯನುಗುಳ್ದು ನಿರ್ವಿಷನಾಗಾ\|\| ೨–೧೬ \|\| | ತತೋ ಧಿಗಿದಮತ್ಯಂತಕಟುಕಂ ವಿಷಯಾಮಿಷಂ। ವಮೈತದ್ದುರ್ಜರಂ ತಾತ ಕಿಂಪಾಕಫಲಸನ್ನಿಭಂ \|\| ೫–೧೨೬. |
| ಆನಾಗಿರ್ದ ವಿಮಾನಮಾವುದಿವರಾರ್ಗೀ ಲೋಕಮೇನೆಂಬುದಾ ।........ ತಾನಾಗಳ್ ಬಗೆವನ್ನೆಗಂ ಮನದೊಳಾದೇವಂ ಭವಪ್ರತ್ಯಯ । ಜ್ಞಾನಂ ತೊಟ್ಟನೆ ಪುಟ್ಟಿ \|\| ೨–೬೬ \|\| | ಕ್ವಾಯಾತೋಽಸ್ಮಿ ಕುತೋ ವಾದ್ಯ ಪ್ರಪ್ರಸೀದತಿ ಮೇ ಮನಃ । ಶಯ್ಯಾತಲಮಿದಂ ಕಸ್ಯ ರಮ್ಯಃ ಕೋಽಯಂ ಮಹಾಶ್ರಮಃ \|\| ೫–೨೬೫ \|\| ಇತಿ ಚಿಂತಯತಸ್ತಸ್ಯ ಕ್ಷಣಾದವಧಿರುದ್ಯಯೌ \|\| ೫–೨೬೬ |

| ಆ. ಪು. | ಪೂ. ಪು. |
|---|---|
| ತದೀಯಪಾದಪಲ್ಲವಂಗಳನಾನಂದಾ-<br>ಶ್ರುಮಿಶ್ರಿತಜಲಂಗಳೊಳ್ ತೊಳೆದು-<br>\|\| ೫-೪೬ ವ. \|\| | ಆನಂದಾಶ್ರುಲವೈಃ ಸಾಂದ್ರೈಃ ಕ್ಷಾಲಯ<br>ನ್ನಿವ ತತ್ಕ್ರಮೌ । ೯-೯೯ ‖ |
| ....ಚಿತ್ರಕ್ಕತಿಪ್ರೀತಿ ತೊ ।<br>ಟ್ಟನೆ ಕೈಗಣ್ಮುವುದೇಕೆ ಪೂರ್ವಭವದೊ<br>ಳ್ ಬಂಧುತ್ವಮುಂಟೆಕ್ಕುಮಿಂತಿನಿ-<br>ತೊಂದು ‖ ೫-೪೭ ‖ | ಯುಷ್ಮತ್ಸಂದರ್ಶನಾಜ್ಜಾತಸೌಹಾರ್ದಂ<br>ಮಮ ಮಾನಸಂ । ಪ್ರಸೀದತಿ ಕಿಮು<br>ಜ್ಞಾತಪೂರ್ವೌ ಜ್ಞಾತೀಯುವಾಂ-<br>ಮಮ। ‖ ೯-೧೦೩ |
| ಪಡೆದು ಸಮಾಧಿಯಂ ನಿನಗೆ ನಿನ್ನ<br>ವಿಯೋಗ-ದುಃಖದೊಳ್ .... ....<br>ಮಣಿಚೂಳನಾಮಮಂ ಪಡೆದಮ-<br>ರೇಂದ್ರಲೋಕ ‖ ೫-೪೮ | ತ್ವದ್ವಿಯೋಗಾದಹಂ ಜಾತನಿರ್ವೇದೋ<br>ಭೋಧಿಮಾಶ್ರಿತಃ। ದೀಕ್ಷಿತ್ವಾಭೂವ<br>ಮುತ್ಸೃಷ್ಟದೇಹಃ ಸೌಧರ್ಮಕಲ್ಪಜಃ<br>\|\| ೯-೧೦೭ \|\|<br><br>ಸ್ವಯಂಪ್ರಭವಿಮಾನೇಗ್ರ್ಯೇ ಮಣಿ-<br>ಚೂಲಾಹ್ವಯಃ ಸುರಃ ‖ ೯-೧೦೭ ‖ |

| ಆದಿಪುರಾಣಂ | ಪೂರ್ವಪುರಾಣಂ |
|---|---|

ವಿಸ್ತಾರಭಯದಿಂದ ಇನ್ನು ಮೇಲೆ ಸಂಬಂಧಿಸಿದ ಅಂಕಿಗಳನ್ನು ಮಾತ್ರ ಕೊಡಲಾಗುತ್ತದೆ

| | |
|---|---|
| ‖ ೫-೪೧ ವ. ‖ ... | .... ೯-೬೨, ೬೭ |
| ‖ ೫-೪೯ ‖ ... | .... ೯-೧೦೯ |
| ‖ ೫-೫೦ ‖ ... | .... ೯-೧೧೧ |
| ‖ ೪-೫೧ ‖ ... | .... ೯-೧೧೩ |
| ‖ ೫-೫೨‖ ... | .... ೯-೧೧೪ |
| ‖ ೫-೯೨‖ ... | .... ೧೦-೯೪ |
| ‖ ೫-೯೭ ‖ ... | ....೧೦-೧೦೮ |
| ‖೬-೧೦೭ ವ. ‖ ... | .... ೧೨-೭೬-೭೯, ೮೩ |
| ‖೭-೬೪ ‖ .. | .... ೧೩-೬೬ |
| ‖ ೭-೮೦ ‖ ... | .... ೧೩-೧೦೮, ೧೦೯ |
| ‖ ೭-೭೩, ವ. ೭೪೫ | ....೧೩-೮೨, ೮೬ |

| ಆ. ಪು. | ಪೂ. ಪು. |
|---|---|
| ॥೭-೮೧,೮೨ ವ, ೮೩॥ | .... ೧೩-೧೧೧, ೧೧೬ |
| ॥ ೭-೯೯, ೧೦೦ ॥ | .... ೧೩-೧೧೦, ೧೧೧ |
| ॥ ೭-೮೫ ॥ | .... ೧೩-೧೧೭, ೧೧೮ |
| ॥ ೭-೮೫ ವ. ॥ | .... ೧೩-೧೧೯ |
| ॥ ೭-೮೬ ॥ | .... ೧೩-೧೨೦ |
| ॥ ೭-೮೭ ॥ | .... ೧೩-೧೨೧ |
| ॥ ೭-೯೦ ॥ | .... ೧೩-೧೨೨ |
| ॥ ೭-೯೪॥ | .... ೧೩-೧೨೫ |
| ॥ ೭-೯೫॥ | .... ೧೩-೧೨೩ |
| ॥ ೭-೯೬ ವ. ॥ | .... ೧೩-೧೩೬-೧೩೮ |
| ॥೭-೯೭ ॥ | .... ೧೩-೧೬೨ |
| ॥ ೭-೯೮ ॥ | .... ೧೩-೧೬೩ |
| ॥ ೭-೧೦೪ ॥ | .... ೧೩-೧೯೯, ೨೦೦ |
| ॥೭-೧೦೫। | .... ೧೩-೨೦೧ |
| ॥೭-೧೦೬ ವ. ॥ | .... ೧೪-೨-೧೮ |
| ॥ ೭-೧೦೭ ॥ | .... ೧೪-೨೦ |
| ॥ ೭-೧೧೦ ॥ | .... ೧೪-೭೩ |
| ॥೭-೧೧೨॥ | .... ೧೪-೭೮-೮೨ |
| ॥ ೭-೧೨೦ ॥ | .... ೧೪-೧೨೦,೧೨೧ |
| ॥ ೭-೧೨೧॥ | .... ೧೪-೧೨೨, ೧೨೩ |
| ॥ ೭-೧೨೨॥ | ... ೧೪-೧೩೦, ರವಿಷೇಣ ಪ. ಪು. ೮-೮೯ |
| ॥ ೭-೧೨೨ ವ, ೧೨೩ ॥ | .... ೧೪-೧೩೨,೧೩೩ |
| ॥ ೭-೧೨೪॥ | .... ೧೪-೧೪೦-೧೪೨ |
| ॥ ೭-೧೨೬॥ | .... ೧೪-೧೫೩, ೧೫೪ |
| ॥ ೮-೩ ವ॥ ಸಹೋತ್ಪನ್ನಮತಿ ಶ್ರುತಾವಧಿ.... | .... ೧೪-೧೭೮ |
| ॥ ೮-೧೫ ವ. ಸಾಲು ೩, ೪॥.... | .... ೧೫-೭೦ |
| ॥ ೮-೩೫ ॥ | .... ೧೫-೧೪೯. |
| | ದ್ವಿಸಂಧಾನ ೩-೧೪ |

| ಆ. ಪು. | ಪೂ. ಪು. |
|---|---|
| ‖೮-೪೧ವ‖ಅನ್ನ ಪ್ರಾಶನ ಚೌಲ.... | .... ೧೫-೧೬೪ |
| ‖ ೮-೪೩ .... .... .... | .... ೧೫-೧೬೬, ೧೬೭, ರಘುವಂಶ ೫-೩೭ |
| ‖ ೮-೫೪ ವ. ‖ .... .... .... | .... ೧೬-೪೭-೬೬ |
| ‖ ೮-೭೫ ವ. ‖ .... .... .... | .... ೧೬-೨೬೬ |
| ‖ ೯-೪೭ ‖ .... .... .... | .... ೧೭-೧೮, ೨೧ |
| ‖ ೯-೧೨೫ ‖ .... .... .... | .... ೨೦-೧೮ |
| ‖ ೯-೧೨೭ ‖ .... .... .... | .... ೨೦-೧೯ |
| ‖ ೯-೧೨೯ ‖ .... .... .... | .... ೨೦-೨೧ |
| ‖ ೯-೧೩೧ ‖ .... .... .... | .... ೨೦-೭೧ |
| ‖ ೧೦-೧೫ ‖ .... .... .... | .... ೨೦-೨೬೫, ೨೬೬ |
| ‖೧೦-೧೬‖ .... .... .... | .... ೨೦-೨೬೮ |
| ‖ ೧೦-೨೫ .... .... .... | .... ೨೨-೮೨-೯೧ |
| ‖ ೧೧-೧೦ ವ.‖.... .... .... | .... ೨೬-೬೨ |
| ‖ ೧೧-೧೨ ವ.‖.... .... .... | .... ೨೬-೭೧ |
| ‖ ೧೧-೧೩ ‖ .... .... .... | .... ೨೬-೭೦ |
| ‖ ೧೧-೧೫ ‖ .... .... .... | .... ೨೬-೭೮ |
| ‖ ೧೧-೪೭ ‖ .... .... .... | .... ೨೬-೯೧ |
| ‖ ೧೨-೬೭ .... .... .... | .... ೨೮-೩೭ |

ಜಲಸ್ಥಲವಿಲಂಘಿಗಳಪ್ಪ ಗಿಳಿಯ ಬಣ್ಣದ ಕುದುರೆಗಳೊಳ್ ಪೂಡಿದ ಜಿತಂಜಯಮೆಂಬ ರಥಮನೇಱಿ ೧೨-೭೪ ವ. } ಅಜಿತಂಜಯಮಾರುಕ್ಷದ್ರಥಂ ದಿವ್ಯಾಸ್ತ್ರಸಂಭೃತಂ । ಯೋಜಿತಂ ವಾಜಿಭಿರ್ದಿವ್ಯೈರ್ಜಲಸ್ಥಲವಿಲಂಘಿಭಿಃ ‖ ೨೮-೫೮

ವೇದ್ಯಾರೋಹಣಂ ತನಗೆ ವಿಜಯಶ್ರೀ .... ತದ್ವೇದ್ಯಾರೋಹಣಂ ವಿಭೋಃ
ವಿವಾಹವೇದ್ಯಾರೋಹಣಮನೆ ಪೋಲೆ ವಿಜಯಶ್ರೀಸಮುದ್ವಾಹವೇದ್ಯಾರೋಹ
೧೨-೭೪ ವ. ಣವದ್ಬಭೌ ‖ ೨೮-೬೫

| ಆ. ಪು. | ಪೂ. ಪು. |
|---|---|
| ‖ ೧೨-೭೫ ‖ .... .... .... | .... ೨೮-೬೬. |
| ‖ ೧೨-೭೭ ‖ .... .... .... | .... ೨೮-೬೯ |
| ‖೧೨-೮೦ ‖ .... .... .... | .... ೨೮-೧೦೬ |
| ‖ ೧೩-೨೩ ‖ .... .... .... | .... ೩೧-೯೦ |
| ‖ ೧೩-೨೬ ‖ .... .... .... | .... ೩೧-೯೮, ೧೦೧ |

| ಆ. ಪು. | | | | ಪೂ. ಪು. |
|---|---|---|---|---|
| ‖ ೧೩-೨೭ ‖ | .... | .... | .... | .... ೩೧-೧೦೪ |
| ‖ ೧೩-೨೮ ‖ | .... | .... | .... | .... ೩೧-೧೦೭ |

ಮುಂತಾದವುಗಳು. ಪಂಪನು ಹೀಗೆ ಪೂರ್ವಪುರಾಣವನ್ನು ಅನುಸರಿಸುತ್ತ ಹೋಗಿರುವುದರಿಂದ ತನ್ನ ಆದಿಪುರಾಣವನ್ನು ಅತ್ಯಲ್ಪಕಾಲದಲ್ಲಿ ರಚಿಸುವುದು ತೀರ ಸುಲಭವಾಯಿತು ಎಂಬಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ಪೂರ್ವಪುರಾಣವನ್ನಲ್ಲದೆ ಪಂಪನು ಕೆಲವೆಡೆ ಕಾಲಿದಾಸನ ರಘುವಂಶ, ಕುಮಾರಸಂಭವ, ಶಾಕುಂತಲ ಮುಂತಾದ ಕೃತಿಗಳ ಭಾಗಗಳನ್ನೂ, ಬಾಣನ ಕಾದಂಬರಿಯನ್ನೂ, ಭಾರವಿಯ ಕಿರಾತಾರ್ಜುನೀಯವನ್ನೂ, ರತ್ನಾವಲಿಯನ್ನೂ ಅನುಕರಿಸಿದ್ದಾನೆ. ಆದರೆ ಈ ಅನುಕರಣೆ ತೀರ ತುಸು. ಕೆಲವು ಉದಾಹರಣೆಗಳನ್ನು ಕೆಳಗೆ ಕೊಡಲಾಗಿದೆಃ

| ಆ. ಪು. ೮-೪೩ .... . | .... ರ. ವಂ. ೬-೩೭ |
|---|---|
| ಮರುದೇವಿಯೆಂಬಳಂಬರ । ಚರನರ ಸುರಯುವತಿರೂಪಸರ್ವಸ್ವಮನಾ। ದರದೆ ಬಿದಿ ನೆಱಪಿ ಲಲನಾ ಸ್ವರೂಪದಿಂ ನಿಱಿಸಿತೆನ್ನದಿನ್ನೇವೊಗಳ್ವೆಂ ೫೬-೮೦ | ಸರ್ವೋಪಮಾದ್ರವ್ಯಸಮುಚ್ಚಯೇನ। ಯಥಾಪ್ರದೇಶಂ ವಿನಿವೇಶಿತೇನ । ಸಾ ನಿರ್ಮಿತಾ ವಿಶ್ವಸೃಜಾ ಪ್ರಯತ್ನಾ । ದೇಕಸ್ಥಸೌಂದರ್ಯದಿದೃಕ್ಷಯೇವ ಕು ಸಂ. ೧-೪೯‖ |
| ಬಗೆದುಂ ನಿನ್ನನ್ವಾಯೋನ್ನತಿ ೪-೫೫ | ಅಸ್ಮಾನ್ ಸಾಧು ವಿಚಿಂತ್ಯ .... ........ ಶಾಕುಂತಲಂ ಅಂಕ ೪ |

| | | | | |
|---|---|---|---|---|
| ೧೧-೩೫ ವ. | .... | .... | .... | ಬಾ. ಕಾ. ಪು. ೧೧೩ |
| ೧೪-೧೩೦ | .... | .... | .... | ,, ಪು. ೧೦೪ |
| ೭-೮೫ | .... | .... | .... | ರತ್ನಾವಲಿ ೨-೯ |
| ೮-೩೫ | .... | .... | .... | ದ್ವಿಸಂಧಾನ ೩-೧೪ |

| | |
|---|---|
| ತನ್ನಿರ್ದೆಡೆಯದೆ ಮೇರುವಿ। ನುನ್ನತಿ ಜಳನಿಧಿಯ ಗುಣ್ಪು ನಭದ ವಿಭುತ್ವಂ ‖ ನಿನ್ನ ಗುಣೋನ್ನತಿ ಸಕಳ ಜ। ಗನ್ನುತ ಭುವನಾಂತರಾಳಮಂ ಪರ್ವಿರ್ಕುಂ‖ ೧೦-೫೬‖ | ಅಗಾಧತಾಬ್ಧೇಃ ಸ ಯತಃ ಪಯೋಧಿಃ। ಮೇರೋಶ್ಚ ತುಂಗಾ ಪ್ರಕೃತಿಃ ಸ ಯತ್ರ । ದ್ಯಾವಾಪೃಥಿವ್ಯೋಃ ಪ್ರಥುತಾ ತಥೈವ। ವ್ಯಾಪ ತ್ವದೀಯಾ ಭುವನಾಂತರಾಣಿ ವಿಷಾಪಹಾರಸ್ತೋತ್ರ- ೮. |

ಪಂಪನು ತನ್ನ ವಿಕ್ರಮಾರ್ಜುನವಿಜಯದಲ್ಲಿ ಭಾರವಿಯನ್ನು ಅನುಕರಿಸಿದ್ದಾನೆ. ಇದರ ಮೇಲಿಂದ ಆತನು ಸಂಸ್ಕೃತದೊಳಗಿನ ಪಂಚಮಹಾಕಾವ್ಯಗಳಲ್ಲಿಯೂ ನೈಪುಣ್ಯವನ್ನು ಪಡೆದಿದ್ದನೆಂಬ ಸಂಗತಿಯೂ ಸ್ಪಷ್ಟವಾಗುತ್ತಿದೆ.

ಪಂಪನು ಸಂಸ್ಕೃತ ಕಾವ್ಯಗಳನ್ನು ಅನುಕರಿಸಿದ್ದರೆ ಕನ್ನಡಕವಿಗಳಲ್ಲಿ ಪೊನ್ನ, ರನ್ನ, ನಾಗಚಂದ್ರ, ಅಗ್ಗಳ, ಜನ್ನ, ಷಡಕ್ಷರದೇವ ಮುಂತಾದ ಕವಿಗಳು ಆತನನ್ನು ಅನುಕರಿಸಿದ್ದಾರೆ. ಈ ಅನುಕರಣೆಯಲ್ಲಿನ ಕೆಲವನ್ನು ಕೆಳಗೆ ಉದಾಹರಿಸಿದೆಃ

**ಆದಿಪುರಾಣ**

| | | | |
|---|---|---|---|
| ೬-೫೨ | — | ಪಂಪರಾಮಾಯಣ | ೧-೭೦ |
| ೭-೩ ವ. | — | ಚಂ. ಪ್ರ. ಪು. | ೧೧-೧೨ ವ. |
| | | ಅ. ನಾ. ಪು. | ೪-೭೪ರಿಂದ ೭೯ ವ. |
| ೭-೪೭ | — | ಚಂ. ಪ್ರ. ಪು. | ೧೨-೫೬ |
| ೭-೪೯ | — | ಅ. ಪು. | ೪-೨೪ |
| | | ಚಂ. ಪ್ರ. ಪು. | ೧೨-೬೨ |
| | | ಮ. ಪು. | ೧೨-೫೪, ೫೫ |
| ೭-೫೩ | — | ಅ. ಪು. | ೪-೨೧, ೨೨ |
| | | ಚಂ. ಪ್ರ. ಪು. | ೧೨-೬೮ |
| | | ಅ. ನಾ. ಪು. | ೫-೩೯ |
| ೭-೫೪ | — | ಶಾಂ. ಪು. | ೧೦-೧೪, ೧೫ |
| | | ,, | ೧೦-೧೬, ೧೭ |
| | | ಅ. ಪು. | ೪-೨೩ |
| ೭-೬೧ | — | ಶಾಂ. ಪು. | ೧೦-೬೬ |
| | | ಚಂ. ಪ್ರ. ಪು: | ೧೨-೮೮ |
| ೭-೬೫ | — | ,, | ೧೨-೯೨ |
| | | ಮ. ಪು. | ೧೨-೮೨ |
| ೭-೮೦ | — | ಶಾಂ. ಪು. | ೧೦-೩೮ |
| | | ಅ. ಪು. | ೪-೪೫ |
| | | ಚಂ. ಪ್ರ. ಪು. | ೧೩-೧೧೮ |
| ೭-೮೧, ೮೧ ವ, ೮೨ | — | ಶಾಂ. ಪು. | ೧೦-೩೮-೪೫ |
| | | ಮ. ಪು. | ೧೨-೧೫೦ |
| | | ಚಂ. ಪ್ರ. ಪು. | ೧೨-೧೨೪ |
| | | ಅ. ನಾ. ಪು. | ೫-೬೩ |

**ಆದಿಪುರಾಣ**

| | | |
|---|---|---|
| ೭–೯೦ — | — ಶಾಂ. ಪು. | ೧೦–೪೩, ೪೪ |
| | ಅ. ಪು. | ೪–೬೫ |
| | ಮ. ಪು. | ೧೨–೧೪೯ |
| | ಚಂ. ಪ್ರ. ಪು. | ೧೨–೧೩೫ |
| | ಅ. ನಾ. ಪು. | ೫–೬೪ |
| ೭–೯೭ | — ಮ. ಪು. | ೧೨–೧೫೩ |
| | ಚಂ. ಪ್ರ. ಪು. | ೧೨–೧೪೨ |
| ೭–೧೦೫ ವ. | — ಶಾಂ. ಪು. | ೧೦–೫೮, ೫೯ |
| | ಮ. ಪು. | ೧೩–೩–೮ |
| | ಚಂ. ಪ್ರ. ಪು. | ೧೨–೧೫೬ ವ, ೧೫೭ |
| | ಅ. ನಾ. ಪು. | ೫–೮೧ ವ,–೮೪ |
| ೭–೧೦೯ | — ಮ. ಪು. | ೧೩–೧೭ |
| | ಚಂ. ಪ್ರ. ಪು. | ೧೨–೧೬೬ ವ. |
| | ಅ. ನಾ. ಪು. | ೫–೮೯ ವ. |
| ೮–೩೫ | — ಅ. ಪು. | ೭–೮ |
| | ಶಾಂ. ಪು. | ೧೦–೧ ವ. |
| | ಮ. ಪು. | ೧೧–೧೩೬ |
| | ಅ. ನಾ. ಪು. | ೫–೩ |

ಎರಡುಂ ಕೆಲದೊಳಮರಸನ। ಬರವಂ
ಪಾಱುತ್ತೆ........ ಮಕುಟಮಣಿಗಣ ।
ಮರೀಚಿಪುದಿದತ್ತು ದೆಸೆಯುಮಂ ವಸು
ಧೆಯುಮಂ ॥ ೧೧–೨೫ ॥

ಅರಸರ ಬರ ಪಾರುತ್ತಿ। ರ್ದ ರಾಜಕಂ
ಬೇಗಮೆರಗೆ ತನ್ಮಣಿಮಕುಟ॥ ಸ್ಫುರಣೆ
ಗಳಿಂ ದರೆ ರಾಗಂ। ಬೊರೆದಂತೆಸೆದತ್ತು
ರಾಜಭವನಾಂಗಳದೊಳ್ ॥

ಶಾಂ. ಪು. ೩–೧೧೩ ॥

.... ನೇತ್ರತ್ರಿಭಾಗಕಟಾಕ್ಷಸಮಗ್ರೇಕ್ಷಣ
ಭ್ರೂವಿಭ್ರಮದರಹಸಿತಾಳಾಪನಪರಿಹಾ
ಸವಿಸ್ರಂಭಾಳಾಪಂಗಳಿಂ ಸಂತಸಂಬಡಿ
ಸುತ್ತುಂ ॥ ೧೧–೨೫ ವ. ॥

.... ನೇತ್ರತ್ರಿಭಾಗಾಪಾಂಗಸಮಗ್ರೇಕ್ಷ
ಣಸ್ಮಿತದರಹಸಿತಭ್ರೂವಿಕ್ಷೇಪಾಳಾಪಪ
ರಿಹಾಸವಚನಂಗಳಿಂದ ಮವರವರ್ವಿ
ಗಳಿಂದೆ ಸಂತಸಂಬಡಿಸಿ ........

॥ ಶಾಂ. ಪು. ೩–೧೧೩ ವ. ॥

ಮುಂತಾದವುಗಳಲ್ಲದೆ ರನ್ನನು ತನ್ನ ಗದಾಯುದ್ಧವನ್ನು ಪಂಪಭಾರತದ ೧೩ನೆಯ ಮತ್ತು ೧೪ನೆಯ ಆಶ್ವಾಸಗಳನ್ನು ಆಧರಿಸಿ ರಚಿಸಿದ್ದಾನೆ. ಅಲ್ಲಿ ದುರ್ಯೋಧನನನ್ನು ತ್ಯಜಿಸಿ ಪಾಂಡವರನ್ನು ಸೇರಲು ಹೊರಟ ಲಕ್ಷ್ಮಿಯ

ಪಂಪನ ನಿರ್ಮಾಣವನ್ನು ರನ್ನನು ಗದಾಯುದ್ಧದಲ್ಲಿ ಚಾಚೂ ತಪ್ಪದೆ ಅನುಕರಿಸಿದ್ದಾನೆ. ವ್ಯಾಸಭಾರತದಲ್ಲಿ ಈ ಸನ್ನಿವೇಶವಿಲ್ಲ. ನಾಗಚಂದ್ರನಂತೂ ಪಂಪನ ಮೇಲಿನ ಆದರಬುದ್ಧಿಯಿಂದ ಆತನ ಹೆಸರನ್ನೇ ಸ್ವೀಕರಿಸಿ ಅಭಿನವಪಂಪನಾಗಿದ್ದಾನೆ. ಇದಲ್ಲದೆ ಎಲ್ಲ ಜೈನಕವಿಗಳು ಪಂಪನನ್ನು ಬಾಯಿತುಂಬ ಹೊಗಳಿದ್ದಾರೆ. ಕೇಶಿರಾಜನು ತನ್ನ ಶಬ್ದಮಣಿದರ್ಪಣದೊಳಗಿನ ಅನೇಕ ಉದಾಹರಣೆಗಳನ್ನು ಆದಿಪುರಾಣದೊಳಗಿಂದ ಆಯ್ದುಕೊಂಡಿದ್ದಾನೆ.

ಹೀಗೆ ಪಂಪನು ಉದ್ದಾಮಕವಿಯೆಂದು ಎಲ್ಲರೂ ಹೊಗಳುತ್ತಿದ್ದರೂ ಆತನ ಕಾವ್ಯಶಕ್ತಿ ಪ್ರಕಟವಾಗಲು ಆದಿಪುರಾಣದಲ್ಲಿ ಆತನಿಗೆ ಸಾಕಷ್ಟು ಅವಕಾಶ ದೊರೆತಿಲ್ಲ. ಇದಕ್ಕೆ ಕಾರಣವು ಇಲ್ಲದಿಲ್ಲ. ಆದಿಪುರಾಣದಲ್ಲಿ ಧರ್ಮವು ಹಾಸುಹೊಕ್ಕಾಗಿದೆ. ಶಾಂತರಸವು ಪ್ರಧಾನವಾಗಿದೆ. ಅದಕ್ಕೆ ಭವಾವಳಿ ತಳಹದಿಯಾಗಿದೆ. ಇಂತಹ ಸಂದರ್ಭದಲ್ಲಿ ಆತನು ತನ್ನ ಕಾವ್ಯ ಶಕ್ತಿಗೆ ಅಲ್ಲಲ್ಲಿ ಅವಕಾಶವನ್ನು ಕಲ್ಪಿಸಿಕೊಳ್ಳಬೇಕಾಗಿದೆ. ವಜ್ರಜಂಘನ ಮದುವೆ, ಮರುದೇವಿಯ ಪುತ್ರದೋಹಳ ಭರತೇಶನ ದಿಗ್ವಿಜಯ ಮುಂತಾದವುಗಳು ಇಂತಹ ಸನ್ನಿವೇಶಗಳು. ಶಾಂತರಸಕ್ಕೆ ಪೋಷಕವಾಗುವಂತೆ ಅಲ್ಲಲ್ಲಿ ಶೃಂಗಾರ, ವೀರ, ಹಾಸ್ಯ, ಬೀಭತ್ಸ ರಸಗಳನ್ನು ಅಳವಡಿಸಿಕೊಂಡಿದ್ದಾನೆ. ಆತನ ಹಾಸ್ಯರಸವು ಸ್ಮಿತ ಮತ್ತು ದರಹಸಿತನಾಗಿದೆ.

ತಾನು ದುಂದುಭಿಗಭೀರನಿನದನೆಂದು ಹೇಳಿಕೊಳ್ಳುತ್ತಿರುವಂತೆ ಆತನ ಭಾಷೆಯು ಪುರಾಣಕ್ಕೆ ತಕ್ಕಂತೆ ಗಂಭೀರವಾಗಿದೆ. ಭಾಷಾಪ್ರಭುತ್ವವು ಆತನಲ್ಲಿ ಅಗಾಧವಾಗಿದೆ. ಆತನ ಮಾತುಗಳು ಮನಸ್ಸನ್ನು ಒಂದು ನಿರ್ಣಯಕ್ಕೆ ತರುವಂತೆ ಮನಸ್ಸನ್ನು ಒಲಿಸಿಕೊಳ್ಳುವಂತೆ ಹೃದಯಂಗಮವಾಗಿವೆ. ಸಣ್ಣ ಸಣ್ಣ ಮತ್ತು ಸಮಾಂತರ ವಾಕ್ಯಗಳನ್ನು ಅಲಂಕಾರವಾಗಿ ರಚಿಸುವಲ್ಲಿ ಆತನದು ಪಳಗಿದ ಕೈ ಈ ಮುಂದಿನ ಒಂದು ಉದಾಹರಣೆಯನ್ನು ನೋಡಬಹುದು :

ಅಂತಾತ್ರಿಲೋಕಗುರು ಧರಾತಳಂ ಪೊಗಟ್ಟುವನಂ ಯತ್ಯಾಶ್ರಯದೊಳ್ ನಿಂದಂ, ಈಧರಾಧಿಪಂ ಗುರುರಾಜ್ಯಾಶ್ರಮದೊಳ್ ನಿಂದಂ; ಆಮುನೀಂದ್ರಂ ತಪೋನುಷ್ಠಾನದೊಳ್ ನಿಷ್ಠಿತನಾದಂ, ಈನರೇಂದ್ರಂ ರಾಜ್ಯಾನುಷ್ಠಾನದೊಳ್ ನಿಷ್ಠಿತನಾದಂ; ಆಮುನೀಶಂ ಮುಮುಕ್ಷುವೃತ್ತಿಯೊಳ್ ನೆಗಟ್ದಂ, ಈಕ್ಷಿತೀಶಂ ಕ್ಷತ್ರವೃತ್ತಿಯೊಳ್ ನೆಗಟ್ದಂ; ಆಮುನಿನಾಥಂ ತ್ರಿಗುಪ್ತಿಯೊಳ್ ನೆರೆದಂ, ಈ ಮಹೀನಾಥಂ ಮಂತ್ರಗುಪ್ತಿಯೊಳ್ ನೆರೆದಂ;....ಎಂದು ಮುಂತಾಗಿ ಹೇಳುವಲ್ಲಿ ಪಂಪನ ಭಾಷಾಪ್ರಭುತ್ವ ಸ್ಫುಟವಾಗುತ್ತದೆ. ಆತನ ವಾಕ್ಪ್ರವಾಹ ಅಡೆತಡೆಯಿಲ್ಲದೆ ಸಾಗುತ್ತದೆ. ಈ ಭಾಷಾಸರಣಿಯನ್ನು ಪಂಪನಲ್ಲಿಯೇ ಕಾಣಬೇಕು. ಇಷ್ಟು ಭಾಷಾಪ್ರಭುತ್ವ, ಪಾಂಡಿತ್ಯ, ಕಲ್ಪಕತೆ, ಪ್ರತಿಭೆ ಮುಂತಾದ ಗುಣಗಳಿದ್ದರೂ

ಪಂಪನು ಕಾವ್ಯವನ್ನು ಪೂರೈಸುವ ಅವಸರದಲ್ಲಿ ಮೊದಲು ಒಂದು ಆಶ್ವಾಸದಲ್ಲಿ ರಚಿಸಿದ ಪದ್ಯವನ್ನೇ ಮತ್ತೊಂದು ಆಶ್ವಾಸದಲ್ಲಿ ಇರಿಸಿದ್ದಾನೆ. ಉದಾಃ

ಗಿರಿರಾಜೋದಗ್ರಸಿಂದೂರಿತಕರಟಘಟಾಟೋಪಮಂ ಕುಂಕುಮಾಂಭ

.... .... .... .... ॥ ೧೧-೨೪ ॥

ಇದೇ ಪದ್ಯ ೧೪ ನೆಯ ಆಶ್ವಾಸದಲ್ಲಿ ೮೭ ನೆಯ ಪದ್ಯವಾಗಿದೆ.

ಪಂಪನ ಕಾಲದಲ್ಲಿಯೇ ೞಕಾರವು ರೇಫೆಯಾಗಿ ಪರಿವರ್ತಿಸಹತ್ತಿದ್ದಿತು. ಈ ಉದಾಹರಣೆಗಳನ್ನು ನೋಡಬಹುದುಃ

ಪಿರಿದುಮಟ್ಕಜೀನೊಳ್ **ತಕ್ಕೈಸಿಕೊಂಡು** ....॥ ೪-೨೪ ವ ॥
ಎಂದು **ಕೆಚ್ಚುವಿರ್ದ** ಮಚ್ಚುಮನುರ್ಚಿಪ್ರೋದ .... ॥ ೪-೫೨ ವ॥
ಪರಮೇಶ್ವರನಮನಮನಿ**ಕುರ್ಳಿಗೊಳೆ** .... ॥ ೮-೫೫ ॥

## ಛಂದಸ್ಸು

ಆರು ಖ್ಯಾತಕರ್ನಾಟಕವೃತ್ತಗಳನ್ನಲ್ಲದೆ ಉತ್ಸಲಮಾಲಿನಿ, ಹರಿಣಿ ಮುಂತಾದ ಎಂಟು ಅಕ್ಷರ ವೃತ್ತಗಳನ್ನು, ಒಂದು ಮಾತ್ರಾವೃತ್ತವನ್ನು ಮತ್ತು ಐದು ಕನ್ನಡ ವೃತ್ತಗಳನ್ನು ಉಪಯೋಗಿಸಿದ್ದಾನೆ. ರೂಢಿಯಂತೆ ಕಂದ ಪದ್ಯಗಳೇ ಹೆಚ್ಚು. ಎಲ್ಲಕ್ಕೂ ಕಡಿಮೆ ಸಂಖ್ಯೆಯ ವೃತ್ತಗಳೆಂದರೆ ಉತ್ಸವ, ಶಾರ್ಙ, ತರಳ. ಮಂದ್ರಾನಿಲರಗಳೆ, ಲಲಿತರಗಳೆ ಈ ವೃತ್ತಗಳು ಒಂದೊಂದಾಗಿ ಬಂದಿವೆ. ಉಳಿದವುಗಳು ಎರಡರಿಂದ ೯೮೯ ರ ವರೆಗೆ. ಇವುಗಳ ಸಂಖ್ಯೆಯನ್ನು ಅನುಬಂಧಗಳ ೧೩೧ನೆಯ ಪುಟದಲ್ಲಿ ಕಾಣಬಹುದು.

ಪಂಪನು ಹೇಳುವ ಶಾರ್ಙವೃತ್ತವು ಖಚರಪ್ಲುತವಾಗಿದೆ. ಅದನ್ನು ೩-೩೦ ರಲ್ಲಿ ಕಾಣಬಹುದು. ಅದೇ ಮೇರೆಗೆ ಉಜ್ವಳವೃತ್ತವು ಅನವದ್ಯವಾಗಿದೆ. ಇದು ೩ ನೆಯ ಆಶ್ವಾಸದ ೩೩ನೆಯ ಪದ್ಯವಾಗಿದೆ. ಈ ವೃತ್ತಗಳ ವ್ಯಾಖ್ಯೆಗಳು ಕನ್ನಡಕೈಪಿಡಿಯಲ್ಲಿ ದೊರೆಯುತ್ತವೆ.

ಮಂದಾನಿಲರಗಳೆ ನಾಲ್ಕನೆಯ ಆಶ್ವಾಸದ ೮೪ ನೆಯ ಪುಟದಲ್ಲಿ ಬಂದಿದೆ; ಲಲಿತರಗಳೆ ಏಳನೆಯ ಆಶ್ವಾಸದಲ್ಲಿ ೧೬೬ನೆಯ ಪುಟದಲ್ಲಿ ಬಂದಿದೆ.

ಎರಡನೆಯ ಆಶ್ವಾಸದೊಳಗಿನ ೫೧ ನೆಯ ಪದ್ಯದಲ್ಲಿ ಮೂರನೆಯ ಚರಣದಲ್ಲಿ

ತ್ರಿರನಭಿಯೋಗದಿಂದತಿಬಲಂಗೆ ನಿಯೋಜಿಸಿ ಪೂಣ್ದರಂ

⏑⏑⏑ | ⏑–⏑ | –⏑⏑ | ⏑–⏑ | ⏑–⏑ | ⏑–⏑ |
ನ | ಜ | ಭ | ಜ | ಜ | ಜ |–

ಇದು ಚಂಪಕಮಾಲೆಯ ಚರಣ. ಅಂತ್ಯದಲ್ಲಿ ಎರಡು ಅಕ್ಷರಗಳು ಕಡಿಮೆಯಾಗಿವೆ. ಇದು ಗ್ರಂಥಪಾತ.

ಖಟಿಕುಳ ಪ್ರಾಸವೂ ಕಂಡುಬಂದಿದೆ. ೬-೯೪ ನೋಡಿ.

## ಜೈನಪಾರಿಭಾಷಿಕ ಶಬ್ದಗಳ ವಿಚಾರ

ಜೈನದರ್ಶನದಲ್ಲಿ ಕರ್ಮಗಳಿಗೆ ಬಹಳ ಮಹತ್ವವಿದೆ. ಕರ್ಮಗಳು ಪರಮಾಣುರೂಪವಾಗಿವೆ. ಅವು ಲೋಕಾಕಾಶವನ್ನು ತುಂಬ ವ್ಯಾಪಿಸಿಕೊಂಡಿವೆ. ಅವು ಶುಭ ಮತ್ತು ಅಶುಭ ಎಂದು ಎರಡು ತೆರನಾಗಿವೆ. ಹಾಲಿನಲ್ಲಿ ನೀರು ಬೆರೆಯುವಂತೆ ಕರ್ಮಪರಮಾಣುಗಳು ಜೀವಾತ್ಮನಲ್ಲಿ ಬೆರೆತುಕೊಳ್ಳುತ್ತವೆ. ಈ ಕ್ರಿಯೆ ಮನೋವಾಕ್ಕಾಯಯೋಗದಿಂದ ನಡೆಯುತ್ತದೆ. ಇದಕ್ಕೆ **ಆಸ್ರವ**ವೆನ್ನುತ್ತಾರೆ. ಕರ್ಮಗಳು ಎಂಟು ವಿಧ: ೧ ಜ್ಞಾನಾವರಣೀಯ, ೨ ದರ್ಶನಾವರಣೀಯ, ೩ ಮೋಹನಿಯ, ೪ ಅಂತರಾಯ, ( ಇವು ನಾಲ್ಕು ಘಾತಿಕರ್ಮಗಳು ), ೫ ಆಯು, ೬ ನಾಮ, ೭ ಗೋತ್ರ ಮತ್ತು ೮ ವೇದನೀಯ ( ಇವು ನಾಲ್ಕು ಅಘಾತಿ ಕರ್ಮಗಳು ).

ಕರ್ಮಾಸ್ರವದಿಂದ ಜೀವನು ಬದ್ಧನಾಗುತ್ತಾನೆ. ಈ ವ್ಯಾಪಾರಕ್ಕೆ **ಬಂಧ**ವೆಂಬ ಹೆಸರು. ಕರ್ಮವು ಆತ್ಮನಲ್ಲಿ ಬೆರೆತುಕೊಳ್ಳುವುದು **ಉದಯ.** ಕರ್ಮವು ಆತ್ಮನಲ್ಲಿ ಬೆರೆತುಕೊಂಡು ಪಕ್ವವಾಗಿ ಫಲೋನ್ಮುಖವಾಗಲು ಬೇಕಾಗುವ ಕಾಲವು ಅದರ **ಆಯುಸ್ಸು.** ಅದನ್ನು **ಸ್ಥಿತಿಬಂಧ** ಎಂದು ಹೇಳುತ್ತಾರೆ. ಅದು ಜೀವನಲ್ಲಿ ಬೆರೆತು ಹೋಗುವುದು ಪ್ರದೇಶಬಂಧ.

ಕಾಯಗುಪ್ತಿ--ಮನೋಗುಪ್ತಿ--ವಾಗ್ಗುಪ್ತಿಗಳಿಂದ ಕರ್ಮಪರಮಾಣುಗಳು ಆತ್ಮನಲ್ಲಿ ಸೇರದ ಹಾಗೆ ಮಾಡುವುದಕ್ಕೆ **ಸಂವರ**ವೆನ್ನುತ್ತಾರೆ. ಇದು ತಪಸ್ಸಿನಿಂದ ಸಾಧ್ಯ. ಸಂವರವನ್ನು ಸಾಧಿಸುವ ಪೂರ್ವದಲ್ಲಿ ಅನೇಕ ಪರಮಾಣುಗಳು ಜೀವನಲ್ಲಿ ಬೆರೆತುಕೊಂಡಿರುತ್ತವೆ. ಅವು ಪಕ್ವವಾಗಿ ಫಲಕೊಟ್ಟು ಹೋಗುವುದು ನಿರ್ಜರೆ. ಇದು ಎರಡು ವಿಧವಾಗಿದೆ. ಸ್ವಾಭಾವಿಕವಾಗಿ ಕರ್ಮವು ಪಕ್ವವಾಗಿ ಫಲಕೊಟ್ಟು ಹೋಗುವುದು ಒಂದು ವಿಧ. ಇದನ್ನು ಮರದ ಮೇಲಿನ ಕಾಯಿ ಪಕ್ವವಾಗಿ ಉದುರಿಬೀಳುವ ಕ್ರಿಯೆಗೆ ಹೋಲಿಸಬಹುದು. ಮತ್ತೊಂದು ವಿಧದಲ್ಲಿ ತಪಸ್ಸಿನಿಂದ ಕರ್ಮಗಳ ಬಲವನ್ನು ಕುಂದಿಸಿ, ಅವು ಪಕ್ವವಾಗಿ ಫಲಕೊಡದಂತೆ ಮಾಡಿ ಅವುಗಳನ್ನು ಕ್ಷಯಿಸುವುದು, ಮರದ ಮೇಲಿನ ಹೀಚುಗಾಯಿಗಳನ್ನು ಹರಿದು ಹಣ್ಣು ಮಾಡುವ ಹಾಗೆ.

ಶುಭಕರ್ಮಗಳ ಉದಯದಿಂದ ಪುಣ್ಯವು ಪ್ರಾಪ್ತವಾಗುತ್ತದೆ. ಅದರ ಫಲವೆಂದರೆ ನರೇಂದ್ರತ್ವ, ಸುರೇಂದ್ರತ್ವ, ತೀರ್ಥಂಕರತ್ವ ಮತ್ತು ನಿರ್ವಾಣ. ಅಶುಭ ಕರ್ಮಗಳ ಉದಯದಿಂದ ಪಾಪವು ಪ್ರಾಪ್ತವಾಗುತ್ತದೆ. ಅದರ ಫಲವೆಂದರೆ ನರಕ, ತಿರ್ಯಗ್ಗತಿ ( ಪಶುಪಕ್ಷಿ ಮುಂ ) ಮುಂ.

ಕರ್ಮಬದ್ಧನಾದ ಜೀವನು ಭವ್ಯ, ಅಭವ್ಯ ಎಂದು ಎರಡು ವಿಧ. ಭವ್ಯನು ಮೋಕ್ಷಗಾಮಿ. ಈ ಜೀವಿಗಳು ಎರಡು ವಿಧ-೧ ಆಸನ್ನಭವ್ಯ, ೨ ದೂರಭವ್ಯ. ಆಸನ್ನಭವ್ಯನು ಕೆಲವೇ ಭವ(ಜನ್ಮ)ಗಳನ್ನೆತ್ತಿ ಮೋಕ್ಷಪಡೆಯುತ್ತಾನೆ, ಆದಿನಾಥ ಜಿನರಂತೆ. ದೂರಭವ್ಯನು ಅನೇಕ ಜನ್ಮಗಳನ್ನೆತ್ತಿ ಮೋಕ್ಷಕ್ಕೆ ಹೋಗುತ್ತಾನೆ, ಮಹಾವೀರಸ್ವಾಮಿಯಂತೆ. ಆಕಾರಣ ಪುರಾಣಗಳಲ್ಲಿ ಭವಾವಳಿಗೆ ಬಹಳ ಮಹತ್ವವಿದೆ. ಆ ಆ ಭವಗಳಲ್ಲಿ ಜೀವನು ಅನುಭವಿಸುತ್ತಿರುವ ಕಷ್ಟ-ಪರಂಪರೆಗಳು ಭವ್ಯನನ್ನು ವೈರಾಗ್ಯದತ್ತ ಎಳೆದೊಯ್ಯುತ್ತವೆ. ಆಸ್ಥಿತಿಯಲ್ಲಿ ಜೈನದೀಕ್ಷೆಪಡೆಯಲು ಅಲ್ಪ ಕಾರಣವು ಸಹ ಸಾಕಾಗುತ್ತದೆ.

## ಗುಣಸ್ಥಾನಗಳು

ಜೈನಾಗಮದಲ್ಲಿ ಹೇಳಿರುವ ಗುಣಸ್ಥಾನಗಳನ್ನು ಸ್ಥೂಲವಾಗಿ ವೀರಶೈವ ಅಷ್ಟಾವರಣ ಮತ್ತು ಷಟ್‌ಸ್ಥಲಗಳಿಗೆ ಹೋಲಿಸಬಹುದು. ಗುಣಸ್ಥಾನಗಳಾಗಲಿ ಷಟ್‌ಸ್ಥಲಗಳಾಗಲಿ ಅವು ಗೂಢತರವಾಗಿಯೇ ಇವೆ. ಅವುಗಳನ್ನು ಗುರುಮುಖವಾಗಿಯೇ ತಿಳಿದುಕೊಂಡು ಆಚರಿಸಬೇಕು. ಗ್ರಂಥಮುಖವಾಗಿ ಅವುಗಳನ್ನು ಕೆಲಮಟ್ಟಿಗೆ ಅರಿತುಕೊಳ್ಳಬಹುದಾದರೂ ಆ ಅರಿವು ಪೂರ್ಣವಲ್ಲ. ಅವುಗಳ ಜ್ಞಾನಕ್ಕೆ ಪರಂಪರೆ ಸಾಂಪ್ರದಾಯಗಳು ಬಹುಮಟ್ಟಿಗೆ ಸಹಾಯ ಮಾಡುತ್ತವೆ. ಪರಂಪರೆ ಸಾಂಪ್ರದಾಯಗಳ ಮೂಲಕವಾಗಿ ಗುಣಸ್ಥಾನಗಳು ಜೈನರಿಗೆ ಸುಲಭವಾಗಿ ತಿಳಿದ ಹಾಗೆ ಜೈನೇತರರಿಗೆ ತಿಳಿಯಲಾರವು; ಷಟ್‌ಸ್ಥಲಜ್ಞಾನವು ವೀರಶೈವರಿಗೆ ಸುಲಭವಾಗಿ ತಿಳಿಯುವಂತೆ ವೀರಶೈವೇತರರಿಗೆ ತಿಳಿಯಲಾರವು. ಆ ಆ ಧರ್ಮಗಳಲ್ಲಿನ ಪರಿಭಾಷೆ ಆ ಆ ಧರ್ಮೀಯರಿಗೆ ನಿತ್ಯ ಜೀವನದಲ್ಲಿ ಹಾಸುಹೊಕ್ಕಾಗಿರುವುದರಿಂದ ಅದು ಅವರಿಗೆ ಸುಲಭಗ್ರಾಹ್ಯ. ಹೀಗಿರುವುದರಿಂದ ಜೈನಾಗಮದಲ್ಲಿ ಹೇಳಿದ ಗುಣಸ್ಥಾನವನ್ನು ಸುಲಭವಾದ ಭಾಷೆಯಿಂದ ನಿರೂಪಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ( ಪಂಪನು ಇವುಗಳನ್ನು ಆ. ಪು ೧೦-೧೪ ವ. ದಲ್ಲಿ ವಿಸ್ತಾರವಾಗಿ ಹೇಳಿದ್ದಾನೆ. )

ಗುಣಸ್ಥಾನಗಳಲ್ಲಿರುವ ಜೀವರು ೧ ಮಿಥ್ಯಾದೃಷ್ಟಿ, ೨ ಸಾಸಾದಾನ, ೩ ಮಿಶ್ರ, ೪ ಅವಿರತಸಮ್ಯಗ್ದೃಷ್ಟಿ, ೫ ದೇಶವಿರತ, ೬ ಪ್ರಮತ್ತಸಂಯತ, ೭ ಅಪ್ರಮತ್ತಸಂಯತ, ೮ ಅಪೂರ್ವಕರಣ, ೯ ಅನಿವೃತ್ತಿಕರಣ, ೧೦ ಸೂಕ್ಷ್ಮ-ಸಾಂಪರಾಯ. ೧೧ ಉಪಶಾಂತಕಷಾಯ ( ಮೋಹ ), ೧೨ ಕ್ಷೀಣಕಷಾಯ ( ಮೋಹ ), ೧೩ ಸಯೋಗಕೇವಲಿ, ೧೪ ಅಯೋಗಕೇವಲಿ ಎಂದು ಹದಿನಾಲ್ಕು ತೆರನಾಗಿರುತ್ತಾರೆ.

ಗುಣಸ್ಥಾನಗಳು ಸೋಪಾನದ ಅಥವಾ ಶ್ರೇಣಿಯ ಮೆಟ್ಟಲುಗಳಂತಿರುತ್ತವೆ. ಆತ್ಮನಲ್ಲಿ ಬೆರೆತಿರುವ ಕರ್ಮಪರಮಾಣುಗಳು ಈ ಶ್ರೇಣಿಯಲ್ಲಿ ಮೇಲೆ ಮೇಲೆ ಹೋದಂತೆ ಕಡಿಮೆ ಕಡಿಮೆ ಆಗುತ್ತ ಹೋಗುತ್ತವೆ.

೧ ಮಿಥ್ಯಾದೃಷ್ಟಿ— ಸಪ್ತತತ್ವಗಳಲ್ಲಿ ಶ್ರದ್ಧೆಯುಳ್ಳವನು ಸಮ್ಯಗ್ದೃಷ್ಟಿ; ಇಲ್ಲದವನು ಮಿಥ್ಯಾದೃಷ್ಟಿ ಕಾಲಲಬ್ಧಿಯಿಂದ ಮಿಥ್ಯಾದೃಷ್ಟಿಯು ಸಮ್ಯಕ್ತ್ವ ಪಡೆಯುತ್ತಾನೆ.

೨ ಸಾಸಾದನ — ಅನಂತಾನುಬಂಧಕ್ರೋಧಮಾನಮಾಯಾಲೋಭಗಳಲ್ಲಿ ಯಾವದಾದರೂ ಒಂದು ಈತನಲ್ಲಿ ಪ್ರದೀಪ್ತವಾಗಿ ಸಮ್ಯಕ್ತ್ವವನ್ನು ಪಡೆಯಗೊಡುವುದಿಲ್ಲ ಮತ್ತು ಮಿಥ್ಯಾತ್ವದ ಉದಯವೂ ಆಗಿರುವುದಿಲ್ಲ ಇದು ಸಾಸಾದನನ ಸ್ಥಿತಿ.

೩ ಮಿಶ್ರ— ಈತನಲ್ಲಿ ಕೆಲವುಕಾಲ ಸಮ್ಯಕ್ತ್ವ, ಕೆಲವು ಕಾಲ ಮಿಥ್ಯಾತ್ವ ಉಂಟಾಗುತ್ತದೆ.

೪ ಅವಿರತಸಮ್ಯಗ್ದೃಷ್ಟಿ— ಈತನು ವ್ರತರಹಿತನಾಗಿಯೂ ಸಮ್ಯಗ್ದೃಷ್ಟಿಯಾಗಿರುತ್ತಾನೆ.

೫ ದೇಶವಿರತ—(ಶ್ರಾವಕನ) ಹನ್ನೆರಡು ವ್ರತಗಳನ್ನು ಪಾಲಿಸಿಯೂ ಸಮ್ಯಕ್ತ್ವವನ್ನುಳ್ಳವನು.

೪ ನೆಯ ಮತ್ತು ೫ ನೆಯ ಗುಣಸ್ಥಾನಿಗಳು ಶ್ರಾವಕರು. ಈ ಮುಂದಿನವರು ಮುನಿಗಳು.

೬ ಪ್ರಮತ್ತಸಂಯತ—ಅಪ್ರತ್ಯಾಖ್ಯಾನಕ್ರೋಧಮಾನಮಾಯಾಕಷಾಯಗಳ ಆವಿರ್ಭಾವರಹಿತನಾಗಿ, ನಿಜಶುದ್ಧಾತ್ಮಜ್ಞಾನದಿಂದ ಹುಟ್ಟಿದ ಸುಖಾಮೃತದ ಅನುಭವವುಳ್ಳವನಾಗಿ, ಪಂಚಮಹಾವ್ರತಗಳನ್ನು ಆಚರಿಸುವವನಾಗಿದ್ದರೂ ಅಂತರ್ಮುಹೂರ್ತದಲ್ಲಿ ಪ್ರಮಾದವುಳ್ಳವನಾಗಿರುವ ಮುನಿ.

೭ ಅಪ್ರಮತ್ತಸಂಯತ— ಪೂರ್ವೋಕ್ತ ಮಹಾವ್ರತಗಳನ್ನು ಪಾಲಿಸುವ ಮುನಿಯು ಜಂಘಾಸೇಚನೆ, ದಿವಾನಿದ್ರೆ ಮುಂತಾದ ಪ್ರಮಾದರಹಿತನು.

೮ ಅಪೂರ್ವಕರಣ— ಪೂರ್ವೋಕ್ತ ಮುನಿಯಲ್ಲಿ ಸಂಜ್ವಲನ ಕಷಾಯಗಳು ಮಂದೋದಯಗಳಾದ ಮೇಲೆ ಪೂರ್ವದಲ್ಲಿಲ್ಲದ ಅತ್ಯಂತಾನಂದರೂಪಗಳಾದ ಸುಖಗಳನ್ನು ಅನುಭವಿಸುವ ಅಪೂರ್ವಕರಣಭಾವದಲ್ಲಿ ಔಪಶಮಿಕ ಅಥವಾ ಕ್ಷಪಕ ಭಾವವುಳ್ಳ, ಅಷ್ಟಮಗುಣಸ್ಥಾನವರ್ತಿ.

೯ ಅನಿವೃತ್ತಿಕರಣ— ದೃಷ್ಟಶ್ರುತಾನುಭೂತ ಸುಖಗಳು ಮತ್ತೂ ಬೇಕೆಂಬ ಆಸೆಯಿಲ್ಲದೆ ಸಂಕಲ್ಪವಿಕಲ್ಪರಹಿತನಾದ ನಿಜನಾದ ನಿಶ್ಚಲನಾದ ಪರಮಾತ್ಮನ ತತ್ವಗಳ ಏಕಾಗ್ರಧ್ಯಾನಪರಿಣಾಮದಿಂದ ವರ್ಣ ಮತ್ತು ಅವಯವರಚನಾ ಭೇದಗಳಿದ್ದರೂ ಅನಿವೃತ್ತಿಕರಣನೆಂಬ ಹೆಸರನ್ನು ಧರಿಸಿ ಇಪ್ಪತ್ತೊಂದು ಪ್ರಕಾರದ ದ್ವಿತೀಯ ಕಷಾಯಗಳ ಮತ್ತು ಇಪ್ಪತ್ತೊಂದು

ಪ್ರಕಾರದ ಚಾರಿತ್ರಮೋಹನೀಯ ಕರ್ಮಗಳ ಉಪಶಮ ಅಥವಾ ಕ್ಷಪಣದಲ್ಲಿ ಸಮರ್ಥರಾದ ಒಂಬತ್ತನೆಯ 'ಗುಣಸ್ಥಾನದಲ್ಲಿರುವ ಜೀವರು ಅನಿವೃತ್ತಿಕರಣರು.

೧೦ ಸೂಕ್ಷ್ಮಸಾಂಪರಾಯ— ಸಾಂಪರಾಯ ಎಂದರೆ ಕಷಾಯ. ಸೂಕ್ಷ್ಮ-ಕ್ಲಿಷ್ಟಗತವಾದ ಲೋಭಕಷಾಯಗಳ ಉಪಶಮ ಮತ್ತು ಕ್ಷಪಕವುಳ್ಳವರೇ ಹತ್ತನೆಯ ಗುಣಸ್ಥಾನವರ್ತಿಗಳು ಸೂಕ್ಷ್ಮಸಾಂಪರಾಯರು.

೮ ನೆಯ, ೯ ನೆಯ ಮತ್ತು ೧೦ ನೆಯ ಗುಣಸ್ಥಾನಗಳಲ್ಲಿ ಎರಡು ಶ್ರೇಣಿಗಳು: ೧ ಉಪಶಮಕಶ್ರೇಣಿ, ೨ ಕ್ಷಪಕಶ್ರೇಣಿ. ಮೋಹನೀಯಕರ್ಮಗಳ ಉಪಶಮ ಮಾಡುತ್ತ ಮೇಲಕ್ಕೇರುತ್ತಹೆ ೞಗುವ ಶ್ರೇಣಿ ಉಪಶಮಶ್ರೇಣಿ ಇದನ್ನವಲಂಬಿಸಿ ೧೧ ನೆಯ ಗುಣಸ್ಥಾನವನ್ನು ಮುಟ್ಟಿದ ಆತ್ಮನು ನಿಮಿತ್ತ ಒದಗಿದ ಕೂಡಲೆ ಅಲ್ಲಿಂದ ಜಾರಿ ಕೆಳಗೆ ಬಿದ್ದು ೬ ನೆಯ ಗುಣಸ್ಥಾನಿಯಾಗುತ್ತಾನೆ. ಆದರೆ ಕ್ಷಪಕಶ್ರೇಣಿಯನ್ನವಲಂಬಿಸಿದ ಮುನಿಗೆ ಅಧಃಪತನವಿಲ್ಲ. ಆತನು ೧೦ ನೆಯ ಗುಣಸ್ಥಾನದಿಂದ ಮೇಲೇರುವಾಗ ೧೧ ನೆಯ ಗುಣಸ್ಥಾನವನ್ನು ಮುಟ್ಟದೆ ಒಮ್ಮೆಲೆ ೧೨ ನೆಯ ಗುಣಸ್ಥಾನಿಯಾಗುತ್ತಾನೆ. ಇಲ್ಲಿ ಉಪಶಮವಿಲ್ಲ; ಕಷಾಯಗಳ ಕ್ಷಯವಿದೆ.

೧೧ ಉಪಶಾಂತ (ಮೋಹ) ಕಷಾಯ— ಈತನಲ್ಲಿ ಮೋಹನೀಯ ಕರ್ಮಗಳು ಉಪಶಮಗೊಂಡಿರುತ್ತವೆ.

೧೨ ಕ್ಷೀಣ (ಮೋಹ) ಕಷಾಯ— ಈತನಲ್ಲಿ ಮೋಹನೀಯ ಕರ್ಮಗಳು ಕ್ಷಯಗೊಂಡಿರುತ್ತವೆ.

೧೩ ಸಯೋಗಕೇವಲಿ— ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ ಮತ್ತು ಅಂತರಾಯ ಈ ನಾಲ್ಕು ಘಾತಿಕರ್ಮಗಳನ್ನು ಕೆಡಿಸಿ, ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ ಮತ್ತು ಅನಂತಸುಖ ಈ ನಾಲ್ಕು ಗುಣಗಳನ್ನು ಪಡೆದ ಜಿನರು (ತೀರ್ಥಂಕರರು), ಗಣಧರರು, ಸಾಮನ್ಯ ಕೇವಲಿಗಳು. ಅವರಿಗೆ ಯೋಗವು ಉಳಿದಿರುತ್ತದೆ.

೧೪ ಅಯೋಗಕೇವಲಿ— ಮೇಲೆ ಹೇಳಿದ ಘಾತಿಕರ್ಮಗಳನ್ನಲ್ಲದೆ ಆಯು, ಗೋತ್ರ, ನಾಮ ಮತ್ತು ವೇದನೀಯ ಕರ್ಮಗಳೆಂಬ ಅಘಾತಿ ಕರ್ಮಗಳನ್ನು ಕೆಡಿಸಿ ಮುಕ್ತನಾದ ಜೀವನು ( ಕೃತ್ಸ್ನಕರ್ಮವಿಪ್ರಮೋಕ್ಷೋ ಮೋಕ್ಷಃ- ತತ್ವಾರ್ಥಸೂತ್ರ ೧೦-೨) ಅಯೋಗಕೇವಲಿ, ಪರಬ್ರಹ್ಮ, ಸಿದ್ಧ ಅಥವಾ ನಿರಂಜನ.



# ಕಥಾಸಾರಾಂಶ

## ಪ್ರಥಮಾಶ್ವಾಸಂ

(೧-೬) ಪಂಚಪರಮೇಷ್ಠಿಗಳ ಸ್ತುತಿ. (೭) ಚಕ್ರೇಶ್ವರಿಯ ಸ್ತುತಿ. (೮-೧೦) ವೃಷಭಯಕ್ಷ, ಸರಸ್ವತಿ, ಶ್ರುತಸ್ಕಂಧ ಸ್ತುತಿ. (೧೧-೧೩) ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ, ಗೃದ್ಧ್ರಪಿಂಛಾಚಾರ್ಯ, ಜಟಾಚಾರ್ಯ, ಶ್ರುತಕೀರ್ತ್ಯಾಚಾರ್ಯ, ಮಲಧಾರಿ ಸಿದ್ಧಾಂತಮುನಿ, ದೇವೇಂದ್ರ ಮುನಿ, ಜಯನಂದನಮುನಿ ಇವರ ಸ್ತುತಿ. (೧೪) ಮುನಿನಿವಹದ ಅನುಗ್ರಹದ ಪ್ರಾರ್ಥನೆ. (೧೫) ಜಿನೇಶ್ವರರು, ಗಣಧರರು, ಮುನೀಂದ್ರರು ಭವ್ಯರಿಗೆ ದಯೆಯಿಂದ ಗುಣಗಳನ್ನು ಕೊಡಬೇಕೆಂಬ ಪ್ರಾರ್ಥನೆ. (೧೬) ಅಕಳಂಕದೇವನ ಪ್ರಮಾಣರತ್ನಪ್ರದೀಪಮಯೂಖವು ಜಗದ ಮಿಥ್ಯಾತ್ವವನ್ನು ಕಳೆಯಲೆಂಬ ಪ್ರಾರ್ಥನೆ. (೧೭-೧೯) ಸತ್ಕೃತಿಯ ಗುಣದರ್ಶನ ಮತ್ತು ದುಷ್ಕೃತಿಗಳ ದೋಷವಿವರಣೆ. (೨೦) ಕವಿತಾರಹಸ್ಯವು ಕವಿಗಲ್ಲದೆ ಸಾಮಾನ್ಯನಿಗೆ ಗೋಚರಿಸದು. (೨೧-೨೨) ಸುಕವಿಗಳ ಶ್ಲಾಘನೆ ಕುಕವಿಗಳ ನಿಂದೆ. (೨೩) ಕುಕವಿಗಳ ಮುಂದೆ ಕವಿಶಬ್ದವು ಅರಣ್ಯರುದಿತವು. (೨೪) ಶುಷ್ಕವೈಯಾಕರಣನಿಗೂ ತಾರ್ಕಿಕನಿಗೂ ಕಾವ್ಯರಸವು ವಿಷಯವಲ್ಲ. (೨೫) ತನ್ನ ಗುರು ದೇವೇಂದ್ರ ಮುನಿಯು ಇಂದ್ರನಮಿತನು, ಕಥಾನಾಯಕನು ಪುರುದೇವನು. ಆದಿಪುರುಷನ ಭವಾವಳಿ ಬಂಧುರವಾದುದು. ಆದುದರಿಂದ ಇವನ ಕಾವ್ಯಕ್ಕೆ ಸೊಗಸುಂಟಾಗಿದೆ. (೨೬-೨೮) ಕವಿಯ ಸುಕವಿಜನಮನೋಮಾನಸೋತ್ತಂಸಹಂಸ, ಕವಿತಾಗುಣಾರ್ಣವ, ಸಂಸಾರೋದಯ, ಸರಸ್ವತೀಮಣಿಹಾರ ಎಂಬ ಬಿರುದುಗಳಿಗೆ ಕಾರಣಗಳು. (೨೯-೩೨) ಕವಿಯ ಬಾಲ್ಯ ಮತ್ತು ಸೌಂದರ್ಯ. (೩೩) ಕವಿಯ ಗಂಭೀರ ಧ್ವನಿ, ಹುಟ್ಟಿದ ಸಂವತ್ಸರ, ಆತನ ಜಿನಭಕ್ತಿ. (೩೪) ಬುಧಸಮೂಹವು ವಿನಂತಿಸಲಾಗಿ ಗಣಧರೋದಿತ ಚರಿತವಾದ ಆದಿಪುರಾಣವನ್ನು ರಚಿಸಿದುದು. (೩೫) ಆದಿಪುರಾಣವನ್ನು ಗಣಧರರು ವೀರಸೇನ ಜಿನಸೇನಾಚಾರ್ಯರು ರಚಿಸಿದುದನ್ನು ತಾನು ರಚಿಸಿದ್ದಾನೆ. (೩೬) ಕವಿತೆಗೆ ಫಲ. (೩೭) ತೀರ್ಥಂಕರ ಚರಿತೆ ರಚನೆಯಲ್ಲಿ ಧನ್ಯತೆ ಇದೆ. (೩೮) ಈ ಕಾವ್ಯದಲ್ಲಿ ಕಾವ್ಯಧರ್ಮವನ್ನು ಅಳವಡಿಸಿಕೊಳ್ಳಲಾಗಿದೆ. (೩೯) ಶ್ರುತಸ್ಕಂಧದಲ್ಲಿ ನಾಲ್ಕು ಅನುಯೋಗಗಳುಂಟು. ಅವುಗಳಲ್ಲಿ ಪೂರ್ವಾನುಯೋಗದಲ್ಲಿ ಈ ಕಥೆ ದೊರೆಯುತ್ತದೆ. (೪೦-೪೧) ಈ ಕಥೆಯನ್ನು ಆದಿಜಿನೇಶ್ವರಸನ್ನಿಧಿಯಲ್ಲಿ ವೃಷಭಸೇನಗಣಾಗ್ರಣಿಯು ಭರತನಿಗೆ ಹೇಳಿದನು. ಅದನ್ನೇ ವಿಸ್ತಾರವಾಗಿ ವರ್ಧಮಾನ

ಜಿನಸನ್ನಿಧಿಯಲ್ಲಿ ಗೌತಮಗಣಧರರು ಮಗಧನಾಯಕನಿಗೆ ಹೇಳಿದರು. (೪೨)
ಅದನ್ನೇ ಆದಿಪುರಾಣವೆಂದು ರಚಿಸಲಾಗಿದೆ. (೪೨ ವ) ಜಿನಪುರಾಣಕ್ಕೆ
ಲೋಕಾಕಾರ ಕಥನ, ದೇಶನಿವೇಶೋಪದೇಶ, ನಗರಸಂಪತ್ಪರಿವರ್ಣನ, ರಾಜ್ಯ
ರಾಮಣೀಯಕಾಖ್ಯಾನ, ತೀರ್ಥಮಹಿಮಾಸಮರ್ಥನ, ಚತುರ್ಗತಿಸ್ವರೂಪನಿರೂ
ಪಣ, ತಪೋದಾನವ್ಯಾವರ್ಣನ, ತತ್ಫಳಪ್ರಾಪ್ತಿಪ್ರಕಟನ ಎಂದು ಎಂಟು ಅವ
ಯವಗಳು. (೪೩–೪೪) ಅವುಗಳಲ್ಲಿ ಮೊದಲನೆಯದಾದ ಲೋಕವು ಅನಂತವಾಗಿ
ಆಕಾಶಮಧ್ಯದಲ್ಲಿ ಜೀವನಿವಹಕ್ರೋಡೀಕೃತವಾಗಿದೆ. ಅದು ಅನಾದಿಯೂ
ಅನಿಧನವೂ ಅಕೃತ್ರಿಮವೂ ಆಗಿ ಮರುತ್ತ್ರಿಕಾವೇಷ್ಟಿತವಾಗಿದೆ. ಅದರ ಎತ್ತರವು
ಹದಿನಾಲ್ಕು ರಜ್ಜುಗಳಷ್ಟು. (೪೫) ಅದರ ಆಕಾರವು ಕಟಿತಟವಿನ್ಯಸ್ತಹಸ್ತನಟ
ನಾಕೃತಿಯಂತೆ. (೪೬) ಅದರಲ್ಲಿ ಅಧೋಲೋಕ, ತಿರ್ಯಗ್‌ಲೋಕ, ಊರ್ಧ್ವ
ಲೋಕ ಎಂಬ ಮೂರು ಭೇದಗಳು. (೪೭) ಲೋಕತ್ರಯವು ಅನುಕ್ರಮವಾಗಿ
ವೇತ್ರಾಸನ ಝಲ್ಲರಿ ಮೃದಂಗಸಮಾನವಾಗಿದೆ. (೪೭ವ–೪೮) ತಿರ್ಯಗ್
ಲೋಕವು ಏಕರಜ್ಜುಪ್ರಮಾಣವಾಗಿ ಸ್ವಯಂಭೂರಮಣವೆಂಬ ಸಮುದ್ರದ ವರೆಗೆ
ವ್ಯಾಪಿಸಿದೆ. (೪೮ ವ) ಈ ತಿರ್ಯಗ್ ಲೋಕದ ಮಧ್ಯದಲ್ಲಿ ಜಂಬೂದ್ವೀಪ
ವಿದೆ. (೪೯) ಅದು ವೃತ್ತಾಕಾರವಾಗಿ ಜಂಬೂವೃಕ್ಷವು ಕಾರಣವಾಗಿ ಜಂಬೂ
ದ್ವೀಪವೆಂಡು ಹೆಸರು ಪಡೆದಿದೆ. (೪೯ ವ–೫೦) ಆ ದ್ವೀಪದ ಮಧ್ಯಪ್ರದೇಶದಲ್ಲಿ
ಮಂದರಪರ್ವತವು ಶೋಭಿಸುತ್ತದೆ. (೫೦ ಸ.) ಆ ಮಂದರಪರ್ವತದ ಪೂರ್ವ
ಪಶ್ಚಿಮ ಭಾಗಗಳಲ್ಲಿ ವಿದೇಹಕ್ಷೇತ್ರಗಳಿವೆ. (೫೧–೫೩) ವಿದೇಹಕ್ಷೇತ್ರಗಳ
ವರ್ಣನೆ. (೫೩ ವ–೫೫) ಪಶ್ಚಿಮ ವಿದೇಹಕ್ಷೇತ್ರದಲ್ಲಿ ಸೀತೋದಾನದಿಯು
ಹರಿಯುತ್ತದೆ. (೫೫ ವ–೬೨) ಸೀತೋದಾನದಿಯ ಉತ್ತರ ದಕ್ಷಿಣ ದಂಡೆಗಳ
ಮೇಲೆ ಎಂಟೆಂಟು ನಾಡುಗಳಿವೆ. ಉತ್ತರಭಾಗದ ದೇಶಗಳಲ್ಲಿ ಏಳನೆಯದಾದ
ಗಂಧಿಳವಿಷಯವು ನೀಲಾಚಲಕ್ಕೆ ದಕ್ಷಿಣದಲ್ಲಿಯೂ ವಕ್ಷಾರಾದ್ರಿಯ ಪಶ್ಚಿಮ
ದಲ್ಲಿಯೂ ಇದೆ. ಆ ದೇಶದ ವರ್ಣನೆ. (೬೨ ವ–೬೩) ಆ ದೇಶದ ಮಧ್ಯದಲ್ಲಿ
ವಿಜಯಾರ್ಧ ಪರ್ವತವಿದೆ. (೬೩–೬೯) ವಿಜಯಾರ್ಧ ಪರ್ವತದ ವರ್ಣನೆ.
(೭೦) ಅದರ ತಪ್ಪಲಲ್ಲಿ ಎರಡು ವಿದ್ಯಾಧರಶ್ರೇಣಿಗಳಿವೆ. (೭೦ ವ–೭೧) ಅವು
ಗಳಲ್ಲಿ ಉತ್ತರಶ್ರೇಣಿಯಲ್ಲಿ ಅಳಕಾಪುರವೆಂಬ ಪಟ್ಟಣವು ಶೋಭಿಸುತ್ತದೆ.
(೭೧ ವ) ಅಲ್ಲಿ ಅತಿಬಳನೆಂಬ ಖೇಚರರಾಜನು ಇದ್ದನು. ಆತನ ಪತ್ನಿ
ಮನೋಹರಿ. (೭೨) ಮನೋಹರಿಯ ಸೌಂದರ್ಯವರ್ಣನೆ. (೭೩) ಅವರ
ಮಗನು ಮಹಾಬಳನು. (೭೪–೭೮) ಮಹಾಬಳನು ಯುವರಾಜಪದವಿಗೆ
ಯೋಗ್ಯನಾಗಲು ಅವನಿಗೆ ಅತಿಬಳನು ಯುವರಾಜ ಪದವಿಯನ್ನು ಕೊಟ್ಟು
ತಾನು ಅಧಿರಾಜನಾಗಿ ಆಳುತ್ತಿದ್ದನು. (೭೯–೮೧ ವ) ಕೆಲವು ಕಾಲ ಗತಿಸಿದ
ಮೇಲೆ ಅತಿಬಳನು ಕನ್ನಡಿಯಲ್ಲಿ ನೋಡುತ್ತಿರುವಾಗ ತನ್ನ ಕೆನ್ನೆಯಲ್ಲಿ ನರೆ

ಗೂದಲು ಕಂಡಿತು. ಅದನ್ನು ನೋಡಿ ವೈರಾಗ್ಯಪರನಾಗಿ ಮಹಾಬಳನಿಗೆ ರಾಜ್ಯವನ್ನು ಒಪ್ಪಿಸಿ ಗುಣಧರಕೇವಲಿಗಳ ಸನ್ನಿಧಿಯಲ್ಲಿ ದೀಕ್ಷೆವಹಿಸಿ ತಪವನ್ನಾಚರಿಸಿದನು. (೮೧ ವ.-೮೪) ಮಹಾಬಳನು ತನ್ನ ಚತುರೂಪಧಾವಿಶುದ್ಧರಾದ ಸ್ವಯಂಬುದ್ಧ—ಮಹಾಮತಿ—ಸಂಭಿನ್ನಮತಿ—ಶತಮತಿಗಳೆಂಬ ನಾಲ್ಕುಜನ ಮಂತ್ರಿಗಳಿಗೆ ರಾಜ್ಯಭಾರವನ್ನು ಒಪ್ಪಿಸಿ ಸುಖದಿಂದ ಇದ್ದನು.

## ದ್ವಿತೀಯಾಶ್ವಾಸಂ

(೧–೨ ವ.) ಮಹಾಬಳನು ತನ್ನ ವರ್ಷವರ್ಧನದಿನದಂದು ಆಸ್ಥಾನದಲ್ಲಿ ಸಿಂಹಾಸನಾಸೀನನಾಗಿದ್ದನು. (೩-೫) ಆಸ್ಥಾನವರ್ಣನೆ. (೫ ಗ-೭) ಅಲ್ಲಿ ಸ್ವಯಂಬುದ್ಧನು ಸದ್ಧರ್ಮೋಪದೇಶಲಬ್ಧಾವಸರನಾಗಿ " ಮಹಾರಾಜನೇ, ನಿನ್ನ ವಿದ್ಯಾಧರಲಕ್ಷ್ಮಿ ಪುಣ್ಯಜನಿತವಾದುದು. ಧರ್ಮವೇ ಎಲ್ಲ ಸಂಪತ್ತುಗಳಿಗೆ ಕಾರಣವು." (೭ವ-೯ ವ) ಎಂದು ಧರ್ಮಪ್ರಭಾವವನ್ನೂ ಅದರ ಫಲಸ್ವಭಾವವನ್ನೂ ತಿಳಿಸುತ್ತಿರುವಾಗ ಮಹಾಮತಿಸಂಭಿನ್ನಮತಿಶತಮತಿಗಳು ಲೋಕಾಯತಿಕಯೋಗಾಚಾರಮಾಧ್ಯಮಿಕಮತಗಳನ್ನವಲಂಬಿಸಿ ದೇಹದಲ್ಲಿ ಜೀವವಿರುವುದು; ಅದು ಪುಣ್ಯ-ಪಾಪಗಳನ್ನು ಕೂಡಿಡುವುದು; ಮುಂದಿನ ಜನ್ಮದಲ್ಲಿ ಅದನ್ನು ಅನುಭವಿಸುವುದು; ಇದೆಲ್ಲವನ್ನೂ ನಂಬಲಾಗದು. ಕೇಶಲೋಚನಮಾಡಿಕೊಂಡು ದಿಗಂಬರನಾಗಿ ತಪವನ್ನಾಚರಿಸಿ ಸ್ವರ್ಗಸುಖವನ್ನು ಪಡೆಯುವೆವೆಂಬ ಮಾತನ್ನು ನೀನು ನಂಬಬಾರದು. ಬದುಕಿರುವ ವರೆಗೂ ಸುಖವಾಗಿರಬೇಕು. ಮುಂದಿನ ಜನ್ಮವನ್ನು ಕಂಡವರಾರು ? ಎಂದು ಹೇಳಿ ತಮ್ಮ ತಮ್ಮ ಮತಗಳನ್ನು ಮುಂದು ಮಾಡಿದರು. (ಅ) ಮಹಾಮತಿಯು ಬ್ರಹಸ್ಪತಿಮತವೆಂಬ ಚಾರ್ವಾಕಮತವನ್ನು ಪ್ರತಿಪಾದಿಸಿದನು. ಚೈತನ್ಯವು ಪಂಚಭೂತಗಳ ಪರಸ್ಪರ ಸಂಯೋಗದಿಂದ ಹುಟ್ಟುತ್ತದೆ. ಆದುದರಿಂದ ಭೂತಾತಿರಿಕ್ತವಾಗಿ ಮತ್ತು ನಿತ್ಯವಾಗಿ ಇರುವ ಪದಾರ್ಥವಿಲ್ಲ. ಉದಾಹರಣೆಗಾಗಿ ವೀಣಾಧ್ವನಿಯು ಅಲಾಬುತಂತುಸಂಯೋಗದಿಂದ ಮತ್ತು ಕಿಣ್ವಾದಿಪದಾರ್ಥಸಂಯೋಗದಿಂದ ಉಂಟಾಗುತ್ತದೆ. ಅದರಂತೆಯೇ ಆತ್ಮವೆಂಬ ಚೈತನ್ಯವು ಹುಟ್ಟುತ್ತದೆ. ಅದು ಉತ್ಪತ್ತಿವಿನಾಶಶಾಲಿಯಾಗಿರುವುದರಿಂದ ಅದು ಸ್ಥಿರವೆಂಬುದು ನಿರರ್ಥಕ. ಆಕಾರಣ ಪರಲೋಕಸಾಧನಾದಿವ್ಯಾಪಾರಗಳೂ ನಿರರ್ಥಕ. (ಆ) ಯೋಗಾಚಾರಮತವನ್ನು ಸಂಭಿನ್ನಮತಿ ಹೀಗೆ ಪ್ರತಿಪಾದಿಸಿದನು.—ಕ್ಷಣಿಕವಾದ ವಿಜ್ಞಾನಗಳೇ ಸಂತಾನರೂಪವಾಗಿ ಆತ್ಮನೆಂಬ ವ್ಯವಹಾರ ವಿಷಯವಾಗುವವು. ನಿರನ್ವಯ ವಿನಾಶಿಗಳಾದ ಆ

ವಿಜ್ಞಾನಕ್ಷಣಗಳೇ ಜ್ಞಾನ-ಜ್ಞೇಯ-ಜ್ಞಾತೃರೂಪವಾಗಿ ಭ್ರಾಂತರಿಗೆ ಕಾಣಿಸುವುವು. ಅವುಗಳ ಉತ್ಪತ್ತಿವಿನಾಶಗಳು ಶೀಘ್ರವಾಗಿರುವದರಿಂದ ಅವು ಸಂತಾನರೂಪವಾಗಿ ಕಾಣಿಸುವುವು. ಅವು ನಖಕೇಶ, ದೀಪಜ್ವಾಲೆಗಳಂತೆ ಭ್ರಾಂತಿಸಿದ್ಧವಾಗಿವೆ. ಆದುದರಿಂದ ಪರಲೋಕಾಪೇಕ್ಷಿಗಳು ತನುಧನಾದಿಗಳನ್ನು ವ್ಯಯಿಸಿ ಶ್ರಮಿಸಬೇಕಾದ ಆವಶ್ಯಕತೆಯಿಲ್ಲ. (ಇ) ಶತಮತಿಯು ಮಾಧ್ಯಮಿಕ ಮತವನ್ನು ಹೀಗೆ ಪ್ರಸ್ಥಾಪಿಸುತ್ತಾನೆ.—ಅಂತರಬಾಹ್ಯಪದಾರ್ಥಗಳು ಸತ್ಯವಲ್ಲ. ಎಲ್ಲವೂ ಮಿಥ್ಯಾಭೂತವಾಗಿವೆ. ವ್ಯವಹಾರಾದಿಗಳು ಸ್ವಾಪ್ನಿಕಪದಾರ್ಥವಲ್ಲದೆ ಸ್ವಾಪ್ನಿಕವ್ಯವಹಾರದಂತೆಯೂ ಮರುಮರೀಚಿಕಾಪದಾರ್ಥದಂತೆಯೂ ಐಂದ್ರಜಾಲಿಕಪದಾರ್ಥದಂತೆಯೂ ಇರುತ್ತವೆ. ಆದುದರಿಂದ ಜೀವವಿಲ್ಲ, ಪುಣ್ಯವಿಲ್ಲ, ಪರಲೋಕವಿಲ್ಲ, ಪಾಪವಿಲ್ಲ. ಇದಕ್ಕಾಗಿ ಮಾಡುವ ತಪೋದಾನಾದಿ ಪ್ರಯತ್ನಗಳು ವೃಥಾ ಕ್ಲೇಶ ಆಯಾಸಕಾರ್ಯಗಳಾಗಿವೆ.

(೧೦–೧೦ ವ) ಈ ಮತತ್ರಯವನ್ನು ಸ್ವಯಂಬುದ್ಧನು ಮೃದುಮಧುರ ಗಭೀರಧ್ವನಿಯಿಂದ ಕ್ರಮವಾಗಿ ಖಂಡಿಸುತ್ತಾನೆ. (ಅ) ಚೈತನ್ಯವು ಭೌತಿಕವಾಗಿರುವ ಪಕ್ಷದಲ್ಲಿ ಬಾಲ್ಯಾದಿ ವಿರುದ್ಧ ಧರ್ಮಗಳನ್ನು ಚೈತನ್ಯದಲ್ಲಿ ಸ್ವೀಕಾರ ಮಾಡಬೇಕಾಗುವದರಿಂದ ಬಾಲವೃದ್ಧ ವ್ಯವಹಾರವಿಲ್ಲದೆ ಹೋಗಬೇಕಾಗುವುದು. ನಿನ್ನ ಮತದಲ್ಲಿ ಆಕಾಶವಿಲ್ಲದಿರುವುದರಿಂದ ದೇಶಭೇದವಿಲ್ಲ. ಆದುದರಿಂದ ಜೀವಭೇದ ಸಿದ್ಧಿಸಲಾರದು. ಕಿಣ್ವಾದಿಶಕ್ತಿ-ದೃಷ್ಟಾಂತರದಿಂದ ಕಾರಣಾಪೇಕ್ಷೆಯಿಂದ ಅತಿರಿಕ್ತಕಾರ್ಯ ಸಿದ್ಧಿಸಬೇಕಾಗಿರುವುದರಿಂದಲೂ ಕಾರಣಗುಣವು ಕಾರ್ಯವಾದ ಚೈತನ್ಯವಲ್ಲಿ ಕಾಣಲಾಗದೆ ಇರುವುದರಿಂದಲೂ ಶರೀರದ ಸೂಕ್ಷ್ಮ ಘನತೆಯಿಂದ ಚೈತನ್ಯವು ಕಡಿಮೆ ಹೆಚ್ಚು ಆಗಬೇಕಾಗುವುದರಿಂದಲೂ ಗಜಪಿಪೀಲಿಕಾದಿ ಶರೀರ ಪ್ರಮಾಣಾನುಗುಣವಾಗಿ ಚೈತನ್ಯಪ್ರಮಾಣವು ಸಿದ್ಧವಾಗುವುದರಿಂದಲೂ ಈ ಮತವು ಅತ್ಯಂತ ವಿರುದ್ಧವು.

(ಆ) ವಿಜ್ಞಾನವಾದವಾದರೂ ಯುಕ್ತವಲ್ಲ. ಯಾಕೆಂದರೆ–ಸರ್ವವೂ ವಿಜ್ಞಾನವೆಂಬ ಸಾಧ್ಯವನ್ನು ವಿಜ್ಞಾನಮಾತ್ರದಿಂದ ಸಾಧಿಸುವಿಯೋ ಅಥವಾ ವಾಕ್ಯದಿಂದ ಸಾಧಿಸುವಿಯೋ? ವಿಜ್ಞಾನಮಾತ್ರದಿಂದ ಸಾಧಿಸುವೆಯಾದರೆ ಸಾಧ್ಯಹೇತುಗಳಿಗೆ ಭೇದವಿಲ್ಲದಿರುವುದರಿಂದ ಸಾಧಿಸದು ವಾಕ್ಯದಿಂದ ಸಾಧಿಸುವೆಯಾದರೆ ಆ ವಾಕ್ಯಕ್ಕೆ ಅರ್ಥವಿದೆಯೋ? ಅಥವಾ ಇಲ್ಲವೋ? ಅರ್ಥವಿಲ್ಲದಿದ್ದರೆ ನಿಷ್ಪ್ರಯೋಜನದೋಷವುಂಟಾಗುತ್ತದೆ. ಅರ್ಥವಿದ್ದ ಪಕ್ಷದಲ್ಲಿ ವಿಜ್ಞಾನವೆಂಬ ಅರ್ಥವಿದೆಯೋ? ಅಥವಾ ಬೇರೆ ಅರ್ಥವಿದೆಯೊ? ವಿಜ್ಞಾನವೆಂಬ ಅರ್ಥವಿದ್ದ ಪಕ್ಷದಲ್ಲಿ ಸಾಧ್ಯವಿಶೇಷವೆಂಬ ದೋಷವುಂಟಾಗುತ್ತದೆ. ಬೇರೆ ಅರ್ಥವಿದ್ದ ಪಕ್ಷದಲ್ಲಿ

ಬಾಹ್ಯಾರ್ಥ ಸಿದ್ಧಿಸುವುದರಿಂದ ನಿನ್ನ ಮತಕ್ಕೆ ವಿರೋಧವಾಗುತ್ತದೆ. ಒಂದು ವಿಜ್ಞಾನವು ಮತ್ತೊಂದು ವಿಜ್ಞಾನವನ್ನು ಸಂಭಂಧಿಸುತ್ತದೆಯೋ? ಅಥವಾ ಇಲ್ಲವೋ? ಸಂಬಂಧಿಸುತ್ತಿದ್ದರೆ ಸರ್ವ ಪ್ರತ್ಯಯವು ನಿರ್ವಿಷಯಕವೆಂಬ ನಿನ್ನ ಮತ ಹಾನಿಯಾಗುತ್ತದೆ. ಅಂದರೆ ಬಾಹ್ಯಾರ್ಥ ಸಿದ್ಧಿಯಾಗುತ್ತದೆ. ಸಂಬಂಧವಿಲ್ಲದ ಪಕ್ಷದಲ್ಲಿ ಸಂತಾನಾಂತರ ಭಂಗವಾಗುತ್ತದೆ. ಅನುಮಾನದಿಂದ ಸಂತಾನಾಂತರ ಸಿದ್ಧಿಯಾಗುತ್ತದೆ; ಎಂದು ಹೇಳುತ್ತಿದ್ದಲ್ಲಿ ಬಾಹ್ಯಾರ್ಥವು ಸಿದ್ಧಿಸುತ್ತದೆ. ಆದುದರಿಂದ ಈ ಮತವು ಅಯೋಗ್ಯವಾಗಿದೆ.

(ಇ) ಶೂನ್ಯವಾದವು—ಸರ್ವಂ ಶೂನ್ಯಂ ಎಂಬ ನಿನ್ನ ವಾದವೂ ಅದರಿಂದುಂಟಾಗುವ ಜ್ಞಾನವೂ ನಿರ್ವಿಷಯಕವೇ ಸವಿಷಯಕವೇ? ನಿರ್ವಿಷಯಕವಾಗಿದ್ದಲ್ಲಿ ನಿನ್ನ ವಿಷಯವು ಸಿದ್ಧಿಸುವುದಿಲ್ಲ ಸವಿಷಯಕವಾದಲ್ಲಿ ನಿನ್ನ ಮತಭಂಗವಾಗುತ್ತದೆ. ಆ ಕಾರಣದಿಂದ ಬಾಹ್ಯಾಂತರ ಸಕಲ ಪದಾರ್ಥಗಳು ಸಿದ್ಧಿಸುವುದಿಲ್ಲ.

ಹೀಗೆ ಮೂರೂ ಮತಗಳನ್ನು ಖಂಡಿಸಿ ನಿತ್ಯನೂ ಪುಣ್ಯಪಾಪಗಳ ಫಲವನ್ನು ಅನುಭವಿಸುವವನೂ ಸೂಕ್ಷ್ಮನೂ ಜ್ಞಾನಾನಂದಾದಿ ಗುಣಗಳುಳ್ಳವನೂ ಸ್ವಸ್ವದೇಹಾದಿಪ್ರಮಾಣಗುಣವುಳ್ಳವನೂ ಸಕಲಕರ್ಮನಿರ್ಮೂಲನಕರಗುಣವುಳ್ಳವನೂ ತ್ರಿಲೋಕಶಿಖರಿಶೇಖರನೂ ಆಗಿರುವ ಜೀವನುಂಟೆಂಬುದನ್ನು ಸ್ಥಾಪಿಸಿ ವಿಜಯ ಪತ್ರವನ್ನು ಪಡೆದನು. (೧೧, ೧೧ ವ) ಮತ್ತೆ ಸಭಿಕರ ಮನನಟ್ಟಾಗುವಂತೆ ತಿಳಿಸಬೇಕೆಂಬ ವಿಚಾರದಿಂದ ದೃಷ್ಟಶ್ರುತಾನುಭೂತ ತದನ್ವಯ ಸಂಬಂಧಿಗಳ ಕಥೆಗಳನ್ನು ಹೇಳಲಾರಂಭಿಸಿದನು. ಈತನ ಸಂತತಿಯಲ್ಲಿ ಅರವಿಂದನೆಂಬ ಅಂಬರಚರನು ತನ್ನ ಪತ್ನಿ ವಿಜಯೆ ಮತ್ತು ಹರಿಶ್ಚಂದ್ರ ಕುರುವಿಂದರೆಂಬ ತನ್ನ ಮಕ್ಕಳೊಡನೆ ಚಿರಕಾಲ ಖೇಚರವಿಭವವನ್ನು ಅನುಭವಿಸುತ್ತಿದ್ದನು. ಕೊನೆಯಲ್ಲಿ ಬಹ್ವಾರಂಭ ಸೌರಂಭರೌದ್ರಧ್ಯಾನ ಪರಿಣಿತನಾಗಿ ನರಕಾಯುಷ್ಯವನ್ನು ಉಪಾರ್ಜಿಸಿ ಆಸನ್ನ ಮರಣನಾಗಿ, (೧೨) ದಾಹಜ್ವರಸಂತಪ್ತನಾಗಿ (೧೩, ೧೪) ಯಾವಶೀತಳ ಕ್ರಿಯೆಯಿಂದಲೂ ಶಾಂತಿಪಡೆಯದೆ (೧೪ ವ) ಹರಿಶ್ಚಂದ್ರನನ್ನು ಕರೆದು ತನ್ನನ್ನು ಗಗನಗಾಮಿನೀವಿದ್ಯೆಯಿಂದ ಉತ್ತರ ಕುರುವಿಷಯಕ್ಕೆ ಕರೆದುಕೊಂಡು ಹೋಗಿ ಅಲ್ಲಿರುವ ನಂದಾನವನದಲ್ಲಿ ಬಿಡುವಂತೆ ಹೇಳಿದನು. ಗಗನಗಾಮಿನೀವಿದ್ಯೆಯು ನರಕಾಯುಷ್ಯನನ್ನು ಒಯ್ಯಲು ನಿರಾಕರಿಸಿತು. ಕೆಲವು ದಿವಸಗಳ ಮೇಲೆ ಮನೆಯೊಳಗಿನ ಹಲ್ಲಿಗಳು ಒಂದನ್ನೊಂದು ಕಚ್ಚಾಡುತ್ತಿದ್ದುವು. ಆಗ ಅವುಗಳ ದೇಹದಿಂದ ರಕ್ತದ ಹನಿಗಳು ಸಿಡಿದು ಅರವಿಂದನ ಮೇಲೆ ಬಿದ್ದುವು. ಆ ಹನಿಗಳಿಂದ ಅವನ ದಾಹವು ಕೆಲಮಟ್ಟಿಗೆ ಕಡಿಮೆಯಾಯಿತು. ಕೂಡಲೆ ಆತನು ಮಗನನ್ನು ಕರೆದು ತನ್ನ ದೆಸೆಯಿಂದ ಒಂದು ರಕ್ತಸರೋವರವನ್ನು ನಿರ್ಮಿಸಿಕೊಡುವಂತೆ

ಆಜ್ಞಾಪಿಸಿದನು. ಅವನು ಅದಕ್ಕೆ ಅಂಜಿದರೂ ತಂದೆಯ ಮಾತನ್ನು ಮೀರಲಾರದೆ ಲಾಕ್ಷಾರಸಗಳಿಂದ ಕೃತಕರುಧಿರಸರೋವರವನ್ನು ನಿರ್ಮಿಸಿದನು. ಅರವಿಂದನು ಆ ಕೊಳವನ್ನು ಪ್ರವೇಶಿಸಿ, ಈಸಾಡಿ ಆ ನೀರನ್ನು ಮುಕ್ಕುಳಿಸಿ ನೋಡಿ ಕೃತಕರಕ್ತವೆಂದು ತಿಳಿದುಕೊಂಡು ಮಗನ ಮೇಲೆ ಸಿಟ್ಟಾಗಿ ಅವನನ್ನು ಕೊಲ್ಲುವ ಉದ್ದೇಶದಿಂದ ಕಿರುಗತ್ತಿಯನ್ನು ಹಿರಿದು ಪಾವಟಿಗೆಗಳನ್ನು ಹತ್ತಿ ಓಡುತ್ತ ಬರಹತ್ತಿದನು. ಪಾವಟಿಗೆಗಳನ್ನು ಏರುತ್ತಿದ್ದಾಗ ಜಾರಿಬಿದ್ದು ಕಿರುಗತ್ತಿ ಎದೆಯಲ್ಲಿ ನಟ್ಟು ಸತ್ತು ನರಕಕ್ಕೆ ಹೋದನು. ಈ ಕಥೆಯನ್ನು ಪುರಜನಗಳು ಹೇಳುತ್ತಿದ್ದಾರೆ.

ಮತ್ತು ಈತನ ವಂಶದಲ್ಲಿ ದಂಡಕನೆಂಬ ರಾಜನು ಚಿರಕಾಲ ರಾಜ್ಯವಾಳಿದನು. (೧೫, ೧೫ ವ) ಆತನು ಅನ್ಯಾಯವಾಗಿ ದ್ರವ್ಯವನ್ನು ಕೂಡಿಸಿ ತನ್ನ ಭಂಡಾರದಲ್ಲಿ ಹುಗಿದಿಟ್ಟು ಸತ್ತು ಕರ್ಮವಶದಿಂದ ಅಜಗರನಾಗಿ ಹುಟ್ಟಿ ತಾನು ಕೂಡಿಟ್ಟಿದ್ದ ಭಂಡಾರವನ್ನು ಕಾಯುತ್ತಿದ್ದನು. ಆದರೆ ತನ್ನ ಪೂರ್ವಜನ್ಮದ ಪುತ್ರ ಮಣಿಮಾಳಿಯನ್ನು ಕಂಡು ಜಾತಿಸ್ಮರನಾಗಿ ಅವನನ್ನು ಮಾತ್ರ ಭಾಂಡಾರದೊಳಗೆ ಬಿಡುತ್ತಿದ್ದನು. ಮಣಿಮಾಳಿಯು ರತಿಚಾರಣರೆಂಬ ಅವಧಿಜ್ಞಾನಿಗಳಿಂದ ಅಜಗರ ವೃತ್ತಾಂತವನ್ನು ತಿಳಿದು ಅವರ ಹತ್ತರ ಹೋಗಿ (೧೬, ೧೭) "ನೀನು ಲೋಭದಿಂದ ಅಜಗರನಾದೆ. ಇನ್ನಾದರೂ ವಿಷಯಾಭಿಲಾಷೆಯನ್ನು ಬಿಡು" ಎಂದು ಪ್ರತಿಬೋಧಿಸಿದನು. (೧೭ ವ) ಕೂಡಲೆ ಅಜಗರವು ತನ್ನ ಅಜ್ಞಾನವನ್ನು ಕಳೆದುಕೊಂಡು ನಿರಶನವ್ರತದಿಂದ ದೇಹವನ್ನು ಬಿಟ್ಟು ಸೌಧರ್ಮಕಲ್ಪದಲ್ಲಿ ದೇವನಾಗಿ ಜನಿಸಿತು. (೧೮) ತನ್ನ ಪುತ್ರನ ಉಪಕಾರವನ್ನು ಸ್ಮರಿಸಿಕೊಂಡು ಆ ಕಲ್ಪದಲ್ಲಿನ ಉತ್ಕೃಷ್ಟವಾದ ರತ್ನಗಳನ್ನು ತಂದು ಮಣಿಮಾಳಿಗೆ ಕೊಟ್ಟನು. ಅವುಗಳನ್ನು ಈತನು ಈಗಲೂ ಧರಿಸಿದ್ದಾನೆ. ಅವುಗಳನ್ನು ನೀವೆಲ್ಲರೂ ನೋಡುತ್ತಿರುವಿರಿ. (೧೮ ವ) ಇದು ಅನುಭೂತ ವಿಷಯವು. ಇದಲ್ಲದೆ ಈತನ ಪಿತೃಪಿತಾ-ಮಹನಾದ ಸಹಸ್ರಬಳನು ತನ್ನ ಖೇಚರವೈಭವವನ್ನು ಅನುಭವಿಸಿ ಅಂತ್ಯದಲ್ಲಿ ವಿರಕ್ತನಾಗಿ (೧೯) ತನ್ನ ಹಿರಿಯ ಮಗನಾದ ಶತಬಳನನ್ನು ರಾಜ್ಯಪದವಿಯಲ್ಲಿ ಇಟ್ಟು ತಪವನ್ನಾಚರಿಸಿ ಮೋಕ್ಷವಡೆದನು. ಆ ಶತಬಳನು ತನ್ನ ರಾಜ್ಯವನ್ನು ತನ್ನ ಮಗ ಅತಿಬಳ ಖೇಚರನಿಗೆ ಕೊಟ್ಟು (೧೯ ವ) ವೈರಾಗ್ಯವಶನಾಗಿ ದೀಕ್ಷೆವಹಿಸಿ ತಪವನ್ನಾಚರಿಸಿ ಮರಣಾನಂತರ ಮಹೇಂದ್ರಕಲ್ಪದಲ್ಲಿ ಐಶ್ವರ್ಯವನ್ನು ಅನುಭವಿಸುತ್ತಿದ್ದನು. ನಾವು ಬಾಲಕರಿರುವಾಗ ಮಹಾಬಳನನ್ನು ಕೂಡಿಕೊಂಡು ಮಂದರಪರ್ವತದ ನಂದನವನದಲ್ಲಿ ವನಕ್ರೀಡೆಯಾಡುತ್ತಿರುವಾಗ ಆ ಮಹೇಂದ್ರಕಲ್ಪಜನು ಅಲ್ಲಿಯ ಅಕೃತ್ರಿಮಚೈತ್ಯಾಲಯಗಳನ್ನು ಪೂಜಿಸಲು ವೈಭವದಿಂದ ಬಂದು, (೨೦) ಜಿನಪಾದಗಳನ್ನು ಪೂಜಿಸಿ ನಮ್ಮನ್ನು ನೋಡಿ ಮಹಾಬಳನನ್ನು ಪ್ರೀತಿಯಿಂದ ಅಪ್ಪಿಕೊಂಡು "ಜಿನಧರ್ಮವನ್ನು ಮರೆಯದಿರು, ಎಂದು ಹೇಳಿದನು.

ಅದು ನಿಮ್ಮೆಲ್ಲರಿಗೆ ಗೊತ್ತಿದೆ. (೨೧) ಅತಿಬಳಖೇಚರನು ಈತನಿಗೆ ರಾಜ್ಯವನ್ನು ಕೊಟ್ಟು ತಪವನ್ನಾಚರಿಸಿ ಕೇವಲಿಯಾಗಲು ನಾವೆಲ್ಲರೂ ಹೋಗಿ ಪೂಜಿಸಿ ಬರಲಿಲ್ಲವೇ? (೨೨) ಹೀಗೆ ಅನುಭೂತಶ್ರುತದೃಷ್ಟ ಕಥೆಗಳಿಂದ ಜೀವಸಿದ್ಧಿಯನ್ನು ನಿಶ್ಚಯಿಸಿ ಸಭಿಕರನ್ನು ಮನಗಾಣಿಸಿದನು. ಮತ್ತೆ ಮನದ ಮಿಥ್ಯಾಕಳಂಕವು ಕಾಲಲಬ್ಧಿ ದೊರೆಕೊಂಡುದಲ್ಲದೆ ಹೋಗದೆಂದು ಬೋಧಿಸಿದನು, (೨೨ ವ) ಪರಪಕ್ಷದೋಷಪುರಸ್ಸರವಾಗಿ ಅನೇಕೋಪಪತ್ತಿಗಳಿಂದ ಸ್ವಪಕ್ಷಸ್ಥಾಪನೆ ಮಾಡಿ ಮಾರ್ಗಪ್ರಭಾವನೆಯನ್ನು ಮಾಡಿ ಸಭಾಸದರಿಂದ ಲಬ್ಧಪ್ರಶಂಸನಾದನು. (೨೩) ಮಹಾಬಳನು ಮೆಚ್ಚಿ ಸ್ವಯಂಬುದ್ಧನಿಗೆ ಜಯಪತ್ರವನ್ನು ಕೊಟ್ಟನು. (೨೩ ವ.) ಮಹಾಬಳನು ಸ್ವಯಂಬುದ್ಧನಲ್ಲಿ ಪರಮವಿಶ್ವಾಸವುಳ್ಳವನಾಗಿ ರಾಜ್ಯಭಾರ ಮಾಡುತ್ತಿದ್ದನು. (೨೪, ೨೫) ಮಹಾಬಳನು ಹೀಗೆ ರಾಜ್ಯಭಾರ ಮಾಡುತ್ತಿರಲು ಒಂದು ದಿವಸ ಸ್ವಯಂಬುದ್ಧನು ಪರಿಮಿತ ಪರಿಜನರನ್ನು ಕೂಡಿಕೊಂಡು ಮೇರುಪರ್ವತಕ್ಕೆ ಹೋದನು. (೨೬–೩೨) ಆ ಮೇರುಪರ್ವತದ ಸಮೀಪದ ಪ್ರದೇಶಗಳನ್ನೆಲ್ಲ ತನ್ನ ಪರಿಜನಕ್ಕೆ ತೋರಿಸುತ್ತ (೩೨ ವ) ಭದ್ರಶಾಲದಿಂದ ಪಾಂಡುಕವನದ ವರೆಗೆ ಅವುಗಳಲ್ಲಿದ್ದ ಚೈತ್ಯಾಲಯಗಳನ್ನು ವಂದಿಸಿ ಜಿನೇಶ್ವರರನ್ನು ಪೂಜಿಸಿ ಸೌಮನಸವನದೊಳಗಿನ ಜಿನಭವನಕ್ಕೆ ಬಂದನು. (೩೩–೩೩ ವ) ಆಗ ಅಲ್ಲಿಗೆ ಆದಿತ್ಯಗತಿಅರಿಂದಮರೆಂಬಿಬ್ಬರು ಅವಧಿಜ್ಞಾನಿಗಳು ಗಗನಮಾರ್ಗದಿಂದ ಅಲ್ಲಿಗೆ ಬಂದರು. ಅವರನ್ನು ಕಂಡು ಸ್ವಯಂಬುದ್ಧನು ಅವರನ್ನು ವಂದಿಸಿ ಶ್ರಾವಕ ವ್ರತಗಳನ್ನು ಧರಿಸಿಕೊಂಡು ಧರ್ಮಕಥಾ ಪ್ರಸಂಗದಲ್ಲಿದ್ದನು. (೩೪) ಆಗ ಸ್ವಯಂಬುದ್ಧನು ಆದಿತ್ಯಗತಿಗಳನ್ನು ಕೇಳಿದನು. "ನಮ್ಮ ಪ್ರಭುವಿಗೆ ಭೋಗಕಾಂಕ್ಷೆ ಇನ್ನೂ ಕುಂದಲಿಲ್ಲ, ಆತನು ಭವ್ಯನೋ ಅಭವ್ಯನೋ? (೩೫) ಅತನಿಗೆ ಮುಪ್ಪು ಬಂದಿದ್ದರೂ ವ್ಯಾಮೋಹವು ಬಿಟ್ಟಿಲ್ಲ. ಇದರಿಂದ ನನಗೆ ದುಃಖವಾಗುತ್ತದೆ. ತಾವು ಇದರ ವಿಚಾರವನ್ನು ನನಗೆ ತಿಳಿಸಿ ನನ್ನ ದುಃಖವನ್ನು ತೊಲಗಿಸಬೇಕು," ಎಂದು ಪ್ರಾರ್ಥಿಸಿದನು. ಅದಕ್ಕೆ ಆದಿತ್ಯಗಳು ಮಹಾಬಳನ ಭವಾವಳಿಯನ್ನು ಹೇಳಲಾರಂಭಿಸಿದರು. "(೩೫ ವ–೩೭ ವ) ಜಂಬೂದ್ವೀಪದ ಪಶ್ಚಿಮವಿದೇಹದ ಗಂಧಿಳವಿಷಯದಲ್ಲಿ ಸಿಂಹಪುರವೆಂಬ ಪಟ್ಟಣವುಂಟು. ಅಲ್ಲಿ ಶ್ರೀಷೇಣನು ರಾಜ್ಯವಾಳುತ್ತಿದ್ದನು. ಅವನ ಪತ್ನಿ ಸೌಂದರಿ. ಅವರ ಮಕ್ಕಳು ಜಯವರ್ಮ ಶ್ರೀವರ್ಮ. ಅವರಿಬ್ಬರಲ್ಲಿ ಕಿರಿಯವನಾದ ಶ್ರೀವರ್ಮನು ಜನರಿಗೆ ಪ್ರಿಯನಾಗಿದ್ದನು. (೩೮) ಆ ಕಾರಣದಿಂದ ಅರಸನು ಮುಪ್ಪಿನ ಕಾಲದಲ್ಲಿ ತನ್ನ ರಾಜ್ಯವನ್ನು ಶ್ರೀವರ್ಮನಿಗೆ ಕೊಟ್ಟು ದೀಕ್ಷೆವಹಿಸಿ ತಪವನ್ನಾಚರಿಸಿದನು. (೩೮ ವ–೪೨) ಇದಕ್ಕಾಗಿ ಹಿರಿಯ ಮಗನು ನೊಂದುಕೊಂಡು ಮುಂದಿನ ಭವದಲ್ಲಾದರೂ ರಾಜ್ಯವನ್ನು ಪಡೆಯಬೇಕೆಂದು ಜೈನದೀಕ್ಷೆಯನ್ನು ವಹಿಸಿದನು.

ತನ್ನ ಪರಿದ ಕುಂತಲಗಳನ್ನು ಇಡಲೆಂದು ಹುತ್ತದಲ್ಲಿ ಕೈಯಿಟ್ಟನು. ಅಲ್ಲಿದ್ದ ಹಾವು ಕೈಯನ್ನು ಕಚ್ಚಿತು. ಅದೇ ಕಾಲಕ್ಕೆ ಅಂತರಿಕ್ಷದಲ್ಲಿ ಒಬ್ಬ ಖೇಚರನು ತನ್ನ ಹೆಂಡತಿಯನ್ನು ಕೂಡಿಕೊಂಡು ವಿಮಾನದೊಳಗಿಂದ ಹೋಗುತ್ತಿದ್ದನು. ತಾನೂ ಖೇಚರನಾಗಬೇಕೆಂದು ಬಯಸಿ ಜಯವರ್ಮನು ದೇಹಬಿಟ್ಟು ಇಲ್ಲಿ ಮಹಾಬಳನಾಗಿ ಜನಿಸಿದನು. (೪೨ ವ) ಅವನು ವಿದ್ಯಾಧರರ ವೈಭವವನ್ನು ಬಿಡಲಾರದೆ ಅನುಭವಿಸುತ್ತಿದ್ದಾನೆ. (೪೩–೪೩ ವ) ಈಹೊತ್ತು ಕನಸಿನಲ್ಲಿ ಆತನು ತನ್ನನ್ನು ತನ್ನ ಮೂವರು ಮಂತ್ರಿಗಳು ದುರ್ಗಂಧದ ಕೆಸರಿನಲ್ಲಿ ಮುಳುಗಿಸಿದಂತೆ ಮತ್ತು ನೀನು ಅವನನ್ನು ಬಿಡಿಸಿ ತಂದು ಸಿಂಹಾಸನದಲ್ಲಿರಿಸಿ ಅಭಿಷೇಕ ಮಾಡಿದಂತೆ ಕನಸು ಕಂಡಿದ್ದಾನೆ. ಅದರಿಂದ ಚಿಂತಾಕ್ರಾಂತನಾಗಿ ನಿನ್ನ ಬರವನ್ನೇ ಕಾಯುತ್ತಿದ್ದಾನೆ. ನೀನು ಹೋಗಿ ಇದೆಲ್ಲವನ್ನು ತಿಳಿಸಿದರೆ ನೀನು ಹೇಳಿದಂತೆ ಕೇಳುವನು. ನೀನು ಹೇಳಿದಂತೆ ವ್ರತಗಳನ್ನು ಕೈಕೊಂಡು ಅದರ ಫಲವಾಗಿ (೪೪) ಅವನು (೧) ಲಲಿತಾಂಗ, (೨) ವಜ್ರಜಂಘ, (೩) ಭೋಗಭೂಮಿಜ, (೪) ಶ್ರೀಧರ, (೫) ಸುವಿಧಿನೃಪ, (೬) ಅಚ್ಯುತೇಂದ್ರ, (೭) ವಜ್ರನಾಭಿ, (೮) ಸರ್ವಾರ್ಥಸಿದ್ಧೀಶ್ವರ, ಎಂದು ಬೇರೆ ಬೇರೆ ಭವಗಳನ್ನು ಪಡೆದು ಕಡೆಯಲ್ಲಿ (೯) ಆದಿದೇವನಾಗುವನು." ಬಳಿಕ ಸ್ವಯಂಬುದ್ಧನು ಅವರನ್ನು ವಂದಿಸಿ ತ್ವರಿತಗತಿಯಿಂದ ಬಂದು (೪೫–೪೮) ಮಹಾಬಳನಿಗೆ ಆ ಸಂಗತಿಯನ್ನೆಲ್ಲ ತಿಳಿಸಿ ಜಿನೇಂದ್ರ ಚರಣಗಳಿಗೆ ಶರಣಾಗತನಾಗೆಂದು ಉಪದೇಶಿಸಿದನು. (೪೮ ವ–೪೯) ಅವನು ಮಂತ್ರಿಯ ಮಾತಿನಿಂದ ವ್ಯಾಮೋಹವನ್ನೆಲ್ಲ ಬಿಟ್ಟು ವೈರಾಗ್ಯವನ್ನವಲಂಬಿಸಿ ತನ್ನ ಮಗ ಅತಿಬಳನಿಗೆ ಪಟ್ಟಗಟ್ಟಿ ಜಿನದೀಕ್ಷೆಯನ್ನು ವಹಿಸಿದನು. (೫೨–೬೨) ಇಪ್ಪತ್ತೆರಡು ದಿವಸ ವೀರಶಯ್ಯಾತಳದಲ್ಲಿದ್ದು ತಪವನ್ನಾಚರಿಸಿ ಪ್ರಾಯೋಪಗಮನದಿಂದ ಶರೀರವನ್ನು ತೊರೆದು ಈಶಾನಕಲ್ಪದಲ್ಲಿ ಲಲಿತಾಂಗದೇವನಾಗಿ ಹುಟ್ಟಿದನು. (೬೩–೬೫) ಈಶಾನಕಲ್ಪದ ವರ್ಣನೆ ಅಲ್ಲಿ ಮೃದಂಗಾದಿ ಮಂಗಳವಾದ್ಯಗಳ ವಾದನ ಮತ್ತು ಕುಸುಮವರ್ಷಾದಿ ಶುಭಶಕುನಗಳು ಉಂಟಾದುವು. ಅಲ್ಲಿ ದೇವವಿಲಾಸಿನಿಯರು ಆಡುತ್ತಿದ್ದರು. ಪರಿವಾರದೇವಿಯರನ್ನೂ ದೇವವಿಲಾಸಿನಿಯರನ್ನೂ ಕಂಡು, (೬೬) ಲಲಿತಾಂಗದೇವನು ಆಶ್ಚರ್ಯಗೊಂಡು ತಾನು ಯಾರು ವಿಮಾನವಾವುದು ಎಂದು ತನ್ನೊಳಗೆ ವಿಚಾರಿಸುತ್ತಿರಲು ಅವಧಿಜ್ಞಾನವು ಉದಯವಾಯಿತು. (೬೭) ಅದರಿಂದ ಅದು ದೇವವಿಮಾನವೆಂದೂ ಆ ಸ್ತ್ರೀಯರು ದೇವಸ್ತ್ರೀಯರೆಂದೂ ತಿಳಿದುಕೊಂಡು ಸಂತೋಷಪಟ್ಟನು. (೬೭ ವ–೬೮) ಮಹತ್ತರದೇವಿಯರು ಬಂದು "ಇದು ನಿನ್ನ ವಿಮಾನವು. ಇವರು ನಿನ್ನ ಸೇವೆಗಿರುವ ಅಪ್ಸರಸ್ತ್ರೀಯರು. ನೀನು ಲಲಿತಾಂಗದೇವನು. (೬೯) ಇವೆಲ್ಲವೂ ನಿನಗೆ ಪೂರ್ವಪುಣ್ಯಪ್ರಭಾವದಿಂದ ದೊರೆಕೊಂಡುವು. ಇವರೆಲ್ಲರನ್ನು ಆಳಿಕೊಂಡು ಸುಖ

ದಿಂದ ಇರು" ಎಂದು ಬಿನ್ನವಿಸಿದರು. (೬೯ ವ–೭೨) ಲಲಿತಾಂಗದೇವನು ಆ ಕಲ್ಪದೊಳಗಿನ ಅಕೃತ್ರಿಮಚೈತ್ಯಾಲಯಗಳನ್ನು ಅರ್ಚಿಸಿ ಸುಂದರನೂ ದೀರ್ಘಾಯುಷ್ಯವುಳ್ಳವನೂ ಆಗಿ ನಾಲ್ಕುಸಾವಿರ ಸುಂದರ ಹೆಂಡಂದಿರನ್ನು ಸ್ವಯಂಪ್ರಭೆ ಕನಕಲತೆ–ಕನಕಮಾಳೆ--ವಿದ್ಯುಲ್ಲತೆಯರೆಂಬ ನಾಲ್ಕು ಜನ ಮಹಾದೇವಿಯರನ್ನು ಕೂಡಿಕೊಂಡು ಚಿರಕಾಲ ಸ್ವರ್ಗಸುಖಗಳನ್ನು ಅನುಭವಿಸುತ್ತಿದ್ದನು. ಆಗ (೭೩-೭೭) ಸರ್ವಾಂಗಸುಂದರಿಯಾದ ಸ್ವಯಂಪ್ರಭೆ ಜನಿಸಿದಳು. ಅವಳ ವರ್ಣನೆ. ಅವಳನ್ನು ಕೂಡಿಕೊಂಡು ಸುಖದಿಂದ ಇದ್ದನು.

## ತೃತೀಯಾಶ್ವಾಸಂ

(೧–೩) ಲಲಿತಾಂಗನು ಹೀಗೆ ಸ್ವರ್ಗಸುಖಗಳನ್ನು ಅನುಭವಿಸುತ್ತಿರುವಾಗ ಅವನ ಆಯುಷ್ಯವು ಆರು ತಿಂಗಳು ಉಳಿದ ಸಮಯದಲ್ಲಿ ಅವನು ಧರಿಸಿದ ಪುಷ್ಪಮಾಲೆಗಳೂ ಆಭರಣಗಳೂ ಕಾಂತಿಗುಂದಿ ಅವನ ಅವಸಾನ ಕಾಲವನ್ನು ಸೂಚಿಸಿದುವು. (೩ ವ–೫) ಅದನ್ನು ಕಂಡು ಅವನು ಧೈರ್ಯಗುಂದಿ ಗದ ಗದನೆ ನಡುಗಿ ಬಹುವಿಧವಾಗಿ ದುಃಖಿಸಿದನು. (೫ ವ–೮) ಆಗ ಸಾಮಾನಿಕ ದೇವರು ಬಂದು "ಮೃತ್ಯುವು ಯಾರಿಗೂ ತಪ್ಪಿದುದಲ್ಲ ನೀನು ಅಂಜದೆ ಜಿನ ಪೂಜೆ ಮಾಡು" ಎಂದು ಸಮಾಧಾನಪಡಿಸಿದರು. ಅವರ ಮಾತನ್ನು ನಂಬಿ ಆಯುರವಸಾನದ ವರೆಗೆ ಜಿನಪೂಜೆ ಮಾಡಿ ಅದೃಶ್ಯನಾದನು. (೮ ವ–೯) ಅಲ್ಲಿಂದ ಬಂದು ಅವನು ಜಂಬೂದ್ವೀಪದ ಮೇರುವಿನ ಪೂರ್ವವಿದೇಹದ ಸೀತಾನದಿಯ ದಕ್ಷಿಣತಟದ ಉತ್ಪಳಖೇಟಪುರದ ಅಧಿಪನಾದ ವಜ್ರಬಾಹು ನೃಪನಿಗೂ ಆತನ ಪತ್ನಿ ವಸುಂಧರೆಗೂ ಹಿರಿಯ ಮಗನಾಗಿ ಜನಿಸಿ ವಜ್ರಜಂಘನೆಂಬ ಹೆಸರಿನಿಂದ ಬೆಳೆದು ಯೌವನಸಂಪನ್ನನಾದನು. (೧೦–೧೧ ವ) ಕೂಡಲೆ ಅವನಿಗೆ ಸ್ವಯಂ ಪ್ರಭಾದೇವಿಯ ನೆನಪುಂಟಾಯಿತು. (೧೨) ಅವಳ ನೆನಪಿನಿಂದ ಅವನು ಸರ್ವ ಭೋಗವಿಮುಖನಾಗಿ ಚಿಂತಿಸುತ್ತಿದ್ದನು. (೧೨–೧೫) ಅತ್ತ ಸ್ವಯಂಪ್ರಭಾದೇವಿಯು ಪತಿಯೋಗದಿಂದ ಖಿನ್ನಳಾಗಿ ದುಃಖಿಸುತ್ತಿದ್ದಳು. (೧೫ ವ–೧೬) ಮಹತ್ತರದೇವಿಯರು ಅವಳ ಹತ್ತಿರ ಬಂದು ದುಃಖಿಸದೆ ಜಿನಪೂಜೆ ಮಾಡು; ಅಂದರೆ ಮುಂದಿನ ಜನ್ಮದಲ್ಲಿ ನಿನ್ನ ಪತಿಯನ್ನು ಕೂಡುವೆ ಎಂದು ಬೋಧಿಸಿದರು. (೧೬) ಅವರ ಮಾತನ್ನು ನಂಬಿ ಅವಳು ಗುರುಪಂಚಕವನ್ನು ಧ್ಯಾನಿಸುತ್ತ ಉತ್ಪನ್ನಶರೀರೆಯಾಗಿ ಸ್ವರ್ಗದಿಂದ ಇಳಿದಳು. (೧೬ ವ) ಜಂಬೂದ್ವೀಪದ ಪೂರ್ವವಿದೇಹದ ಪುಂಡರೀಕಿಣಿಯನ್ನು ಆಳುತ್ತಿದ್ದ ವಜ್ರದಂತನಿಗೂ ಆತನ ಸತಿ ಲಕ್ಷ್ಮೀಮತಿಗೂ ಶ್ರೀಮತಿಯೆಂಬ ಮಗಳಾದಳು.

(೧೮–೨೦) ದಿನೇ ದಿನೇ ಬೆಳೆದು ನವತಾರುಣ್ಯದಲ್ಲಿ ಕಾಲಿಟ್ಟಳು. (೨೧) ಪಂಡಿತೆಯೆಂಬ ದಾದಿಯು ಅವಳನ್ನು ಸಕಲವಿದ್ಯಾಪಾರಂಗತಳನ್ನು ಮಾಡಿದಳು. (೨೧ ವ–೨೨ ವ) ಒಂದು ದಿನ ಅವಳು ಅಂತಃಪುರದಲ್ಲಿ ಮಲಗಿರುವಾಗ ಬೆಳಗಿನ ಜಾವದಲ್ಲಿ ಬಹಿರುದ್ಯಾನದಲ್ಲಿದ್ದ ಯಶೋಧರಮುನಿಗಳ ಕೇವಳಜ್ಞಾನೋತ್ಪತ್ತಿಯ ಉತ್ಸವಕ್ಕಾಗಿ ಬಂದ ದೇವವಿಮಾನದ ಕಿಂಕಿಣಿ ಧ್ವನಿಯನ್ನು ಕೇಳಿ ಎಚ್ಚತ್ತು ಸೌಧದಲ್ಲಿ ನಿಂತು ನೋಡಿದಳು. ಕೂಡಲೆ ಅವಳಿಗೆ ಪೂರ್ವಭವಸ್ಮರಣೆಯುಂಟಾಯಿತು. (೨೩) ಕೂಡಲೆ ಅವಳಿಗೆ ಲಲಿತಾಂಗದೇವನ ನೆನಪಾಗಿ ವಿರಹವ್ಯಥೆಯಿಂದ ಮೂರ್ಛೆ ಹೋದಳು. (೨೩ ವ) ಪರಿಜನರು ಓಡಿ ಬಂದು ಶೀತಳ ಕ್ರಿಯೆಗಳಿಂದ ಉಪಚರಿಸಿ ಮೂರ್ಛೆಯಿಂದ ಎಚ್ಚರಿಸಿ ಮೂರ್ಛೆಯ ಕಾರಣವನ್ನು ಕೇಳಿದರು. ಅವಳು ಮಾತಾಡಲೇ ಇಲ್ಲ. ಆದುದರಿಂದ ಅವರು ಆ ಸಂಗತಿಯನ್ನು ವಜ್ರದಂತ-ಲಕ್ಷ್ಮೀಮತಿಯರಿಗೆ ತಿಳಿಸಿದರು. (೨೪–೨೬) ಅವರಿಬ್ಬರೂ ಮಗಳ ಹತ್ತಿರ ಬಂದು ಅವಳ ದುಃಖದ ಕಾರಣವನ್ನು ಕೇಳಿದರು. ಅವಳು ಕಣ್ಣೀರನ್ನು ಸುರಿಸಿದಳೇ ಹೊರತು ಮನೋಗತವನ್ನು ತಿಳಿಸಲಿಲ್ಲ. (೨೬ ವ) ವಜ್ರದಂತನು ಪಂಡಿತೆಯನ್ನು ಕರೆದು ಮಗಳಿಂದ ಮೆಲ್ಲಗೆ ಎಲ್ಲ ಸಂಗತಿಗಳನ್ನು ತಿಳಿದು ಹೇಳುವಂತೆ ನಿಯಮಿಸಿ ಹೊರಟು ಹೋದನು. (೨೭–೨೯ ವ) ಅದೇ ಸಮಯದಲ್ಲಿ ಆತನ ಗುರುಗಳಾದ ಯಶೋಧರಮುನಿಗಳಿಗೆ ಕೇವಲ ಜ್ಞಾನವೂ ಆತನ ಆಯುಧಾಗಾರದಲ್ಲಿ ಚಕ್ರರತ್ನವೂ ಜನಿಸಿದುವು. ವಜ್ರದಂತನು ಯಶೋಧರ ಗುರುಗಳ ಕಡೆಗೆ ಹೋಗಿ ವಂದಿಸಿದನು. ಕೂಡಲೆ ಆತನಿಗೆ ಅವಧಿಜ್ಞಾನವು ಉದಯವಾಯಿತು. ಮರಳಿ ಬಂದು ಚಕ್ರಪೂಜೆ ಮಾಡಿ ದಿಗ್ವಿಜಯಕ್ಕೆಂದು ಹೊರಟನು. (೩೦–೩೨) ಪಂಡಿತೆ ಶ್ರೀಮತಿಯನ್ನು ಉಪವನಕ್ಕೆ ಕರೆದುಕೊಂಡು ಹೋಗಿ ಅವಳನ್ನು ಉಪಚರಿಸುವದಕ್ಕೆಂದು ಪ್ರಯತ್ನಿಸುತ್ತ "ನಿನಗೆ ನನ್ನಕಿಂತ ಹಿತರಾರೂ ಇಲ್ಲ. ನನ್ನನ್ನು ವಂಚಿಸಿ ನೀನು ಹೀಗೆ ಕೊರಗಲಾಗದು. ನಿನ್ನ ಮನಸ್ಸಿನಲ್ಲಿದ್ದುದನ್ನು ಹೇಳು ಎಂದು ಪ್ರೀತಿಯಿಂದ ಕಾಡಿದಳು. (೩೨ ವ–೩೩) ಶ್ರೀಮತಿಯು ನಾಚಿಕೆಯಿಂದ ತಲೆಬಾಗಿ "ನಿನ್ನಕಿಂತಲೂ ನನಗೆ ಬೇರೆ ಆಪ್ತರು ಯಾರೂ ಇಲ್ಲ. ನಾನು ದೇವಾಗಮನವನ್ನು ಕಂಡ ಕೂಡಲೆ ನನಗೆ ಪೂರ್ವಭವಸ್ಮರಣೆ ಉಂಟಾಗಿ ಇಷ್ಟು ದಃಖವಾಯಿತು. ನನ್ನ ಪೂರ್ವಭವದ ಸಂಗತಿಗಳು ಹೀಗೆ ಇವೆ:—(೩೩ ವ, ೩೪) ಈ ಜನ್ಮಕ್ಕೆ ಹಿಂದೆ ಮೂರನೆಯ ಜನ್ಮದಲ್ಲಿ ಪಾಟಲಿಗ್ರಾಮದಲ್ಲಿ ನಾಗದತ್ತ ವಸುದತ್ತೆಯರಿಗೆ ಜನಿಸಿದೆನು. ತಾಯಿಯ ಗರ್ಭದಲ್ಲಿ ನೆಲಸಿದ ಕೂಡಲೆ ನನ್ನ ಒಡಹುಟ್ಟಿದವರೂ ತಂದೆಯೂ ಮರಣಹೊಂದಿದರು (೩೪ ವ) ನಮ್ಮ ತಾಯಿ ಮತ್ತು ಅಜ್ಜಿ ಸರ್ವಸ್ವವನ್ನು ಕಳೆದುಕೊಂಡು ಇತರರ ಸೇವೆಮಾಡಿ ಜೀವಿಸಹತ್ತಿದರು ಕೆಲವು ಕಾಲದ ಮೇಲೆ ನಾನು ಜನಿಸಿದೆನು. ನನ್ನ ದೇಹವು ದುರ್ಗಂಧಯುಕ್ತವಾದುದರಿಂದ ಎಲ್ಲರೂ ಅಸಹ್ಯಪಡಹತ್ತಿದರು. ಆದರಿಂದ ಅವರು ನನ್ನ ಮೇಲೆ ಚಿಂದೆ ಹೊದಿಸಿ ಸ್ಮಶಾನದಲ್ಲಿ ಇಟ್ಟು ತಾವು ತಿರಿದು

ತ್ತಂದ ಎಂಜಲಿನಿಂದ ಸಾಕುತ್ತಿದ್ದರು. ನಾನು ಹೆಸರೂ ಇಲ್ಲದೆ ನಿರ್ನಾಮಿಕೆಯಾಗಿದ್ದೆನು.('೩೫–೩೬ ವ) ಕೆಲವು ದಿವಸಗಳಲ್ಲಿ ಅವರೂ ಮೃತರಾದರು. ನನಗೆ ಗತಿ ಇಲ್ಲುದುದರಿಂದ ಕಾಡನ್ನು ಸೇರಿ ಅಂಬರತಿಳಕವೆಂಬ ಗಿರಿಯನ್ನು ಮುಟ್ಟಿದೆನು. (೩೭–೩೭) ಅಲ್ಲಿ ಪುಣ್ಯಾಶ್ರವ ಮುನಿಗಳಿದ್ದರು. ಅವರನ್ನು ನಮಸ್ಕರಿಸಿ ನನ್ನ ದುಃಖಕಾರಣವನ್ನು ಕೇಳಿದೆನು. (೩೮–೩೮ ವ) "ಇದು ನಿನ್ನ ಜನ್ಮಾಂತರ ಪಾಪದ ಫಲ. ನೀನು ಹಿಂದಿನ ಜನ್ಮದಲ್ಲಿ ಧನಶ್ರೀಯೆಂಬ ಹೆಸರಿನಿಂದ ಹುಟ್ಟಿ ಸಮಾಧಿಗುಪ್ತರ ಅಧ್ಯಯನದಲ್ಲಿ ಅಂತರಾಯವನ್ನುಂಟು ಮಾಡಿದೆ. ಅವರು ನಿನಗೆ ಶಾಪಕೊಟ್ಟರು ಅದಕ್ಕೆ ನೀನು ಅಂಜಿ (೩೯ ವ ೪೦) ಅವರ ಕ್ಷಮೆಯನ್ನು ಬೇಡಿಕೊಂಡೆ ಅವರ ಉಪಶಮನದಿಂದ ನಿನಗೆ ಮನುಷ್ಯ ಜನ್ಮವುಂಟಾಯಿತು. ಇನ್ನು ಜಿನೇಂದ್ರ ಧರ್ಮಾಭ್ಯಾಸದಿಂದ ನಿನಗೆ ಪಾಪವಿಮೋಚನೆಯಾಗುವದೆಂದು ಅನುಗ್ರಹಿಸಿದರು (೪೦ ವ) ಅವರ ಬೋಧೆಯಂತೆ ಜೈನವ್ರತಗಳನ್ನು ಪಾಲಿಸಿ ಆಯುರವಸಾನದಲ್ಲಿ ಸ್ವಯಂಪ್ರಭೆಯಾಗಿ ಜನಿಸಿ ಲಲಿತಾಂಗದೇವನ ಪತ್ನಿಯಾಗಿ ಅಲ್ಲಿಂದ ಬಂದು ಈಗ ಶ್ರೀಮತಿಯಾಗಿ ಜನಿಸಿದ್ದೇನೆ. (೪೧) ಲಲಿತಾಂಗದೇವನು ಎಲ್ಲಿಯೋ ಹುಟ್ಟಿರಬೇಕು. ಅವನ ಕೂಡ ಮದುವೆಯಾಗದಿದ್ದರೆ ನನಗೆ ಜೀವಿತದ ಆಸೆಯೇ ಇಲ್ಲ. (೪೨–೪೩ ವ) ಆತನ ರೂಪು ನನ್ನ ಎದೆಯಲ್ಲಿ ಸ್ಥಿರವಾಗಿ ನೆಲೆಗೊಂಡಿದೆ. ನಮ್ಮ ಪ್ರೀತಿಸೂಚಕವಾದ ಈ ಚಿತ್ರಪಟವನ್ನು ಬರೆದಿಟ್ಟುಕೊಂಡಿರುವೆನು. ಇದನ್ನು ಪೂಜಿಸುತ್ತ ಕನ್ಯಾವ್ರತದಲ್ಲಿಯೇ ಕಾಲವನ್ನು ಕಳೆಯುವೆನು" (೪೪–೪೬) ಪಂಡಿತೆ ಆ ಪಟವನ್ನು ನೋಡಿ ಅಲ್ಲಿ ಬರೆಯದೆ ಬಚ್ಚಿಟ್ಟಿದ್ದ ಕೆಲವು ರಹಸ್ಯಗಳನ್ನು ತಿಳಿದುಕೊಂಡು ಅವಳ ಪ್ರಿಯನನ್ನು ಹುಡುಕಿ ತರುವದಾಗಿ ಹೇಳಿ ಅಲ್ಲಿಂದ ಹೊರಟು ಮಹಾಪೂತಜಿನಾಲಯಕ್ಕೆ ಹೋಗಿ ಅಲ್ಲಿ ಅದನ್ನು ಬಿಚ್ಚಿಟ್ಟುಕೊಂಡು ತನ್ನ ಕಾರ್ಯಸಿದ್ಧಿಯನ್ನು ನಿರೀಕ್ಷಿಸುತ್ತಿದ್ದಳು. (೪೭–೫೦ ವ) ಇತ್ತ ವಜ್ರದಂತನು ದಿಙ್ಮಂಡಲವನ್ನು ಜಯಿಸಿ ರಾಜಧಾನಿಯನ್ನು ಪ್ರವೇಶಿಸಿ ಮೂರ್ಧಾಭಿಷಿಕ್ತನಾದನು. ಅನಂತರ ಮಗಳನ್ನು ಕರೆಸಿಕೊಂಡು ನಾಳೆನಾಡದು ಇಷ್ಟರಲ್ಲಿಯೇ ನೀನು ನಿನ್ನ ಪ್ರಾಣಕಾಂತನನ್ನು ಕೂಡುವೆ ಎಂದು ಹೇಳಿ ಅವಳ ಮತ್ತು ತನ್ನ ಜನ್ಮಾಂತರದ ಕಥೆಗಳನ್ನು ಹೇಳಿದನು. ಯಶೋಧರ ಗುರುಗಳಲ್ಲಿನ ಸ್ಥಿರಭಕ್ತಿಯಿಂದ ನನಗೆ ಅವಧಿಜ್ಞಾನವು ಜನಿಸಿತು. ಅವರ ಪ್ರಭಾವದಿಂದ ನಿನ್ನ ಮತ್ತು ನಿನ್ನ ಕಾಂತನ ಜನ್ಮಾಂತರಗಳು ತಿಳಿದುವು. "ಈ ಜನ್ಮಕ್ಕೆ ಹಿಂದೆ ಐದನೆಯ ಜನ್ಮದಲ್ಲಿ ನಾನು ಚಂದ್ರಕೀರ್ತಿಯಾಗಿ ಹುಟ್ಟಿದ್ದೆನು. ಜಯಕೀರ್ತಿ ನನ್ನ ಸ್ನೇಹಿತನು. ನಾನು ಜೀವಿತಾವಸಾನದಲ್ಲಿ ಚಂದ್ರಸೇನಾಚಾರ್ಯರ ಬಳಿ ಸನ್ಯಸನವಿಧಿಯಿಂದ ಆಹಾರವನ್ನು ತೊರೆದು ದೇಹತ್ಯಾಗಮಾಡಿ ಮಹೇಂದ್ರಕಲ್ಪದಲ್ಲಿ ಸಾಮಾನಿಕ ದೇವನಾದೆನು. ಜಯಕೀರ್ತಿಯು ಅಲ್ಲಿಯೇ ಹುಟ್ಟಿದನು. ಅಲ್ಲಿಂದ ನಾವು ಪರಿಚ್ಯುತರಾಗಿ ಶ್ರೀಧರಮಹಾರಾಜನ

ಪುತ್ರರಾಗಿ ಜನಿಸಿದೆವು. ನಮ್ಮ ತಂದೆ ನಮಗೆ ಅಧಿರಾಜ–ಯುವರಾಜ ಪದವಿಗಳನ್ನು ಕೊಟ್ಟು ದೇವಲೋಕಕ್ಕೆ ಸಂದನು. (೫೧-೫೧ ವ) ನಮ್ಮ ಮಾತೆಯು ಅನೇಕ ವ್ರತಗಳನ್ನು ಮಾಡಿ ಜೀವಿತಾಂತ್ಯದಲ್ಲಿ ಲಲಿತಾಂಗ ದೇವನಾದಳು. (೫೨) ಕೆಲವು ದಿವಸದ ಮೇಲೆ ನನ್ನ ತಮ್ಮನು ಮೃತನಾದನು. ನಾನು ಬಹಳೇ ದುಃಖಿಸಿದೆನು. (೫೨ ವ-೫೬) ಆಗ ಲಲಿತಾಂಗದೇವನು ಬಂದು ನನಗೆ ವೈರಾಗ್ಯವನ್ನು ಬೋಧಿಸಿದನು. (೫೭-೫೭ ವ) ನಾನು ಯುಗಂಧರ ಮುನಿಗಳಲ್ಲಿ ತಪಸ್ಸನ್ನು ಕೈಕೊಂಡು ಜೀವಿತಾಂತ್ಯದಲ್ಲಿ ಅಚ್ಯುತೇಂದ್ರ ಕಲ್ಪದಲ್ಲಿ ಅಚ್ಯುತೇಂದ್ರನಾದೆನು. [೫೮ ವ] ನನ್ನ ಆ ವಿಭವಕ್ಕೆ ಲಲಿತಾಂಗನೇ ಕಾರಣ ನೆಂದು ಅವನನ್ನು ಕರೆದುಕೊಂಡು ಹೋಗಿ ಪೂಜಿಸಿದೆನು. ಕಾಲಾಂತರದಲ್ಲಿ ಅವನು ಚ್ಯುತನಾಗಿ ಮಹೀಧರನಾದನು. (೫೯-೬೪) ನಾನು ಆವನನ್ನು ಕಂಡು ಅವನಿಗೆ ವೈರಾಗ್ಯವನ್ನು ಬೋಧಿಸಿದೆನು. (೬೫-೬೫ ವ) ಅವನು ಜಗನ್ನಂದನ ಗುರುಗಳಲ್ಲಿ ಶಿಷ್ಯನಾಗಿ ಸತ್ತು ಪ್ರಾಣತೇಂದ್ರನಾಗಿ ಆಯುರವಸಾನದಲ್ಲಿ ಮೃತ ನಾಗಿ ಅಜಿತಂಜಯನೆಂಬ ಚಕ್ರವರ್ತಿಯಾಗಿದ್ದನು. (೬೬–೭೨) ಆಗ ನಾನು ಮತ್ತೆ ಅಲ್ಲಿಗೆ ಹೋಗಿ ಅವನಿಗೆ ವೈರಾಗ್ಯವನ್ನುಪದೇಶಿಸಿದೆನು. (೭೨ ವ) ಅವನು ತಪಶ್ಚರ್ಯವನ್ನು ಮಾಡಿ ಮಹಾಬಳಖೇಚರನಾಗಿ ಸ್ವಯಂಬುದ್ಧನ ಉಪದೇಶ ದಿಂದ ತಪವನ್ನಾಚರಿಸಿ ಲಲಿತಾಂಗದೇವನಾಗಿ ಹುಟ್ಟಿದನು. ನೀನು ಅವನಿಗೆ ಪತ್ನಿಯಾಗಿದ್ದೆ. (೭೩) ಆಕಾಲದ ಒಂದು ರಹಸ್ಯವು " ನಾವು ಅಚ್ಯುತೇಂದ್ರ ನಿಂದ ಯುಗಂಧರ ಜಿನೋಪಾಖ್ಯಾನವನ್ನು ಕೇಳಿದೆವು. [೭೩ವ] ಪೂರ್ವವಿದೇಹದ ಸುಸೀಮಾನಗರವನ್ನು ಆಳುವ ಅಜಿತಂಜಯನಿಗೆ ಪ್ರಹಸಿತನೆಂಬ ಮಗನಿದ್ದನು. ಅವನ ಮಿತ್ರನು ವಿಕಸಿತನು. (೭೪–೭೫ ವ) ಅವರಿಬ್ಬರು ದೊಡ್ಡ ಪಂಡಿತರು ಅವರು ವಿದ್ಯಾಗರ್ವದಿಂದ ಮತಿಸಾಗರ ಮುನಿಗಳ ಕೂಡ ವಾದಮಾಡಿ ಸೋತು ಅವರ ಶಿಷ್ಯರಾದರು. ಬಳಿಕ (೭೬) ಮಹಾವ್ರತಗಳನ್ನು ಕೈಕೊಂಡು ಆಯುರ ವಸಾನದಲ್ಲಿ ಮಹಾಶಕ್ರ ಕಲ್ಪದಲ್ಲಿ ಇಂದ್ರ–ಪ್ರತೀಂದ್ರರಾದರು. (೭೬ವ) ಅಲ್ಲಿಂದ ಚ್ಯುತರಾಗಿ ಪುಂಡರೀಕಿಣಿಯಲ್ಲಿ ಮಹಾಬಳ—ಅತಿಬಳರಾಗಿ ಹುಟ್ಟಿದರು. (೭೭-೭೭ ವ) ಮಹಾಬಳನು ಮೃತನಾಗಿ ಪ್ರಾಣತಕಲ್ಪದಲ್ಲಿ ಪುಷ್ಪಚೂಳನಾಗಿ ಆಯುರವಸಾನದಲ್ಲಿ ಜಯಸೇನನಾಗಿ ಹುಟ್ಟಿದನು. (೭೮–೭೯) ತನ್ನ ರಾಜ್ಯವನ್ನು ತೊರೆದು ಸಿಮಂಧರ ಜಿನೇಶ್ವರರಿಂದ ದೀಕ್ಷೆಪಡೆದು ದಿಗ್ವಾಸನಾದಿ ಭಾವನೆಗಳನ್ನು ಭಾವಿಸಿ ಜೀವಿತಾವಸಾನದಲ್ಲಿ ಸೌಮನಸಗ್ರೈವೇಯಕದಲ್ಲಿ ಅಹಮಿಂದ್ರನಾಗಿದ್ದು ಬಳಿಕ ಭೂಮಿಗಿಳಿದು ಯುಗಂಧರನಾದನು. (೮೦–೮೧) ಅವನು ಈಗ ಅರ್ಹಂತ ಪರಮೇಶ್ವರನಾಗಿದ್ದಾನೆ." (೮೨-೮೩) ಎಂದು ಅವನ ಚರಿತ್ರೆಯನ್ನು ಹೇಳಿ ತಾವು ಪಿಹಿತಾಸ್ರವಭಟ್ಟಾರಕರ ಕೇವಲಜ್ಞಾನೋತ್ಪತ್ತಿಯೊಸಗೆ ಮಾಡಿ ಬಂದು ದನ್ನು ಹೇಳಿದನು. ಮೇರುನಗರದಲ್ಲಿ ವನಕೇಳಿಯನ್ನು ಸ್ವಯಂಭೂರಮಣ

ಸಮುದ್ರದಲ್ಲಿ ಜಲಕೇಳಿಯಾಡಿದುದು ನೆನಪುಂಟೇ ?" ಎಂದನು. (೮೩ ವ) ' ಇದೆ ಎಂದು ಶ್ರೀಮತಿಯು ಉತ್ತರಕೊಟ್ಟು ಲಲಿತಾಂಗದೇವನು ಎಲ್ಲಿ ಹುಟ್ಟಿರುವನು?" ಎಂದು ಕೇಳಿದಳು. " ಆತನು ಉತ್ಪಳಖೇಟದಲ್ಲಿ ನನ್ನ ಮೈದುನನಾದ ವಜ್ರಬಾಹುವಿನ ಮಗನಾಗಿರುವನು. ( ೮೪ ) ಅವನು ಕ್ಷಿಪ್ರದಲ್ಲಿಯೇ ಬರುವನು. ಈ ಸಂಗತಿಯನ್ನು ಪಂಡಿತೆಯು ಬಂದು ತಿಳಿಸುವಳು." ( ೮೪ ವ ) ಎಂದು ಹೇಳಿ ಕಳಿಸಿದನು. ಅದೇ ಸಮಯಕ್ಕೆ ಪಂಡಿತೆಯು ಬಂದು ಶ್ರೀಮತಿಯನ್ನು ಕಂಡಳು. ( ೮೫-೮೭ ) ನಿನ್ನ ಚಿತ್ರಪಟವನ್ನು ತೆಗೆದುಕೊಂಡು ಹೋಗಿ "ಮಹಾಪೂತ ಜಿನಾಯದ ಮುಂದೆ ಇಡಲು ಅದನ್ನು ಎಲ್ಲರೂ ಆಶ್ಚರ್ಯದಿಂದ ನೋಡುತ್ತಿದ್ದರು. ( ೮೭ ವ-೮೯ ) ಆಗ ಅಲ್ಲಿದ್ದ ವಾಸವನು ಅದೆಲ್ಲ ತನ್ನ ವೃತ್ತವೆಂದು ಹೇಳಿ ದುಃಖದಿಂದ ಮೂರ್ಛೆಹೊಂದಿದವನಂತೆ ನಟಿಸಿದನು. ಅವನ ಮಿತ್ರ ದುರ್ದಂತನು ಅಳಿಕೋಪಚಾರವನ್ನು ಮಾಡಿದನು. ಇದನ್ನು ನೋಡಿ ನಾನು " ಇದು ನಮ್ಮ ಮಗಳ ಪಟ. ಈಕೆಯಲ್ಲಿ ಪೂರ್ವಭವಾನುರಾಗವಿದ್ದರೆ ಒಂದೆರಡು ರಹಸ್ಯಗಳನ್ನು ಹೇಳಿರಿ," ಎಂದೆನು ಅವಳು ಹೇಳಲಾರದೆ ನಾಚಿಕೊಂಡು ಓಡಿಹೋದರು. ( ೯೦ ವ-೯೨ ) ಬಳಿಕ ಅಲ್ಲಿಗೆ ಸುಂದರನಾದ ಒಬ್ಬ ರಾಜಕುಮಾರನು ಬಂದನು.

## ಚತುರ್ಥಾಶ್ವಾಸಂ

(೧-೩ ವ) ವಜ್ರಜಂಘನು ಜಿನದರ್ಶನ ಮಾಡಿಕೊಂಡು ಸ್ತುತಿಸಿ ಸಿದ್ಧಶೇಷೆಯನ್ನು ಸ್ವೀಕರಿಸಿ ಹೊರಗೆ ಬಂದು ಎದುರಿನಲ್ಲಿ ನಿಂತಿದ್ದ ಜನರ ಗುಂಪನ್ನು ಕಂಡು ಏನಿವೆಯೆಂದು ಅಲ್ಲಿಗೆ ಬಂದು ನೋಡುತ್ತಿರುವಾಗ ಚಿತ್ರಪಟವನ್ನು ಕಂಡನು. ( ೪-೭ ) ಅವರಲ್ಲಿ ಲಿಖಿತವಾದ ವಿಷಯಗಳು ಇರುಳು ಕಂಡ ಕನಸನ್ನು ಮರುದಿವಸ ನೆನಪಿಗೆ ತರುವಂತೆ ಜಾತಿಸ್ಮರನಾಗಿ " ಅದು ಶ್ರೀಪ್ರಭವಿಮಾನವು. ಅವಳು ಸ್ವಯಂಪ್ರಭೆ" ಎಂದು ತಿಳಿದನು. (೮-೧೬) ನಾನಾವಿಧವಾದ ತನ್ನ ಪೂರ್ವದ ಸೌಖ್ಯಗಳನ್ನು ನೆನೆದುಕೊಂಡು " ಹಾ ! ಸ್ವಯಂಪ್ರಭೆ" ಎಂದು ಮೂರ್ಛೆಹೋದನು. (೧೭-೧೭ ವ) ಅವನ ಪರಿಜನರು ಶೀತೋಪಚಾರ ಮಾಡಿ ಅವನನ್ನು ಎಚ್ಚರಿಸಿದರು. ಆತನು ಲಲಿತಾಂಗದೇವನೆಂದು ತಿಳಿದು ನಾನು ಅವನ ಬಳಿಗೆ ಹೋದೆನು. ( ೧೮—೧೮ ವ ) " ನನ್ನ ಪ್ರತಿಜ್ಞೆಯು ನೆರವೇರಿತು. ಶ್ರೀಮತಿವಜ್ರಜಂಘರ ಮನೋರಥವು ಸಿದ್ಧಿಸಿತು." ಎಂದು ಹೇಳಿದೆಸು. ಅದು ಹೇಗೆಂದು ಆತನು ಕೇಳಿದನು. (೧೯-೨೧ ವ) ನಾನು

ನಿನ್ನ ಸಂಗತಿಯನ್ನೆಲ್ಲವನ್ನೂ ತಿಳಿಸಿದೆನು. (೨೨) ಅದನ್ನು ಕೇಳಿ ಆತನು ನಿನ್ನ ಪಟವನ್ನು ತೆಗೆದುಕೊಂಡು ಈ ಪಟವನ್ನು ನಿನಗೆ ಕಳುಹಿಸಿರುವನು. ಶ್ರೀಮತಿ ಅದನ್ನು ತೆಗೆದುಕೊಂಡು ನೋಡಿ ನೋಡಿ (೨೩) ಆನಂದಪರವಶಳಾಗಿದ್ದಳು. (೨೩ ವ) ಶ್ರೀಮತಿ ವಜ್ರಜಂಘರ ಜನ್ಮಾಂತರ ಸ್ನೇಹವು ಚಿತ್ರಪಟ ವ್ಯತಿಹಾರವು ಆ ವೇಳೆಗೆ ವಜ್ರಬಾಹು ಮಹಾರಾಜನಿಗೆ ತಿಳಿಯಿತು. ಆತನು ಕನ್ಯಾರ್ಥಿಯಾಗಿ ಪುಂಡರೀಕಿಣಿಗೆ ಬಂದನು. (೨೪–೨೫ ವ) ವಜ್ರದಂತನು ಅವರನ್ನು ಇದಿರುಗೊಂಡು ಸನ್ಮಾನದಿಂದ ಕರೆದುಕೊಂಡು ಬಂದು ಸತ್ಕರಿಸಿ ಬಂದ ಕಾರ್ಯವನ್ನು ಕೇಳಿದನು. (೨೬–೩೦ ವ) " ನಿಮ್ಮ ಮಗಳನ್ನು ನಮ್ಮ ಮಗನಿಗೆ ಮದುವೆ ಮಾಡಿ ಕೊಡಬೇಕೆಂದು ಪ್ರಾರ್ಥಿಸಲು ಬಂದೆನು " ಎಂದು ಆತನು ಹೇಳಿದನು. ಅದನ್ನು ವಜ್ರದಂತನು ಸಮ್ಮತಿಸಿದನು. ಮೌಹೂರ್ತಿಕರಿಂದ ಅದೇ ಶುಭ ಮುಹೂರ್ತವೆಂದು ತಿಳಿದು ವಿವಾಹಮಂಟಪವು ರಚಿತವಾಯಿತು. (೩೧–೩೪) ವಿವಾಹಮಂಟಪದ ಅಲಂಕಾರ. (೩೪ ವ–೩೫) ವಿವಾಹನಿಮಿತ್ತವಾಗಿ ಬಾಯಿನಗಳನ್ನು ಹಂಚಲಾಯಿತು. (೩೫ ವ–೪೮) ವಧೂವರರ ಮಂಗಳಸ್ನಾನ, ಪ್ರಸಾಧನ, ಕೈಧಾರೆ. (೪೮ ವ–೫೨ ವ) ವಧೂವರರು ಸಂತೋಷದಿಂದ ಅಲ್ಲಿಯೇ ಕೆಲವು ಕಾಲ ಕಳೆದರು. (೫೩) ಬಳಿಕ ವಜ್ರಜಂಘನ ತಂಗಿಯಾದ ಸೌಂದರಿಗೂ ಶ್ರೀಮತಿಯ ಸಹೋದರನಾದ ಅಮಿತತೇಜನಿಗೂ ಮದುವೆಯಾಯಿತು. (೫೩ ವ–೫೬) ಮಗಳನ್ನು ಅತ್ತೆಯ ಮನೆಗೆ ಕಳುಹುವಾಗ ಮಗಳಿಗೆ ಮತ್ತು ಅಳಿಯನಿಗೆ ವಜ್ರದಂತನ ಬುದ್ಧಿವಾದ. (೫೭–೬೨) ವಜ್ರಬಾಹುರಾಜನು ಮಗನನ್ನೂ ಸೊಸೆಯನ್ನೂ ಕರೆದುಕೊಂಡು ಉತ್ಪಲಖೇಟಕ್ಕೆ ಬಂದನು. ಕೆಲವು ಕಾಲದ ಮೇಲೆ ಶ್ರೀಮತಿಗೆ ನಾಲ್ವತ್ತೊಂಬತ್ತು ಅವಳಿ ಮಕ್ಕಳಾದರು. (೬೩–೬೮) ವಜ್ರಬಾಹುವು ಒಂದು ದಿವಸ ಮನೋಹರ ಆಕೃತಿಯ ಮೇಘವನ್ನು ಕಂಡು ಅದರಂತೆ ಜಿನಮಂದಿರವನ್ನು ಕಟ್ಟಿಸಬೇಕೆಂದು ಅದರ ಚಿತ್ರವನ್ನು ಹಲಗೆಯ ಮೇಲೆ ಬರೆಯಿಸಬೇಕೆನ್ನುವಷ್ಟರಲ್ಲಿ ಅದು ಕರಗಿ ಹೋಯಿತು. ಅದೇ ಅವನ ವೈರಾಗ್ಯನಿಮಿತ್ತವಾಗಿ ತನ್ನ ರಾಜ್ಯವನ್ನು ವಜ್ರಜಂಘನಿಗೆ ಕೊಟ್ಟು ಪತ್ನಿ ಪೌತ್ರರನ್ನು ಕೂಡಿಕೊಂಡು ಯಮಧರ ಮುನಿಗಳ ಪಾದಗಳಲ್ಲಿ ಜಾತರೂಪಧರನಾಗಿ ಮೋಕ್ಷ ಪಡೆದನು. (೬೮ ವ–೭೮) ಅತ್ತ ವಜ್ರದಂತಚಕ್ರವರ್ತಿ ಒಂದು ದಿನ ಸಿಂಹಾಸನಾರೂಢನಾಗಿರುವಾಗ ಉದ್ಯಾನ ಪಾಲಕನು ಒಂದು ಮನೋಹರವಾದ ಹೊಂದಾವರೆಯನ್ನು ತಂದು ಕಾಣಿಕೆ ಕೊಟ್ಟನು. ಚಕ್ರವರ್ತಿ ಅದನ್ನು ಕೈಯಲ್ಲಿ ಹಿಡಿದುಕೊಂಡು ಅದರ ಸುಗಂಧವನ್ನು ಆಘ್ರಾಣಿಸಿ ಲೀಲೆಯಿಂದ ತಿರುಗಿಸುತ್ತಿರುವಾಗ ಅದರೊಳಗಿಂದ ಒಂದು ಮೃತತುಂಬಿ ಹೊರಗೆ ಬಿದ್ದಿತು. ಅದನ್ನು ನೋಡಿ ಘ್ರಾಣೇಂದ್ರಿಯ ಒಂದಕ್ಕೆ ಸೋತ ಈ ತುಂಬಿ ಈ ದುರವಸ್ಥೆಗೀ

ಡಾಗಿರಲು, ಅನೇಕೇಂದ್ರಿಯವಶರಾದ ನಮ್ಮ ಪಾಡೇನು? ಎಂದು ವೈರಾಗ್ಯ ಪರನಾದನು. (೭೮–ವ೮೦) ತನ್ನ ಸಾಮ್ರಾಜ್ಯವನ್ನು ಅಗ್ರಪುತ್ರನಿಗೆ ಕೊಡ ಮಾಡಲು ಅವನು ಅದನ್ನು ನಿರಾಕರಿಸಿದನು. ಅವನ ತಮ್ಮಂದಿರು ಅಂಗೀ ಕರಿಸಲಿಲ್ಲ. (೮೧–೮೧ ವ) ಅಮಿತತೇಜನ ಶಿಶುವಾದ ಪುಂಡರೀಕನೆಂಬ ಬಾಲಕ ನಿಗೆ ಪಟ್ಟವನ್ನು ಕಟ್ಟಿ ವಜ್ರದಂತನು ಪರಿವಾರಸಹಿತವಾಗಿ ಯಶೋಧರ ಮುನೀಂ ದ್ರರ ಪಾದೋಪಾಂತದಲ್ಲಿ ದಿಗಂಬರನಾಗಿ ತಪವನ್ನಾಚರಿಸಿ ಮೋಕ್ಷಲಕ್ಷ್ಮಿ ಯನ್ನು ಪಡೆದನು. ಲಕ್ಷ್ಮೀಮತಿಯೂ ಅನುಂದರಿಯೂ ಪುಂಡರೀಕನನ್ನು ಪರಿಪಾಲಿಸುತ್ತಿದ್ದರು. (೮೨–೮೨ ವ) ರಾಜ್ಯದಲ್ಲಿ ಬಾಲಕನು ಅರಸನಾಗಿರಲು ಮಾಂಡಲಿಕರು ಅಂಜದೆ ಕಪ್ಪವನ್ನು ಕೊಡುವುದನ್ನು ನಿಲ್ಲಿಸಿದರು. ಆಟವಿಕರು ಪಾರ್ಷ್ಣಿಗ್ರಾಹಕರು ಏರಿಬರುವುದನ್ನು ತಿಳಿದು ಲಕ್ಷ್ಮೀಮತಿಯು ಮಂತ್ರಿಗಳ ಆಲೋಚನೆಯಂತೆ ವಜ್ರಜಂಘನನ್ನು ಕರೆಯಿಸುವುದನ್ನು ನಿಶ್ಚಯಿಸಿದಳು. (೮೩–೮೬ ವ) ಲೇಖನವನ್ನು ಬರೆಯಿಸಿ ಪಾವುಡದೊಡನೆ ಚಿಂತಾಗತಿ ಮನೋ ಗತಿ ಎಂಬ ದೂತರನ್ನು ಅವಳು ಕಳುಹಿಸಿದಳು. ಅವರಿಬ್ಬರು ವಿಮಾನಾರೂಢ ರಾಗಿ ಉತ್ಪಲಖೇಟಕ್ಕೆ ಬಂದು ವಜ್ರಜಂಘನನ್ನು ಕಂಡು ಲೇಖನವನ್ನೂ ಉಪಾ ಯನಗಳನ್ನೂ ಅವನ ಮುಂದೆ ಇಟ್ಟರು. ಲೇಖನವನ್ನು ಓದಿಸಿ ವಜ್ರಜಂಘನು ವಿಸ್ಮಯಾಕ್ರಾಂತನಾಗಿ, (೮೭–೯೦) ಶ್ರೀಮತಿಯ ಬಳಿಗೆ ಬಂದು ಆ ಸಂಗತಿಯನ್ನು ತಿಳಿಸಿದನು. ಅವಳು ಬಹಳವಾಗಿ ದುಃಖಿಸಿದಳು. ಅವಳನ್ನು ಸಮಾಧಾನಗೊಳಿಸಿ ಅಲ್ಲಿಂದ ಬಂದು ಮಂತ್ರಿಗಳೊಡನೆ ಆಲೋಚಿಸಿ ಪುಂಡರೀಕಿ ಣಿಗೆ ಹೊರಡುವುದನ್ನು ನಿಶ್ಚಯಿಸಿದನು. ಸೈನ್ಯವು ಸಿದ್ಧವಾಯಿತು. (೯೧–೯೪) ಸೈನ್ಯವನ್ನು ಕೂಡಿಕೊಂಡು ಹೋಗುತ್ತ ಮಾರ್ಗದಲ್ಲಿ ಒಂದು ಮನೋಹರವಾದ ಸರೋವರದ ದಂಡೆಯ ಮೇಲೆ ಬೀಡುಬಿಟ್ಟನು. (೯೫ ವ–೯೭) ಅದೇ ಸಮಯ ದಲ್ಲಿ ಅಲ್ಲಿಗೆ ಧರ್ಮವರ–ಸಾಗರಸೇನರೆಂಬ ಗಗನಚಾರಣರು ಕಾಂತಾರಚರ್ಯಾ ಮಾರ್ಗದಲ್ಲಿ ಅವರ ಶಿಬಿರಕ್ಕೆ ಬಂದರು. ಶ್ರೀಮತಿಯೂ ವಜ್ರಜಂಘನೂ ಅವರನ್ನು ನಿಲ್ಲಿಸಿ ಅವರಿಗೆ ದಾನಕೊಟ್ಟರು. (೯೭ ವ–೯೯) ಆ ದಾನಪ್ರಭಾವ ದಿಂದ ಪಂಚಾಶ್ಚರ್ಯವುಂಟಾಯಿತು.

## ಪಂಚಮಾಶ್ವಾಸಂ

(೧–೩) ಆನಂತರ ವಜ್ರಜಂಘನು ಪತ್ನಿಯೊಡನೆ ಮುನಿಗಳ ಹತ್ತಿರ ಹೋಗಿ ತಮಗೆ ಅವರಲ್ಲಿ ಪ್ರೀತಿಯುಂಟಾಗಲು ಕಾರಣವೇನೆಂದು ಕೇಳಿದನು. ಆಗ ವೃದ್ಧ ಕಂಚುಕಿಯು “ಇವರು ನಿಮ್ಮ ನಾಲ್ವತ್ತೊಂಭತ್ತನೆಯ ಅವಳಿ

ಗಳಲ್ಲವೇ ?" ಎಂದು ಕೇಳಿದನು. (೨ ವ–೩) ಕಂಚುಕಿಯನ್ನು ಸುಮ್ಮ ನಿರಿಸಿ ಆ ಮುನಿವರರ ಬಳಿಯಲ್ಲಿ ಪಾದಪ್ರಕ್ಷಾಲನೋದಕದಲ್ಲಿ ಹೊರಳಾಡಿ ಉಪ ಶಮಭಾವವನ್ನು ತಳೆದು ನೋಡುತ್ತಿದ್ದ ಶಾರ್ದೂಲ–ವರಾಹ–ಗೋಲಾಂಗುಲ– ನಕುಲಗಳನ್ನು ನೋಡುತ್ತ ಅವುಗಳಿಗೆ ಭಕ್ಷ್ಯಗಳನ್ನು ತರಿಸಿಕೊಟ್ಟು ತನ್ನ ಮಂತ್ರಿ ಸೇನಾನಾಯಕ ಪುರೋಹಿತ ಶ್ರೇಷ್ಠಿಗಳ ಭವಾವಳಿಯನ್ನು ಕೇಳಿದನು. ಅವರು ಅದನ್ನು ಹೀಗೆ ಹೇಳಿದರು. (೩ ವ–೬) ಈ ಮತಿವರನು ಈ ಭವಕ್ಕೆ ಹಿಂದೆ ಐದನೆಯ ಭವದಲ್ಲಿ ಪ್ರಭಾಕರೀ ಪುರದಲ್ಲಿ ಮತಿವೃದ್ಧನೆಂಬ ಅರಸಾಗಿ ಮಹಾಲೋಭದಿಂದ ಸತ್ತು ಹುಲಿಯಾಗಿ ಜನಿಸಿ ಒಂದು ಗಿರಿಯಲ್ಲಿದ್ದನು. ಪ್ರೀತಿವರ್ಧನನೆಂಬ ಆ ಮಂಡಲಾಧಿಪನು ದಿಗ್ವಿಜಯ ಮಾಡಿಕೊಂಡು ಬಂದು ಆ ಪರ್ವತದ ಬಳಿಯಲ್ಲಿ ಬೀಡು ಬಿಟ್ಟನು. ಆಗ ಶುಭ ನಿಮಿತ್ತಗಳುಂಟಾಗಲು ಪುರೋಹಿತನು ಋಷಿಗಳು ಚರ್ಯೆಗೆ ಬರುವರೆಂದೂ ಸುವರ್ಣಪ್ರಾಪ್ತಿಯಾಗುವ ದೆಂದೂ ಹೇಳಿದನು. (೭–೧೦) ಆ ಋಷಿಗಳು ನಗರಪ್ರದೇಶ ಮಾಡದಂತೆ ಮಾರ್ಗದಲ್ಲಿ ನೀರು ಚಲ್ಲಿ ಪುಷ್ಪಗಳನ್ನು ತುಂಬಾ ಹರಡಿ ಋಷಿಗಳ ಆಗಮನ ವನ್ನು ನಿರೀಕ್ಷಿಸುತ್ತಿದ್ದನು. ಬಳಿಕ ಒಂದು ತಿಂಗಳಾದಮೇಲೆ ಪಿಹಿತಾಶ್ರವರೆಂಬ ಮುನಿಗಳು ಬಂದು ನೋಡಿ ನಗರಮಾರ್ಗವನ್ನು ತೊರೆದು ರಾಜನ ಶಿಬಿರಕ್ಕೆ ಬಂದರು. (೧೧) ಅರಸನು ಅವರನ್ನು ಇದಿರುಗೊಂಡು ನಿಲ್ಲಿಸಿ ದಾನ ಮಾಡಿ ದನು. ಕೂಡಲೆ ಪಂಚಾಶ್ಚರ್ಯವಾಯಿತು. (೧೧) ಆಗ ಪರ್ವತದೊಳಗಿನ ಶಾರ್ದೂಲವು ಜಾತಿಸ್ಮರನಾಗಿ ಅಲ್ಲಿಗೆ ಬಂದು ಶಾಂತವಾಗಿದ್ದಿತು ಮುನಿಯು ಆ ಗಿರಿಯ ತಟದಲ್ಲಿದ್ದ ಸುವರ್ಣಪೂರ್ಣ ಕಟಾಹಗಳನ್ನು ತೋರಿಸಿದನು. (೧೨–೧೩ ವ) ಆ ಹುಲಿ ಹನ್ನೆರಡು ದಿವಸ ವ್ರತಮಾಡಿ ಸಮಾಧಿಮರಣಹೊಂದಿ ಈಶಾನಕಲ್ಪದಲ್ಲಿ ದಿವಾಕರಪ್ರಭನೆಂಬ ದೇವನಾಯಿತು. ಆ ಪ್ರೀತಿವರ್ಧನನು ಅಮೃತಪದವಿ ಪಡೆದನು. ಆತನ ಸೇನಾನಾಯಕನು ಪ್ರಭಾಕರನೆಂದು ಮಂತ್ರಿ ಕನಕಪ್ರಭನೊಂದೂ ಪುರೋಹಿತನು ಪ್ರಭಂಜನನೆಂದೂ ಬೇರೆ ಬೇರೆ ವಿಮಾನಗ ಳಲ್ಲಿ ಜನಿಸಿ ನಿನ್ನ ಲಲಿತಾಂಗ ಜನ್ಮದಲ್ಲಿ ನಿನಗೆ ಪರಿವಾರ ದೇವರಾದರು. ಈ ಜನ್ಮದಲ್ಲಿ ಆ ಶಾರ್ದೂಲನೇ ಮತಿವರ ಮಂತ್ರಿಯಾಗಿದ್ದಾನೆ. ಆ ಪ್ರಭಾಕರನು ಸೇನಾನಾಯಕ ಅಕಂಪನನು. ಕನಕಪ್ರಭನು ಪುರೋಹಿತ ಆನಂದನು. ಪ್ರಭಂಜ ನನು ನಿನ್ನ ಶ್ರೇಷ್ಠಿ ಧನಮಿತ್ರನು. ಸ್ವಯಂಪ್ರಭಾದೇವಿಯು ಶ್ರೀಮತಿಯು ಆದುದರಿಂದ ಇವರಲ್ಲಿ ನಿನಗೆ ಪ್ರೀತಿಹೆಚ್ಚಾಗಿದೆ. ಈ ಭವದಿಂದ ಮುಂದೆ ಎಂಟನೆಯ ಭವದಲ್ಲಿ ನೀನು ಆದಿತೀರ್ಥಂಕರನಾಗಿರುವಾಗ ಶ್ರೀಮತಿಯು ಶ್ರೇಯಾಂಸನಾಗಿಯೂ ಉಳಿದವರು ನಿನ್ನ ಮಕ್ಕಳಾಗಿಯೂ ಹುಟ್ಟುವರು. (೧೪) ಬಳಿಕ ಅಲ್ಲಿದ್ದ ಹುಲಿ ಹಂದಿ ಕೋಡಗ ಮುಂಗಲಿ ಇವುಗಳ ಜನ್ಮವನ್ನು ತಿಳಿಸಿದರು. (೧೪ ವ–೧೬) ಈ ಹುಲಿ ಹಿಂದಿನಜನ್ಮದಲ್ಲಿ ಹಸ್ತಿನಾಪುರದಲ್ಲಿ ಉಗ್ರಸೇನನೆಂಬ ವರ್ತಕನಾಗಿ ಅಪ್ರತ್ಯಾಖ್ಯಾನ ಕ್ರೋಧದಿಂದ

ತಿರ್ಯಗಾಯುಷ್ಯವನ್ನು ಪಡೆದು ಅರಸನ ಕೋಷ್ಠಾಗಾರದಲ್ಲಿ ಕಳವು ಮಾಡಿದನು. ಅರಸನು ಅವನನ್ನು ಹಿಡಿದು ತರಲು ದೂತನಿಗೆ ಆಜ್ಞಾಪಿಸಲು ಅವನು ಚಪೇಟ ಚರಣಾಘಾತದಿಂದ ಸತ್ತು ಇಲ್ಲಿ ಹುಲಿಯಾಗಿ ಹುಟ್ಟಿದನು. ಈ ವರಾಹನು ವಿಜಯಪುರದಲ್ಲಿ ಹರಿಕಾಂತನೆಂಬ ರಾಜಪುತ್ರನಾಗಿ ಅಪ್ರತ್ಯಾಖ್ಯಾನಮಾನದಿಂದ ತಂದೆಗೆ ಅವಿನೀತನಾಗಿ (೧೭) ಶಿಲೆಯಲ್ಲಿ ತಲೆಯನ್ನು ಅಪ್ಪಳಿಸಿಕೊಂಡು ಸತ್ತು ವರಾಹನಾದನು. (೧೭ ವ-೧೮) ಈ ವಾನರನು ಹಿಂದಿನ ಜನ್ಮದಲ್ಲಿ ಧ್ಯಾನಪುರ ದಲ್ಲಿ ನಾಗದತ್ತನೆಂಬ ವರ್ತಕನಾಗಿ ಅಪ್ರತ್ಯಾಖ್ಯಾನಮಾಯೆಯಿಂದ ತನ್ನ ತಂಗಿಯ ಧನವನ್ನು ಅಪಹರಿಸಿ ಈಭವದಲ್ಲಿ ಕಪಿಯಾಗಿದ್ದಾನೆ. (೧೮ವ-೨೦ವ) ಈ ನಕುಲನು ಅಪ್ರತ್ಯಾಖ್ಯಾನಲೋಭದಿಂದ ಕಲ್ಲುರಿಗನಾಗಿ ಅರಸನ ಸ್ವರ್ಣಮಯ ಇಟ್ಟಿಗೆಗಳನ್ನು ಪೂರಿಗೆಗಳನ್ನು ಕೊಟ್ಟು ಕೊಂಡುಕೊಳ್ಳುತ್ತಿದ್ದನು. ಒಂದು ದಿನ ತಾನು ಪರಸ್ಥಳಕ್ಕೆ ಹೋಗಬೇಕಾಗಿದ್ದುದರಿಂದ ತನ್ನ ಮಗನಿಗೆ ಇಟ್ಟಿಗೆಯನ್ನು ಕೊಂಡುಕೊಳ್ಳುವಂತೆ ಹೇಳಿ ಹೋದನು. ಬಂದು ನೋಡಲು ಮಗನು ಅವುಗ ಳನ್ನು ಕೊಂಡುಕೊಂಡಿರಲಿಲ್ಲ. ಕುಪಿತನಾಗಿ ಮಗನನ್ನು ಬಡಿಗೆಯಿಂದ ಹೊಡೆದು ಕೊಂದನು. ರಾಜದೂತರು ತನ್ನನ್ನು ಶಿಕ್ಷಿಸುವರೆಂದು ಭಯಪಟ್ಟು ತನ್ನ ಕಾಲುಗ ಳನ್ನು ಮುರಿದುಕೊಂಡನು. ಆಪರೂ ಅರಸನು ಅವನನ್ನು ಶಿಕ್ಷಿಸಿದನು. ಅವನು ಅಲ್ಲಿ ಸತ್ತು ಇಲ್ಲಿ ಮುಂಗುಲಿಯಾಗಿದ್ದಾನೆ. ಇವರೆಲ್ಲರೂ ಮುಂದೆ ನಿನ್ನ ಮಕ್ಕಳಾ ಗುವರು" ಆ ತರುವಾಯ ವಜ್ರಜಂಘನೂ ಶ್ರೀಮತಿಯೂ ಪಯಣ ಹೊರಟು ಪುಂಡರೀಕಿಣಿಗೆ ಬಂದರು. (೨೧-೨೨) ಅಲ್ಲಿ ಸೋದರಳಿಯನ ರಾಜ್ಯವನ್ನು ನಿಷ್ಕಂಟಕಮಾಡಿ ಮಂತ್ರಿ ಮಂಡಳಕ್ಕೆ ವಹಿಸಿಕೊಟ್ಟು ತಮ್ಮ ರಾಜಧಾನಿಗೆ ತಿರುಗಿ ಬಂದು ಸುಖದಿಂದ ಇದ್ದರು. (೨೨ ವ—೨೭) ಹೀಗೆ ಎಷ್ಟೋ ಕಾಲವು ಕಳೆದು ಹೋಯಿತು. ಬಳಿಕ ಒಂದು ದಿನ ರಾತ್ರಿ ಶ್ರೀಮತಿ ವಜ್ರಜಂಘರು ಶಯ್ಯಾಗೃಹದಲ್ಲಿ ಮಲಗಿರುವಾಗ ಅಲ್ಲಿ ಧೂಪದ ಧೂಮವು ತುಂಬಿಕೊಂಡು ಉಸಿರಾಡುವುದಕ್ಕೆ ಮಾರ್ಗವಿಲ್ಲದೆ ಅವರಿಬ್ಬರೂ ಮಲಗಿದ್ದಂತೆಯೇ ಮೃತರಾದರು (೨೭ ವ) ಮತಿವರಾದಿಗಳು ಪುರಜನರ ದುಃಖವನ್ನು ಸಮಾಧಾನ ಪಡಿಸಿ ಆ ದಂಪತಿಗಳ ಉತ್ತರ ಕ್ರಿಯೆಯನ್ನು ಮಾಡಿಸಿ ಶ್ರೀಮತಿಯ ಪುತ್ರನಾದ ವಜ್ರಬಾಹು ವಿಗೆ ರಾಜ್ಯಭಾರವನ್ನು ವಹಿಸಿ ತಾವು ತಪಸ್ಸಿಗೆ ಹೊರಟು ಹೋಗಿ ಜೀವಿತಾಂತ್ಯ ದಲ್ಲಿ ಅಧೋಗ್ರೈವೇಯಕದಲ್ಲಿ ಅಹಮಿಂದ್ರರಾದರು. ವಜ್ರಜಂಘ-ಶ್ರೀಮತಿಯರು ಉತ್ತಮಪಾತ್ರ ದಾನಾನುಮೋದಫಲದಿಂದ ಉತ್ತಮಭೋಗಭೂಮಿಯಲ್ಲಿ ಜನ್ಮವೆತ್ತಿದರು. (೨೮-೩೦) ಭೋಗಭೂಮಿಯ ವರ್ಣನೆ. (೩೧-೪೦) ದಶವಿಧ ಕಲ್ಪವೃಕ್ಷಗಳ ವರ್ಣನೆ.(೪೧-೪೨) ಭೋಗಭೂಮಿಜರ ಜೀವನ ವರ್ಣನೆ.(೪೩-೪೪) ಶ್ರೀಮತಿ-ವಜ್ರಜಂಘರು ಭೋಗಭೂಮಿಯಲ್ಲಿ ಜನಿಸಿದರು. (೪೫-೪೫ ವ) ಒಂದು ದಿವಸ ಅವರು ಒಂದು ಮಾವಿನ ಮರದ ಸೌಂದರ್ಯವನ್ನು ನೋಡುತ್ತಿ

ರುವಾಗ ಸೂರ್ಯಪ್ರಭನೆಂಬ ದೇವನ ವಿಮಾನವು ಹೋಗುತ್ತಿರುವುದನ್ನು ನೋಡಿ (೪೬) ಅವರಿಗೆ ಪೂರ್ವಭವಸ್ಮರಣೆಯುಂಟಾಯಿತು. ಅದೇ ಸಮಯದಲ್ಲಿ ಚಾರಣಯುಗವು ಭೂಮಿಗೆ ಇಳಿದು ಬಂದಿತು. ಅವರನ್ನು ಆದರಿಸಿ ಅವರ ಪಾದಗಳನ್ನು ತೊಳೆದು ಮಣಿಮಯಾಸನದಲ್ಲಿ ಕುಳ್ಳಿರಿಸಿದರು. (೪೭) " ತಮಗೆ ಆ ಚಾರಣ ಮುನಿಗಳಲ್ಲಿ ಪ್ರೀತಿಯುಂಟಾಗಲು ಕಾರಣವೇನೆಂದು ಕುತೂಹಲದಿಂದ ಕೇಳಿದರು. (೪೭ ವ) ಅದಕ್ಕೆ ಅವರಲ್ಲಿಯ ಅಗ್ರಮುನಿಯು ಅವನು ಮಹಾಬಲ ಖೇಚರನಾದ ಭವದಲ್ಲಿ ತಾನು ಸ್ವಯಂಬುದ್ಧನೆಂಬ ಮಂತ್ರಿಯಾಗಿದ್ದನೆಂದೂ(೪೮) ಅವನು ಸಮಾಧಿಪಡೆಯಲು ವಿಯೋಗದಿಂದ ತಾನೂ ಘೋರತಪವನು ಆಚರಿಸಿ ಮೊದಲನೆಯ ಸ್ವರ್ಗದಲ್ಲಿ ಮಣಿಚೂಲನೆಂಬ ದೇವನಾಗಿ (೪೮ ವ) ಆಯುರವಸಾನದಲ್ಲಿ ಪುಂಡರೀಕಿಣಿಯಲ್ಲಿ (೪೯ ವ) ಪ್ರೀತಿಂಕರನಾದನು. ಈ ಪ್ರೀತಿದೇವನು ತನ್ನ ತಮ್ಮನು. ನಾವಿಬ್ಬರೂ ತಪಮಾಡಿ ಚಾರಣರಾದೆವು. (೫೦-೬೪) ಅವರಿಗೆ ಪ್ರೀತಿಂಕರರು ಸಮ್ಯಕ್ತ್ವಸ್ವರೂಪವನ್ನು ಬೋಧಿಸಿ ಗಗನ ಮಾರ್ಗದಿಂದ ಹೊರಟು ಹೋದನು. (೬೫—೬೯ ವ) ಅವರು ಸಮ್ಯಕ್ತ್ವವುಳ್ಳವರಾಗಿ ಆಯುರವಸಾನದಲ್ಲಿ ಕ್ಷುತವಿಜೃಂಭಣವ್ಯಾಜದಿಂದ ಮೃತರಾದರು. (೭೦—೭೦ ವ) ಅವರು ಈಶಾನಕಲ್ಪದಲ್ಲಿ ಹುಟ್ಟಿದರು. ವಜ್ರಜಂಘನು ಶ್ರೀಧರನೆಂಬ ದೇವನಾದನು. ಶ್ರೀಮತಿಯು ಸಮ್ಯಕ್ತ್ವಮಹಿಮೆಯಿಂದ ಸ್ತ್ರೀರೂಪವನ್ನು ಕಳೆದುಕೊಂಡು ಶ್ರೀಧರನಿಗೆ ಸ್ವಯಂಪ್ರಭನೆಂಬ ಸಾಮಾನಿಕ ದೇವನಾದಳು. ಶಾರ್ದೂಲಾರ್ಯ ಮೊದಲಾದವರು ಬೇರೆ ಬೇರೆ ವಿಮಾನಗಳಲ್ಲಿ ಜನ್ಮವೆತ್ತಿದರು. (೭೧-೭೧ ವ) ಶ್ರೀಧರದೇವನು ಹೀಗೆ ಸ್ವರ್ಗಸುಖವನ್ನು ಅನುಭವಿಸುತ್ತಿರುವಾಗ ಒಂದು ದಿವಸ ಪ್ರೀತಿಂಕರಾರ್ಯರ ಕೇವಲಜ್ಞಾನೋತ್ಪತ್ತಿಯನ್ನು ಅರಿತುಕೊಂಡು ಶ್ರೀಪ್ರಭಾಚಲಕ್ಕೆ ಹೋಗಿ (೭೨-೭೪) ಅವರಿಗೆ ವಂದಿಸಿ ತಾನು ಅಂಬರಚರನಾಗಿದ್ದ ಕಾಲದಲ್ಲಿ ತನಗೆ ಮಂತ್ರಿಗಳಾಗಿದ್ದ ಮೂವರ ಸ್ಥಿತಿಯನ್ನು ಕೇಳಿದನು. (೭೫-೯೪ ವ) ಸಂಭಿನ್ನಮತಿ ನಿಗೋದವೆಂಬ ನರಕದಲ್ಲಿಯೂ ಶತಮತಿಯು ದ್ವಿತೀಯನರಕದಲ್ಲಿಯೂ ಇರುವರೆಂದು ಹೇಳಿ ಧರ್ಮಸ್ವರೂಪವನ್ನು ನಿರೂಪಿಸಿದರು. ನರಕಗಳ ಸ್ವರೂಪವನ್ನು ಹೇಳಿದರು. ಆಮೇಲೆ ಶತಮತಿಯು ಘೋರನರಕದಲ್ಲಿರುವನೆಂದು ತಿಳಿಸಿದರು. (೯೫) ಶ್ರೀಧರನು ದುಃಖಿತನಾಗಿ ನಿಗೋದಕ್ಕೆ ಹೋಗಿ ಶತಮತಿಗೆ ಸಮ್ಯಕ್ತ್ವವನ್ನು ಬೋಧಿಸಿದನು. (೯೬-೯೭) ಶತಮತಿಯು ಸಮ್ಯಕ್ತ್ವವನ್ನು ಧರಿಸಿ ಅನೇಕ ಜನ್ಮಗಳನ್ನು ಎತ್ತಿ ಕೊನೆಗೆ ಬ್ರಹ್ಮೇಂದ್ರನಾದನು. (೯೮) ಆ ಬ್ರಹ್ಮೇಂದ್ರನು ಕೃತಜ್ಞನಾಗಿ ಶ್ರೀಧರನನ್ನು ಪೂಜಿಸಿದನು. (೯೯-೧೦೨) ಇತ್ತ ಶ್ರೀಧರನು ಸ್ವರ್ಗದಿಂದ ಚ್ಯುತನಾಗಿ ಜಂಬೂದ್ವೀಪದ ಪೂರ್ವವಿದೇಹದ ವತ್ಸಕಾವತಿ ವಿಷಯದ ಸುಸೀಮಾನಗರದ ಸುದೃಷ್ಟಿ ರಾಜನಿಗೂ ಸುನಂದೆಗೂ ಸುವಿಧಿಯೆಂಬ ಮಗನಾದನು.

## ಷಷ್ಠಾಶ್ವಾಸಂ

(೧-೨) ಸುವಿಧಿಯು ತನ್ನ ತಂದೆಯ ಮಾತನ್ನು ಮೀರಲಾರದೆ ಅಭಯ-ಘೋಷಚಕ್ರವರ್ತಿಯ ಮಗಳು ಮನೋರಮೆಯನ್ನು ಮದುವೆಮಾಡಿಕೊಂಡು ರಾಜ್ಯಭಾರ ವಹಿಸಿದನು. (೨ ವ) ಅವರಿಬ್ಬರಿಗೂ ಶ್ರೀಮತಿಚರಸ್ವಯಂಪ್ರಭದೇವನು ದೇವಲೋಕದಿಂದ ಇಳಿದು ಬಂದು (೩) ಕೇಶವನೆಂಬ ಮಗನಾದನು. (೩ ವ) ಶಾರ್ದೂಲಾರ್ಯ ಮುಂತಾದವರೂ ಯಥಾಯೋಗ್ಯವಾಗಿ ಜನಿಸಿದರು. (೪, ೪ ವ) ಪೂರ್ವಭವಸ್ನೇಹದಿಂದ ಅವರೆಲ್ಲರೂ ನಾನಾತರದ ಸುಖೋಪಭೋಗಗಳನ್ನು ಅನುಭವಿಸುತ್ತಿದ್ದರು. ಒಂದು ದಿವಸ ಅಭಯಘೋಷಚಕ್ರವರ್ತಿಯು ವಿಮಲವಾಹನಜಿನಚರಣವಂದನೆಗೆ ಹೋಗಿದ್ದನು. ಸುವಿಧಿಯು ತನ್ನ ಮಗನನ್ನೂ ಕರೆದುಕೊಂಡು ತಂದೆಯ ಕೂಡ ಹೋದನು. ಚಕ್ರವರ್ತಿಯು ಧರ್ಮಾಮೃತರಸಾಸ್ವಾದನದಿಂದ ವೈರಾಗ್ಯಪರನಾಗಿ (೫) ತನ್ನ ಪರಿವಾರದೊಡನೆ ಉಚಿತ ದೀಕ್ಷೆಯನ್ನು ಕೈಕೊಂಡನು. (೬) ಸುವಿಧಿಯು ತನ್ನ ಮಗನ ಮೇಲಿನ ವಿಪುಲ ಸ್ನೇಹದಿಂದ ಉಪಾಸಕನಾದನು. (೬-೧೧ ವ) ಆತನು ಪಂಚಾಣುವ್ರತಗಳನ್ನೂ ಮೂರುಗುಣವ್ರತಗಳನ್ನೂ ನಾಲ್ಕು ಶಿಕ್ಷಾವ್ರತಗಳನ್ನೂ ಏಕಾದಶ ನಿಳಯವನ್ನೂ ಕೈಕೊಂಡು, ಉತ್ಕೃಷ್ಟಚಾರಿತ್ರ್ಯವನ್ನು ಆಚರಿಸಿ, ಜೀವಿತಾವಸಾನದಲ್ಲಿ ಸಮಾಧಿವಿಧಿಯಿಂದ ಶರೀರತ್ಯಾಗಮಾಡಿದನು. (೧೨) ಅಲ್ಲಿಂದ ಆತನು ಅಚ್ಯುತಕಲ್ಪದಲ್ಲಿ ಅಚ್ಯುತೇಂದ್ರನಾಗಿ ಜನಿಸಿದನು. (೧೨ ವ) ಕೇಶವನು ದೀಕ್ಷೆವಹಿಸಿ ಅಚ್ಯುತಕಲ್ಪದಲ್ಲಿ ಪ್ರತೀಂದ್ರನಾದನು. (೧೩-೨೦ವ) ಅವರು ಅಚ್ಯುತ ಕಲ್ಪದಲ್ಲಿ ದಿವ್ಯಭೋಗಗಳನ್ನು ಆಸ್ವಾದಿಸಿ ಆಯುರವಸಾನದಲ್ಲಿ ಜಿನಪದಧ್ಯಾನಾಸಕ್ತರಾಗಿ ಪರಿಚ್ಯುತರಾದರು. ಅಚ್ಯುತೇಂದ್ರನು ಜಂಬುದ್ವೀಪದ ಪ್ರಾಕ್‌ವಿದೇಹದ ಸೀತಾನದಿಯ ಉತ್ತರ ದಂಡೆಯ ಮೇಲಿನ ಪುಷ್ಕಳಾವತಿವಿಷಯದ ಪುಂಡರೀಕಿಣಿಯಲ್ಲಿ (೨೧) ವಜ್ರನಾಭಿಯೆಂಬ ಅರಸುಮಗನಾದನು. (೨೧ ವ) ಶಾರ್ದೂಲಾರ್ಯಚರಸಾಮಾನಿಕದೇವ ಮುಂತಾದವರು ಇವನ ತಮ್ಮಂದಿರಾಗಿ ಹುಟ್ಟಿದರು. (೨೨—೨೩) ವಜ್ರನಾಭಿಯು ಬೆಳೆದು ರಾಜ್ಯಾಭಿಷೆಕಕ್ಕೆ ಯೋಗ್ಯನಾಗಲು ವಜ್ರಸೇನಮಹಾರಾಜನು ಅವನಿಗೆ ಪಟ್ಟಗಟ್ಟಿದನು. (೨೩ವ-೨೪) ವಜ್ರಸೇನ ಮಹಾರಾಜನು ಆ ಮೇಲೆ ವೈರಾಗ್ಯಪರನಾಗಿ ಆಮ್ರವನೋದ್ಯಾನದಲ್ಲಿ ದೀಕ್ಷೆವಹಿಸಿ ತಪಸ್ಸುಮಾಡಿದನು. (೨೪ ವ) ವಜ್ರಸೇನಮಹಾರಾಜನ ತಪಸ್ಸು. (೨೫-೨೬ ವ) ವಜ್ರನಾಭಿಯು ಕೆಲವು ದಿವಸಗಳ ವರೆಗೆ ಮಹೀತಳಭೋಗವನ್ನು ಭೋಗಿಸಿ ವೈರಾಗ್ಯಪರನಾಗಿ ತನ್ನ ಹಿರಿಯಮಗನಾದ ವಜ್ರದಂತನ ಮೇಲೆ ಭೂಭಾರವನ್ನು ಇರಿಸಿ ತನ್ನ ಗುರುಚರಣಸಮೀಪದಲ್ಲಿ (೨೭) ತನ್ನ ಪರಿವಾರದೊಡನೆ ನಿರ್ಗ್ರಂಥರೂಪವನ್ನು ಕೈಕೊಂಡನು. (೨೭ ವ ೩೦) ಪಂಚಮಹಾವ್ರತಗಳನ್ನೂ

ಐದುಸಮಿತಿಗಳನ್ನೂ ಗುಪ್ತಿತ್ರಯವನ್ನೂ ಇತರ ತಪಸ್ಸುಗಳನ್ನೂ ಆಚರಿಸಿದನು. (೩೦ ವ-೩೪ ವ) ದಶಧರ್ಮ ಹನ್ನೆರಡುತಪಸ್ಸುಗಳನ್ನು ಆಚರಿಸಿ ಉಪಶವನ್ನು ಶ್ರೇಣ್ಯಾರೋಹಣಮಾಡಿ ಪ್ರಾಯೋಪಗಮನದಿಂದ ಶರೀರತ್ಯಾಗಮಾಡಿ ಸರ್ವಾರ್ಥ ಸಿದ್ಧಿಯಲ್ಲಿ ಅಹಮಿಂದ್ರನಾದನು. (೩೫-೪೮) ಸರ್ವಾರ್ಥಸಿದ್ಧಿಯ ವರ್ಣನೆ ಮತ್ತು ಅಲ್ಲಿಯ ಜೀವನದ ವರ್ಣನೆ. (೪೮ ವ) ಕಾಲಸ್ವರೂಪಪ್ರಮಾಣಾದಿಗಳ ವರ್ಣನೆ. (೪೯-೫೧) ಜಘನ್ಯಭೋಗಭೂಮಿಯ ಚರಮಸ್ಥಿತಿ ವರ್ಣನೆ. (೫೧ ವ-೫೭) ಆಷಾಢಪೌರ್ಣಮಾಸಿಯ ದಿವಸ ಸೂರ್ಯಚಂದ್ರಬಿಂಬಗಳು ಉದಿಸಿದವು. (೫೭ ವ-೬೭) ಹದಿನಾಲ್ಕು ಮನುಗಳ ವರ್ಣನೆ. ಹದಿನಾಲ್ಕನೆಯ ಮನುವು ನಾಭಿ ರಾಜನು. ಆತನು ಶಿಶುಗಳ ನಾಳಕರ್ತನೋಪಾಯವನ್ನು ತಿಳಿಸಿದನು. (೬೮-೭೦) ನಾಭಿರಾಜನ ವರ್ಣನೆ. (೭೧-೭೭) ಮಳೆಗಾಲದ ವರ್ಣನೆ. (೭೭ ವ-೭೮) ಮಳೆಯಿಂದ ನಾನಾತರದ ಧಾನ್ಯಗಳು ಬೆಳೆದರೂ ಅವುಗಳ ಉಪಯೋಗವು ತಿಳಿಯದೆ ಹಸಿವೆಯಿಂದ ಬಳಲುತ್ತಿದ್ದ ಜನರಿಗೆ ನಾಭಿರಾಜನು ಅವುಗಳ ಉಪ ಯೋಗವನ್ನು ಕಲಿಸಿಕೊಟ್ಟನು. (೭೯-೮೮) ನಾಭಿರಾಜನ ಪತ್ನಿ ಮರುದೇವಿಯ ಸೌಂದರ್ಯವರ್ಣನೆ.(೮೮ ವ) ಆದಂಪತಿಗಳ ಗರ್ಭದಲ್ಲಿ ತೀರ್ಥಂಕರ ಜನ್ಮವಾಗುವು ದೆಂದು ಇಂದ್ರನು ತಿಳಿದನು. (೮೯) ಕೂಡಲೆ ಆತನು ಆ ರಾಜದಂಪತಿಗಳ ಕಡೆಗೆ ಬಂದು ಅಯೋಧ್ಯಾಪುರವನ್ನು ನಿರ್ಮಿಸಿದನು. (೯೦-೧೦೭) ಅಯೋಧ್ಯೆಯ ವರ್ಣನೆ. (೧೦೭ವ- ೧೦೯) ಅಯೋಧ್ಯೆಗೆ ಬೇರೆ ಬೇರೆ ಹೆಸರುಗಳನ್ನಿಟ್ಟು ನಾಭಿ ರಾಜನಿಗೂ ಮರುದೇವಿಮಹಾದೇವಿಗೂ ಸಾಮ್ರಾಜ್ಯಾಭಿಷೇಕವನ್ನು ಇಂದ್ರನು ತಾನೇ ತನ್ನ ಕೈಯಿಂದ ಮಾಡಿದನು. ಆಗ ಸರ್ವಾರ್ಥಸಿದ್ಧೀಶನು ಅಲ್ಲಿಂದ ಭೂಮಿಗೆ ಅವತರಿಸಬೇಕೆಂದು ಬಗೆದನು.

## ಸಪ್ತಮಾಶ್ವಾಸಂ

(೧-೩) ಅಮರೇಂದ್ರನು ಪರಮನ ಚರಮಗರ್ಭಾವತರಣವನ್ನು ಅವಧಿ-ಜ್ಞಾನದಿಂದ ತಿಳಿದು ಆರು ತಿಂಗಳ ಪೂರ್ವದಲ್ಲಿಯೇ ಅಯೋಧ್ಯೆಯಲ್ಲಿ ಧನವೃಷ್ಟಿ ಕರೆವಂತೆ ಕುಬೇರನಿಗೆ ಆಜ್ಞಾಪಿಸಿದನು. (೩ ವ) ಶ್ರೀ, ಹ್ರೀ ಮೊದಲಾದ ದೇವಸ್ತ್ರೀಯರನ್ನು ಗರ್ಭಶೋಧನೆಯೇ ಮುಂತಾದ ವ್ಯಾಪಾರಗಳಿಗೆಂದು ಇಂದ್ರನು ನಿಯೋಜಿಸಿದನು. (೪-೨೬) ಸುರದೇವಿಯರು ತದಾಜ್ಞಾನುಸಾರವಾಗಿ ಜಿನಜನನಿಯ ಸೇವೆಮಾಡುತ್ತಿದ್ದರು. ಕುಬೇರನು ಭೂಮಿಯು ರತ್ನಗರ್ಭವಾಗು ವಂತೆ ರತ್ನವೃಷ್ಟಿಯನ್ನು ಮಾಡಿದನು. (೨೬ ವ-೨೭ವ) ಹೀಗಿರಲು ಒಂದು ದಿವಸ ಮರುದೇವಿಯು ಚತುರ್ಥಸ್ನಾನಾಂತರ ರಾತ್ರಿ ಪತಿಯೊಡನೆ ನಿದ್ರಿಸಿದ್ದು ನಿಶಾಂತ್ಯ

ದಲ್ಲಿ ಶುಭಸೂಚಕವಾದ ಷೋಡಶ ಸ್ವಪ್ನಗಳನ್ನು ಕಂಡಳು. ( ೨೮-೭೯ ) ಮರು-ದಿವಸ ಪ್ರಾತರ್ವಿಧಿಯನ್ನು ತೀರಿಸಿಕೊಂಡು ಆಸ್ಥಾನಕ್ಕೆ ಬಂದು ನಾಭಿರಾಜನಿಗೆ ಸ್ವಪ್ನದ ಸಂಗತಿಗಳನ್ನು ಹೇಳಲಾಗಿ, ಅದನ್ನು ಕೇಳಿ, ಅವಳ ಗರ್ಭದಲ್ಲಿ ತೀರ್ಥಂಕರನು ಜನಿಸುವನೆಂದು ತಿಳಿದನು. ( ೩೦, ೩೦ ವ ) ಸರ್ವಾರ್ಥಸಿದ್ಧೀಶ್ವರನು ಅಲ್ಲಿಂದ ಬಂದು ಮರುದೇವಿಯ ಗರ್ಭವನ್ನು ಪ್ರವೇಶಿಸಿದನು ದಿನೇದಿನೇ ಗರ್ಭವು ಬೆಳೆಯಿತು. ( ೩೧-೩೫ ) ಗರ್ಭವರ್ಣನೆ. ( ೩೫ ವ-೪೧ ) ಪ್ರಸವಕಾಲವು ಸಮೀಪಿಸಿದಾಗ ಶುಭಮುಹೂರ್ತದಲ್ಲಿ ಮರುದೇವಿಯು ತೀರ್ಥಂಕರಕುಮಾರನನ್ನು ಹೆತ್ತಳು. ಅಯೋಧ್ಯೆಯಲ್ಲಿ ಜನ್ಮೋತ್ಸವ ವರ್ಣನೆ. ( ೪೨ ) ಇಂದ್ರನು ಆಸನಕಂಪದಿಂದ ತೀರ್ಥಂಕರ ಜನ್ಮೋತ್ಸವವನ್ನು ತಿಳಿದುಕೊಂಡು ಅಲ್ಲಿಯೇ ಮೂರು ಸಲ ಬಲಗೊಂಡು ನಮಸ್ಕರಿಸಿದನು. ( ೪೨ ವ-೪೮ ) ಇಂದ್ರನು ಜನ್ಮಾಭಿಷೇಕೋತ್ಸವದಲ್ಲಿ ಉದ್ಯುಕ್ತಚಿತ್ತನಾಗಿ ಎಲ್ಲ ದೇವತೆಗಳನ್ನು ಕೂಡಿಕೊಂಡು ಐರಾವತವನ್ನೇರಿ ಅಯೋಧ್ಯೆಗೆ ಬಂದನು. ಶಚಿ-ಅದೃಶ್ಯೆಯಾಗಿ ಪ್ರಸೂತಿಗೃಹಕ್ಕೆ ಮೂರುಸಲ ಪ್ರದಕ್ಷಿಣೆಮಾಡಿ, ಒಳಗೆ ಪ್ರವೇಶಿಸಿ, ಮರುದೇವಿಗೆ ಮಾಯಾನಿದ್ರೆ, ಬರುವಂತೆ ಮಾಡಿ ಅವಳ ಹತ್ತಿರ ಒಂದು ಮಾಯಾಶಿಶುವನ್ನು ಇರಿಸಿ, ಜಿನಶಿಶುವನ್ನು ಎತ್ತಿಕೊಂಡು ಬಂದು ಇಂದ್ರನ ಕೈಯಲ್ಲಿ ಕೊಟ್ಟಳು. ( ೪೮ ವ-೫೦ ) ಇಂದ್ರನು ಜಿನಕುಮಾರನನ್ನು ತನ್ನ ತೊಡೆಯ ಮೇಲೆ ಇರಿಸಿಕೊಂಡು ಹೇಮಾಚಲಕ್ಕೆ ಹೊರಡುವಂತೆ ಸೂಚನೆಮಾಡಿದನು. ಈಶಾನೇಂದ್ರಸನತ್ಕುಮಾರಮಾಹೇಂದ್ರರು ಚವರಿಬೀಸುತ್ತಿದ್ದರು. ( ೫೧-೬೦ ) ಇಂದ್ರನು ಮೆರವಣಿಗೆಯಿಂದ ತೀರ್ಥಂಕರ ಕುಮಾರನನ್ನು ಎತ್ತಿಕೊಂಡು ಮಂದರಾಚಲಕ್ಕೆ ಬಂದನು. ( ೬೧-೭೦ ) ಮಂದರಪರ್ವತದ ವರ್ಣನೆ. ( ೭೧-೭೬ ವ ) ದೇವನಿಕಾಯದೊಡನೆ ಹೋಗಿ ಪಾಂಡುಕಶಿಲಾತಲದಲ್ಲಿ ಸಿಂಹಾಸನದ ಮೇಲೆ ಜಿನಶಿಶುವನ್ನು ಕುಳ್ಳಿರಿಸಿದನು. ( ೭೭-೮೦ ) ಮಂಗಳವಾದ್ಯಗಳು ಬಾರಿಸುತ್ತಿರಲು ಜಿನಶಿಶುವನ್ನು ನಾನಾರೀತಿಯಾಗಿ ಪೂಜಿಸಿದನು. ( ೮೦ ವ-೧೦೬ ) ಕನಕಕಲಶಗಳಿಂದ ಜನ್ಮಾಭಿಷೇಕೋತ್ಸವವು ನಡೆಯಿತು. ( ೧೦೬ ವ-೧೦೭ ) ಶಚಿಯು ಜಿನಬಾಲಕನ ಮೈಮೇಲಿನ ಜಲಕಣಗಳನ್ನು ದೇವಾಂಗವಸ್ತ್ರದಿಂದ ಒರೆಸಿ, ಸುಗಂಧದ್ರವ್ಯಗಳನ್ನು ತೊಡೆದು, ತಿಲಕವಿಟ್ಟು, ನಾನಾಆಭರಣಗಳನ್ನು ತೊಡಿಸಿ, ವಸ್ತ್ರಾಲಂಕಾರಗಳಿಂದ ಅಲಂಕರಿಸಿದಳು. ಅವನನ್ನು ನೋಡುವದಕ್ಕೆ ಇಂದ್ರನಿಗೆ ಎರಡು ಕಣ್ಣು ಸಾಲದೆ ಸಹಸ್ರಲೋಚನನಾದನು. ( ೧೦೭ ವ-೧೧೦ ) ಇಂದ್ರನು ಜಿನಕುಮಾರನನ್ನು ಅಯೋಧ್ಯೆಗೆ ಕರೆದುಕೊಂಡು ಬಂದು ಸಿಂಹಾಸನದ ಮೇಲೆ ಇಟ್ಟು ಬಹಳ ಸಂತೋಷಪಟ್ಟನು. ( ೧೧೦ ವ-೧೨೯ ) ಜಾತಕರ್ಮವನ್ನು ನೆರವೇರಿಸಿ, ಇಂದ್ರನು ಆನಂದನೃತ್ಯವನ್ನಾಡಿ, ಎಲ್ಲರನ್ನೂ ಸಂತೋಷಪಡಿಸಿದನು.

## ಅಷ್ಟಮಾಶ್ವಾಸಂ

(೧-೩ ವ) ಜಿನಬಾಲಕನು ಬೆಳೆದು, ತೊದಲ್ನುಡಿ ಕಲಿತು, ಸುರರೊಡನೆ ಬಾಲಕ್ರೀಡೆಯಾಡಿ, ಬೆಳೆದು, (೪-೫) ತಾರುಣ್ಯಸಂಪನ್ನನಾದನು. (೬) ಅವನಿಗೆ ರಾಜ್ಯಲಕ್ಷ್ಮಿಯಲ್ಲಿ ಅನಾದಾರವುಂಟಾಯಿತು. (೬ ವ-೮ ( ಅದರಿಂದ ನಾಭಿರಾಜನಿಗೆ ಚಿಂತೆಯುಂಟಾಗಿ ಏನಾದರೂ ಉಪಾಯದಿಂದ ಮಗನ ಮದುವೆಮಾಡಬೇಕೆಂದು ಆಲೋಚಿಸಿದನು. (೮ ವ-೧೫) ನಾಭಿರಾಜನು ಪುತ್ರನಿಗೆ ನಾನಾರೀತಿಯಿಂದ ಬೋಧಿಸಿ ಮದುವೆಗೆ ಒಪ್ಪುವಂತೆ ಮಾಡಿದನು. (೧೫ ವ ೨೨) ಕೂಡಲೆ ಕಚ್ಛಮಹಾಕಚ್ಛರ ತಂಗಿಯರಾದ ಯಶಸ್ವತಿಸುನಂದೆಯರನ್ನು ವಧುಗಳೆಂದು ನಿಶ್ಚಯಿಸಿ ಮದುವೆಗಾಗಿ ಮಂಟಪವನ್ನುರಚಿಸಿದರು (೨೨ ವ) ಒಳ್ಳೇ ಸಂಭ್ರಮದಿಂದ ಮದುವೆಯಾಯಿತು. (೨೩-೨೫) ಆದಿನಾಥನು ತನ್ನ ಹೆಂಡಂದಿರೊಡನೆ ಸಂಸಾರಸುಖವನ್ನು ಅನುಭವಿಸುತ್ತಿದ್ದನು. (೨೫ ವ ೨೯) ಯಶಸ್ವತಿಮಹಾದೇವಿಯ ಸ್ವಪ್ನದರ್ಶನ. ಅದರ ಅರ್ಥ ಅದರಿಂದ ಅವಳಿಗೆ ಆನಂದವುಂಟಾಯಿತು. (೨೯—೩೦) ಯಶಸ್ವತಿಮಹಾದೇವಿಯ ಗರ್ಭಧಾರಣೆ. (೩೧—೩೩ ವ) ಬಯಕೆಯವರ್ಣನೆ. (೩೪—೩೫) ನವಮಾಸತುಂಬಿ ಶುಭಮುಹೂರ್ತದಲ್ಲಿ ಯಶಸ್ವತೀಮಹಾದೇವಿಯು ಪುತ್ರರತ್ನವನ್ನು ಹೆತ್ತಳು. (೩೫ ವ-೩೬ ವ) ಜನ್ಮೋತ್ಸವ ವರ್ಣನೆ. (೩೭) ಆ ಕುಮಾರನಿಗೆ ಭರತನೆಂದು ಹೆಸರಿಟ್ಟರು. (೩೭ ವ-೪೪) ಭರತನ ಬಾಲಲೀಲೆ. (೪೪ ವ -೪೫) ಯಶಸ್ವತೀಮಹಾದೇವಿಯು ನೂರುಜನ ಪುತ್ರರನ್ನೂ ಬ್ರಹ್ಮಿ ಎಂಬ ಮಗಳನ್ನೂ ಹೆತ್ತು ಅಗ್ರಮಹಿಷಿಯಾದಳು. (೪೫ ವ) ಸುನಂದಾದೇವಿಯು ಗರ್ಭಿಣಿಯಾದಳು. (೪೬-೪೮) ಗರ್ಭವರ್ಣನೆ. (೪೯) ಸಕಾಲದಲ್ಲಿ ಗಂಡುಮಗನನ್ನು ಹೆತ್ತಳು. (೫೦-೫೦ ವ) ಜನ್ಮೋತ್ಸವದಲ್ಲಿ ಆ ಮಗುವಿಗೆ ಬಾಹುಬಲಿಯೆಂದು ಹೆಸರಿಟ್ಟರು. (೫೧-೫೩) ಅವನ ಬಾಲಲೀಲೆ. (೫೩ ವ-೫೪) ಕೆಲವು ಕಾಲದ ಮೇಲೆ ಅವನಿಗೆ ಸೌಂದರಿಯೆಂಬ ತಂಗಿ ಹುಟ್ಟಿದಳು. (೫೪ ವ-೫೫) ಆದಿನಾಥನು ಮಕ್ಕಳನ್ನು ನೋಡಿ ಸಂತೋಷಪಟ್ಟು ಅವರವರಿಗೆ ಉಚಿತವಾದ ಆಭರಣಗಳನ್ನು ಕಲ್ಪಿಸಿಕೊಟ್ಟನು. (೫೫ ವ-೫೬) ಒಂದು ದಿವಸ ಆದಿನಾಥನು ಮಕ್ಕಳಿಗೆ ವಿದ್ಯೆಗಳನ್ನು ಕಲಿಸಬೇಕೆಂದು ಆಲೋಚಿಸುತ್ತಿದ್ದ ಕಾಲದಲ್ಲಿ ಪುತ್ರಿಯರಿಬ್ಬರೂ ಬಂದು ನಮಸ್ಕರಿಸಿದರು. (೫೭-೬೦) ಬ್ರಹ್ಮಿಗೆ ಸಿದ್ಧಂನಮಃ ಎಂದು ಲಿಪಿಗಳನ್ನು ದಕ್ಷಿಣಹಸ್ತದಿಂದ ಉಪದೇಶಿಸಿದನು. ಸೌಂದರಿಗೆ ಗಣಿತವನ್ನು ಎಡಗೈಯಿಂದ ಬರೆದು ತೋರಿಸಿ ಕಲಿಸಿದನು. (೬೦ ವ) ಮತ್ತೆ ಸೌಂದರಿಗೆ ಸ್ವಯಂಭುವಾಭಿಧಾನಪದವಿದ್ಯಾ-ಛಂದೋವಿಚಿತ್ಯಲಂಕಾರ ಇವೇ ಮೊದಲಾದ ಸಮಸ್ತವಿದ್ಯೆಗಳನ್ನು ಕಲಿಸಿ ಇಬ್ಬರನ್ನೂ ವಿದ್ಯಾಪರಿಪೂರ್ಣೆಯರನ್ನು ಮಾಡಿದನು. ಭರತನಿಗೆ ಭರತಶಾಸ್ತ್ರ

ಅರ್ಥಶಾಸ್ತ್ರವನ್ನೂ ವೃಷಭಸೇನನಿಗೆ ಗಾಂಧರ್ವಶಾಸ್ತ್ರವನ್ನೂ ಬಾಹುಬಲಿಗೆ ಕಾಮತಂತ್ರ ಸಾಮುದ್ರಿಕಾದಿ ಶಾಸ್ತ್ರಗಳನ್ನೂ ಕಲಿಸಿದನು. (೬೧) ಹೀಗೆ ಆದಿನಾಥನಿಗೆ ಇಪ್ಪತ್ತುಲಕ್ಷ ಪೂರ್ವಕಾಲಗಳು ಕಳೆದುಹೋದುವು (೬೧ವ–೬೩ವ) ಆ ಸಮಯದಲ್ಲಿ ಜನರು ಕ್ಷಾಮಡಾಮರಗಳಿಂದ ಮತ್ತು ಆಧಿವ್ಯಾಧಿಗಳಿಂದ ಸಂಕಟಪಡುತ್ತ ವೃಷಭನಾಥನ ಬಳಿಗೆ ಬಂದು ಶರಣಾಗತರಾದರು. ಅವನು ಅವರಿಗೆ ಅಭಯವನ್ನು ಕೊಟ್ಟು ಇಂದ್ರನನ್ನು ಬರಿಸಿಕೊಂಡು ಕ್ಷೇತ್ರವಿಭಾಗ ಗಳನ್ನೂ ದೇಶವಿಭಾಗಗಳನ್ನೂ ಪಶುಗಳನ್ನು ವಶಪಡಿಸಿಕೊಳ್ಳುವ ಉಪಾಯುಗ ಳನ್ನೂ ಉಪಯೋಗಕರವಾದ ಅನೇಕ ವಿದ್ಯೆಗಳನ್ನೂ ಕಲಿಸಿದನು. (೬) ಗುರು ವಿನ ಅಪ್ಪಣೆಯ ಮೇರೆಗೆ ಇಂದ್ರನು ಹಲವು ಪುರಗಳನ್ನು ರಚಿಸಲು ಆತನಿಗೆ ಪುರಂದರನೆಂದು ಹೆಸರುಂಟಾಯಿತು (೬೪ ವ) ಆದಿಬ್ರಹ್ಮನು ಆ ತರುವಾಯ ಅಸಿಮಷಿಕೃಷಿವಾಣಿಜ್ಯಶಿಲ್ಪಗಳನ್ನೂ ಕಲ್ಪಿಸಿ, ಕ್ಷತ್ರಿಯರಿಗೆ ಶಸ್ತ್ರಕರ್ಮವನ್ನೂ ವಣಿಗ್ವರ್ಗಕ್ಕೆ ಪಶುಪಾಲ್ಯಕೃಷಿಪಣ್ಯಕರ್ಮಗಳನ್ನೂ ಶೂದ್ರರಿಗೆ ಶುಶ್ರೂಷಾನಿ ಯೋಗವನ್ನೂ ಉಪದೇಶಿಸಿ ವರ್ಣಸಂಕರವಾಗದಂತೆ ನಿಯೋಜಿಸಿದನು.(೬೫-೬೬) ಇದು ಭಗವತ್ಕೃತವಾದುದರಿಂದ ಪುರಾಣವಿದರು ಇದನ್ನು ಕೃತಯುಗವೆಂದರು. (೬೬ವ–೭೦) ಇಂದ್ರಾದಿಗಳು ಆದಿಬ್ರಹ್ಮನಿಗೆ ರಾಜ್ಯಾಭಿಷೇಕ ಮಾಡಿದರು.(೭೦ವ) ಆದಿಬ್ರಹ್ಮನು ತಾನು ಹಿಂದೆ ಪಡೆದ ವರ್ಣತ್ರಯಕ್ಕೆ ಮತ್ತು ಮುಂದೆ ಭರತನಿಂದ ಉಂಟಾಗುವ ವಿಪ್ರವರ್ಣಕ್ಕೆ ಯಥೋಚಿತ ವೃತ್ತಿಗಳನ್ನು ತಿಳಿಸಬೇಕೆಂದು ಬಗೆದು, (೭೩-೭೩ ವ) ವಿಪ್ರ. ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಈ ಹೆಸರುಗಳು ತಮ್ಮ ತಮ್ಮ ವೃತ್ತಿಗಳಿಂದ ಉಂಟಾದುವೆಂದು ತಿಳಿಸಿ ದ್ವಿಜನ್ಮಕ್ಕೆ ಷಟ್ಕರ್ಮಗಳನ್ನೂ ಕ್ಷತ್ರಿಯರಿಗೆ ಪ್ರಜಾಪಾಲನವನ್ನೂ ವಣಿಗ್ವಂಶಕ್ಕೆ ಅರ್ಥಪ್ರವರ್ತನವನ್ನೂ ಶೂದ್ರಾನ್ವಯಕ್ಕೆ ಶುಶ್ರೂಷಾಕರ್ಮವನ್ನೂ ಕಲ್ಪಿಸಿದನು. (೭೪–೭೬) ಇದನ್ನು ತಪ್ಪಿದವರಿಗೆ ಶಿಕ್ಷೆಯನ್ನು ವಿಧಿಸಿದನು. ದಂಡಧರರಿಲ್ಲದಿದ್ದರೆ ಜನರು ಸ್ವಚ್ಛಂದ-ರಾಗಿ ನಡೆಯುವರೆಂದು ಅವರನ್ನು ನಿಯಮಿಸುವುದಕ್ಕಾಗಿ ಕುರುವಂಶಹರಿವಂಶ ನಾಥವಂಶಉಗ್ರವಂಶ ಎಂಬ ರಾಜವಂಶಗಳನ್ನು ನಿಯಮಿಸಿದನು. ಹೀಗೆ ಅರವತ್ತುಮೂರುಲಕ್ಷ ಪುಬ್ಬಕಾಲ ರಾಜ್ಯವಾಳಿ ಕರ್ಮಭೂಮಿಪ್ರಸರಕ್ಕೆ ಆದಿಯಾಗಿ ಅಯೋಧ್ಯೆಯಲ್ಲಿ ಸಿಂಹಾಸನಾಸೀನನಾಗಿದ್ದನು.

## ನವಮಾಶ್ವಾಸಂ

(೧-೮) ಆದಿಬ್ರಹ್ಮನು ಒಂದು ದಿವಸ ಓಲಗದಲ್ಲಿ ಸಿಂಹಾಸನಾಸೀನನಾಗಿದ್ದನು. (೮ವ)ಆದಿದೇವನ ಪರಿನಿಷ್ಕ್ರಮಣವು ಸಮೀಪಿಸಿತೆಂದು ಇಂದ್ರನು ಅವಧಿಬೋಧದಿಂದ ತಿಳಿದು ಸಂಗೀತಪ್ರಸಂಗದಿಂದ ಓಲಗಿಸಲೆಂದು ಅಲ್ಲಿಗೆ ಬಂದನು. (೯-೧೫) ಅಲ್ಲಿ ಆದಿನಾಥನ ಅನುಮತಿಯನ್ನು ಪಡೆದು ಸುರವಧೂಗೀತವನ್ನು ಆರಂಭಿಸಿದನು. (೧೬-೪೦) ನೀಲಾಂಜನೆಯ ನಾಟ್ಯವು ಓಲಗದಲ್ಲಿ ಎಲ್ಲರಿಗೂ ಆನಂದವನ್ನುಂಟುಮಾಡುತ್ತಿದ್ದಿತು. (೪೧) ಆವಳು ನಾಟ್ಯವಾಡುತ್ತಿರುವಾಗಲೇ ಆಯುರವಸಾನನಾಗಲು ಅವಳು ಅದೃಶ್ಯೆಯಾದಳು. (೪೨-೪೩) ಅದನ್ನು ಕಂಡು ರಸಭಂಗವಾಗದಂತೆ, ಯಾರಿಗೂ ತಿಳಿಯದಂತೆ ಇಂದ್ರನು ಪಾತ್ರಾಂತರವನ್ನು ನಿಯೋಜಿಸಿದನು. ಆದರೂ ಅವನು ಅದನ್ನು ತಿಳಿದು ದೇಹಾನಿತ್ಯತೆಗೆ ಆಶ್ಚರ್ಯಪಟ್ಟನು.(೪೪-೬೦) ವೈರಾಗ್ಯಪರನಾಗಿ ಸಂಸಾರತ್ಯಾಗವನ್ನು ನಿಶ್ಚಯಿಸಿದನು. (೬೦ ವ-೬೩) ಅದೇ ಸಮಯದಲ್ಲಿ ಲೋಕಾಂತಿಕದೇವರು ಬಂದು ನೀನು ಧರ್ಮವನ್ನು ವಿಶದಮಾಡಬೇಕು, ಎಂದು ಪ್ರತಿಬೋಧಿಸಿದರು. (೬೩ ವ ೬೫ವ) ಬಳಿಕ ಇಂದ್ರನು ಪರಿವಾರಸಮೇತನಾಗಿ ಬಂದು ಅಭಿಷೇಕಮಾಡಿದನು. ಆದಿನಾಥನು ಭರತನನ್ನು ಕರೆಸಿಕೊಂಡು ಅಧಿರಾಜಪಟ್ಟಗಟ್ಟಿದನು. ಬಾಹುಬಲಿಗೆ ಯುವರಾಜ ಪದವಿಯನ್ನು ಕೊಟ್ಟನು. ಅವರಿಬ್ಬರನ್ನು ಅಯೋಧ್ಯೆ ಪೌದನಪುರಗಳಲ್ಲಿ ಇರಿಸಿದನು. (೬೬-೭೨ ವ) ವೃಷಭನಾಥನು ಉಳಿದ ಅಪತ್ಯವರ್ಗಕ್ಕೆ ಭೂಮಿಯನ್ನು ಹಂಚಿಕೊಟ್ಟನು. ಆಮೇಲೆ ಎಲ್ಲರ ಅಪ್ಪಣೆಪಡೆದು ಸೌಧರ್ಮೇಂದ್ರನ ಹಸ್ತವನ್ನವಲಂಬಿಸಿ ಸುದರ್ಶನವೆಂಬ ಶಿಬಿಕೆಯಲ್ಲಿ ಕುಳಿತನು. (೭೩-೭೩ವ) ಆ ಶಿಬಿಕೆಯನ್ನು ಭೂಪಾಲರು ಖೇಚರರು ಸುರಾಸುರರು ಕ್ರಮವಾಗಿ ಎತ್ತಿಕೊಂಡು ಹೋದರು. (೭೩ವ-೭೫)ಪರಮನನ್ನು ಅಮರೇಶ್ವರರು ಎತ್ತಿಕೊಂಡು ಹೋಗುವುದನ್ನು ಪ್ರಜೆಗಳು ಕಂಡು ದುಃಖಪಟ್ಟರು. (೭೬- ೭೬ ವ)ಯಶಸ್ವತೀ ಸುನಂದೆಯರು ಪಲ್ಲಕ್ಕಿಯ ಹಿಂದೆ ಅಳುತ್ತ ಹೋದರು. ಅತಃಪುರವೃದ್ಧರು ಅವರನ್ನು ಸಮಾಧಾನಪಡಿಸಿ ಹಿಂದಕ್ಕೆ ಕರೆದುಕೊಂಡು ಹೋದರು. ನಾಭಿರಾಜ ಭರತಾದಿಗಳು ಮಾತ್ರ ಸಂಗಡ ಹೋದರು. ಇಂದ್ರಾದಿಗಳು ಶಿಬಿಕೆಯನ್ನು ಹೊತ್ತುಕೊಂಡು ಅಯೋಧ್ಯೆಯ ಸಮೀಪದಲ್ಲಿರುವ ಸಿದ್ಧಾರ್ಥವನದ ಮಧ್ಯದಲ್ಲಿ ಪಾಂಡುಕಶಿಲಾತಲದ ಮೇಲೆ ಇಳಿಸಿದರು. ಅಲ್ಲಿ ಪರಮನು ಪೂರ್ವಾಭಿಮುಖನಾಗಿ ಪಲ್ಯಂಕಾಸನನಾಗಿ (೭೭-೭೯ ವ) ತನ್ನ ಕೂದಲಗಳನ್ನು ಹರಿದುಕೊಂಡನು. (೮೦, ೮೦ ವ) ಇಂದ್ರನು ಆ ಕೂದಲುಗಳನ್ನು ಸಮುದ್ರದಲ್ಲಿ ಹಾಕಿ ಪರಿನಿಷ್ಕ್ರಮಣಕಲ್ಯಾಣವನ್ನು ಮಾಡಿ ತನ್ನ ನೆಲೆಗೆ ಹೋದನು. ಆಮೇಲೆ ಭರತನು ತ್ರಿಲೋಕಗುರುಚರಣಗಳನ್ನು ಪೂಜೆಮಾಡಿ ತನ್ನ ರಾಜಧಾನಿಗೆ ಹೋದನು.

ಆದರೆ ಕಚ್ಛಮಹಾಕಚ್ಛರು ಭರತನ ಮಗನಾದ ಮರೀಚಿಯೇ ಮೊದಲಾಗಿ ನಾಲ್ಕುಸಾವಿರ ಮಕುಟಬದ್ಧರ ಮಕ್ಕಳು ಪರಮನನ್ನು ಬಿಟ್ಟು ಹೋಗಲಾರದೆ (೮೧) ಜಾತರೂಪವನ್ನು ಧರಿಸಿದರು. (೮೨-೮೮) ಪರಮನು ಘೋರತಪವನ್ನು ಆಚರಿಸುತ್ತಿರಲು (೮೮-೯೨) ಅವರು ಹಸಿವೆನೀರಡಿಕೆಗಳಾದಿ ಪರೀಷಹಗಳನ್ನು ಸೈರಿಸಲಾರದೆ (೯೨ ವ-೯೩ ವ) ಬಿಟ್ಟುಹೋದರೆ ಭರತನು ಅಪಮಾನಪಡಿಸುವನೆಂದು ಅಂಜಿ ಬೇರೆಬೇರೆ ರೂಪಧಾರಿಗಳಾಗಿ, ಕೌಪೀನಭಸ್ಮ ಜಟಾಧಾರಿಗಳಾಗಿ ಅರಣ್ಯದಲ್ಲಿ ಫಲಾಸಿಗಳಾಗಿದ್ದರು. ಆಗ ಮರೀಚಯು ಪರಿಗೃಹೀತ ಪರಿವ್ರಾಜಿಕನಾಗಿ ಅಪಸಿದ್ಧಾಂತಭಾಷೆಗಳಿಂದ ಮಿಥ್ಯಾತ್ವವನ್ನು ವೃದ್ಧಿಮಾಡಿ, ಕಾಪಿಳಸಿದ್ಧಾಂತವನ್ನೂ ಯೋಗಶಾಸ್ತ್ರವನ್ನೂ ಉಪದೇಶಿಸಿ, ಲೋಕವು ಸಮ್ಯಗ್‌ಜ್ಞಾನಪರಾಙ್ಮುಖವಾಗುವಂತೆ ಮಾಡಿದನು. ಇತ್ತ ಆದಿನಾಥನು ತಪಸ್ಸಿನಲ್ಲಿಯೇ ಇದ್ದನು. (೯೪-೯೭) ತಪೋಮಹಿಮೆಯ ವರ್ಣನೆ. (೯೭ ವ-೯೯) ಆ ಸಮಯದಲ್ಲಿ ಕಚ್ಛಮಹಾಕಚ್ಛರ ಮಕ್ಕಳಾದ ನಮಿವಿನಮಿಗಳು ಬಂದು ಆದಿನಾಥನಿಗೆ ವಂದಿಸಿ ತಮಗೂ ಭೂಭಾಗವನ್ನು ಕೊಡಿಸಬೇಕೆಂದು ಕಾಡಿ ಯೋಗ ವ್ಯಾಘಾತವನ್ನು ಮಾಡಿದರು. (೯೯ ವ) ಅದನ್ನು ತಿಳಿದು ಧರಣೇಂದ್ರನು ಅಲ್ಲಿಗೆ ಬಂದನು. (೧೦೦-೧೦೪) ಬಂಗಾರದ ಪರ್ವತವೇ ನಿಂತಂತೆ ಇರುವ ಆದಿದೇವನನ್ನು ಕಂಡು ಮೂರುಸಲ ಬಲಗೊಂಡು ನಮಸ್ಕರಿಸಿ ನಮಿವಿನಮಿಗಳನ್ನು ಕುರಿತು ತಪೋವಿಘ್ನಮಾಡಕೂಡದೆಂದು ಅನೇಕರೀತಿಯಾಗಿ ಹೇಳಿದನು. (೧೦೫-೧೦೯) ಅವರು ಅವನ ಮಾತನ್ನು ಕೇಳದೆ ಅವನನ್ನೇ ಧಿಕ್ಕರಿಸಹತ್ತಿದರು. (೧೧೦-೧೧೧) ಆಗ ಅವನು ನಿಜರೂಪವನ್ನು ಅವರಿಗೆ ತೋರಿಸಿ ಭೋಧಿಸಿದನು. ಆದರೂ ಅವರು ಕೇಳಲಿಲ್ಲ. (೧೧೨-೧೧೨ ವ) ಅದಕ್ಕೆ ಉಪಾಯವೆಂದು ವಿಕ್ರಿಯೆಯಿಂದ ಪರಮನೇ ಹೇಳುವ ಹಾಗೆ ತಾನು ಹೇಳಿ ಅದಕ್ಕೆ ಅವರು ಒಪ್ಪುವಂತೆ ಮಾಡಿ ಅವರನ್ನು. ತನ್ನ ವಿಮಾನದಲ್ಲಿ ಕುಳ್ಳಿಸಿಕೊಂಡು ರಜತಾಚಲಕ್ಕೆ ಕರೆದುಕೊಂಡು ಹೋದನು. (೧೧೩-೧೨೧) ರಜತಾಚಲವರ್ಣನೆ. (೧೨೧ ವ-೧೨೨ ವ) ಅಲ್ಲಿ ಅವರನ್ನು ಬಿಟ್ಟು ತನ್ನ ಲೋಕಕ್ಕೆ ಹೋದನು. (೧೨೩-೧೨೪ ವ) ಇತ್ತ ಭಟ್ಟಾರಕರು ಆರುತಿಂಗಳು ತಪಶ್ಚರ್ಯವನ್ನು ಆಚರಿಸಿ ಚರ್ಯಾಮಾರ್ಗದಲ್ಲಿ ನಡೆದು, ಜನಪದಗಳಲ್ಲಿ ಸಂಚರಿಸಿ, ಆರುತಿಂಗಳು ಕಳೆದರು. (೧೨೫-೧೨೯) ಅವರ ವಿಹಾರದಲ್ಲಿ ಜಡಮತಿಗಳ ಆಚರಣೆ. (೧೨೯ ವ-೧೩೩) ಹೀಗೆ ಒಂದು ವರ್ಷ ಪೂರ್ಣವಾದ ಮೇಲೆ ಅವರು ವಿಹಾರಮಾಡುತ್ತ ಕುರುಜಾಂಗಣದ ಹಸ್ತಿನಾಪುರಕ್ಕೆ ಬಂದರು. ಆ ಪುರದ ಶ್ರೇಯಾಂಸರಾಜಪುತ್ರನು ಅವರ ಆಗಮನವನ್ನು ಸ್ವಪ್ನದಿಂದ ತಿಳಿದುಕೊಂಡು ಇದಿರುಗೊಂಡು ನಿಲ್ಲಿಸಿದನು.

## ದಶಮಾಶ್ವಾಸಂ

(೧, ೧ ವ) ಶ್ರೇಯಾಂಸನೂ ಅವರ ಅಣ್ಣ ಸೋಮಪ್ರಭನೂ ಶ್ರದ್ಧಾದಿ ಸಪ್ತಗುಣಸಂಪನ್ನರಾಗಿ ಭಕ್ತಿಯಿಂದ ಅವರ ಪಾಣಿಪುಟದಲ್ಲಿ ಕಬ್ಬಿನ ರಸವನ್ನು ಎರೆದರು. (೨–೪) ಕೂಡಲೇ ಪಂಚಾಶ್ಚರ್ಯಗಳಾದುವು. (೪ ವ–೬ ವ) ಆ ಕಬ್ಬಿನ ರಸದಿಂದ ತಮ್ಮ ಕಾಯಸ್ಥಿತಿಯನ್ನು ನಿರ್ವಹಿಸಿ ಪುರುಪರಮೇಶ್ವರರು ಆ ರಾಜಪುತ್ರರನ್ನು ಆಶೀರ್ವದಿಸಿ ಹೊರಟುಹೋದರು (೭–೭ ವ) ಈ ಸಮಾಚಾರವನ್ನು ಭರತೇಶ್ವರಾದಿಯರು ಕೇಳಿ ಅಲ್ಲಿಗೆ ಹೋಗಿ ಆ ರಾಜಪುತ್ರನೇ (ಶ್ರೇಯಾಂಸನೇ) ಧನ್ಯನೆಂದು ಅವನನ್ನು ಪೂಜಿಸಿದರು. (೮ ವ-೧೩) ಅವನು ದಾನದ ಮಹಿಮೆಯನ್ನು ವಿಸ್ತರಿಸಿದನು. (೧೩ ವ–೧೪ ವ) ಇತ್ತ ವೃಷಭಯೋಗೀಂದ್ರನು ಜಿನಕಲ್ಪವೆಂಬ ಆಚರಣವನ್ನು ಕೈಕೊಂಡು ಯೋಗಯೋಗ್ಯ ಸ್ಥಳಗಳಲ್ಲಿ ವಿಹರಿಸುತ್ತ ಸಹಸ್ರವರ್ಷಗಳನ್ನು ಕಳೆದು ಪುರಿಮತಾಳಪುರದ ಬಹಿರುದ್ಯಾನದ ವಟವಿಟಪಿಯ ಕೆಳಗೆ ಪೂರ್ವಾಭಿಮುಖರಾಗಿ ಪಲ್ಯಂಕಾಸನರಾಗಿ ತಪಸ್ಸನ್ನು ಕೈಕೊಂಡರು. ಆ ತಪಸ್ಸಿನಲ್ಲಿ ಚತುರ್ದಶಗುಣಸ್ಥಾನಗಳ ವರ್ಣನೆ. (೧೫-೧೭) ಘಾತಿಕರ್ಮಗಳನ್ನು ಕೆಡಿಸಿ ಅನಂತಚತುಷ್ಟಯ ವಿಲಾಸಿಯಾದ ಋಷಭಯತಿಯು ಕೈವಲ್ಯಲಕ್ಷ್ಮಿಯನ್ನು ಪಡೆದನು. ಫಾಲ್ಗುಣ ಬಹುಳ ಏಕಾದಶಿಯ ದಿವಸ ಉತ್ತರಾಷಾಢಾನಕ್ಷತ್ರದಲ್ಲಿ ಕೇವಲಜ್ಞಾನೋದಯವಾಯಿತು. (೧೮–೨೦) ಆಗ ಸೌಧರ್ಮೇಂದ್ರನು ಇಂದ್ರಾಣಿಯೊಡನೆ ಅಲ್ಲಿಗೆ ಬಂದನು. (೨೧–೨೨ ವ) ಇಂದ್ರನ ಅಪ್ಪಣೆಯ ಮೇರೆಗೆ ಧನದನು ರಚಿಸಿದ ಸಮವಸರಣವನ್ನು ಅವನು ನೋಡಿದನು. (೨೩–೪೫) ಸಮವಸರಣದ ವರ್ಣನೆ. (೪೫ ವ) ಸಮವಸರಣವನ್ನು ಹೀಗೆ ನೋಡಿ ಅದರಲ್ಲಿದ್ದ ಗಂಧಕುಟಿಯನ್ನು ಮೂರುಸಲ ಬಲಗೊಂಡು ನಮಸ್ಕರಿಸಿದನು. (೪೬–೪೭) ಅದನ್ನು ಪೂಜಿಸಿದನು. (೪೭ ವ) ಆಗ ಪುರಿಮತಾಳಪುರದ ಅಧೀಶ್ವರನು ಭರತನ ತಮ್ಮ ವೃಷಭಸೇನಕುಮಾರನು ಬಂದು ವೃಷಭೇಶ್ವರನನ್ನು ಪೂಜಿಸಿ (೪೮, ೪೮ ವ) ದೀಕ್ಷೆವಹಿಸಿ ಪ್ರಥಮ ಗಣಧರನಾದನು. (೪೯) ಅದೇ ಸಮಯದಲ್ಲಿ ಪುರೋಹಿತನು ಬಂದು ಪುರುದೇವನ ಕೈವಲ್ಯ ಪ್ರಾಪ್ತಿಯನ್ನು ಅರುಹಿದನು. ಆಯುಧಾಧ್ಯಕ್ಷನು ಬಂದು ಆಯುಧಾಗಾರದಲ್ಲಿ ಚಕ್ರೋದ್ಭವವನ್ನರುಹಿದನು. ವೃದ್ಧ ಕಂಚುಕಿಗಳು ಬಂದು ಪುತ್ರೋತ್ಪತ್ತಿಯನ್ನು ಅರುಹಿದರು. (೫೦–೫೨ ವ) ಈ ಮೂರೂ ಒಸಗೆಗಳಲ್ಲಿ ಧರ್ಮವೇ ಮುಖ್ಯವೆಂದು ಅರ್ಹತ್ಪದದರ್ಶನಕ್ಕೆ ಹೊರಟನು. ಪರಿಜನರನ್ನು ಕೂಡಿಕೊಂಡು ಬಂದು ಪ್ರಥಮದ್ವಿತೀಯತೃತೀಯಪೀಠಗಳನ್ನು ಅನೇಕಾರ್ಚನೆಗಳಿಂದ ಅರ್ಚಿಸಿ ಮೂರುಸಲ ಪ್ರದಕ್ಷಿಣೆ ಹಾಕಿ ಅರ್ಹಂತಪರಮೇಶ್ವರನಿಗೆ ಅಭಿಮುಖನಾಗಿ ನಿಂತು, (೫೩–೬೧) ತೀರ್ಥಂಕರರ ಸ್ತುತಿ ಮಾಡಿದನು. (೬೧ ವ-೬೨)

ಉಚಿತಸ್ಥಾನದಲ್ಲಿ ಕುಳಿತುಕೊಂಡು ಭರತನು ಅಖಿಲವಸ್ತುಸ್ಥಿತಿಯನ್ನು ಬೆಸಗೊಂಡನು. (೬೩) ಪರಮನ ಮುಖದಿಂದ ದಿವ್ಯಧ್ವನಿ ಹೊರಟಿತು. (೬೩ ವ) ಆ ದಿವ್ಯಧ್ವನಿಯಿಂದ ತತ್ವಾರ್ಥವನ್ನು ಸಂಕ್ಷೇಪವಾಗಿ ವಿವರಿಸಿದನು. (೬೪–೬೫) ಎಲ್ಲರೂ ಧರ್ಮಾಮೃತವನ್ನು ಕೇಳಿ ತಣಿದರು. ಭರತೇಶ್ವರನು ಊರ್ಜಿತಪುಣ್ಯನಾಗಿ ಶೋಭಿಸುತ್ತಿದ್ದನು. (೬೫ ವ) ಧರ್ಮಾಮೃತವನ್ನು ಕೇಳಿ ಅನೇಕರು ಗಣಧರರೂ ಪರಿವ್ರಾಜಿಕೆಯರೂ ಆದರು. ಭರತೇಶ್ವರನೂ ಬಾಹುಬಲಿಕುಮಾರನೂ ಜಿನೇಶ್ವರನ ಪಾದಪದ್ಮಗಳಿಗೆರಗಿ ತಮ್ಮ ತಮ್ಮ ರಾಜಧಾನಿಗಳಿಗೆ ಹೋದರು. ಸೌಧರ್ಮೇಂದ್ರನು ಭಗವದ್ ವಿಹಾರವನ್ನು ಅವಧಿಯಿಂದ ಅರಿತುಕೊಂಡು, (೬೬–೬೭) ವಿಹಾರವನ್ನು ಆರಂಭಿಸಬೇಕೆಂದು ಬಿನ್ನಹಮಾಡಿಕೊಂಡನು. (೬೭ ವ–೬೯) ಸಮವಸರಣವು ಅಂತರಿಕ್ಷದಲ್ಲಿ ಸಂಚರಿಸುತ್ತ ಕಾಶ್ಮೀರಾದಿದೇಶಗಳನ್ನೆಲ್ಲ ಸಂಚರಿಸಿ ಬಂದು ಕೈಲಾಸದಲ್ಲಿ ನಿಂತಿತು.

---

## ಏಕಾದಶಾಶ್ವಾಸಂ,

(೧–೫) ಆಬಳಿಕ ಭರತನು ಚಕ್ರರತ್ನವನ್ನೂ ಅದರ ಕೂಡ ಜನಿಸಿದ ಇತರ ಜೀವಾಜೀವರತ್ನಗಳನ್ನೂ ಪೂಜಿಸಿ ತನ್ನ ಮಗನ ಜನ್ಮೋತ್ಸವವನ್ನು ನೆರವೇರಿಸಿದನು (೫ ವ–೯) ಆ ವೇಳೆಗೆ ಶರತ್ಸಮಯವು ಬಂದಿತು. ಶರತ್ಕಾಲದ ವರ್ಣನೆ. (೯ ವ–೧೦) ದಿಗ್ವಿಜಯ ಸಮಯವು ಪ್ರಾಪ್ತವಾಯಿತೆಂದು ಆದಕ್ಕೆ ಸೇನೆ ಸಿದ್ಧವಾಗುವಂತೆ ಪ್ರಸ್ಥಾನಭೇರಿಯನ್ನು ಹೊಯ್ಸಿದನು. (೧೦ ವ–೧೫ ವ) ಜ್ಯೋತಿಷಿಗಳು ಸೂಚಿಸಿದ ಶುಭಮುಹೂರ್ತದಲ್ಲಿ ಬಂದು ನಿಂತ ರಥದಲ್ಲಿ ಕುಳಿತುಕೊಂಡು ಹೊರಟನು. (೧೬–೨೬) ಬೀದಿಯಲ್ಲಿ ಸೇನೆಸಹಿತವಾಗಿ ಹೋಗುತ್ತಿರುವಾಗ ಪುರಾಂಗನೆಯರಿಗೆ ನೇತ್ರಾನಂದವನ್ನುಂಟು ಮಾಡುತ್ತ ನಡೆದು ಊರ ಹೊರಗೆ ಕಾದಿದ್ದ ಸೈನ್ಯವನ್ನೂ ರಾಜರನ್ನೂ ನೋಡಿ ತನ್ನ ಶಿಬಿರವನ್ನು ಪ್ರವೇಶಿಸಿದನು. (೨೬ ವ–೨೭) ಅಲ್ಲಿ ಭೋಜನಮಾಡಿ ವಿಶ್ರಮಿಸಿಕೊಂಡನು. (೨೮ ವ–೨೯) ಮರುದಿನ ಮಂಗಳವಾದ್ಯಗಳು ಬಾರಿಸುತ್ತಿರಲು ಪೂರ್ವಾಭಿಮುಖನಾಗಿ ಸೈನ್ಯಸಮೇತವಾಗಿ ಹೊರಟನು. (೨೯ ವ–೩೮) ಚತುರಂಗಸೈನ್ಯವು ಆತನ ಸಂಗಡ ಹೊರಟಿತು. (೩೮–೪೭) ಆ ಸೈನ್ಯದ ಹಿಂದಿನಿಂದ ಪರಿವಾರಸ್ತ್ರೀಯರೂ ಅಂತಃಪುರಸ್ತ್ರೀಯರೂ ಬಂದರು. (೪೮–೫೬) ಪ್ರಯಾಣ ಮಾಡುತ್ತ ಶರತ್ಕಾಲದ ಬಿಸಿಲಿನ ತಾಪದಿಂದ ಎಲ್ಲರೂ ಬಳಲುತ್ತ ಗಂಗಾತೀರಕ್ಕೆ ಬಂದರು. (೫೭–೫೯) ಆ ನದಿಯ ಸೌಂದರ್ಯವರ್ಣನೆ. (೬೦–೬೯) ಆ ನದಿಯ ದಂಡೆಯ ಮೇಲಿನ ಸೌಂದರ್ಯವನ್ನು ನೋಡಿ ಅಲ್ಲಿ ಬೀಡುಬಿಟ್ಟನು. (೭೦–೮೨) ಅಲ್ಲಿ ಸ್ತ್ರೀಯರು ಲತಾಗೃಹಗಳಲ್ಲಿ ವಿಶ್ರಮಿಸಿಕೊಂಡು ದಣಿವನ್ನು ಆರಿಸಿಕೊಂಡರು. (೮೩–೧೩೭) ಅವರು ವನದ ಸೌಂದರ್ಯವನ್ನು ನೋಡುತ್ತ ವನವಿಹಾರ ಮಾಡಿದರು. (೧೩೮–೧೫೩) ಜಲಕೇಳಿಯ ವರ್ಣನೆ.

---

## ದ್ವಾದಶಾಶ್ವಾಸಂ

(೧-೨) ಸೂರ್ಯಾಸ್ತವರ್ಣನೆ. (೨ ವ-೪) ಆಗ ಸಂಧ್ಯಾಸಮಯೋಚಿತವಾದ ಜಿನೇಂದ್ರವಂದನೆ. ಸಂಧ್ಯಾರಾಗ ವರ್ಣನೆ. (೫-೧೧) ಚಂದ್ರೋದಯವರ್ಣನೆ. (೧೨-೪೬) ಕೌಮುದೀಮಹೋತ್ಸವ. ಚಂದ್ರಿಕಾವಿಹಾರ. (೪೭-೪೮) ಭರತನು ಅಂತಃಪುರಕ್ಕೆ ತಿರುಗಿ ಬಂದು ಸುಖಶಯನಮಾಡಿದನು. (೪೯-೬೩) ಮರುದಿವಸ ಬೆಳಗಿನಲ್ಲಿ ಮಂಗಳಪಾಠಕರವದಿಂದ ಎಚ್ಚತ್ತು ಪ್ರಭಾತಕಾಲಕೃತ್ಯಗಳನ್ನು ನೆರವೇರಿಸಿ ವಿಜಯಗಜೇಂದ್ರಾರೂಢನಾಗಿ ಗಂಗಾತೀರದಲ್ಲಿ ಸೈನ್ಯದೊಡನೆ ನಡೆದನು. (೬೪-೬೮) ದಾರಿಯಲ್ಲಿ ಅಲ್ಲಲ್ಲಿಯ ರಾಜರು ತಂದುಕೊಟ್ಟ ಕಾಣಿಕೆಗಳನ್ನು ಸ್ವೀಕರಿಸುತ್ತ ನಡೆದನು. (೬೮ ವ) ಗಂಗಾದ್ವಾರವನ್ನು ತಲುಪಿ ಅಲ್ಲಿ ಬೀಡುಬಿಡಿಸಿದನು. (೬೯-೭೪) ಸಮುದ್ರವರ್ಣನೆ ಆ ಸಮುದ್ರದಂಡೆಯ ಮೇಲೆ ಮೂರು ರಾತ್ರಿ ತಂಗಿದನು. (೭೫-೮೪ ವ) ಮಾಗಧಾಮರನನ್ನು ಜಯಿಸುವದಕ್ಕೆಂದು ಸಮುದ್ರದ ಮೇಲೆ ರಥವನ್ನು ನಡೆಸಿಕೊಂಡು ಹನ್ನೆರಡು ಯೋಜನದ ವರೆಗೆ ಹೋದನು. (೮೫) ಅಲ್ಲಿ ರಥವು ಚಲಿಸದೆ ನಿಂತುಕೊಂಡಿತು. (೮೫ ವ-೯೦) ಮಾಗಧನನ್ನು ಅಲ್ಲಿಂದಲೇ ಜಯಿಸುವೆನೆಂದು ಬಿಲ್ಲಿಗೆ ಹೆದೆಯೇರಿಸಿ ಟಂಕಾರ ಮಾಡಿ ಒಂದು ಬಾಣವನ್ನು ಬತ್ತಳಿಕೆಯಿಂದ ಹೊರದೆಗೆದು ಅದಕ್ಕೊಂದು ಓಲೆಯನ್ನು ಹೊಂದಿಸಿ ಹೊಡೆದನು. (೯೧) ಅದರ ರಭಸದಿಂದ ಭೂಕಂಪವಾದಂತಾಯಿತು. (೯೨-೧೦೩) ಆ ಬಾಣವನ್ನು ನೋಡಿ ಮಾಗಧನು ಕೋಪಾವಿಷ್ಟನಾಗಿ ಶತ್ರುಸಂಹಾರಮಾಡುವೆನೆಂದು ಗರ್ಜಿಸಿದನು. ಅವನ ಮಾತುಗಳನ್ನು ಕೇಳಿ ಕುಲವೃದ್ಧಮಂತ್ರಿಗಳು ಅವನನ್ನು ಬೋಧಿಸಿದರು. (೧೦೪-೧೦೮) "ಇದು ಸಾಮಾನ್ಯಶರವಲ್ಲ. ಈ ವಿಷಯದಲ್ಲಿ ಸಾಮವೇ ಯೋಗ್ಯವು. ಭರತನು ಚಕ್ರವರ್ತಿ. ನೀನು ಆತನಿಗೆ ಶರಣಾಗತನಾಗಬೇಕು." ಎಂದು ಬುದ್ಧಿ ಹೇಳಿದರು. (೧೦೯-೧೨೯) ಅವರ ಅಭಿಪ್ರಾಯವನ್ನು ಒಪ್ಪಿಕೊಂಡು ಮಾಗಧನು ಕಾಣಿಕೆಗಳನ್ನು ತೆಗೆದುಕೊಂಡುಬಂದು ಭರತನಿಗೆ ಶರಣಾಗತನಾದನು. ಭರತನು ಅವನನ್ನು ಮನ್ನಿಸಿ ಅವನನ್ನು ತಿರುಗಿ ಕಳುಹಿಸಿ ತನ್ನ ಸಿಬಿರಕ್ಕೆ ಹೊರಟು ಬಂದು ಸೈನ್ಯವನ್ನು ಪ್ರವೇಶಿಸಿದನು. ಅಂತಃಪುರಕಾಂತೆಯರು ಸೇಸೆಯಿಕ್ಕಿದರು. ವಾರಸ್ತ್ರೀಯರು ಚಾಮರವಿಕ್ಕಿದರು.

## ತ್ರಯೋದಶಾಶ್ವಾಸಂ

(೧-೩ ವ) ಬಳಿಕ ಭರತನು ದಕ್ಷಿಣಾಭಿಮುಖನಾಗಿ ಹೊರಟು ಲವಣಜಲಧಿಮಧ್ಯದಲ್ಲಿದ್ದ ವರತನುವನ್ನು ಮಾಗಧನನ್ನು ಗೆದ್ದಂತೆ ಗೆದ್ದು ಕಾಣಿಕೆ

ಗಳನ್ನು ಸ್ವೀಕರಿಸಿದನು. (೪) ಅದರಂತೆಯೇ ಪ್ರಭಾಸಾಮರನನ್ನು ಗೆದ್ದು ಆತನ ಸರ್ವಸ್ವವನ್ನು ಕಾಣಿಕೆಯೆಂದು ಸ್ವೀಕರಿಸಿದನು. (೪ ವ- ೭) ಅಲ್ಲಿಂದ ಮುಂದೆ ಸಾಗಿ ಸಿಂಧೂ ತೀರಕ್ಕೆ ಬಂದನು. ಆಗ ವಸಂತಋತುವು ಪ್ರಾರಂಭ ವಾಗಿದ್ದಿತು. (೮–೧೦) ಮುಂದೆ ಸಾಗುತ್ತ ವಿಜಯಾರ್ಧಪರ್ವತದ ಬಳಿಗೆ ಬಂದನು. (೧೦ ವ–೧೧) ಆ ಪರ್ವತದ ವನವೇದಿಕಾಪ್ರದೇಶವನ್ನು ಸೇರಿ ಅಲ್ಲಿ ಬೀಡುಬಿಟ್ಟನು. (೧೨–೧೮ ವ) ಭರತನು ಬೀಡು ಬಿಟ್ಟದ್ದನ್ನು ಕೇಳಿ ಆ ಪರ್ವತದಲ್ಲಿದ್ದ ವಿಜಯಾರ್ಧಕುಮಾರನು ಬಂದು ಭರತನಿಗೆ ಪುಣ್ಯೋದಕಸ್ನಾನ ವನ್ನು ಮಾಡಿಸಿ ತಾನು ತಂದಿದ್ದ ಸಾರವಸ್ತುಗಳನ್ನು ಕಾಣಿಕೆಕೊಟ್ಟು ಆಜ್ಞಾ ವಿಧೇಯನಾಗಿ ಭರತನ ಅಪ್ಪಣೆಯನ್ನು ಪಡೆದು ತಿರುಗಿ ಹೋದನು. (೧೯, ೨೦) ಅಲ್ಲಿ ಚಕ್ರರತ್ನವನ್ನು ಪೂಜಿಸಿ ಉತ್ತರಾರ್ಧದ ದಿಗ್ವಿಜಯವಿಚಾರದಲ್ಲಿಯೇ ಮುಂದೆ ಹೊರಟು ವಿಜಯಾರ್ಧದ ವೇದಿಕೆಯ ಸಮೀಪದಲ್ಲಿಯೇ ವಿಶಾಲ ಪ್ರದೇಶದಲ್ಲಿ ಬೀಡು ಬಿಟ್ಟನು. (೨೦ ವ–೨೨) ಗಂಗಾಸಿಂಧುಗಳ ಪ್ರದೇಶದಲ್ಲಿ ಇದ್ದ ಕುರುರಾಜಾದಿ ಅರಸರು ಅಲ್ಲಿಗೆ ಬಂದು ಭರತನನ್ನು ಕಾಣಿಸಿಕೊಂಡು ಉತ್ತ ರಾರ್ಧವನ್ನು ಜಯಿಸುವುದು ಚಕ್ರವರ್ತಿಗೆ ಸುಲಭವೆಂದು ಬಿನ್ನವಿಸಿದರು. (೨೩-೩೧ ವ) ಆ ಸಮಯದಲ್ಲಿ ಕೃತಮಾಳನೆಂಬ ವ್ಯಂತರಾಮರನು ಬಂದು ಅಮೂಲ್ಯವಾದ ರತ್ನಗಳನ್ನೂ ಕಾಣಿಕೆಗಳನ್ನೂ ಕೊಟ್ಟು ವಿಜಯಾರ್ಧಗುಹಾ ದ್ವಾರಪ್ರವೇಶದ ಉಪಾಯವನ್ನು ತಿಳಿಸಿ ಸನ್ಮಾನಿತನಾಗಿ ಹೋದನು. (೩೨-೪೧ ವ) ಭರತನು ಆ ಉಪಾಯವನ್ನು ಸೇನಾನಾಯಕನಿಗೆ ತಿಳಿಸಿ ತಮಿಸ್ರಗುಹೆಯ ಕವಾಟವನ್ನು ತೆರೆದು ಪಶ್ಚಿಮದ ಮ್ಲೇಚ್ಛಖಂಡವನ್ನು ವಶ ಪಡಿಸಿಕೊಳ್ಳುವಂತೆ ಆಜ್ಞಾಪಿಸಿದನು. ಆತನು ದಂಡರತ್ನವನ್ನೂ ಕತಿಪಯ ಪರಿಜನವನ್ನೂ ಸಂಗಡ ಕರೆದುಕೊಂಡು ಹೋಗಿ ದಂಡರತ್ನದಿಂದ ಗುಹಾದ್ವಾರ ವನ್ನು ಒಡೆದು ಮ್ಲೇಚ್ಛಖಂಡಕ್ಕೆ ಹೋಗಿ ಅದನ್ನು ಜಯಿಸಿ ಕೆಲ ರಾಜರನ್ನು ಸೆರೆಹಿಡಿದು ತಂದು ಚಕ್ರವರ್ತಿಯ ಮುಂದೆ ನಿಲ್ಲಿಸಿದನು. ಚಕ್ರವರ್ತಿಯು ಅವರನ್ನು ಸನ್ಮಾನಿಸಿ ಅವರವರ ದೇಶಗಳಿಗೆ ಕಳುಹಿಸಿ ಕೊಟ್ಟು ವಿಜಯೋದ್ಯೋಗದಿಂದ ಭೇರಿಯನ್ನು ಹೊಡೆಯಿಸಿದನು. (೪೨–೪೫ ವ) ಕೂಡಲೆ ಹೊರಟು ನಡೆಯುತ್ತಿರುವಾಗ ಭರತನ ಸೈನ್ಯವರ್ಣನೆ. (೫೬, ೪೬ ವ) ಸೈನ್ಯಸಹಿತವಾಗಿ ತಮಿಸ್ರಗುಹೆಯನ್ನು ಪ್ರವೇಶಿಸಿದನು. (೪೭-೫೩ ವ) ತಮಿಸ್ರ ಗುಹೆಯೊಳಗಿನ ಕತ್ತಲೆಯನ್ನು ಓಡಿಸುವುದಕ್ಕಾಗಿ ಪುರೋಹಿತನ ಅಭಿಪ್ರಾಯ ದಂತೆ ಕಾಕಿಣೀರತ್ನದಿಂದ ಗುಹೆಯ ಗೋಡೆಗಳ ಮೇಲೆ ಚಂದ್ರಾದಿತ್ಯರನ್ನು ಬರೆಯಿಸಿ ಅವರ ಬೆಳಕಿನಲ್ಲಿಯೇ ಪ್ರಯಾಣಮಾಡು_ ಉತ್ತರಗುಹಾದ್ವಾರ ದಿಂದ ಹೊರಗೆ ಬಂದು (೫೪-೫೬) ಆ ಪರ್ವತದ ಉಪಕಂಠದಲ್ಲಿ ವನದಲ್ಲಿ ಬೀಡುಬಿಟ್ಟನು. (೫೬ ವ) ಪಶ್ಚಿಮಖಂಡವನ್ನು ವಶಪಡಿಸಿಕೊಂಡು ಮಧ್ಯಮ

ಖಂಡಕ್ಕೆ ಮುತ್ತಿಗೆ ಹಾಕಿದನು. ಅಲ್ಲಿಯ ಮ್ಲೇಚ್ಛರಾಜರಾದ ಚಿಲಾತಾವರ್ತರು ಚಕ್ರವರ್ತಿಯ ಕೂಡ ಹೋರಾಟಕ್ಕೆ ನಿಂತರು. (೫೭–೬೭) ಅವರನ್ನು ಜಯಕುಮಾರನು ಜಯಿಸಿ ಚಕ್ರವರ್ತಿಗೆ ಶರಣು ಬರುವಂತೆ ಮಾಡಿದನು. (೬೭ ವ–೭೧ ವ) ಜಯಕುಮಾರನು ತನ್ನ ವಿಜಯಸೂಚಕವಾಗಿ ಮೇಘಗರ್ಜನೆಗೆ ಸಮಾನವಾಗಿ ಸಿಂಹನಾದ ಮಾಡಲು ಅವನಿಗೆ ಭರತನು ಮೇಘಸ್ವರನೆಂದು ಹೆಸರಿಟ್ಟನು. ಆ ಮೇಲೆ ಸಿಂಧುನದಿಯ ದಂಡೆಹಿಡಿದು ಹಿಮವತ್ಪರ್ವತದ ಮೇಲಿನ ಸಿಂಧುಪ್ರಪಾತಕ್ಕೆ ಬಂದನು. ಅಲ್ಲಿ ಸಿಂಧುದೇವಿಯು ಅವನನ್ನು ಸಿಂಧುಜಲದಿಂದ ಅಭಿಷೇಕಮಾಡಿದಳು. ಅಲ್ಲಿಂದ ಮುಂದೆ ನಡೆದು ಹಿಮವನ್ಮಧ್ಯಕೂಟಪ್ರದೇಶದಲ್ಲಿ ಬೀಡುಬಿಟ್ಟನು. ಅಲ್ಲಿ ಹಿಮವತ್ಕುಮಾರನು ಶರಣಾಗತನಾಗಿ ಕಾಣಿಕೆ ಕೊಟ್ಟನು. ಅಲ್ಲಿಂದ ವೃಷಭಾದ್ರಿಗೆ ಬಂದು ಅಲ್ಲಿ ದಂಡರತ್ನದಿಂದ ತನ್ನ ಪ್ರಶಸ್ತಿಯನ್ನು ಬರೆಯಿಸಿದನು. (೭೨–೭೭ ವ) ವಿಜಯಪ್ರಶಸ್ತಿಯ ಒಕ್ಕಣಿಕೆ. ಅಲ್ಲಿಗೆ ದಕ್ಷಿಣಾಭಿಮುಖನಾಗಿ ಗಂಗಾಕೂಟಕ್ಕೆ ಬಂದನು. ಅಲ್ಲಿ ಗಂಗಾದೇವಿಯು ಗಂಗೆಯ ಮಂಗಳಜಲದಿಂದ ಅಭಿಷೇಕಮಾಡಿದಳು. ಅಲ್ಲಿಂದ ದಕ್ಷಿಣಾಭಿಮುಖನಾಗಿ ಹೊರಟನು. (೭೮–೮೧) ರಜತಪರ್ವತದ ಸಮೀಪಕ್ಕೆ ಬಂದು ಅಲ್ಲಿ ಬೀಡುಬಿಟ್ಟನು. ಆ ವಿಜಯಾರ್ಧಪರ್ವತದ ಗುಹಾದ್ವಾರವನ್ನು ಮೊದಲಿನಂತೆಯೇ ತೆರೆದು ಅದರೊಳಗಿನ ಬೆಂಕಿಯು ಆರುವ ವರೆಗೆ ಪೂರ್ವದಿಕ್ಕಿನಲ್ಲಿದ್ದ ಮ್ಲೇಚ್ಛಖಂಡವನ್ನು ಸಾಧಿಸಲು ಸೇನಾಪತಿಯು ಹೋಗಲು ಆ ಪರ್ವತದ ದಕ್ಷಿಣೋತ್ತರದ ಶ್ರೇಣಿಗಳಲ್ಲಿದ್ದ ಭರತನ ಮೈದುನರಾದ ನಮಿವಿನಮಿಗಳನ್ನು ವಿದ್ಯಾಧರರಾಜನು ಕೂಡಿಕೊಂಡು ಬಂದನು. ಅವರು ಸುಭದ್ರೆಯನ್ನು ಭರತನಿಗೆ ಕೊಟ್ಟು ಮದುವೆ ಮಾಡಿದರು. ಅಷ್ಟರಲ್ಲಿ ಸೇನಾಪತಿಯು ಮ್ಲೇಚ್ಛರಾಜರನ್ನು ಗೆದ್ದು ಅವರನ್ನು ಮುಂದಿಟ್ಟುಕೊಂಡು ಬಂದನು. ಅವರು ಕಾಣಿಕೆಗಳನ್ನು ಅರ್ಪಿಸಿ ಶರಣಾಗತರಾದರು. ಅವರನ್ನು ಮನ್ನಿಸಿ ಕಳುಹಿದ ಮೇಲೆ ಗುಹೆಯೊಳಗಿನ ಬೆಂಕಿಯು ಆರಿರಲು, ಆ ಗುಹೆಯೊಳಗಿಂದ ಹೊರಗೆ ಬರುವಾಗ ಆ ಗುಹಾಕೂಟನಿವಾಸಿಯಾದ ನಾಟ್ಯಮಾಲಾಮರನು ಎದುರಿಗೆ ಬಂದು ಕಾಣಿಸಿಕೊಂಡನು. (೮೨ ವ) ಭರತನು ಹೀಗೆ ದಿಗ್ವಿಜಯ ಮಾಡಿಕೊಂಡು ಗಂಗಾನದಿಯ ದಂಡೆಹಿಡಿದು ಪಯಣ ಮಾಡುತ್ತ ಕೈಲಾಸಪರ್ವತದ ಸಮೀಪದಲ್ಲಿ ಬೀಡುಬಿಟ್ಟು ಪರಿಮಿತ ಜನರನ್ನು ಕೂಡಿಕೊಂಡು ಆ ಪರ್ವತಕ್ಕೆ ಬಂದನು. ಅಲ್ಲಿದ್ದ ಆ ವೃಷಭನಾಥನ ಆಸ್ಥಾನಮಂಟಪವನ್ನು ಪ್ರವೇಶಿಸಿ ಅದರ ನಡುವೆ ಸಿಂಹಾಸನದ ಮೇಲಿದ್ದ ಜಗತ್ತ್ರಯತಿಲಕನ ಪಾದಪದ್ಮಗಳಿಗೆ ನಮಸ್ಕರಿಸಿದನು. (೮೩–೯೨) ಆತನನ್ನು ಅನೇಕ ಸ್ತುತಿಗಳಿಂದ ಸ್ತುತಿಸಿ ಪೂಜಿಸಿದನು.

## ಚತುರ್ದಶಾಶ್ವಾಸಂ

(೧-೧ ವ) ಭರತನು ಸಮವಸರಣದಿಂದ ಹೊರಟು ನಿಜವಿಜಯಕಟಕಕ್ಕೆ ಬಂದನು. (೨) ದಿಗ್ವಿಜಯದಲ್ಲಿ ೬೦ ಸಾವಿರ ವರುಷಗಳು ಕಳೆದು ಹೋಗಲು ಅಯೋಧ್ಯಾಪುರಕ್ಕೆ ಬಂದನು. (೩-೩ ವ) ಪುರದ್ವಾರವನ್ನು ಪ್ರವೇಶ ಮಾಡುವಾಗ ಚಕ್ರರತ್ನವು ಪ್ರವೇಶಮಾಡದೆ ನಿಂತುಬಿಟ್ಟಿತು. (೪-೯) ಅದಕ್ಕೆ ಭರತೇಶನು ಕುಪಿತನಾಗಿ ಪುರೋಹಿತನನ್ನು ಕರೆಯಿಸಿ ಚಕ್ರವು ನಿಂತುದರ ಕಾರಣವನ್ನು ಕೇಳಿದನು. (೯ವ–೧೭) ಅದಕ್ಕೆ ಪುರೋಹಿತನು ಬಾಹುಬಲಿ ಮೊದಲಾದ ಅವನ ಅನುಜರು ಮದೋದ್ಧತರಾಗಿರುವರೆಂದು ತಿಳಿಸಿದನು. (೧೮-೩೦) ಅದನ್ನು ಕೇಳಿ ಅವರನ್ನು ಜಯಿಸದಿದ್ದರೆ ತನ್ನ ದಿಗ್ವಿಜಯವೇ ವ್ಯರ್ಥವೆಂದು ಹೇಳಿ ಪುರೋಹಿತನ ಅಭಿಮತದಂತೆ ಅವರ ಕಡೆಗೆ ಶಾಸನಹರರನ್ನು ಕಳುಹಿದನು. (೩೦ವ೩೧ವ) ಭರತನ ತಮ್ಮಂದಿರು ತಮ್ಮ ಬಳಿಗೆ ಬಂದ ದೂತನ ವಾಕ್ಯವನ್ನೂ ರಾಜಾದೇಶವನ್ನೂ ಕೇಳಿ (೩೨-೩೯ ವ) ಅಣ್ಣನಿಗೆ ಅಧೀನರಾಗದೆ ರಾಜ್ಯವನ್ನು ತೊರೆದು ಸಮವಸರಣಕ್ಕೆ ಹೋಗಿ ದೀಕ್ಷೆವಹಿಸಿದರು. (೪೦-೪೩) ಭರತನು ಅದನ್ನು ಕೇಳಿ ವಿಸ್ಮಿತಚಿತ್ತನಾಗಿ ಬಾಹುಬಲಿಯನ್ನು ಸಾಮದಿಂದ ಮೆಚ್ಚಿಸಲು ನಿಶ್ಚಯಿಸಿದನು. (೪೩ ವ-೪೫) ಅವನು ಬಾಹುಬಲಿಗೆ ಓಲೆಯನ್ನು ಕಳುಹಿದನು. ದೂತನು ಅದನ್ನು ತೆಗೆದುಕೊಂಡು ಹೋಗಿ ಬಾಹುಬಲಿಗೆ ಒಪ್ಪಿಸಿದನು. ಬಾಹುಬಲಿಯ ಸೌಂದರ್ಯ. (೪೫ ವ) ಸಂಧಿವಿಗ್ರಹಿಯು ಮುದ್ರೆಯನ್ನೊಡೆದು ಅದರೊಳಗಿದ್ದ ರತ್ನಾಭರಣಗಳನ್ನು ತೋರಿಸಿ ಕೋಶಾಧ್ಯಕ್ಷನಿಗೆ ಒಪ್ಪಿಸಿದನು. (೪೬-೪೯) ಬಾಹುಬಲಿಯು ಅದನ್ನು ಓದಿಸಿ ನೋಡಿ ದೂತನ ಮುಖದಿಂದ ಭರತನ ವಿಜಯವನ್ನೆಲ್ಲ ಕೇಳಿಕೊಂಡನು. (೫೦–೬೩) "ನನ್ನ ತಮ್ಮನೆ ನನಗೆ ವಶನಾಗದಿದ್ದರೆ ಸಾಮ್ರಾಜ್ಯವೇ ನಿಷ್ಫಲವು" ಎಂದು ಯೋಚಿಸಿ ಚಕ್ರವರ್ತಿಯು ತನ್ನನ್ನು ಕಳುಹಿಸಿದುದನ್ನು ಆತನು ತಿಳುಹಿದನು. (೬೩ ವ–೮೧) ಅದನ್ನು ಕೇಳಿ ಬಾಹುಬಲಿಯು ಸಿಟ್ಟಾಗಿ ಅಣ್ಣನ ದೋಷಗಳನ್ನು ಘೋಷಿಸುತ್ತ ಯುದ್ಧದಲ್ಲಿ ತನ್ನನ್ನು ಜಯಿಸಿದರೆ ಪಾದಗಳಿಗೆರಗುವೆನೆಂದು ಹೇಳಿ ದೂತನನ್ನು ಕಳುಹಿ ಯುದ್ಧಕ್ಕೆ ಸಿದ್ಧನಾಗುತ್ತಿದ್ದನು. (೮೨-೮೯) ಇತ್ತ ಭರತನು ಬಾಹುಬಲಿಯ ಯುದ್ಧಸಿದ್ಧತೆಯನ್ನು ದೂತನ ಮುಖದಿಂದ ತಿಳಿದುಕೊಂಡು ಪೌದನಪುರಕ್ಕೆ ಬಂದು ಸೇನೆಯನ್ನು ಒಡ್ಡಿ ನಿಂತನು. (೯೦-೯೨) ಅತ್ತ ಬಾಹುಬಲಿಯು ಸಿದ್ಧನಾಗಿ ರಣಭೂಮಿಗೆ ಬಂದು ನಿಂತನು. (೯೩–೧೦೦) ಎರಡೂ ಸೈನ್ಯಗಳು ಒಂದನ್ನೊಂದು ಇದಿರಿಸಿ ಯುದ್ಧಕ್ಕೆ ಉತ್ಸುಕವಾಗಿದ್ದುವು. (೧೦೦ ವ) ಆಗ ಉಭಯಪಕ್ಷದ ಮಂತ್ರಿವರ್ಯರು ಯುದ್ಧದಲ್ಲಿ ಹಿಂಸೆಯಾಗುವುದೆಂದು ಭರತನ ಕಡೆಗೆ ಬಂದರು. (೧೦೧-೧೦೪) "ನೀವಿಬ್ಬರೂ ದೃಷ್ಟಿಯುದ್ಧ–ಜಲಯುದ್ಧ–ಮಲ್ಲ

ಯುದ್ಧಗಳಲ್ಲಿಯೇ ಜಯವನ್ನು ಒಪ್ಪಿಕೊಳ್ಳಿರಿ. ಈ ಜನಕ್ಷಯದಿಂದ ಬರುವ ಪಾಪವನ್ನು ಗಳಿಸಿಕೊಳ್ಳಬೇಡಿರಿ," ಎಂದು ಹೇಳಿ ಒಡಂಬಡಿಸಿದರು. (೧೦೪ ವ) ಆದರಂತೆ ಬಾಹುಬಲಿಯ ಕಡೆಗೆ ಹೋಗಿ ಅವನನ್ನೂ ಒಡಂಬಡಿಸಿದರು. (೧೦೫ ೧೧೭) ಆ ಮೂರೂ ಯುದ್ಧಗಳಲ್ಲಿ ಭರತನು ಸೋತುಹೋದನು. ಅದರಿಂದ ಆತನು ಕುಪಿತನಾಗಿ ತಮ್ಮನ ಮೇಲೆ ಚಕ್ರವನ್ನಿಟ್ಟನು. ಅದು ಆತನಿಗೆ ಅಪಾಯಮಾಡದೆ ಅವನ ಬಲಭುಜದ ಹತ್ತಿರ ಬಂದು ನಿಂತಿತು. (೧೧೮-೧೩೦ ವ) ಅಣ್ಣನು ಸಾಮ್ರಾಜ್ಯಮೋಹದಿಂದ ತಮ್ಮನ ಕೊಲೆಗೆ ಹೇಸಲಿಲ್ಲವೆಂದು ಬಾಹುಬಲಿಯು ರಾಜ್ಯಮೋಹವು ಘೋರಪಾಪಕ್ಕೆ ಅವಕಾಶವನ್ನು ಉಂಟು ಮಾಡುವುದೆಂದು ಭಾವಿಸಿ ವೈರಾಗ್ಯಪರನಾದನು. (೧೩೧- ವ ೧೩೩) ಭರತನು ಪಶ್ಚಾತ್ತಾಪಪಟ್ಟು ತಮ್ಮನನ್ನು ವೈರಾಗ್ಯದಿಂದ ಪರಾವೃತ್ತಗೊಳಿಸಲು ಪ್ರಯತ್ನಮಾಡಿ ನಿರಾಸೆಪಟ್ಟನು (೧೩೩ ವ) ಬಾಹುಬಲಿಯು ಭರತೇಶನನ್ನು ಕಷ್ಟದಿಂದ ಒಡಂಬಡಿಸಿ ಮಹಾಬಲಿಯೆಂಬ ತನ್ನ ಕುಮಾರನಿಗೆ ಪಟ್ಟಾಭಿಷೇಕ ಮಾಡಿ (೧೩೭-೧೪೯) ಕೈಲಾಸದಲಿದ್ದ ಪುರುಪರಮೇಶ್ವರರ ಸಮವಸರಣಕ್ಕೆ ಹೋಗಿ ಜಿನದೀಕ್ಷೆಯನ್ನು ಅಂಗೀಕರಿಸಿದನು. ಪ್ರತಿಮಾಯೋಗದಿಂದ ತಪ ಮಾಡಿ ಕೇವಲ ಜ್ಞಾನವನ್ನು ಪಡೆದು, ಆದಿನಾಥನ ಬಳಿಯಲ್ಲಿ ನಿಂತನು.

## ಪಂಚದಶಾಶ್ವಾಸಂ

(೧-೪) ಬಳಿಕ ಭರತಚಕ್ರವರ್ತಿಯು ಪಟ್ಟಾಭಿಷಿಕ್ತನಾಗಿ ರಾಜ್ಯವನ್ನು ಪರಿಪಾಲಿಸುತ್ತಿದ್ದನು. (೫-೬) ಒಮ್ಮೆ ಭರತನು ಜಿನಪೂಜೋತ್ಸವವೆಂಬ ಉತ್ಸವವನ್ನು ಮಾಡಿ ದಾನಮಾಡಬೇಕೆಂದು ಯೋಚಿಸುತ್ತಿರುವಾಗ ತಪೋಧನರು ದಾನವನ್ನು ಸ್ವೀಕರಿಸಲಿಲ್ಲ. ಅದರಿಂದ ಗೃಹಸ್ಥರಲ್ಲಿ ಯೋಗ್ಯರಾದವರನ್ನು ಕಂಡು ಹಿಡಿಯಬೇಕೆಂದು ಒಂದು ಉಪಾಯವನ್ನು ಹೂಡಿದನು. (೭-೮) ರಾಜಾಂಗಣದಲ್ಲಿ ಫಲಕುಸುಮಾದಿಗಳನ್ನು ಹರಡಿಸಿ ಜನರನ್ನು ಬರಹೇಳಿದನು. ಕೆಲವರು ಅವುಗಳನ್ನು ತುಳಿಯುತ್ತ ಬಂದರು. ಕೆಲವರು ಬರದೆ ದೂರ ನಿಂತುಬಿಟ್ಟರು. (೯-೧೧) ಹಾಗೆ ನಿಂತವರನ್ನು ರಾಜನು ಮತ್ತೊಂದು ಬಾಗಿಲಿನಿಂದ ಬರಿಸಿಕೊಂಡು ಅವರು ಹೊರಗೆ ನಿಂತುದರ ಕಾರಣವನ್ನು ಕೇಳಿದನು. ಫಲಪುಷ್ಪಗಳಲ್ಲಿ ಜೀವರಾಶಿಯಿರುವುದರಿಂದ ಅವುಗಳನ್ನು ತುಳಿಯಲಾಗದೆಂದು ಅವರು ಹೇಳಿದರು. (೧೧ ವ) ಭರತನು ಅದಕ್ಕೆ ಸಂತುಷ್ಟನಾಗಿ ಅವರು ದಾನಸನ್ಮಾನಕ್ಕೆ ಯೋಗ್ಯರೆಂದು ನಿಶ್ಚಯಿಸಿ ಏಕಾದಿಯಾಗಿ ಏಕೋತ್ತರದಶದ ವರೆಗೆ ಬ್ರಹ್ಮಸೂತ್ರಾಭಿಧಾನಯಜ್ಞೋ

ಪವೀತದಿಂದ ಅವರನ್ನು ಪವಿತ್ರಗಾತ್ರರಾಗಿ ಮಾಡಿದನು. (೧೨) ಅವರಿಗೆ ಬೇಡಿದುದನ್ನು ಕೊಟ್ಟು ಮನ್ನಿಸಿದನು. (೧೩-೧೩ ವ) ಬಳಿಕ ಅವರಿಗೆ ಆರ್ಯ ಷಟ್ಕರ್ಮಗಳನ್ನು ಉಪದೇಶಿಸಿದನು (೧೪) ಈ ಷಟ್ಕರ್ಮಗಳನ್ನು ನಡಿಸುವವರು ದ್ವಿಜರೆಂದೂ (೧೫) ನಡಿಸದವರು ಅಜ್ಞರೆಂದೂ ಹೇಳಿದನು. (೧೫ ವ-೧೬) ಅವರಿಗೆ ಗರ್ಭಾದಿನಿರ್ವಾಣಪರ್ಯಂತದ ಗರ್ಭಾನ್ವಯಕ್ರಿಯೆಗಳನ್ನೂ ಅವುಗಳ ವಿಧಿಯನ್ನೂ ಮಂತ್ರಪೂರ್ವಕ ಆಚರಿಸಬೇಕೆಂದು ಮನವಟ್ಟಾಗುವಂತೆ ಬೋಧಿಸಿದನು. (೧೬ ವ-೨೦ ಅವರು) ಮಾಡಬೇಕಾದ ಕರ್ಮಗಳನ್ನೆಲ್ಲ ಸಾಂಗವಾಗಿ ಉಪದೇಶಿಸಿದನು. (೨೧) ಅವರಿಂದೀಚೆಗೆ ದ್ವಿಜಸಾನ್ವಯವು ಪ್ರಖ್ಯಾತವಾಯಿತು. (೨೧ ವ) ಹೀಗಿರುತ್ತಿರುವಲ್ಲಿ ಒಂದು ದಿವಸ ಭರತನು ದುಃಸ್ವಪ್ನವನ್ನು ಕಂಡು ಅದರ ಫಲವನ್ನು ಕೇಳಬೇಕೆಂದು ವೃಷಭೇಶ್ವರನ ಸಮವಸರಣಕ್ಕೆ ಹೋಗಿ ವೃಷಭನಾಥನಿಗೆ ನಮಿಸಿ ಸ್ತುತಿಸಿ ದಿವ್ಯಾರ್ಚನೆಗಳಿಂದ ಪೂಜೆಮಾಡಿ ತನ್ನ ಉಚಿತ ಸ್ಥಾನದಲ್ಲಿ ಕುಳಿತುಕೊಂಡನು. (೨೨-೫೦) ಆ ದುಃಸ್ವಪ್ನವನ್ನು ಸ್ವಪ್ನಫಲಗಳನ್ನು ಕೇಳಲಾಗಿ ಅವರು ಜಿನಮತಕ್ಷಯವಾಗುವುದೇ ಮೊದಲಾದ ಅದರ ಫಲಗಳನ್ನು ವಿವರಿಸಿ ಹೇಳಿದರು. ಅದನ್ನು ತಿಳಿದುಕೊಂಡು ಅವರನ್ನು ಪೂಜಿಸಿ ಅಯೋಧ್ಯೆಗೆ ಬಂದು ದುಃಸ್ವಪ್ನದೋಷನಿವಾರಣಾರ್ಥವಾಗಿ ಕಲ್ಪವೃಕ್ಷಾದಿಮಹಾಮಹಿಮೆಗಳನ್ನೂ ಶಾಂತಿಕ್ರಿಯೆಗಳನ್ನೂ ಮಾಡಿಸುತ್ತಿದ್ದನು.

## ಷೋಡಶಾಶ್ವಾಸಂ

(೧-೨) ಭರತನು ಅನೇಕ ಚೈತ್ಯಾಲಯಗಳನ್ನು ಮಾಡಿಸಿ, ಅವುಗಳಲ್ಲಿ ಆದಿಭಟ್ಟಾರಕನ ಪ್ರತಿಕೃತಿಗಳೇ ಮೊದಲಾದ ಪಂಚರತ್ನಮಯಬಿಂಬಗಳನ್ನು ಪ್ರತಿಷ್ಠಿಸಿ ಅಭಿಷೇಕಮಾಡಿ ದಿವ್ಯಾರ್ಚನೆಗಳಿಂದ ಅರ್ಚಿಸಿದನು. (೩-೧೦) ಆ ಜಿನೇಂದ್ರಬಿಂಬಗಳನ್ನು ಕನ್ನಡ ಪದ್ಯಗಳಿಂದ ಸ್ತುತಿಸಿದನು. (೧೧--೩೬) ಇಪ್ಪತ್ತನಾಲ್ಕು ತೀರ್ಥಂಕರರನ್ನು ಸಂಸ್ಕೃತಶ್ಲೋಕಗಳಿಂದ ಸ್ತುತಿಸಿದನು. (೩೭-೪೦) ಅರಸನಂತೆ ಪ್ರಜೆಗಳು ಧರ್ಮಪ್ರಿಯರಾಗಿದ್ದರು. (೪೦) ಅತ್ತ ವೃಷಭನಾಥನು ಹದಿನಾಲ್ಕುದಿವಸದ ಆಯುಷ್ಯವಿರುವಾಗ ಸಮವಸರಣವನ್ನು ವಿಸರ್ಜಿಸಿ ಕೈಲಾಸಪರ್ವತದ ಸಿದ್ಧಕೂಟದಲ್ಲಿ ಪೌಷ್ಯಮಾಸದ ಹುಣ್ಣಿಮೆಯ ದಿನ ಯೋಗಪಲ್ಯಂಕಾಸನದಲ್ಲಿ ಪೂರ್ವಾಭಿಮುಖನಾಗಿ ಇದ್ದನು. (೪೧-೪೮) ಇತ್ತ

ಭರತಾದಿಗಳು ಸ್ವಪ್ನಗಳನ್ನು ಕಂಡು ಅವುಗಳ ಫಲವನ್ನು ಕೇಳಿದರು. ( ೪೯ ) ಅವು ಆದಿದೇವನು ಮೋಕ್ಷಹೊಂದುವುದನ್ನು ಸೂಚಿಸುವುವೆಂದು ಪುರೋಹಿತನು ತಿಳಿಸಿದನು. ( ೫೦ ) ಕೂಡಲೆ ಭರತನು ಕೈಲಾಸಪರ್ವತಕ್ಕೆ ಹೋಗಿ ಆದಿಭಟ್ಟಾರಕರನ್ನು ಬಲಗೊಂಡು ಮಹಾಮಹವೆಂಬ ಪೂಜೆಯನ್ನು ಮಾಡಿದನು. ವೃಷಭನಾಥನು ಅನೇಕ ವ್ರತಗಳನ್ನು ಮಾಡಿ, ( ೫೧ ) ಮಾಘಮಾಸದ ಕೃಷ್ಣಚತುರ್ದಶಿಯ ದಿನ ಅಭಿಜಿನ್ಮುಹೂರ್ತದಲ್ಲಿ ಮೋಕ್ಷಪಡೆದನು. ( ೫೨-೫೪ ) ಆಗ ಚತುರ್ವಿಧದೇವನಿಕಾಯವು ಪುರುದೇವನ ನಿರ್ವಾಣಕಲ್ಯಾಣವನ್ನು ಆಚರಿಸಿದರು. ( ೫೪ ವ-೫೭ ವ ) ಭರತನು ಗುರುವಿಯೋಗದುಃಖಮಾಡುತ್ತಿರುವಾಗ ವೃಷಭಸೇನಗಣಾಗ್ರಣಿಗಳು ಉಪದೇಶಮಾಡಿ ಅವನನ್ನು ಸಮಾಧಾನಗೊಳಿಸಿದರು. ಆ ಮೇಲೆ ಭವಾವಳಿಗಳನ್ನು ಹೇಳಹತ್ತಿದರು. ( ೫೮ ) ಪುರುಪರಮೇಶ್ವರನ ಭವಾವಳಿ. (೫೮ ವ) ಶ್ರೇಯಾಂಸಭರತಾದಿಗಳ ಭವಾವಳಿ. (೫೯-೬೦) ಗಣಧರರ ಉಪದೇಶದಿಂದ ಭರತನು ಸಮಾಧಾನಗೊಂಡು ಅಯೋಧ್ಯೆಗೆ ಬಂದು ರಾಜ್ಯವಾಳುತ್ತಿದ್ದನು. ( ೬೧ ) ಒಂದು ದಿವಸ ತನ್ನ ಕೆನ್ನೆಯ ಮೇಲೆ ನರೆಗೂದಲು ಇರುವದನ್ನು ಕನ್ನಡಿಯಲ್ಲಿ ಕಂಡು ವೈರಾಗ್ಯಪರನಾಗಿ ( ೬೨—೭೨ ವ ) ಭರತನು ತನ್ನ ರಾಜ್ಯವನ್ನು ಬಿಟ್ಟು ಕೈಲಾಸಕ್ಕೆ ಬಂದು ಅಲ್ಲಿ ಅದರ ತುದಿಯ ಮೇಲಿದ್ದ ಚೈತ್ಯಾಲಯಗಳನ್ನು ಅನೇಕವಿಧಾರ್ಚನೆಗಳಿಂದ ಅರ್ಚಿಸಿ ಸ್ತುತಿಸಿ ಆದಿಜಿನನೇ ಗುರುವೆಂದು ಧ್ಯಾನಪರಾಯಣನಾಗಿ ದೀಕ್ಷೆವಹಿಸಿದನು. ( ೭೩ ) ಕೂಡಲೆ ಮನಃಪರ್ಯಯ ಜ್ಞಾನವುಂಟಾಯಿತು. ಬಳಿಕ ಅಂತರ್ಮುಹೂರ್ತದಲ್ಲಿಯೇ ಕೇವಲಜ್ಞಾನೋದಯವಾಯಿತು. (೭೪-೭೫ ವ) ಧರ್ಮವನ್ನು ಬೋಧಿಸಿ ಕರ್ಮಗಳನ್ನು ಕೆಡಿಸಿ ಭರತನು ಮೋಕ್ಷಪಡೆದನು. ಭರತನ ಮೋಕ್ಷಾನಂತರ ವೃಷಭಸೇನಗಣಧರರೂ ಪುರುತನಯರೂ ಮೋಕ್ಷಪಡೆದರು. ( ೭೬-೭೭ ) ಶಕವರ್ಷ ೮೬೩ ನೆಯ ಪ್ಲವಸಂವತ್ಸರದ ಕಾರ್ತಿಕಶುಕ್ಲಪಂಚಮಿ ಸೋಮವಾರದಲ್ಲಿ ಆದಿಪುರಾಣವು ಸಂಪೂರ್ಣವಾಯಿತು.

**ಪಂಪಮಹಾಕವಿವಿರಚಿತಂ**

# ಆದಿಪುರಾಣಂ

---

## ಪ್ರಥಮಾಶ್ವಾಸಂ

ಶ್ರೀದೇವೇಂದ್ರಮುನೀಂದ್ರವಂದಿತಗುಣವ್ರಾತಂ ಜಗತ್-ಸ್ವಾಮಿ ಸಂ-
ಪಾದಿಬ್ರಹ್ಮನಗಾಧಬೋಧನಿಲಯಂ ದುರ್ವ್ವಾರಸಂಸಾರವಿ- ।
ಚ್ಛೇದೋಪಾಯನಿಯುಕ್ತ[೧]-ಸೂಕ್ತಿ-ವೃಷಮಾರ್ಗ್ಗಾ[೨]ಗ್ರೇಸರಂ[೨] ಪಾಪಹೃತ್-
ಪಾದಾಬ್ಜಂ ದಯೆ[೩]ಗೆಯ್ಗೆಕ್ಕೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ ॥೧॥

ಪೆಣೆದೆಂಟುಂ ಕಿಲ್ಬಿಷಂಗಳ್[೪] ಕಿಡೆ[೪] ಕಿಡದ ಗುಣಂ ಪೊರ್ದೆ ಬಂದೆಂಟುಮಾದಂ
ತಣಿವಂ ಕೈಕೊಂಡಮೂರ್ತ್ತರ್ ಚರಮತನುಸಮಾಕಾರರುದ್ಧೂತಲೇಪರ್- ।
ಪ್ರಣುತರ್ ನಿತ್ಯರ್ ಜಗನ್ಮಂಗಲನಿಲಯರನಂತರ್ ತ್ರಿಲೋಕೈಕಚೂಡಾ-
ಮಣಿಗಳ್ ಸಿದ್ಧರ್ ಸ್ವಕೀಯಪ್ರಭುತೆಯನೆಮಗಂ ಮಾಳ್ಕತಿಪ್ರೀತಿಯಿಂದಂ ॥೨॥

ಮೂವತ್ತಾಱುಂ ಗುಣಂಗಳ್ ತಮಗ[೫]ಮರ್ದಿರೆ ಸಂದೈದುಮಾಚಾರದೊಳ್ ಸ-
ದ್ಭಾವಂ ಕೈಗಣ್ಮೆ ಶಿಷ್ಯಾಚರಣವಿಧಿಗಳಂ ತಿರ್ದ್ದಿ ಕಾರುಣ್ಯದಿಂದಂ ।
ಸಾವದ್ಯಂ ಸಾರದಂತಾಗಿರೆ ನಿಯಮಿಸುವಾಚಾರ್ಯ್ಯರಿನ್ನೆಮ್ಮನೇನೋ-
ದಾವಂ ತಳ್ತ[೬]ಟ್ಟಿ[೬]ದಂತೋಸರಿಸಿ ಕಳೆಗೆ ಸಂಸಾರಕಾಂತಾರದಿಂದಂ ॥೩॥

ಹೇಯಂಗಳ್ ಖಳಕರ್ಮ್ಮಬಂಧನಕರಕ್ರೋಧಾದಿಗಳ್[೭] ಮತ್ತುಪಾ[೭]-
ದೇಯಂಗಳ್ ದುರಿತೇಂಧನಾನಲಲಸದ್ರತ್ನತ್ರಯಂಗಳ್ ಸುಖೋ-

೧ (ಬ)-ಕ್ತಿ. ೨-೨ (ಬ) ಗ್ಗಾಗ್ರೇಶ್ವರಂ; (ಗ) ಗ್ಗಾಗ್ರೇಸ್ವರಂ. ೩ (ಅ) ಯು ೪-೪ (ಬ) ಗಳು ಕೆಡೆ. ೫ (ಬ) ದ್ದಿ. ೬-೬ (ಬ) ತಳ್ತುಳ್ವದಂ. ೭-೭ (ಕ) ತಳ್ತುಪಾ.

ಪಾಯಂಗಳ್ ಗಡ[೧]ಮೆಂದು ಭವ್ಯಜನಮಂ ಕಣ್ಣಾಗಿ ಕಲ್ಪಿಪ್ಪ ಪಾ-
ಧ್ಯಾಯರ್[೨] ಜ್ಯೋತಿಸುಗೆಮ್ಮ ಚಿತ್ತಗೃಹದೊಳ್ ರತ್ನತ್ರಯಜ್ಯೋತಿಯಂ ||೪||

ಬಗೆಯೊಳ್ ಪೂಣ್ದು ದಯಾರಸಂ ಚರಿತದೊಳ್[೩] ಕೈಗಣ್ಮೆ[೩] ಚಾರಿತ್ರಮಾ-
ವಗಮಾವಶ್ಯಕದೊಳ್ ತಗುಳ್ದು ಪಲವುಂ ಶೀಲಂಗಳಂ ತಾಳ್ದಿ ದಂ-|
ದುಗ[೪]ಮೆಂದುಂ[೪] ತಮಗಾಗದಂತೆಸಗುವರ್ ಸರ್ವೋತ್ತಮರ್ ಸರ್ವಸಾ-
ಧುಗಳೋರಂತೆ ಕಳಲ್ಚುಗೆಮ್ಮ ಮನದಿಂ ದುರ್ಮೋಹಸಂದೋಹಮಂ ||೫||

ಕಾರ್ಯ್ಯಮೆಮಗಿದುವೆ ಶಿವಪದ-
ಪರ್ಯ್ಯಂತಂಬರಮಮೋಘಮುದ್ಧರಿಸುಗೆ ತಾ-|
ತ್ಪರ್ಯ್ಯದಿನರ್ಹತ್ಸಿದ್ಧಾ-
ಚಾರ್ಯ್ಯೋಪಾಧ್ಯಾಯಸರ್ವ್ವಸಾಧುಗಳೆಮ್ಮಂ ||೬||

ವರದಂ ಪದ್ಮಾಂಕಿತಂ ತೋಳಿರಡು ನಿಶಿತ-ವಜ್ರಪ್ರಭಾಭಾಸುರಂ ತೋ-
ಳಿರಡುದ್ಯಚ್ಚ[೫]ಕ್ರಿ ಚಕ್ರೋಜ್ಜ್ವಲ[೬]ತರತರಲ[೬]ಜ್ಯೋತಿ ತೋಳೆಂಟಗುರ್ವ್ವಾ-|
ಗಿರೆ ಬಣ್ಣಂ ಪೊನ್ನ ಬಣ್ಣಕ್ಕೆಣೆಯೆನೆ ಗರುಡಂ ವಾಹಮಾಗಿರ್ಪ್ಪ ಚಕ್ರೇ-
ಶ್ವರಿ ಭಾಸ್ವದ್ದರ್ಪ್ಪಚಕ್ರಾಕ್ರಮಿಗಳನಲೆದಾಟ[೭]ಕ್ಕೆ ವಿಕ್ರಾಂತದಿಂದಂ ||೭||

ಪರಶುಫಲಾ[೮]ಕ್ಷಸೂತ್ರವರದೋಚಿತಚಿಹ್ನಚತುರ್ಬ್ಭುಜಂ ಮನೋ-
ಹರವೃಷಲಾಂಛನಂ ವೃಷಮುಖಂ ವೃಷವಾಹನನಿಂದುಕುಂದಸೌಂ[೯]-|
ದರತರವರ್ಣ್ಣನೀವೃಷಭನಾಥಕಥಾರಚನೋಕ್ತಿಯಲ್ಲಿ ಮಾ-
ಟ್ಕಿ[೧೦]ರದೆಮಗಾಗಳುಂ[೧೦] ವೃಷಭಯಕ್ಷನವಿಘ್ನಮನಃ ಪ್ರವೃತ್ತಿಯಂ ||೮||

ಪರಮಜಿನೇಂದ್ರವಾಣಿಯೆ[೧೧] ಸರಸ್ವತಿ ಬೇಱದು ಪೆಣ್ಣ ರೂಪಮಂ
ಧರಿಯಿಸಿ ನಿಂದುದಲ್ತದುವೆ ಭಾವಿಸಿಯೋದುವ ಕೇಳ್ವ ಪೂಜಿಪಾ-|
ದರಿಸುವ ಭವ್ಯಕೋಟಿಗೆ ನಿರಂತರಸೌಖ್ಯಮನೀವುದಾನದ-
ಕ್ಕೆ[೧೨]ಱೆದಪೆನಾಸರಸ್ವತಿಯೆ ಮಾಟ್ಕೆಮಗಿಲ್ಲಿಯೆ ವಾಗ್ವಿಳಾಸಮಂ ||೯||

೧ (ಚ) ಡಿ. ೨ (ಅ) ದ್ಯೋ. ೩-೩ (ಬ) ಕಯ್ಗಣ್ಮೆ. ೪-೪ (ಚ) ವೆಂದುಂ. ೫ (ಅ) ಕ್ರ. ೬-೬ (ಅ) ತರಲತರ. ೭ (ಬ) ಟಿ. ೮ (ಚ) ಳಾ. ೯ (ಚ) ಸುಂ. ೧೦-೧೦ (ಬ) ಕ್ಕೆಮಗಿರದಾಗಳುಂ. ೧೧ (ಚ) ಯ. ೧೨ (ಅ, ಬ) ರ.

## ಪ್ರಥಮಾಶ್ವಾಸಂ

ಅನುಯೋಗಕುಸುಮಪಾದಪ—
ಮನೇಕನಯಲತಿಕಮಂಗಫಲ[೧]ಮಹಿಜಂ ಸ—|
ಜ್ಜನಜವನಮೆಮಗೆ ವಿಶ್ರಮ—
ವನಮಕ್ಕತಿವಿಶ್ರುತಶ್ರುತಸ್ಕಂಧವನಂ— ||೧೦||

ಶ್ರೀಮತ್ಸಮಂತಭದ್ರ—
ಸ್ವಾಮಿಗಳ ಜಗತ್ ಪ್ರಸಿದ್ಧಕವಿಪರಮೇಷ್ಠಿ—|
ಸ್ವಾಮಿಗಳ ಪೂಜ್ಯಪಾದ—
ಸ್ವಾಮಿಗಳ ಪದಂಗಳೀಗೆ ಶಾಶ್ವತಪದಮಂ ||೧೧||

ಆರ್ಯ್ಯನುತಗೃ[೨]ಧ್ರ[೨]ಪಿಂಛಾ—
ಚಾರ್ಯ್ಯಜಟಾಚಾರ್ಯ್ಯವಿಶ್ರುತಶ್ರುತಕೀರ್ತ್ಯಾ—|
ಚಾರ್ಯ್ಯಪುರಸ್ಸರಮಪ್ಪಾ—
ಚಾರ್ಯ್ಯಪರಂಪರೆಯೆ ಕುಡುಗೆ ಭವ್ಯೋತ್ಸವಮಂ ||೧೨||

ಏ[೩]ಮಗೆ ಮಲಧಾರಿಸಿದ್ಧಾಂ—
ತಮುನೀಶ್ವರಚರಣಸರಸಿಜಾತಂ ದೇವೇಂ—|
ದ್ರಮುನಿಪದಾಬ್ಜಂ ಜಯನಂ—
ದಿಮುನಿಕ್ರಮಕಮಲಮೀಗೆ ಬೋಧೋದಯಮಂ ||೧೩||

ಮುನಿಜನದೋದಿಸಿದೋಜೆಯೊ—
ಳನುವದಿಪುದಿದೊಂದೆ ಕೊಂಡಕುಂದಾನ್ವಯನಂ—|
ದನವನಶುಕಮೆಂದೆನಗಿನಿ—
ಸನುಗ್ರಹಂಗೆಯ್ಗೆ ಕರುಣದಿಂ ಮುನಿನಿವಹಂ ||೧೪||

ಪರಮಜಿನಮಾಲೆ ವರಗಣ—
ಧರಮಾಲೆ ಮುನೀಂದ್ರಮಾಲೆ ಮುನಿಮಾಲೆ ನಿರಂ—|
ತರಮೀ[೪]ಗೆ[೪] ಭವ್ಯಮಾಲೆಗೆ
ಪರಾ[೫]ರ್ಥ್ಯಗುಣರತ್ನಮಾಲೆಯುಂ ದಯೆಯಿಂದಂ ||೧೫||

ತಮಮಂ ದ್ಯುಮಣಿಮಯೂಖೋ—|
ದ್ಗಮಮಲೆವವೊಲಲೆಗೆ ಜಗದ ಮಿಥ್ಯಾತ್ವತಮಂ—|

---

೧ (ಬ) ಳ. ೨-೨ (ಅ) ಗೃದ್ಧ. ೩ (ಅ, ಬ) ಯೆ. ೪-೪ (ಬ) ಮಾಚಿಕ್ಕೆ. ೫ (ಅ) ರ್ದ್ಧ್ಯ; (ಬ) ರ್ದ್ಧ.

ಸ್ತ್ರಮುಮನಕಲ[೧]ಂಕದೇವ-
ಪ್ರಮಾಣರತ್ನಪ್ರದೀಪರಶ್ಮಿಕ[೨]ಲಾಪಂ ॥೧೬॥

ಮೃದುಪದಗತಿಯಿಂ ರಸಭಾ-
ವದ ಪೆರ್ಚ್ಚಿಂ [೩]ಪುಣ್ಯವನಿತೆಯೊಳ್[೩] ಕೃತಿ ಸೌಂದ-
ರ್ಯ್ಯದ ಚಾತುರ್ಯ್ಯದ ಕಣಿಯೆನೆ
ವಿದಗ್ಧಬುಧಜನದ ಮನಮನಲೆಯ[೪]ಲೆ ವೇಡಾ[೪] ॥೧೭॥

ಕಿವಿಯಿಂ[೫] ಬಗೆವುಗು[೬]ವೊಡೆ ಕೊಂ-
ಕುವೆತ್ತ ಪೊಸನುಡಿಯೆ ಪುಗುಗುಮುೞಿದುದು ಸಱುಸ್ವೈ-।
ತವಚಱನೆ ಮಾಡಿ ಸಱುಸ್ವೈ-
ತು ಪೋಕುಮೋಂ ಬಗೆಯ ಬಟ್ಟೆಯಂ ಮುಟ್ಟುಗುಮೋ ॥೧೮॥

ಮೃದುಮಧುರವರ್ಣರಚನೆಯೊ-
ಳುದಾತ್ತಮರ್ತ್ಥಪ್ರತೀತಿಯುಂ ಕೇಳ್ವ ಜನ-।
ಕ್ಕೆದಿರೊ[೭]ಳ್ ಕುಡದಂದದು ಕ-
ಬ್ಬದೊಳಿರ್ದ್ದುಂ ಕವಿಯ ಮನದೊಳಿರ್ದ್ದಂತೆ [೮]ವಲಂ ॥೧೯॥

ಕವಿತಾರಹಸ್ಯಮುಂ ಸ-
ತ್ಕವಿಯಱಿಗುಮನೇಕಮೂಕನೇಡಂ ಜಡನೇಂ।
ಬವನಱಿಗುಮೆ ವಿಟನಱಿಗುಂ
ಕುವಿಟಂ ಸ್ತ್ರೀರತರಹಸ್ಯದೊಳಗಱಿದಪನೇ ॥೨೦॥

ಭಾಷಾವಿದರ್ ಕವಿತ್ವವಿ-
ಶೇಷಜ್ಞರ್ ನಿಕಷರ[೧೦]ಪ್ಪೊಡಪ್ಪುದು ಸಭೆಯೊಳ್।
ಮಾಷಮುಖ[೧೧]ರಂತೆ ದೋಷಗ-
ವೇಷಣಪರರಪ್ಪರೆಂದೊಡದು ತೆಗಟಲ್ತೆ ॥೨೧॥

೧-೧ (ಚ) ಳ. ೨ (ಅ, ಚ) ಳಾ. ೩-೩ (ಚ) ಪಣ್ಯವನಿತೆವೊಲ್ ಕೃತಿ. ೪-೪ (ಬ, ಖ) ಲ್ವೇಡಾ. ೫ (ಅ) ಯುಂ; (ಗ) ಗಿಂ. ೬ (ಅ, ಬ) ವ. ೭ (ಬ) ಳಿಕು. ೮ (ಅ, ಬ, ಕ) ವೊ. ೯ (ಅ, ಬ) ಡ. ೧೦ (ಬ) ಪ್ಪ. ೧೧ (ಅ, ಡ) ದ.

# ಪ್ರಥಮಾಶ್ವಾಸಂ

ಧಿಷಣರ ಕೃತಿಗಳೊಳೆಸೆವಭಿ-
ಲಷಿತಗುಣಂಗಳನೆ ಬಿಸುಟು ಮಾತ್ಸರ್ಯ್ಯಾನುಹಾ-।
ವಿಷಮಮತಿಯಿಂದೆ ದೋಷಾ-
ನ್ವಿಷಮನೆ ಪೊರ್ದ್ದಿಪ್ಪರ್ವಲ್ತೆ ಕುಕವಿಬಕಂಗಳ್[೧] ॥೨೨॥

*ಕೋಗಿಲೆಯ ಸರವರಣ್ಯದೊ-
ಳೇಗೆಯ್ದುದೊ ಮೂರ್ಖಜಡಜನಾರಣ್ಯದೊಳಿಂ-।
ಪ್ಪೋಗಡಿಸಿದ ಕವಿಶಬ್ದಮು-
ದೇಗೆಯ್ದುದರಣ್ಯರುದಿತಮುದು ಬಗೆವಾಗಳ್ ॥೨೩॥

ಇದು ಮರುಳೆ ಶುಷ್ಕವೈಯಾ-
ಕರಣಂಗಂ ಶುಷ್ಕತಾರ್ಕ್ಕಿಗಂಗಂ ಪೆಳ್ವ-।
ಕ್ಕರಿಗಂಗಂ ವಿಷಯಮೆ ಕಾ-
ವ್ಯರತ್ನಮತಿಚತುರಕವಿಕದಂಬಕವಿಷಯಂ ॥೨೪॥

ಗುರುದೇವೇಂದ್ರಮುನೀಂದ್ರನಿಂದ್ರನಮಿತಂ ದೇವಂ ಕಥಾನಾಯಕಂ
ಪುರುದೇವಂ ಕಥೆಯುಂ ತದಾದಿಪುರುಷಪ್ರಸ್ತುತ್ಯಜನ್ಮಾಳಿ ಬಂ-
ಧುರಮೆಂದಂದೆ ಮದೀಯವಾಗ್ವಿಭವವಿನ್ಯಾಸಂ ಬಲಂಬೆತ್ತು[೨]ದಿ-
ನ್ನಿ[೨]ರು ಬಲ್ಲಿತ್ತಜಿ ಕೋಡು ಕೂರಿತದನಂತಿಂತುಂತೆನಲ್ಬರ್ಕ್ಕುಮೇ ॥೨೫॥

ವಿದಿತಂ ಪ್ರಾತೀ[೩]ತಿಕಂ ಕೋಮಲಮತಿಸುಭಗಂ ಸುಂದರಂ ಸೂಕ್ತಿಗರ್ಭ್ಭಂ
ಮೃದುಸಂದರ್ಭ್ಭಂ ವಿಚಾರಕ್ಷಮಮುಚಿತಪದಂ ಶ್ರವ್ಯಮವ್ಯಾಕುಲಂ[೪] ವ್ಯಾ-।
ಪ್ತದಿಗಂತಂ ಕಾವ್ಯಮೆಂದನ್ವಿತಸುಕವಿಜನಂ ಮೆಚ್ಚೆ ನಿಚ್ಚಂ ಮನಂಗೊ-
ಳ್ವುದಜಿಂದಂ ನೆಟ್ಟನೀತಂ ಸುಕವಿಜನಮನೋಮಾನಸೋತ್ತಂಸಹಂಸಂ ॥೨೬॥

ಇದು ನಿಚ್ಚಂ ಪೊ[೫]ಸತರ್ಣ್ಣವಂಬೊಲತಿಗಂಭೀರಂ ಕವಿತ್ವಂ ಜಗ-
ಕ್ಕದಜಿಂಗಂ ಕವಿತಾಗುಣಾರ್ಣ್ಣವನಿಳಾಲೋಕೈಕವಿಖ್ಯಾತನ-।

---

೧ (ಬ) ಳೂ. ೨-೨ (ಬ) ದಿಂತಿದು; (ಚ) ದಿನ್ನಿರು. ೩ (ಅ, ಬ) ತ. ೪ (ಙ, ಚ) ಳ. ೫ (ಬ) ತಾ.

* ಈ ಪದ್ಯವು. ಖ, ಗ, ಬ ಪ್ರತಿಗಳಲ್ಲಿಲ್ಲ.

ಭ್ಯುದಯಪ್ರಾಪ್ತಿನಿಮಿತ್ತಮುತ್ತಮಯಶಂ ಸಂಸಾರದೊಳ್ ಸಾರಮ—
[1]ಪ್ಪುದು ತಾಂ[1] ಧರ್ಮ್ಮಮದಂ ನಿಮಿರ್ಚ್ಚುವುದಱಿಂ ಸಂಸಾರಸಾರೋದಯಂ ||೨೭||

ಅತಿಸುಭಗೆಗೆ ಸಂದ ಸರ—
ಸ್ವತಿಗೀತನ ಲಲಿತವಾಗ್ವಿಳಾಸಮೆ [2]ದೆಲಲಿಂ[2]—
ಕೃತಿಯವೊಲೆಸೆದಪುದು ಜಗತ್—
ಪ್ರತೀತನೀತನೆ ಸರಸ್ವತೀಮಣಿಹಾರಂ ||೨೮||

ಕದಲೀಗರ್ಭ್ಭಶ್ಯಾಮಂ
ಮೃದುಕುಟಿಲಶಿರೋರುಹಂ ಸರೋರುಹವದನಂ—।
ಮೃದುಮಧ್ಯಮತನು ಹಿತಮಿತ—
ಮೃದುವಚನಂ ಲಲಿತಮಧುರಸುಂದರವೇಷಂ ||೨೯||

ವತ್ಸಕುಲತಿಲಕನಭಿಜನ—
ವತ್ಸಲನಭಿಮಾನಮೂರ್ತ್ತಿ ಕುಕವಿಯಶೋನಿರ್—।
ಮತ್ಸರನಮೃತಮಯೋಕ್ತಿ ಶ—
ರತ್ಸಮಯಸುಧಾಂಶುವಿಶದಕೀರ್ತ್ತಿವಿತಾನಂ ||೩೦||

ವನಿತಾಕಟಾಕ್ಷಕುವಲಯ—
ವನಚಂದ್ರಂ ಯುವತಿಜಘನಕಾಂಚೀರತ್ನಂ ।
ಸ್ತನಭರವಿನಮ್ರಗಣಿಕಾ—
ಸ್ತನತಟಹಾರಂ ಸರಸ್ವತೀಮಣಿಹಾರಂ ||೩೧||

ಕೇರಳವಿಟೀಕಟೀಸೂ—
ತ್ರಾರುಣಮಣಿ ಮಲಯಯುವತಿದರ್ಪ್ಪಣನಾಂಧ್ರೀ—।
ನೀರಂಧ್ರಬಂಧುರಸ್ತನ—
ಹಾರನುದಾರಂ ಸರಸ್ವತೀಮಣಿಹಾರಂ ||೩೨||

೧-೧ (ಬ) ಪ್ಪುದಯಂ; (ಚ) ಪ್ಪುದಱಿಂ. ೨-೨ (ಅ. ಕ) ಷಡಲಂ.

## ಪ್ರಥಮಾಶ್ವಾಸಂ

ದುಂದುಭಿಗಭೀರನಿನದಂ
ದುಂದುಭಿಸಂವತ್ಸರೋದ್ಭವಂ ಪ್ರಕಟಯಶೋ-|
ದುಂದುಭಿ ಸಿಂಹಾಸನಸುರ-
ದುಂದುಭಿಪತಿಚರಣಕಮಲಭೃಂಗಂ ಪಂಪಂ ||೩೩||

ಎಂದಿಂತು ತಮ್ಮ ತಮ್ಮಱು-
ಗಿಂದಂ ಪೆಸರಿಟ್ಟು ಬುಧಸಮೂಹಮಿದಂ ಪೇ-|
ೞಿಂದೊಡೆ ಪೇೞಲ್ಕಾಂ ಬಗೆ-
ದಂದೆನಿದೆನ್ನಳವೆ ಗಣಧರೋದಿತಚರಿತಂ ||೩೪||

ಪುರುದೇವಾದಿಜಿನೇಂದ್ರಮಾಲೆ ಗಣಭೃತ್ಸಂತಾನಮೆಂದೀಪರಂ-
ಪರೆಯಿಂ ವಿಶ್ರುತವೀರಸೇನಜಿನಸೇನಾಚಾರ್ಯ್ಯಪರ್ಯ್ಯಂತಮಾ-|
ಗಿರೆ ಬಂದೀಕಥೆ ಗುಣ್ಪುವೆತ್ತುದವರುಂ ಜ್ಞಾನರ್ದ್ಧಿಸಂಪನ್ನರಿಂ-
ದಿಱದಾಂ [೧]ಧೃಷ್ಟ[೧]ನೆನೀಕಥಾಬ್ಧಿಯುಮನೇನೀಸಲ್ಮನಂದಂದೆನೋ ||೩೫||

ಕವಿತೆಯೊಳಾಸೆಗೆಯ್ವ ಫಲಮಾವುದೊ ಪೂಜೆ ನೆಗೞ್ತೆ ಲಾಭಮೆಂ-
ಬಿವೆ ವಲಮಿಂದ್ರಪೂಜೆ ಭುವನಸ್ತುತಮಪ್ಪ ನೆಗೞ್ತೆ ಮುಕ್ತಿ ಸಂ-|
ಭವಿಸುವ ಲಾಭಮೆಂಬಿವೆ ಜಿನೇಂದ್ರಗುಣಸ್ತುತಿಯಿಂದೆ ತಾಮೆ ಸಾ-|
ರವೆ ಪೆಱರೀವುದೇಂ ಪೆಱ[೨]ಱೆ ಮಾಡುವುದೇಂ ಪೆಱಱಿಂದಮಪ್ಪುದೇಂ ||೩೬||

ಪೆಸರ್ಗೊಂಡಿಂದ್ರನರೇಂದ್ರವಂದ್ಯನನೊಱಲ್ದೆತ್ತಾನುಮೋರೊರ್ಮ್ಮೆ ಚಿಂ-
ತಿಸಿದೊಂಗಂ ಪವಣಿಲ್ಲ ಪುಣ್ಯಮೆನೆ ಪೂಣ್ದೊಳ್ಪಿಂದಮೋರಂತೆ ಭಾ-|
ವಿಸಿ ತಾಂ ತನ್ಮಯನಾಗಿ ತಚ್ಚರಿತಮುಂ ಕಾವ್ಯಂಗಳೊಳ್ಕೂಡೆ ಬ-
ಣ್ಣಿಸಿ ಪೇೞ್ವಾತನ ಕರ್ಮ್ಮನಿರ್ಜ್ಜರೆಯ[೩]ನಿಂತಿಂತುಂತೆನಲ್ಬರ್ಕ್ಕುಮೇ[೩] ||೩೭||

ಇದುವೆ ಸುಕವಿಪ್ರಮೋದ-
ಪ್ರದಮಿದುವೆ ಸಮಸ್ತಭವ್ಯಲೋಕಪ್ರ[೪]ಮುದ-|
ಪ್ರದಮೆನೆ ನೆಗೞ್ದಾದಿಪುರಾ-
ಣದೊಳಱಿವುದು ಕಾವ್ಯಧರ್ಮ್ಮಮುಂ ಧರ್ಮ್ಮಮುಮಂ ||೩೮||

---

೧-೧ (ಬ) ದುಷ್ಟನೆ. ೨ (ಅ, ಬ) ರು. ೩-೩ (ಅ, ಬ, ಕ, ಗ) ಕಿಂತೆಂದು ಪೇೞ್ವಂತುಟೇ. ೪ (ಅ, ಬ) ಮ.

ವ|| ಆತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ ಭರತ-ಹೈಮವತ-ಹರಿವರ್ಷ-ವಿದೇಹ-ರಮ್ಯಕ-ಹೈರಣ್ಯವತೈರಾವತಂಗಳೆಂಬೇೞುಂ[1] ಜನ[2]ಪದಂಗಳಿಂ[2] ಪೂರ್ವಾಪರಾಯತಂಗಳುಂ ಮಣಿವಿಚಿತ್ರಪಾರ್ಶ್ವಂಗಳುಮಧಸ್ತೋಪರಿಮತಲವಿಸ್ತಾರಂಗಳುಮಪ್ಪ ಹಿಮವನ್ಮಹಾಹಿಮವನ್ನಿಷಧನೀಲರುಗ್ಮಿಶಿಖರಿಗಳೆಂಬ ವರ್ಷಧರಮಹೀಧರಂಗಳಿಂದಮಿಷ್ವಾಕುಕನಕಗಿರಿಗಳಿಂದಂ ನಾಲ್ಕುನಾಭಿನಗಂಗಳಿಂದಂ ಮೂವತ್ತನಾಲ್ಕು ವಿಜಯಾರ್ಧಪರ್ವತಂಗಳಿಂದಮನಿತೆ ವೃಷಭಾದ್ರಿಗಳಿಂದಂ ಚತುರ್ದಶಮಹಾವಾಹಿನಿಗಳಿಂದಮೆಸೆದು,

ಅತಿವೃತ್ತದ ರವಿಬಿಂಬಾ-
ಕೃತಿ ಯೋಜನಶತಸಹಸ್ರವಿಷ್ಕಂಭಂ ವಿ-|
ಶ್ರುತಜಂಬೂವೃಕ್ಷಮಹಾ-
ಪ್ರತೀತಿಯಿಂ ನೆಗೞ್ದುದಿಳೆಗೆ ಜಂಬೂದ್ವೀಪಂ ||೪೯||

ವ|| ಆಜಂಬೂದ್ವೀಪದ ನಟ್ಟನಡುವೆ ನವನವತಿಯೋಜನಸಹಸ್ರೋತ್ಸೇಧಮುಂ ಯೋಜನಸಹಸ್ರಾವಗಾಢಮುಂ ಸರ್ವರತ್ನಜಾಂಬೂನದವೈಡೂರ್ಯಮಯಮುಮಂತರಾಂತರನಿರಂತರಕಾಂತಸೋಮ-ಯಮ-ವರುಣ-ಕುಬೇರ-ಪ್ರಮುಖ-ಲೋಕಪಾಲಾಭಿಯೋಗ್ಯದಿಗ್ಗಜೇಂದ್ರವೇ[4]ಷವಿಹಾರ*ಪ್ರಸಾ*ದಾಭಿರಾಮಮುಮನೇಕ-ನಾಕ-ನಾಯಕ-ಲೋಕಪಾಲ-ಲೀಲಾ-ಭವನಾಧ್ಯಾಸಿತಮುಂ ಪದ್ಮವೇದಿಕಾ-ಪರಿವೃತ-ರತ್ನ-ತೋರಣಾಂಚಿತ-ಜಿನಭವನ-ಪರಿವೃತಮುಂ ಪಂಚರತ್ನಮಯ-ಸು[5]ಶ್ಲಿಷ್ಟಾಷ್ಟ[5]-ಸಹಸ್ರಲಕ್ಷಣವ್ಯಂಜನಾಂಕಿತಾಷ್ಟಶತಕಲಶಭೃಂಗಾರಾದ್ಯುಪಕರಣೋಪಶೋಭಿತಮುಂ, ವೈಡೂರ್ಯದಂಡಮುಕ್ತಾಮಣಿಜಾಲಾಲಂಕೃತರತ್ನಶಲಾಕಾಶತಕಾಂಚನಕುಂಭಬಿಂಬರಜತಚ್ಛದಚ್ಛತ್ರವಿಚಿತ್ರಜಿನೇಂದ್ರಪ್ರತಿಕೃತಿಪ್ರಕೀರ್ಣ್ಣಮುಂ ಭದ್ರಶಾಲನಂದನಸೌಮನಸಪಾಂಡುಕವನವಿರಾಜಿತಮುಂ ಪಾಂಡುಕಪಾಂಡುಕಂಬಲರಕ್ತಕಂಬಲಾತಿರಕ್ತಕಂಬಲವಿಶಾಲರತ್ನಶಿಲಾತಲಪ್ರತಿಷ್ಠಿತಭಗವಜ್ಜನ್ಮಾಭಿಷೇಕಸಿಂಹಾಸನಾಲಂಕೃತಮುಮಾಗಿ,

೧ (ಚ) ಟು. ೨-೨ (ಚ) ಗಳಿಂದಂ. ೩-೩ (ಬ) ಯೋಜನಸತ. ೪ (ಬ) ಹ
೫-೫ (ಚ) ಸುಶ್ಲಿಷ್ಟಾಷ್ಟಾದಶ.

*-* [ಪ್ರಸಾದ] = ಪ್ರಸನ್ನತೆಯೆಂಬರ್ಥದಿಂದ ಉಪಯುಕ್ತವಾಗಿರಬಹುದೇ ?

ನೆಲಸಿರ್ದ್ದನಸ್ತ್ರದರ್ಧಂಬಡೆದಧೋಲೋಕಂ ನಮಂತೆಯುಂ ನು-
ತ್ತಲುಮಿರ್ದ್ದನಿಪ್ಪುದು ಮಧ್ಯಲೋಕಮೆನೆ ದಿದ್ದಾರಜೂಕಾಭಾಗದ-
ವಲಿಮೊಳ್ನಿಂದಪ್ಪುದೂರ್ಧ್ವಲೋಕಮೆನೆ ಮೂಲೋಕಕ್ಕೆ ಮೇಂಪಿಂದಗುಂ-
ದಲಿಯಾಗಿಪ್ಪುದು ದೇವದಂಪತಿರತಪ್ರೀಮಂದಿರಂ ಮಂದರಂ ||೨೦||

ಆ ಮಂದರದ ಪೂರ್ವ್ವಾಪರದಿಗ್ವಿಭಾಗಂಗಳೊಳ್ ವಿದೇಹಂಗಳಿರ್ದ್ದುವಲ್ಲಿ,

ಪದೆಸಂ ಕಾಣಿಸಿಕೊಳ್ವವಲ್ಲಿ ಮಳಿಗಳ್ ಷಡ್ಭಾಗಮಂ ಕೊಂಡು ತ-
ಪ್ಪದೆ ಭೂಪರ್ ಪ್ರತಿಪಾಳಿಪರ್ ಪ್ರಜೆಗಳಂ ಶ್ರೀಜೈನಧರ್ಮ್ಮಂ ಪ್ರವಾ-|
ಬಿಸ್ವದವೃತ್ತಿಪ್ಪುದು ಮತ್ತಿನನ್ಯಸಮಯಕ್ಕುತ್ಪತ್ತಿಯಿಲ್ಲೊಂದೞಿಕೆಳ್
ಪದಿನಾಱಾಗಿ ನಿರಂತರಂ ಸೊಗಯಿಕುಂ ಮೂವತ್ತೆರಡುನ್ನಾಡುಗಳ್ ||೨೧||

ತೊಲಗದೆ ಪುಬ್ಬಕೋಟಿಪರಿಸಂಖ್ಯೆವರಂ ಪರಮಾಯು ಕೆಯ್ ರಾ-
ಯಿಲುಮಱಿಯೆ ಮಾರಿ ಪಸವಿಟ್ಟಿ ಒಱಂ ಪೆಱಪುಂ ಭಯಂಗಳಾ-|
ಕುಲಿತೆಗಳಿಲ್ಲ ಧಾತ್ರಿ ಪುಗಿವೋಗದು ಪಂಚಧನುಶ್ಶತಂ ಪವಣ್-
ನೆಲೆ ನರಗೆಂದೊಡಿನ್ನಿನಿರೆ ಬಣ್ಣಿಸಲಾರ್ಗಱಿಯಂ ವಿದೇಹಮಂ ||೨೨||

ಉತ್ತಮತಪಂಗಳಿಂದ-
ತ್ಯುತ್ತಮದೇಹರ್ ವಿದೇಹರಪ್ಪುದಱಿಂ ಮಿ-|
ಮ್ಮುತ್ತಮ್ಮಾರ್ಥತೆಯಂ ತಾ-
ಳ್ದುತ್ತಿ ವಿದೇಹಂ ವಿದೇಹಮೆಂಬ ಪೆಸರಂ ||೨೩||

ಅಲ್ಲಿ ಪಶ್ಚಿಮವಿದೇಹದ ಮಧ್ಯಮಭೂಮಿಭಾಗಕ್ಕಲಂಕಾರಮಾಗಿ ಪಂಚಶತ-
ಯೋಜನಪ್ರಮಾಣವಿಸ್ತೀರ್ಣ್ಣಮುಮಪ್ಪ,

ಪ್ರಿಯಹಂಸೀಯುತಹಂಸನಾದೆಯ ಮಹಾಕುತ್ಕೀಲಕೂಟಪ್ರಭೇ-
ದೆಯ ತೀರಸ್ಥಲವಂಗಚೂತಲವಲೀಪುಷ್ಪಾಸವಾಸ್ವಾದಿತಾ-|
ಲಿಯ ತೋನ್ನಾದೆಯ ತದ್ವಿದೇಹಜನತಾಸ್ವಾಂತಾಪ್ತಿತೋದ್ಯತ್ಪ್ರವಾ-
ದೆಯ ಸೀತೋದೆಯ ಪೋಲ್ವಿಗಿಲ್ಲ ತೊಱೆಗಳ್ ವಿಶ್ವಂಭರಾಭಾಗದೊಳ್ ||೨೪||

---

೧ (ಅ, ಕ) ದೆ. ೨ (ಅ, ಬ) ಯೋ. ೩-೩ (ಅ, ಬ) ರೊಳ್ಮೆ. ೪-೪ (ಬ) ಮಧ್ಯಮಭೋಗ-ಭೂಮಿಭಾಗ; (ಚ) ಮಧ್ಯಭೂಭಾಗ. ೫-೫ (ಚ) ತೋಪ. ೬-೬ (ಗ) ಪೋಲ್ವುದಿಲ್ಲ.

ಅದು ನಿಜಕರಭಕರಾಘಾತವಿಚಲದ್ವಾರಾಶಿಯೊಳ್ ಪೋಗಿ ಕೂ-
ಡಿದೊಡಾವಾದ್ರಿಯ ಸೆಂಪುಮಾತೊಱೆಯೊಳಾಯ್ತಂತಾದ ಪೆಂಪಿಂದಮು-|
ರ್ವಿದ ಗುಣ್ಪಿಂದಮಿವಟ್ಟಿ ಗಗ್ಗಳಮೆಸಲ್ ಕುಂಡೆಂದು ಕಣ್ಬೆತ್ತಿದಂ-
ತವಕಂ ಸೇರ್ಗಿಱಿಪೆಂದೊಡಾನ ತೊಱೆಯುಂ ಸೀತೋದೆಯುಂ ಪೋಲ್ಗುಮೇ ||೫೩||

ವ|| ಆ ಸೀತೋದಾನದಿಯ ತೆಂಕಣ ಬಡಗಣ ತಡಿಯಿಡಿದಿರ್ದ್ದಪೆಂಟುನಾ-
ಡುಗಳ್ಗೆ,

ಬಡಗಣ ತಡಿಯೊಳಮೇೞಿನೆ-
ಮೆಡೆಯದು ನೀಲಾಚಲಕ್ಕೆ ತೆಂಕಣದು ಬೆಡಂ-|
ಗೊಡರಿಪ ವಕ್ಷಾರಾದ್ರಿಗೆ
ಪಡುವಣದದು ಸುಜನನಿಲಯಮುಪಗತವಿಲಯಂ ||೫೪||

ಅಲಿಕುಲರುತಿಗಳಿನವನತ-
ಫಲತರುಗಳಿನುಚಿತಕುಸುಮಗಂಧದಿನಬಲಾ-|
ವಿಲಸನದಿಂದೀವ್ರದು ಗಂ-
ಧಿಲವಿಷಯಂ ಸಕಲವಿಷಯರಸರಸಿಕತೆಯಂ ||೫೫||

ಬಕಕುರರಪಕ್ಷಿಪಕ್ಷಿ-
ಪ್ರಕಂಜಕಿಂಜಲ್ಕಪುಂಜಪಿಂಜರಿತಾಚ್ಛೋ-|
ದಕಪರಿಪೂರ್ಣ್ಣತಟಾಕ-
ಪ್ರಕರಸರೋನಿಕರರಂಜಿತಾಶಾವಲಯಂ ||೫೬||

ಪಸರಿಸಿ ದುಗ್ಧಾಬ್ಧಿ ಜಲ-
ಪ್ರಸರಮನೊಡವೇೞ್ ಬಂದು ಕಱೆವುವು ಮೇಘ-|
ಪ್ರಸರಂಗಳಲ್ಲಿಯೆನೆ ರಸ-
ಮೊಸರ್ವುವು ಪುಂಡ್ರೇಕ್ಷುವಾಟಕೋಟಿಗಳದಱೊಳ್ ||೫೭||

ಮಡುಗಳೊಳಗಲರ್ದ ನೆಯ್ದಿಲ-
ಕಡುಗಂಪುಮನಿವಱ ಕಂಪು ಗೆಲ್ದುವು ಸಾಸಿ-|

೧-೧ (ಅ) ವಿಚರದ್ವಾ, (ಗ) ವಿಳಸದ್ವಾ. ೨-೨ (ಅ, ಬ) ಯಿನಾ. ೩ (ಚ) ರ್ಬಿ. ೪ (ಚ) ದೊಂ. ೫-೫ (ಚ) ತಿದು ದಲ್. ೬-೬ (ಅ) ವೆಂಟೆಂಟು. ೭-೭ (ಗ) ತ•. ೮-೮ (ಚ) ಮಡಿ. ೯-೯ (ಗ) ಕಂಪೆ.

ಸ್ನ್ರಾಹಿಸಿನೆ ಪೂಂಬಣ್ಣಿದ
ಪಿಡಿದಿರೆ ಸೊಗಯಿಪುವು ಗಂಧಶಾಲಿವನಂಗಳ್ ||೬೦||

ವ|| *ಪುತ್ತ್ರಪುಳ್ಳಿಯೊನಾಡ ಪಡುವಣ ತಡಿಪಿಡಿದು ಪಿಡಂಗಿಡಿಪು*,

ಕೊಂಕಿದ ಕೊಂಕು ತದ್ವಿಷಯಕಾಂತೆಯ ಪುರ್ವಿನ ಕೋಂಕಿನಂತೆ ಚೆ-
ಲ್ವಿಂ ಕುಡಿ ತಕ್ಕೆರಟ್ಟೆತಡಿಯು ಪೂಮರದಿಂ ಕಟಿಪೂಗಳತ್ತಮಿ-|
ತ್ತಿಂ ಕವಿವಲ್ಲಿ ಮೆಲ್ಲನುಗೆ ತೀಂಕುವ ಪೂವಿನ ಸಂಕರಂಗಳಂ
ನೂಂಕುವುಪೂರ್ಮ್ರಿಪಾಲಿನಿಯ ತುಂಗತರತ್ತರಲೋರ್ಮಿಮಾಲೆಗಳ್ ||೬೧||

ಕನಕಾಂಭೋಜರಜಂ ನಿಜಾಂಗರುಚಿಯಂ ಕನ್ನೈಯ್ದಿಲಿಂದಂ ಕಟಿ-
ಲ್ದಿನಿಸಂ ತೂಳ್ದಿ ತೆರಳ್ದಿಸಳ್ನಯನಮುಂ ಕಂಪಂ ಕೊಳಲ್ಬರ್ಪ ಭೃಂ-|
ಗನಿಕಾಯಂ ನಿಜಕೇಶಪಾಶರುಚಿಯಂ ಕೈಕೊಳ್ವಿನಂ ಮೆಲ್ಲಮೆ-
ಲ್ಲನೆ ನೋಟಕ್ಕೆ ಸದೇಹಮಾಗಿ ಸುಳಿಯುತ್ತಿರ್ಕ್ಕುಂ ವಿದೇಹಾನಿಲಂ ||೬೨||

ವ|| ಅಂತನೇಕಸದ್ಯುದ್ಯಾನನಾನಾಜನಪದಜನಾನುರಾಗರಸರಮಣೀಯ-
ಮಪ್ಪ ಗಂಧಿಲವಿಷಯದ ನಡುವೆ ತನ್ಮಹೀವಿಲಾಸಿನಿಯ ಮೇಲ್ಕೊಂಡ ದು-
ಕೂಲಮುಮನರ್ಹತ್ಪರಮೇಶ್ವರನ ವಿಶದಯಶಃಪುಂಜಮುಮನನುಕರಿಸಿ [೧]ವಿವಿಧವಿದಗ್ಧ[೧]ವಿದ್ಯಾಧರ[೨]ಜನಕ್ರೀಡಾನೀಡಂಗಳಾಗಿ[೨] ದಕ್ಷಿಣೋತ್ತರಶ್ರೇಣಿ[೩]ಗಳ್ಗೆ ರಾಜಧಾನಿಗಳಾಗಿರ್ದ್ದ ರಥನೂಪುರಚಕ್ರವಾಳಗಗನವಲ್ಲಭಾದಿಗಳಪ್ಪ ನೂಱಪತ್ತುಂ ಪೊಟಿಲ್ಗಳನೊಳಕೊಂಡು ಸಪಾದಷಡ್ಯೋಜನಾವಗಾಹದೊಳಂ ಪಂಚಷಡ್ಯೋ-
ಜನಾಧೋವಿಸ್ತಾರದೊಳಂ ತದರ್ದ್ಧಯೋಜನೋತ್ಸೇಧದೊಳಂ ದಶಯೋಜನೋ-
ಪರಿಮತಲಸಮಾನವಿಸ್ತಾರದೊಳಂ ವಿದ್ಯಾಧರಾಭಿಯೋ[೪]ಗ್ಯವಿಜಯಾರ್ದ್ಧ-
ಕುಮಾರನಿವಾಸಾದಿಮೇಖಲಾತ್ರಯದೊಳಂ ಸಿದ್ಧಾಯತನಪ್ರಭೃತಿನವ-
ಕೂಟಂಗಳೊಳಂ [೫]ನೆಜಿಸಿದು[೫],

ಉತ್ಕಶಿಖಂಡಿತಾಂಡವಮನೋಹರಮುಜ್ವಲರತ್ನರಾಜಿರಾ-
ಜತ್ಕಟಕಂ [೬]ಕನತ್ಕ[೬]ನಕಪದ್ಮಪರಾಗಪಿಶಂಗಿತಾಂಗರಂ-|
ಗತ್ಕಲಹಂಸನಾದರಮಣೀಯತರಂ ಮದದಂತಿದಾನಗಂ-
ಧೋತ್ಕಟವೊಪ್ಪುಗುಂ ಕುಮುದಪಾಂಡುರಮಾವಿಜಯಾರ್ದ್ಧಪರ್ವತಂ ||೬೩||

೧-೧ (ಕ) ವಿವಿಧವಿದ್ಯಾವಿದಗ್ಧ. ೨-೨ (ಬ) ಜನಪದಂಗಳಿಂದಂ. ೩ (ಚ) ಧಿ.
೪ (ಚ) ಗ್ಯನಿಗ್ಗಜೇಂದ್ರ. ೫-೫ (ಕ) ಬೆಜ್ಜಿಸದು. ೬-೬ (ಅ) ಸರತ್ನಕನಕ; (ಚ) ಸರಃಕನಕ.

*-* ಈಭಾಗ (ಅ, ಬ) ಪ್ರ•ಗಳಲ್ಲಿ ದೊರೆತಿದೆ.

ಜಿನಪೂಜೋತ್ಸವಮಂಗಳಾನಕಪಟುಪ್ರಧ್ವಾನ[1]ದೊಳ್ ಗಾಯಕೀ[1]—
ಜನಗೀತಾನ್ವಿತವಲ್ಲಕೀಕ್ವಣಿತದೊಳ್ ವಿದ್ಯಾಧರೀನರ್ತ್ತನ-|
ತ್ರ್ತನರಾಗೋತ್ಥಿತಪಾರಿಹಾರ್ಯ್ಯರಶನಾಮಂಜೀರಕೋದ್ಯನ್ಮಣಿ-
ಸ್ವನ[2]ದೊಳ್ ಪೊಂಪುಳಿ[2]ವೋಗುತಿರ್ಪ್ಪುವೆರಡುಂ ವಿದ್ಯಾಧರಶ್ರೇಣಿಗಳ್ ॥೭೦॥

ವ॥ ಅವಱೊಳುತ್ತರಶ್ರೇಣಿ[3]ಯೊಳುದಗ್ರಹಿಮಶಿಖರಿಶಿ[4]ಖರಾಕಾರದನೇಕ—
ಣಾಕಾರಸುಧಾಧವಲಿತೋತ್ತುಂಗಪ್ರಾಸಾದಕೂಟಕೋಟಿಸಂಕೀರ್ಣ್ಣಮುಮನಾ—
ಶ್ರೀಯುಜಾತ್ಯನುರೂಪಾ[5]ಚರಣ[5]ಪರಿಣತಚತುರಜನಪರಿಪೂರ್ಣ್ಣಮುಮನೇ—
ಕವಿದ್ಯಾಧರ[6]ರಾಜರಾಜದ್ರಾಜವೀಧೀವಿಸ್ತೀ[6]ರ್ಣ್ಣಮುಮಾಗಿ,

ಬಳಸಿದ ಪೊನ್ನ ಕೋಂಟೆ ಪುರಲಕ್ಷ್ಮಿಯ ಕೈಗೆಯಲಿರ್ದ್ದ ತಾಣಪೊಳ್—
ಬಳಸಿದ ಪೊನ್ನ [7]ಕಾಂಡಪಟ[7]ದಂತಿರೆ ದುಂಪ್ರನರೇಂದ್ರಗೇಹಮಾ—|
[8]ಲಲನೆಯ[8] ವಕ್ತ್ರಪಂಕಜವಿಲಾಸಮನಾಂತಿರೆ ರಮ್ಯರಾಜತಾ—
ಚಲತಿಲಕೋಪಮಾನಮೆನೆ ಸಂದಳಕಾಪುರಮೊಪ್ಪಿ ತೋಱುಗುಂ ॥೭೧॥

ವ॥ ಅದನಾಳ್ವನಖಿಲಖಚರ[9]ಪತಿಮಕುಟಮ[9]ಣಿಗಣಕಿರಣರಾಗರಂಜಿತಚ—
ರಣನಲಿನಯುಗಲನುದಿತೋದಿತನಿಜಕುಲಮಂದರಾಚಲಮಂದಾರಪಾದಪನ—
ನೇಕಸಮರ[10]ಸಮ್ಮರ್ದ್ದ[10]ನನಿರ್ಜ್ಜಿತೋರ್ಜ್ಜಿತಾರಾತಿಬಲನತಿಬಳನೆಂಬನಾತನ ಮಹಾ-
ದೇವಿ ನಯನಮನೋಹರಿ ಮನೋಹರಿಯೆಂಬಳ್,

[11]ಒಲಿಸುವ ರೂಪು ಗಾಡಿಯೊಳೊಡಂಬಡೆ ಗಾಡಿ ವಿಳಾಸದೇಟ್ಗೆಯೊಳ್—
ನೆಲಸೆ ವಿಲಾಸಮುಂ ಖಚರಾಮರಕಾಂತೆಯರೆಲ್ಲರಂ ಪಳಂ—|
ಚಲೆಯೆ ನೆಗೞ್ತೆವೆತ್ತ ಪತಿಭಕ್ತಿಯ ಪೆಂಪುಮೆಯ ಮಾನಸಿಕ್ಕೆ[12]ಯೊ—
ಗ್ಗಲದ[12] ಪೊಗೞ್ತೆ ತನ್ನದೆನೆ ಪೆಂಪು ಮನೋಹರಿಗಲ್ಲದಕ್ಕುಮೇ ॥೭೨॥

ಹಾವವಿಲಾಸವಿಭ್ರಮಸಮನ್ವಿತರೂಪಕಲಾಪದಾ ಮಹಾ—
ದೇವಿಗಮಾವಿಯಚ್ಚರಗಣಾಗ್ರಣಿಗಂ ಗುಣರತ್ನವಾರ್ದ್ಧಿ ನಾ—|

---

೧-೧ (ಬ) ದಿಂ ಗಾಯಿಸೀ. ೨-೨ (ಬ) ದಿಂ ಪೊಂಪುಳಿ. ೩ (ಜ) ಥಿ. ೪ (ಜ) ಶಿ. ೫-೫ (ಗ) ಭರಣ. ೬-೬ (ಕ) ರಾಜರಾಜ ವಿವಿಧ ವಿಸ್ತೀರ್ಣ. ೭-೭ (ಖ, ಗ) ಕನ್ನಪಡ, ೮-೮ (ಜ) ಲಳಿತೆಯ. ೯-೯ (ಕ) ಪತಿಮಣಿಮಕುಟರಾಗಮಣಿ. ೧೦-೧೦ (ಆ, ) ನಮ್ರರ್ದ್ಧ ೧೧ (ಆ, ಬ) ಪೊ. ೧೨-೧೨ (ಅ) ಯೊಳ್ಗುಣದ; (ಬ) ಯೊಳ್ಗೊಲದ.

ನಾಭಿಫಣಿನಿಪ್ಪು ಭಾಜನಮಪಾಸ್ತ್ಯಗತಖೇಚರರಾಜಪ್ರೈದ್ಯವಿ—
ದ್ಯಾಪಿಘನಂ ಮಗಂ ಜಿತವಿರೋಧಿನರೇಂದ್ರಬಳಂ ಮಹಾಬಳಂ ||೬೩||

ವ॥ ಆ ಮಹಾಬಳಂ ಬಾಲಕಾಲದಿಂ ತಗುಳ್ದಭ್ಯಸ್ತಸಮಸ್ತವಿದ್ಯಾಧರ ವಿ—
ದ್ಯಾಪ್ರಾಗನುಂ ಪರಿಸಮಾಪ್ತಸಕಲಕಲಾವಿಜ್ಞಾನನುಮಧಿಗತಾಶೇಷಶಾಸ್ತ್ರನುಂ
ಪರಿಣತಸಕಲಶಸ್ತ್ರನುಮಾಗಿ ಯೌವನಂ ನೆಱೆಯೆನೆಱೆಯೆ,

ಮೊಗಮುತ್ಫುಲ್ಲಸರೋಜಹಾಸಿ ನಯನಂ ನೀಲಾಂಬುಜಸ್ಪರ್ಧಿ ಬಾ—
ಹುಗಳಾಜಾನುವಿಲಂಬಿಗಳ್ ತೊಡೆಗಳುಂ ರಂಭಾವ್ಯದುಸ್ತಂಭಶೋ—|
ಭೆಗಳಂ ಗೆಲ್ದುವು ವಕ್ಷಮಂಬರಚರಶ್ರೀಗೇಹಮೆಂಬೊಂದೆ ರೂ—
ಪೆ ಗಡಂ ನೋಡಲೊಡಂ ಮರುಳ್ಗೊಳಿಸುಗುಂ ವಿದ್ಯಾಧರಸ್ತ್ರೀಯರಂ ||೬೪||

ಮನಸೋಲ್ದಾತನ ಗಾಡಿಯುಂ ದರವ್ರರಂಗಂಡಾಕೆಗಳ್ ಪೂವಿನಂ—
ಬಿನ ಕೋಳ್ಗಂ ತಳಿವಾಲಿನೀರ್ಗಮೆಲರ್ವಾಸಿಂಗಂ ಕುಳಿರ್ಕೋಳ್ಪ ನಂ—|
ದನಕಂ ಚಂದನಕಂ ಪಸುರ್ಪ್ಪೆಸೆವ ಬಾಳ್ಬೊಂಪಕ್ಕಮೊಂದೊಂದೆ ತಣ್
ಬನಿಯೊಳ್ ಕೋಡಿಸುತಿರ್ಪ್ಪ ಬಿಜ್ಜಣಿಗೆಗಂ ಪಕ್ಕಾಗದೇಂ ಪೋಪರೇ ||೬೫||

ವ॥ ಅಂತು ಮಹಾಬಳಕುಮಾರಂ ಕುಮಾರಕೇಲೀವಿಲಾಸವಿಶ್ರಾಂತ—
ಸ್ವಾಂತಂ ಯುವರಾಜಪದವಿಗೆ ಯೋಗ್ಯನಾಗೆ,

ಬಲವದ್ವಿದ್ವಿಷ್ಟವಿದ್ಯಾಧರಕರಟಿಶಿರಶ್ಶಕ್ತಿಸಂಭೂತಮುಕ್ತಾ—|
ವಲಿಯೊಳ್ ಕಣ್ಣಿಟ್ಟು ತನ್ನೊಳ್ ನೆಱೆಯಲಿದು ಜಯಶ್ರೀಯೆ ಮುಂದಿಟ್ಟಿದೆಕ್ಕಾ—
ವಳಿಯೆಂಬಂತಿರ್ದ್ದನಿದಂ ಕಂಠಿಕೆಯನುಭಯವಿದ್ಯಾಧರಶ್ರೇಣಿಗಳ್ ಮುಂ—|
ಗಲಿಗೀತಾತೋದ್ಯನಾದಂಗಳೊಳಿ ಪುಮಪಿನಂ ಕಟ್ಟಿದಂ ಖೇಚರೇಂದ್ರಂ ||೬೬||

ವ॥ ಅಂತು ಕಟ್ಟಿದಾಗಳ್,

ಹಿಮಶೈಲಮನೊಳಂ ಜಲಧಿಯೊ—
ಳಮೆಂತಥಿನ್ನಾಂಗಿ ಗಂಗೆ ಸಂಗತೆ ಖಚರೋ—|
ತ್ತಮನೊಳಮಾವಿದ್ಯಾಧರ—
ಕುಮಾರನೊಳಮಂತೆ ಲಕ್ಷ್ಮಿ ಸಂಗತೆಯಾದಳ್ ||೬೭||

೧-೧ (ಅ, ಗ) ಕಾಲದೊಳ್. ೨-೨ (ಬ, ಕ) ಸುಂ, ಅಧೀತಾಶೇಷ; (ಗ) ನುಂ ವಿದಿತಾಶೇಷ. ೩ (ಅ) ಪು. ೪-೪ (ಪ) ಯೊಳ್ಕೊಡಿಂಸಿರ್ಪ. ೫ (ಪ) ಗೆ.

ಪೆಸರ್ಗಳ್ಕೆತ್ತು ಸಮಸ್ತಖೇಚರಬಲಂ ತೇಜಕ್ಕೆ ಬೆರ್ಚ್ಚಿತ್ತು ಪುಂ-
ಪ್ರೊಸಪ್ರೌಢಂ ಬೆರಸಿರ್ಪ್ಪ ಭೂಚರಬಲಂ ಮೆಯ್ಪಿಂಗೆ ಮೆಚ್ಚಿತ್ತು ತ-|
ನ್ನ ಸಮಸ್ತಂ ಪರಿವಾರಮೆಂಬ ಗುಣ[೧]ಸಂಘಾತಂಗಳಂ[೧] ತಾಳ್ದಿ ಪೆಂ-
ಪೆಸಕಂಬೆತ್ತಿರೆ ಸಂತನಿಂತತಿಬಳಂ ರಾಜ್ಯಂಗೆಯುತ್ತಿರ್ಪ್ಪಿನಂ ||೭೮||

ತೊಡರ್ದೀಪುತ್ರಕಲತ್ರಮೋಹದೊಳಿದೇಕಟ್ಟಿರ್ದ್ದಪೈ ನಿನ್ನ ಮೆಳ್
ಪಡಿದೇಕಾರಣಮಂತಕಂ ಕಡುಪಿನಿಂ ಕಂಠಗ್ರಹಂಗೆಯ್ಯುದಿಂ-|
ತ್ರಡೆಯಂ ಚೇತರಿಸೆಂದು ಒಂದು ಕಿವಿಯೊಳ್ ಪೇಟ್ವಂತೆವೊಲ್ ಕೆಂನೆಯಿಂ-
ದೊ[೨]ಡೆವೋರೊಂದೊ[೨]ಗೆತಂದುವಂದು ನರೆಗಳ್ ವಿದ್ಯಾಧರಾಧೀಶನಾ ||೭೯||

ವ|| ಅಂತು ಮೇಲೆ ಬಂದ ಕೃತಾಂತರಾಜವಾಹಿನಿಯ ಸಿತಪತಾಕೆಗಳನ-
ನುಕರಿಸುವ ಪಳಿತಂಗಳಂ[೩]ದರ್ಪ್ಪಣದೊಳ್ ನೋಡಿ[೩] ಕಂಡು [೪]ಪರಪತಾಕಿನೀ[೪]ಪ-
ತಾಕೆಯಂ ಕಂಡು ಸೆರಗಿಲ್ಲದ [೫]ಗಂಡಸಂತಿ[೫]ನಿಸಪ್ಪುಡಂ ಮಾಣದದುವೆ ಸಂಸಾ-
ರನಿರ್ವೇಗಕಾರಣಮಾಗೆ,

ಕರೆದಾಗಳ್ ನಿಜಮಂತ್ರಿಮಂಡಲಮಹಾಸಾಮಂತಶುದ್ಧಾಂತಮು-
ಖ್ಯರಸಾವೃತ್ತಕಮೆಲ್ಲಮಂ ತಿಳಿಯೆ ಪೇಟ್ದಾಶಾಂತಮಂ ತಾಗೆ ತೂ-|
ರ್ಯ್ಯರವಂ ಪೊಣ್ಮೆ ಮಹಾಬಳಂಗತಿಬಳಂ ಕೊಟ್ಟಂ ಸಿತಚ್ಛತ್ರಚಾ-
ಮರಸಿಂಹಾಸನಚಿಹ್ನ[೬]ಭಾಸುರ[೬]ವಿಯದ್ಗಾಮೀಶ್ವರೈಶ್ವರ್ಯ್ಯಮಂ ||೮೦||

ವ|| ಅಂತು ಮಹಾಬಳಂಗೆ ಮಹಾವಿಭೂತಿಯಿಂದಮಂಬರಚರಶ್ರೀಯು-
ನಿತ್ತು ಭವ್ಯಸಾರ್ಥಪ್ರಾರ್ಥನೀಯಮುಕ್ತಿಶ್ರೀಯನಾಸೆವಟ್ಟು ಸಕಲಮಲ[೭]ನಿ-
ರ್ಜ್ಜರಣ[೭]ಕರಣಕಾರಣಮಂ ತಪಶ್ರೀಯಂ ಕೈಕೊಳಲ್ ಬಗೆದು ಸಾಸಿರ್ವ್ವರ-
ರಸುಮಕ್ಕಳುಮಯ್ನೂರ್ವ್ವರರಸಿಯರುಂ ಬೆರಸು ಗುಣಧರಕೇವಲಿಗಳ ಪಾದ
ಪದ್ಮಮೂಲದೊಳ್,

---

೧–೧ (ಅ, ಬ, ಗ) ಸಂದೋಹಂಗಳಂ. ೨–೨ (ಖ) ದೋರಂತೊಗೆ. ೩–೩ (ಖ, ಗ) ನೋಡಿ. ೪–೪ (ಖ) ಪರಬಳಪತಾಕಿನೀ. ೫–೫ (ಕ) ಗಂಡಗಲಿಯಂತಿನಿ. ೬–೬ (ಗ) ಭಾಸ್ವರ. ೭–೭ (ಅ) ನಿರ್ಜ್ಜರಾ.

ಅತಿತೃಷ್ಣಾತುರನಾಗಿ ಮನಸ್ಸು ತೊಡರ್ದಿರ್ದ್ದಾಗಳಂವ ಸಾಲ್ಗಂ ಮದಾ-
ಕ್ರಾಂತಿಯುಮಂ ಮಾಡಿಸಿ ಮುಪ್ಪು ಜಪ್ಪರಿಸೆಯುಂ ಚಿಃ ಕೆವಿಮ್ರಿಸೊಳ್ ಕುವಿಮ್ರಿ ಸಂ-
ಸ್ಕೃತಿಯೊಳ್ ಮತ್ತೆ ಗಡಂ ಕಿಸಂಗಿ ತೊಡರ್ದಾಂ ಮಾಣ್ದಪ್ಪೆನೆಂದಣ್ಮಿ ಘೋ-
ರತಪ್ರೋತ್ಸೃತ್ತಿಯನಾಂತ ಸಂಪತಿಬಳಂಗಳ್ತುಂ ಪೆಱಗಣ್ಮುವೋ ||೮೧||

ವ|| ಮತ್ತಮತ್ತ ಮಹಾಬಳವಿದ್ಯಾಧರಪತಿಯುಮಾತ್ಮೀಯ ಗುರುನಿರೂಪಿತಗ-ಗನಚರರಾಜ್ಯಭಾರಮನಾತ್ಮಶಪಪ್ರಭೃತಿಪ್ರರೂಢನಿರ್ಭರಪ್ರೇಮರಸರುಮನೇ-ಕಾರ್ಥ-ಶಾಸ್ತ್ರಪ್ರಯೋಗಕುಶಲರುಂ ಸಕಲಕಲಾವಗಾಹನಸಮಾಹಿತಮತಿ-ಗಳುಮಾಗಿ ನಾಲ್ಕುಮುಪಧೆಗಳೊಳಂ ಶುದ್ಧರಾಗಿ ನಾಲ್ಕುಮುಪಾಯಂಗಳಿ-ಪ್ಪಂತಿರ್ಪ್ಪ ಜಗತ್ಪ್ರಸಿದ್ಧ-ಸ್ವಯಂಬುದ್ಧ-ಮಹಾಮತಿ-ಸಂಭಿನ್ನಮತಿ-ಶತ-ಮತಿಗಳೆಂಬ ನಾಲ್ವರುಮಮಾತ್ಯರ ಮೆಯ್ಯೊಳ್ ನಿಱಿಸಿ ನಿರಾಕುಳಸ್ವಾಂತ-ನಪಗತರಾಜ್ಯಚಿಂತನಮರಸೌಂದರೀವಿಲಾಸೋಪಹಾಸಿಗಗನಚರಸುಂದರೀ-ಮನೋನಯನಸೌಂದರನಾಗಿ ವಿದ್ಯಾಧರಶ್ರೀಯನನುಭವಿಸಿ,

ಪೊಸತಂ ಸ್ತ್ರೀರಾಜ್ಯಮಂ ಮೇಣ್ ಪಡೆದನೊ ಬಿದಿ ಲಾವಣ್ಯಸಿಂಧುಪ್ರವಾಹಂ
ಪೊಸತೀಗಳ್ ಬಂದು ಬೆಳ್ಳಂಗೆಡೆದುದೊ ಗಣಿಕಾಸೃಷ್ಟಿಯಂ ಪುಷ್ಪಚಾಪಂ |
ಪೊಸತಂ ಮಾಡಿಟ್ಟನೋ ಸಿಪ್ಪು ನತು ನಲಿದಱಿಂದಂದಮೆಂಬಂತದೇಂ ರಂ-
ಜಿಸಿತೋ ವಿದ್ಯಾಧರಾಧೀಶ್ವರನ ಕೆಲದ ವಿದ್ಯಾಧರಸ್ತ್ರೀಸಮೂಹಂ ||೮೨||

ವನರಾಜಿಕ್ರೀಡೆಯಂ ಯೌವನವನದೊಳ್ ತೋಱಲ್ ಜಲಕ್ರೀಡೆಯಂ ನೂ-
ತನಲಾವಣ್ಯಾಚ್ಛತೋಯಾಶಯದೊಳ್ ಮೆಱೆಯಲ್ ನರ್ತನಕ್ರೀಡೆಯಂ ನ-|
ಚ್ಚಿನ ನಾನಾಭಾವರತ್ಯುತ್ಸವದೊಳ್ ಪಡೆಯಲ್ ಬಲ್ಲ ವಿದ್ಯಾಧರಸ್ತ್ರೀ-|
ಜನದಿಂದಂ ಕಣ್ಣೆವಂದಂ ಸುಕವಿಜನಮನೋಮಾನಸೋತ್ತಂಸಹಂಸಂ ||೮೩||

೧-೧ (ಅ, ಬ) ಳ್ದುರ್. ೨-೨ (ಅ, ಬ, ಕ, ಗ) ತೊಡಂಕಿ. ೩-೩ (ಗ) ಪೆಂಗಕ್ಕುಮೆ. ೪-೪ (ಅ, ಬ, ಕ, ಗ) ಶತಬುದ್ಧಿ. ೫ (ಚ) ಸೌ. ೬ (ಚ) ಸೌ. ೭-೭ (ಬ) ಜನಂಗಳ್, ೮-೮ ನವರಾಜಿ; (ಖ) ನವರಾಜ್ಯ.

ಲಲಿತಾಲಂಕರಣಪ್ರಸನ್ನರಸವದ್ಗೇಯಂಗಳೊಳ್ ಮೂಡುತುಂ
ಮುೞುಗುತ್ತುಂ ಖಚರೀಜನಾನನನವಾಂಭೋಜಂಗಳೊಳ್ ಕಂಪನೀ-
ೞ್ಕೊಳುತುಂ ನಂದನರಾಜಿಯೊಳ್ ನಲಿಯುತುಂ ತದ್ರಾಜಹಂಸಂ ನಿರಾ-
ಕುಳಮೀ ಮಾೞ್ಕೆಗಳಿಂದೆ ಪೊೞ್ತುಗಳೆವಂ ಸಂಸಾರಸಾರೋದಯಂ ||೬೪||

ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರರಾಕ್-
ಚಂದ್ರಿಕಾಪ್ರಸರಪ್ರಸಾದೋದೀರ್ಣಸೂಕ್ತಿಕಲ್ಲೋಲಮಾಲಾಕೀರ್ಣ-
ಕವಿತಾಗುಣಾರ್ಣವ-ಪ್ರಣೀತಮಪ್ಪಾದಿಪುರಾಣದೊಳ್ ಮ-
ಹಾಬಳಕುಮಾರೋದಯವರ್ಣನಂ.

# ದ್ವಿತೀಯಾಶ್ವಾಸಂ

ಶ್ರೀವಿಜಯಾರ್ದ್ಧಾಚಲ ಖಚ-
ರಾವಳಿಮಣಿಮುಕುಟಮಕರಿಕಾನಿಕಷಣದೀ[೧]-|
ಧಾವಿಲಸಿತಪದಕಮಲನಿ-
ಲಾಪಂ ಸ್ವಯಶಂ ಸರಸ್ವತೀಮಣಿಹಾರಂ ||೧||

ಕಟಕಕಟಿಸೂತ್ರಕುಂಡಲ-
ಘಟಿತಕಿರೀಟಾಂಗದಾದಿಮಣಿಭೂಷಣಭಾ-|
ಜಟಿಲಿತಮೂರ್ತ್ಯುತ್ಕರ್ಷಂ
ಸ್ಫುಟಹರ್ಷಂ ತನ್ನ ವರ್ಷವರ್ದ್ಧನದಿನದೊಳ್ ||೨||

ವ|| ಆಸ್ಥಾನಮಂಡಪದೊಳತಿಪ್ರಚಂಡಮಂಡಲಿಕಮಹಾಸಾಮಂತ-ಮಂತ್ರಿಪ್ರಧಾನಪುರೋಹಿತಾಂತರ್ವಂಶಿಕಾದಿಪರಿವಾರಪರಿವೃತನುತ್ತುಂಗ-ಸಿಂಹಾಸನಾಸೀನನಧಿಷ್ಠಿತಮಣಿಮಯಪೀಠವೇದಿಕಾವಿನ್ಯಸ್ತವಾಮ-ಪಾದ-ನಂಬರಚರಾಂಗನಾಕರತಲಪಲ್ಲವೋಲ್ಲಸಿತಹೇಮಚಾಮರಪವನವಿಲೋಲದು-ಕೂಲ[೨]ವಸನಪರಿವೃತ[೨]ಪಂಚರತ್ನಪ್ರಭಾಭಾಸುರವಿವಿಧವಿಭೂಷಣ-ವಿರಚಿತಸುಂ-ದರಾಸನನೊಡ್ಡೋಲಗಂಗೊಟ್ಟಿರೆ,

ಎರಡುಂ ವಿದ್ಯಾಧರಶ್ರೇಣಿಯ ಖಚರಮಹೀಪಾಲಕರ್ ಸುತ್ತಲುಂ ಬಂ-
ದಿರೆ [೩]ನಾನಾತೋದ್ಯವಾದ್ಯಂಗಳನೆ[೩] ಮೆಱೆವ ಮೆಚ್ಚಂಗೊಳಲ್ ವಾದಕರ್ ಬಂ-|
ದಿರೆ ಗೀತಾ[೪]ರಾವದಿಂ [೪]ಪಿನ್ನೆಱೆಯ ನೆಱೆಗೊಳಲ್ ರಕ್ತಕಂಠೀಜನಂ ಬಂ-
ದಿರೆ ವಂದಿವ್ರಾತಮೆತ್ತಂ ಬಗೆಗೊಳಲಿರೆ ಚೆಲ್ವಾದುದಾಸ್ಥಾನರಂಗಂ ||೩||

ಸುಡಿ ಪೊಗರಾಗಮಂ ಪಡೆಯೆ ನೋಟಮನಂಗನ ಬಿಲ್ಲ ಬಲ್ಮೆಯಂ
ಪಡೆಯೆ ನಯಂ ನಯಂಬಡೆಯೆ ಕಲ್ಪಮಹೀಜದ ಪಕ್ಕದಿರ್ಕೆಲಂ |
ಬಿಡಿದು ಮಡಲ್ತು ತೋಱುವ ಲತಾವಳಿಗಳ್ಗೆಣೆಯಾಯ್ತಿರಲ್ಕೆಲಂ
ಬಿಡಿದು ಖಗೇಂದ್ರನೋಲಗದೊಳಿರ್ದ[೫] ವಿಲಾಸ[೫]ವಿಲಾಸಿನೀಜನಂ ||೪||

೧ (ಚ) ಲೀ. ೨-೨ (ಕ) ವಸನಪರಿಮಿತ. ೩-೩ (ಅ, ಕ) ನಾನಾವಾದ್ಯನಾದಂಗಳನೆ. ೪-೪ (ಕ) ರವದಿಂ ಪಂ; (ಚ) ರಾವದಿಂಪಂ. ೫-೫ (ಬ) ವಿದಗ್ಧ.

ನಿರುಪಮದೇಹದೀಪ್ತಿಗಳೊಳಿಕ್ಕೆಯಿನೆಯ್ದೆ ಪೞಂಚಿ ಮಿಂಚುವಾ-
ಭರಣದ ಮಿಂಚು ಕಪ್ಪುರದ ಪಾಱುವ ಸುಟ್ಟುರಿ ಪೂವಿನುಬ್ಬುರ ಕ-|
ತ್ತುರಿಯ [೧]ತೆಗುಳ್ದ[೧] ಪೊಯ್ವ ಸೊವಡಾಸೊವಡೊಳ್ ಕಡು[೨]ಸೊರ್ಕ್ಕಿ ಸೊರ್ಕ್ಕಿ[೨]ಗಾ-
ವರಿಸುವ ತುಂಬಿ ಜಿಲ್ವಿಸೆಯೆ ಕಣ್ಗೆಸೆದತ್ತು ಖಗೇಂದ್ರನೋಲಗಂ ||೫||

ವ|| [೩]ಅಂತೋಲಗಂ[೩]ಗೊಟ್ಟಿರ್ದ್ದ ವಿದ್ಯಾಧರರಾಜನಂ ಸ್ವಯಂಬುದ್ಧನಭ್ಯು-
ದಯಪರಂಪರಾನಿಮಿತ್ತಂ ಸದ್ಧರ್ಮೋಪದೇಶಲಬ್ಧಾವಸರನಾಗಿ,

ಲಾವಣ್ಯಾಬ್ಧಿತರಂಗಭಂಗಲಲಿತಭ್ರೂಭಂಗದಿವ್ಯಾಂಗನಾ-
ಭಾವಾಪಾಂಗನಿರೀಕ್ಷಣಾಮೃತಕೃತಾನಂಗೋತ್ಸವಂ ಚೋದ್ಯವಿ-|
ದ್ಯಾವಷ್ಟಂಭವಿಜೃಂಭಿತಾಂಬರಚರೇಶಾರಾಧ್ಯನಾಗಿರ್ದ್ದ ನಿ-
ನ್ನೀವಿದ್ಯಾಧರಲಕ್ಷ್ಮಿ ಪುಣ್ಯಜನಿತಂ ವಿದ್ಯಾಧರಾಧೀಶ್ವರಾ ||೬||

ಭವವಾರಾಶಿನಿಮಗ್ನರಂ ದಯೆ ದಮಂ ದಾನಂ ತಪಂ ಶೀಲಮೆಂ-
ಬಿವೆ ಮೆಯ್ಯಾಗಿರೆ ಸಂದ ಧರ್ಮ್ಮಮೆ ವಲಂ ಪೊತ್ತೆತ್ತುಗುಂ ಮುಕ್ತಿಪ-|
ರ್ಯ್ಯವಸಾನಂಬರಮಾನುಷಂಗಿಕಫಲಂ ಭೂಪೇಂದ್ರ ದೇವೇಂದ್ರರಾ-
ಜ್ಯವಿಲಾಸಂ [೪]ಪೆಱತಲ್ತು[೪] ನಂಬು ಖಚರಕ್ಷ್ಮಾಪಾಲಚೂಡಾಮಣೀ ||೭||

ವ|| ಎಂದು ಧರ್ಮ್ಮಪ್ರಭಾವಮುಮಂ ತತ್ಫಲಸ್ವಭಾವಮುಮಂ ತಿಳಿಪು-
ವವಸರದೊಳುೞಿದ ಮಹಾಮತಿ-ಸಂಭಿನ್ನಮತಿ-[೫]ಶತಮತಿ[೫]ಗಳ್ ಲೋಕಾ-
ಯತಿಕ-ಯೋಗಾಚಾರ-ಮಾಧ್ಯಮಿಕಮತವಿತಥಾಭಿಧಾಯಿಗಳ್ ಜೀ[೬]ವಾಭಾ-
ವಮನೆ ಪಿಡಿಯುಚ್ಚುವಿಡಿದು,

ಒ[೭]ಡಲೊಳೆ ಜೀವಮಿರ್ದ್ದು ಗಡ ಸಂಚಿಸುತಿರ್ಪ್ಪುದು ಪುಣ್ಯಪಾಪಮಂ
ಗಡ ಬೞಿಕತ್ತ ಬೇಱೆ ಪೆಱತೊಂದೊಡಲೊಳ್ ಗಡ ತಾನೆ ನಿಂದೊಡಂ-|
ಬಡಿಪುದು ಧರ್ಮ್ಮಕರ್ಮ್ಮಫಲಮಂ ಗಡ ಸತ್ತನೆ ಮತ್ತೆ ಪುಟ್ಟುವಂ
ಗಡ ಪುಸಿ ಕಾಣ ಡಂಬಮಿದು ಖೇಚರ ನೀನಿದನೆಂತು ನಂಬಿಪೋ ||೮||

ತ[೮]ಲೆವಱಿದುಟ್ಟುದಿಕ್ಕಿ[೮] ಸುರಲೋಕಸುಖಂಗಳನುಣ್ಬೆವೆಂಬ ಬ-
ತ್ತಲೆಗರ ಮಾತುಗೊಳ್ಳದಿರು ಬಾೞ್ವನಮಿಂದ್ರಿಯವರ್ಗ್ಗದಿಚ್ಛೆಯಂ ।

---

೧-೧ (ಅ, ಕ) ಪೊಡಳ್ದ. ೨-೨ (ಚ) ಸೋರ್ಕಿಸೋರ್ಕಿ. ೩-೩ (ಚ) ಅಂತೊಡ್ಡೋಲಗಂ. ೪-೪ (ಅ, ಕ) ನೆಱವಲ್ತು; (ಖ) ಪೆಱದಲ್ತು. ೫-೫ (ಬ, ಖ) ಶತಬುದ್ಧಿ. ೬ (ಕ) ನ. ೭ (ಅ, ಬ) ಳು. ೮-೮ (ಚ) ಗೇಳನಿರು.

ಪರನಾವುದಂತರ್ಬಹೀರೂಪದಿಂ ವಿಶದದರ್ಶನಾವಗಮ್ಯಮದೆಲ್ಲಮಸತ್ಯಾವ-ಭಾಸಿಯೆಂತು ಮರುಮರೀಚಿಕಾಸ್ವಪ್ನೇಂದ್ರಜಾಲಾದಿಗಳೊಳ್ ವಿಶದದರ್ಶನಾ-ವಗಮ್ಯಜಲಕರಿತುರಗನರಾದಿಗಳಂತೆ ಜಾಗ್ರದ್ದಶಾವಭಾಸಮಾನಾಂತರಂಗಬಹಿ-ರಂಗವಸ್ತುಗಳುಮದಱಿಂ ಜೀವಮೆಂಬುದೆಲ್ಲಿತ್ತು? ಪರಲೋಕಮೆಂಬುದಾವೆಡೆ-ಯದು? ಅದರ್ಕ್ಕೆ ಕಾರಣಮಪ್ಪ ಪುಣ್ಯಪಾಪಂಗಳೆತ್ತಣಿಂ ಬಂದುವು? ಇವೆಲ್ಲಂ ಗಂಧರ್ವ್ವನಗರವಿಲಾಸವಿಲಸಿತಂಗಳ್. ಅದನಱಿಯದಬೋಧಬೋಧಿತತಪೋ-ದಾಸದಿಂ ಮುಧಾಕ್ಲೇಶಾಯಾಸನಿರತರಾಗಿ ಸಮೆವರೆಂದು ಶತಮತಿಯುಮೀ-ಮಾಟಿಕ್ಕೆಯೊಳೆ ಜೀವಾಭಾವಮನೆ ಸಮರ್ಥಿಸೆ ತದುಪನ್ಯಸ್ತಕುಹೇತು-ಕುದೃಷ್ಟಾಂತಾನರ್ಥಕವಚನರಚನಾಪ್ರಲಾಪಮನವ್ಯಗ್ರಕುಶಾಗ್ರೀಯಬುದ್ಧಿ-ಸಮೃದ್ಧಂ ಸ್ವಯಂಬುದ್ಧನವಧಾರಿಸಿ,

ಅನುವದಿಸಿದಪುದು ನುಡಿ ನುಡಿ-
ದನಿತುಮನೆನೆ ಕೊದಳೆ ತೊದಳ ದೆಸೆಯಿಲ್ಲೆನೆ ಮಾ-।
ತಿನ ಪಸುಗೆ ಪಸುಗೆವಡೆದ-
ತ್ತೆನೆ ನುಡಿದಂ ಮಧುರಮೃದುಗಂಭೀರಧ್ವನಿಯಿಂ ॥೧೦॥

ವ॥ ನಿಮ್ಮ ಮುನ್ನೆ ನುಡಿದ ಕಾಯಾಕಾರಪರಿಣತಭೂತಸ್ವಭಾವಮೆ ಚೈತನ್ಯಮರ್ಥಾಂತರಭೂತಮಲ್ಲೆಂಬ ನುಡಿ ಕಾಯಾಕಾರಪರಿಣತಭೂತ-ಚೈತನ್ಯಂಗಳೊಳ್ ಬಹಿರಂತರ್ಮುಖಾವಭಾಸಿಗಳುಂ ಬಾಲ್ಯಾದಿರಾಗಾದಿವಿರುದ್ಧ-ಧರ್ಮ್ಮಾಧ್ಯಾಸಿಗಳುಮೊರ್ಬ್ಬನಿಂದೊಂದೆ ಸಮಯದೊಳ್ ನಿಯಮದಿಂ ಪ್ರ-ಮಾಣಾಂತರಭಾವದಿಂ ಭಿನ್ನಪ್ರಮಾಣಗ್ರಾಹ್ಯಂಗಳಪ್ಪುದಱಿಂ ಕೂಡಿಬಾರದು. ದೇಶಭೇದದಿಂ ಬೆಱಿವೇಱಿ ಕಾಣಲಾಗದಪ್ಪುದಱಿಂದದರ್ಕ್ಕೆ ಭೇದಮೆಂಬೆಯ-

೧-೧ (ಅ, ಬ) ಗಮ್ಯಮಸತ್ಯಾ. ೨-೨ (ಬ) ಗಳುಮಸತ್ಯಾವಭಾಸಿಗಳದರಿಂ. ೩-೩ (ಚ) ಪಾಪಪುಣ್ಯ. ೪-೪ (ಅ, ಕ) ಯುದಗಾಧಬೋಧ. ೫-೫ (ಅ) ಯಿಂ. ೬-೬ (ಕ) ಭಾಸಮನೆ. ೭-೭ (ಚ) ತೊದಳ. ೮-೮ (ಬ) ಭೂತಸ್ವಭಾವ. ೯ (ಚ) ಳ್ ಬ. ೧೦-೧೦ (ಚ) ಳ್. ೧೧-೧೧ (ಚ) ಧ್ಯಾಸ್ಯಿತಂಗಳು. ೧೨-೧೨ (ಅ, ಕ) ಕೂಡಪಡುವೆ; (ಬ) ಕೂಡದು. ೧೩-೧೩ (ಬ) ಲಾದುಪರಿಂದಿನ್ನವಕ್ಕೆ.

ಪ್ಪುದೆ [೧]ವಿಶದ[೧]ರೂಪಪರಿಣತ[೨]ಾವನಿಪವನಸಖಪವನಂಗಳ್ಗೆ[೨] ದೇಶಭೇದಮಿಲ್ಲ. [೩]ಶಿವಕ್ಷ್ಣನೋ[೩]ಕ್ತಮಾಗಿ ‘ ಚತ್ವಾರ್ಯೇವ ತತ್ತ್ವಾನಿ ’ ಯೆಂಬ ನಿನ್ನ ಮಾತು ವಿಘಟಿಸುಗುಂ. ಪಿಷ್ಟೋದಕಾದಿದ್ರವ್ಯಾನ್ವಯವ್ಯತಿರೇಕಾನುವಿಧಾಯಿಯಪ್ಪ ಮದಶಕ್ತಿಯಂತು ತತ್ಕಾರ್ಯಮಂತೆ ಚೈತನ್ಯಮುಂ ಭೂತಾನ್ವಯವ್ಯತಿರೇಕಾನುಕಾರಿಯಪ್ಪುದರಿಂ ಭೂತೋಪಾದಾನಕಾರಣಕಾರ್ಯಮೆಂಬೀ ವಚನಮುಪಾದಾನವಿಕಾರಮಲ್ಲದೆ [೫]ವಿಕಾರಮಂ[೫] ಕೈಕೊಳ್ಳದು. ಉಪಾದೇಯಧರ್ಮ[೬]ಮುಂ[೬] ತನ್ನ ವಿಕಾರಮುಮನುಪಾದೇಯ[೭]ಕ್ಕೊಪ್ಪಿ[೭]ಸುವ ಪೂರ್ವಾಕಾರಮಂ ಬಿಸುಟ್ಟುತ್ತರಾಕಾರಮಂ ಕೈಕೊಳ್ವುಪಾದಾನಧರ್ಮ[೮]ಮುಮ[೮]ಮಂ ಭೂತಕೊಳ್ ಕಾಣಲಾಗದುದಱಿಂ [೯]ಕೂಡಿಬಾರದು;[೯] ಬಾಲ್ಯಾದಿವಯೋವಿಶೇಷಂಗಳೊಳ್ ಶರೀರಂ ಬಳೆಯೆ ಚೈತನ್ಯಂ ಬಳೆವುದ[೧೦]ಱಿಂ ಭೂತೋಪಾದಾನಕಾರಣ[೧೧]ಕಾರ್ಯ[೧೧]ಮೆ ಚೈತನ್ಯಮೆಂಬೆಯಪ್ಪೊಡೆಯದುವುಂ ಹಿತಾಹಿತವಿವೇಕವಿಕಳತೆಯಿಂ ತಮ್ಮಂ ತಾಮೆ [೧೨]ಕಟ್ಟಿಸಿಕೊಳ್ವ[೧೨] ಮಹಾಕಾಯಂಗಳಪ್ಪ ಕರಿಪತಿಗ[೧೩]ಳಿಂದಮನೇಕಾಂತಿಕ[೧೩]ರ್ ಕೆಲರ್ ತನುತರತನುಗಳೊ[೧೪]ಳ[೧೪]ತಿವಿಶದ[೧೫]ಪ್ರಜ್ಞಾತಿ[೧೫]ಶಯಮುಮಂ ಕಾಣಲಾದಪ್ಪುದು; ಶರೀರವೃದ್ಧಿಯೊಳ್ ಚೈತನ್ಯವೃದ್ಧಿಯೆಂಬುದುದಕವೃದ್ಧಿಯೊಳಂ ಕುರವೃದ್ಧಿಯೆಂತಂತೆ ಸಹಕಾರಿಕಾರಣಮೆಂದನೇಕಯುಕ್ತ್ಯುಕ್ತಿಗಳಿಂ ಭೂತವಾದಿಯಪ್ಪ ಮಹಾಮತಿಯುಂ ನಿರಾಕರಿಸಿ, ವಿಜ್ಞವಿಜ್ಞಾನವಾದಮೆಂಬಿದಂ ವಿಜ್ಞಾನದಿಂದ ನೀಂ ಸಾಧಿಸುವೆಯಪ್ಪೊಡೆ ಸಾಧ್ಯಸಾಧ[೧೬]ನಂಗಳ್ಗೈ[೧೬]ಕ್ಯಮಪ್ಪುದಱಿಂ ಸಾಧ್ಯಂ ನಿಶ್ಚಯಮಾಗದು; ವಿಜ್ಞಾನವ್ಯತಿರಿಕ್ತಸಾಧನವಾಕ್ಯೋಪನ್ಯಾಸದಿಂ ಸಾಧಿಸುವೊಡಾವಾಕ್ಯಮೆ ಬಹಿರರ್ಥ-

೧-೧ (ಕ) ವಿಶದ. ೨-೨ (ಇ, ಬ) ತಾಪಸಿವನಪವನ. ೩-೩ (ಇ) ಅವಕ್ಷ್ಣ್ಣ. ೪-೪ (ಕ) ಕಾರ್ಯಕಾರಣ. ೫-೫ (ಇ) ಸಹಕಾರಿವಿಕಾರಮಂ. ೬-೬ (ಅ, ಬ) ಮುಮ. ೭-೭ (ಅ) ಕ್ಕಪ್ಪ. ೮-೮ (ಚ) ಮುಂ. ೯-೯ (ಕ) ಕೂಡದು. ೧೦ (ಅ) ಱಿಂದ. ೧೧-೧೧ (ಚ) ಕಾರ್ಯ. ೧೨-೧೨ (ಬ, ಚ) ಕಟ್ಟಿಸುವ. ೧೩-೧೩ (ಇ) ಳಿಂದನೈಕಾಂತಿಕಂ; (ಬ) ಳಿಂದಮನೇಕಾಂತಿಕಂ; (ಚ) ಳಿಂದಂ; ಅನೈಕಾಂತಿಕರ್; (ಕ) ಳಿಂದನೇಕಾಂತಿಕರ್. ೧೪-೧೪ (ಇ) ಳ್ತಿ. ೧೫-೧೫ (ಬ) ಪ್ರತಿಜ್ಞಾ. ೧೬-೧೬ (ಚ) ಳವ್ಯಕ್ತ.

ಮಪ್ಪುದಱಿಂ ಬಾಹ್ಯಾರ್ಥಸಿದ್ಧಿಯಕ್ಕುಮಾವಾಕ್ಯಮುಂ ವಿಜ್ಞಾನಮೆಂಬೆಯಪ್ಪೊಡೆ ಪೂರ್ವ್ವೋಕ್ತದೋಷಪಾಷಾಣಸಂಚೂರ್ಣ್ಣಿತಮತಿಯೇ[1] ಏನನೇತಱಿಂ ನಿಶ್ಚಯಿಸುವೈ ? ಮತ್ತಂ ವಿಜ್ಞಾನಂ ವಿಜ್ಞಾನಾಂತರಗ್ರಾಹಕಮಕ್ಕುಮಪ್ಪೊಡಾವ ಮಾಟಕ್ಕೆ[2]ಯೊಳ್ ವಿಜ್ಞಾನಾಂತ[2]ರಮಪ್ಪುದಾ ಮಾಟಕ್ಕೆಯೊಳೆ ಬಹಿರರ್ಥಸಿದ್ಧಿಯಾಗಿ ಸರ್ವ್ವಪ್ರತ್ಯಯನಿರಾಲಂಬನವಾದಂ ಕಿಡುಗುಮದುವುಂ ವಿಜ್ಞಾನಾಂತರಗ್ರಾ[3]ಹಿಯಾಗದಪ್ಪೊಡೆ[3] ಸಂತಾನಾಂತರನಿರಸನಮಕ್ಕುಮನುಮಾನದಿಂ ಸಂತಾನಾಂತರಮುಂ [4]ಸಾಧಿಸುವೆನೆಂಬೆಯಪ್ಪೊಡಂ[4] ಬಹಿರರ್ಥಸಿದ್ಧಿಯಕ್ಕುಂ; ಮತ್ತಂ ವಿಜ್ಞಾನಮಾತ್ರಮಲ್ಲದೆ ಪೆಱತಿಲ್ಲಕ್ಕುಮಪ್ಪೊಡೆ ವಿಜ್ಞಾನಮಾತ್ರಮೆ ತತ್ತ್ವಮೆಂಬೀ[5] ವಚನವಿಜ್ಞಾನಂಗಳ್ ಬಾಹ್ಯಾರ್ಥಶೂ[6]ನ್ಯಂಗಳ[6]ಪ್ಪುದಱಿನಸತ್ಯಂ[7]ಗಳಕ್ಕುಮಾದಂದು[8] ಸತ್ಯೇತರವಿಭಾಗಂಗಳಂ ಪಡೆಯಲಾಗದು; ಅದು ಸಾಧನದೂಷಣಪ್ರಯೋಗಾನ್ಯಥಾನುಪಪತ್ತಿಯಿಂ ಬಹಿರರ್ಥಸಿದ್ಧಿಯಕ್ಕುಮದಱಿಂ ವಿಜ್ಞಾನಮಾತ್ರಮೆ ತತ್ತ್ವಮಾತ್ಮಾದಿತತ್ತ್ವಮಿಲ್ಲೆಂಬ [9]ನಿನ್ನ ಮಾತು ಭಿನ್ನಭಾಜನಸಮಾನಮೆಂದು ಸಂಭಿನ್ನಮತಿಗಂ [9]ಪ್ರತಿಭಾಭಂಗಮಂ ಮಾಡಿ, ಸಕಲಬಹಿರಂಗಾಂತರಂಗತ[10]ತ್ತ್ವಂಗ[10]ಳ್ ಶೂನ್ಯಂಗಳೆಂ[11]ಬಿದನಱಿಪುವ ಭವತ್ಪ್ರತ್ಯಯಾಭಿಧಾನಂಗಳ್[12] ಶೂನ್ಯಂಗಳೆಯಕ್ಕುಮಪ್ಪೊಡೆ ಸ[13]ರ್ವ್ವಶೂನ್ಯಮೆಂಬೀ ನಿನ್ನ ಮಾತು[13] ಕೆಟ್ಟು ಪೋಕುಂ; ತತ್ ಪ್ರತ್ಯಯಾಭಿಧಾನಂಗ[14]ಳುಳ್ಳೊಡೆ ಅವೆಂತೊ[14]ಳವಂತೆ ವಸ್ತುಗಳಿಲ್ಲಮೊಳವಪ್ಪುದಱಿನನಾದ್ಯನಿಧನಸ್ವಭಾವನುಂ ಸುಕೃತದುಷ್ಕೃತಕರ್ಮ್ಮೋಪಾರ್ಜ್ಜನನುಂ ತತ್ಫಲಭಾಜನನುಂ ಸೂಕ್ಷ್ಮರೂಪನುಮನಂತ[15]ಜ್ಞಾನಾದಿಗುಣಸಂಪೂರ್ಣ್ಣನುಂ[15] ಸಂಹರಣವಿಸರ್ಪ್ಪಣಾಸ್ವರೂಪನುಮಾತ್ಮೋಪಾತ್ತಶರೀರಪ್ರಮಾಣನುಮುತ್ಪಾದವ್ಯಯಧ್ರೌವ್ಯಾತ್ಮಕನುಂ ಸಕಲಕರ್ಮ್ಮನಿರ್ಮ್ಮೂಲನಕರನುಂ ತ್ರಿಲೋಕಶಿಖರಶೇಖರನುಮಪ್ಪ

೧ (ಚ) ಯ್ಯೆ. ೨-೨ (ತ) ವಿಜ್ಞಾನಾಂತರಗ್ರಾಹಕ. ೩-೩ (ಕ) ಗ್ರಾಹಿಯಕ್ಕುದಕ್ಕ. ೪-೪ (ಕ) ಗ್ರಾಹಿಯಪ್ಪುದಪ್ಪೊಡೆ. ೫ (ಅ, ಬ) ಬ. ೬-೬ (ಅ) ಶೂನ್ಯಮ. ೭-೭ (ಅ) ಱಿಂದತ್ಯಂತಶೂನ್ಯಂಗಳಕ್ಕುಂ; (ಚ) ಱಿನನಂತ್ಯಂಗಳಕ್ಕುಂ. ೮ (ಚ) ದ. ೯-೯ (ಕ, ಖ) ಪ್ರತಿಭಂಗಂ. ೧೦-೧೦ (ಕ) ತತ್ತ್ವದೊಳ್. ೧೧ (ಅ) ಬು. ೧೨ (ಅ) ಳುಂ ಶೂ. ೧೩-೧೩ (ಅ) ಶೂನ್ಯಂಗಳೆಂಬೀ ನಿನ್ನಭಿಮತಂ. ೧೪-೧೪ (ಅ) ಡಮೆಂತೊ. ೧೫-೧೫ (ಚ) ಗುಣರೂಪನುಂ.

ಪ್ರ್ಪೂರರಮೃಣಾಲಾದಿಗಳುಂ ।
ಬಾರಿಸಲಾಱವೆ ದಲವನ ದಾಹಜ್ವರಮುಂ ॥೧೩॥

ಕುಳಿರ್ವ ತಿಳಿನೀರಸುಡುಗದೆ
ತಳಿ ತಳಿರಂ ಪಾಸು ಜಳದೆಯಿಂ ಬೀಸೆಂದು॥
ಮ್ಮುಳಿಸಿ ಕಳವಳಿಸಿ ವಿರಹಾ-
ಕುಲನವೊಲಾಖಚರನಿಂತು ತಳವೆಳಗಾದಂ ॥೧೪॥

ವ॥ ಅಂತನೇಕಶೀತಲಕ್ರಿಯೆಗಳಿಂ ಶರೀರಸಂತಾಪಮನೆಂತುಂ ಮಾಣ್ಚಲಾಱದೆ ಪುಣ್ಯಕ್ಷಯದೊಳ್ ತನ್ನ ವಿದ್ಯೆಗಳುಂ ಬೆಸಕೆಯ್ಯದಿರೆ ಹರಿಶ್ಚಂದ್ರನೆಂಬ ತನ್ನ ಮಗನಂ ಕರೆದು, ತನ್ನ ದುಸ್ಸಹಾವಸ್ಥಾಂತರಮನಱಿಪಿ ನೀನೆನ್ನಂ ನಿನ್ನ ಗಗನಗಾಮಿನೀ ವಿದ್ಯೆಯಿನುತ್ತರಕುರುವನೆಯ್ದಿಸಲ್ಲಿಯ ಸುರತರುಗಳ ತಣ್ಣೆಳಲ್ಗಳೊಳಂ ಕಲ್ಪಲತೆಯ ಜೊಂಪಂಗಳೊಳಂ ಸೀತಾನದೀತರಂಗಾಲಿಂಗಿತಸಂತಾನಲತಾಲತಾಂತಸುರಭಿತರಮಂದಾರವನವೀಧೀವಿಹಾರಪರಿಶ್ರಾಂತಪವಮಾನಸ್ಪರ್ಶನದಿಂ ಮದೀಯಾಂಗಸಂಗತಪರಿತಾಪಮನಾಱಿಸುವೆನೆಂದು ನಿಜನಂದನಂಗೆ ಪೇೞ್ದೊಡಾತನುಂ ತನ್ನ ಪಯೋಧರಪಥಗಾಮಿನೀವಿದ್ಯೆಯುಂ ಬೆಸಸಿದೊಡೆ, ನರಕಗಮನಾಭಿಮುಖನಾಗಿರ್ದನಿರವಿಂದಂಗುಪಕಾರಂಗೆಯ್ವುದಶಕ್ಯಮೆನೆ, ವಿದ್ಯಾವಚನದಿನಾತನಾಸನ್ನಮೃತ್ಯುವನಱಿದು, ವಿಷಣ್ಣಮನಸನುದಾಸೀನನಾಗಿರ್ದನನ್ನೆಗಂ, ಪರಸ್ಪರಕಲಹಕಲುಷಿತಗೃಹಕೋಕಿಲಂಗಳೊಂದೊಂದಂ ತಿನೆ, ಪಸಿತಶೋಣಿತಬಿಂದುಗಳ್ ತನ್ನ ಮೆಯ್ಗೆ ಪಾಪಪರಿಪಾಕದಿಂ ತಣ್ಪಂ ಪಡೆಯೆ, ಪರಮೌಷಧಮುಂ ಪಡೆದೆನೆಂದು ಕರಮೊಸೆದರವಿಂದಂ ಕುರುವಿಂದನಂ ಕರೆದುತ್ಪನ್ನವಿಭಂಗಜ್ಞಾನದಿಂ ಮೃಗಂಗಳಿರ್ದೆಡೆಯನಱಿದು,

೧ (ಬ) ನ. ೨ (ಬ) ಲ. ೩-೩ (ಚ) ಅಂತನೇಕಪ್ರಕಾರಶೀತಳ. ೪ (`, ಬ) ತು. ೫-೫ (ಚ) ಗಳುಂ ತನಗೆ. ೬-೬ (ಚ) ಪಿರಿಯ ಮಗನಂ. ೭-೭ (ಚ) ನೀನೆನ್ನಂ. ೮-೮ (ಅ) ಕುರುಮನೆ; (ಬ) ಕುರುಮನೆ. ೯-೯ (ಬ) ಲಂಗಿತ ೧೦-೧೦ (ೀ) ವಿಶ್ರಾಂತ. ೧೧-೧೧ (ಬ) ನಾಱಿಸಲೆಂದು. ೧೨-೧೨ (ಬ) ವಚನದಿನಾಸನ್ನ; (ಚ) ವಚನದಿನಾತನಾಸನ್ನ. ೧೩ (ಬ) ವಾ. ೧೪-೧೪ (ಅ, ಕ) ಗಿರ್ಪನಂ. ೧೫-೧೫ (ಬ) ಗಳೆಡೆಯ.

ನಿಸ್ಸಂದಾನನವರುಣಜಲಪೂರ್ಣೆಗೆ ಲೀಲಾಸರೋವರಮಂ ನೀಡಿಲ್ಲದೆ ನಾಡೆಂದು ಪೇೞ್ದುದನಾನಿಸ್ತ್ರಿಂಶಕನುಗ್ರಕ್ಕೆ [1]ಕೊಕ್ಕರಿಸಿ[1] ಪಾಪಭೀರುವಪ್ಪುದಱಿಂ [2]ತಮ[2]ಪರೋಕ್ಷದಿಂ ಮನಮಿಲ್ಲದ ಮನದೊಳ್ ತದುದ್ದಿಷ್ಟವ್ಯಾಪಾರಮನೆಸೆದು, ವಿಸ್ಪಷ್ಟಾನಿಗಳೆನಿಪ್ಪವರಂ ಕಂಡು, ನಿವೇದಿತನಿಜಜನಕ[3]ವೃತ್ತಾಂತ[3]ಮನನಾಗಿ ಪಡೆದವಿಸಾತ್ರೀಯಂ ಪಿತೃಮರಣಮುಮನಾತನ [4]ನರಕಗತಿ[4]ಗಮನಮುಮನಱಿದು ಕರುಣಾರಸಾರ್ದ್ರಹೃದಯನಪ್ಪಂ [5]ಮಾಡವೆ[5] ಲಾಕ್ಷಾದ್ರವಾ[6]ಪೂರಿತಮಾಯಾರುಣಜಲಪರಿಪೂರ್ಣನಾಸಿಯಂ ನಮೆಯಿಸಿದೊಡದಂ ಕಂಡು ರಾಗಿಸಿ ಪ್ರಾಕ್ತ್ರ ನೀಡುವೋಲಾಡಿ ಮುಕ್ತ್ವಾಸಿಸ ನೋಡಿ, ಕೃತಕ[7]ರುಧಿರ[7]ಮಪ್ಪುದಱಿಂದೀಮತ್ತ[8]ಂ ಬಂಚಿಸಿದನೆಂದು ನಿಜಾಯುದ ನರಕಾಯುಷ್ಯಮಂ ನೆಱಪುವನೆಂಬಂತೆ ಮುಳಿದು [9]ವಿಘೂರ್ಣ[9]ಮಾನಲೋಹಿತಲೋಚನಂ ದರ[10]ನಿಷ್ಪೀಡಿತ[10]ದಶನವಸನನಿರ್ಘೋಷಮಂ ಕೆಯ್ದು, ನಡನಡನಡುಗಿ ತಡಪಡಿಸುತ್ತುಮಿರ್ದುಯಲ್ ಸವಿನಾತಂ ವಾಸಿಸೋವಾನಮನಡರುತ್ತುಂ [11]ಜಾಱಿ[11]ಬಿಡು ಕೆಡೆದುದರದೊಳ್ ನಟ್ಟ ಸುರಿಗೆ ಬೆನ್ನೊಳ್ ಮೂಡೆ, ಗತಜೀವಿತನಾಗಿ ನರಕಕ್ಕಿೞಿದನಿದನೀಗಳುಮೀಪುರಜನಂಗಳ್ ಪೇೞೆ ಕೇಳಲಕ್ಕುಂ. ಮತ್ತಮೀತನ ವಂಶದೊಳೀಪ್ರಾಬಲೊಳ್ ನೆಗೞ್[12]ತ್ತೆ[12]ತ್ತಂ ದಂಡಿತಾರಾತಿಮಂಡಲಂ ಗಂಡಕನೆಂಬನಾತನ ಮನೋರಮನಾರಿ [13]ನಾಂ[13]ಪರಿಯೆಂಬಳವರ್ಗೆ ಪುಟ್ಟಿದ ಮಗನುಗ್ರಪ್ರತಾಪವಿಜಿತಾಂಬುಮಾಳಿ ಮಣಿಮಾಳಿಯಂಬೊ[14]ನಾಗೆ [15]ಪಲ[15]ಕಾಲಮರಸುಗೆಯ್ದು,

[16]ಕಳೆಯಂ ಘಾತಿಸಿ ತಕ್ಕರಂ ಕಪರ್ದ ಕೊಂಡಾವರ್ಧನಮಂ ಪ್ರೋ[17]ಬ್ದ ನಿ-
ಕ್ಕೆ ನೋಡುತ್ತುಮುಗ್ರಲೋಭವಶದಿಂ ತನ್ನಂಡುಮಂ ತಪ್ಪದೆಂ—|
ದಕವಂ [18]ಮಾಣಿಸಿ ನತ್ತು ದಂಡಕನ್ನಪಂ ಲೋಭಾಭಿಭೂತಂ ವಿಷಾ-
ಹಿಳಿದಂಷ್ಟ್ರಂ ಕ್ರಿಯುವಾಗಿ ಪುಟ್ಟಿ ಸುಟಾಗುಂ ಮುಂಬಯ್ತು ಭಂಡಾರದೊಳ್||೧೫||

೧-೧ (ಬ) ಕೊಕ್ಕರಿಸಿ, ತಾಂ. ೨-೨ (ಚ) ತಂದೆಯ ತಮ. ೩-೩ (ಚ) ವೃತ್ತಾಂತ ನವರ; (ಖ) ವೃತ್ತಾಂತಮವಧಿ. ೪-೪ (ಅ, ಕ) ಭೋಗಗತಿ. ೫-೫ (ಚ) ಮಾಡಲಾಱದೆ. ೬ (ಬ) ನು. ೭-೭ (ಅ, ಬ) ರುಧಿರಜಲ. ೮ (ಬ) ಸ್ತ. ೯-೯ (ಚ) ಘೂರ್ಣ. ೧೦-೧೦ (ಚ) ನಿಪೀಡಿತ. ೧೧ (ಚ) ಜಿ. ೧೨ (ಅ) ತ್ತ. ೧೩ (ಬ) ನುಂ. ೧೪ (ಚ) ಗಿ. ೧೫-೧೫ (ಬ) ಪಲಬುಂ ಕಾಲ. ೧೬ (ಅ, ಬ) ಯಿ. ೧೭ (ಬ) ಣ್ದು. ೧೮ (ಬ) ಡಿ.

ವ|| ಅಂತಾರ್ತ[೧]ಧ್ಯಾನದೊ[೨]ಳಜಗರನಾ[೨]ಗಿ[೩] ಪುಟ್ಟಿ ತನ್ನ[೩] ಮುನ್ನಿನ ಸಂಚಿತ-ವಸ್ತ್ರಗಳು[೪]ಮಂ ಮ[೪]ಗಂ ಮಣಿಮಾಳಿಯು[೫]ಮಂ[೫] ಕಂಡು ಜಾತಿಸ್ಮರನಾಗಿ, ಮಣಿಮಾಳಿಯುಲ್ಲಮುೞಿದರಾರುಮಂ ನಾರಲೀಯದೆ ಭಂಡಾರಮಂ ಕಾದುಕೊಂ[೬]ಡಿ-ರ್ಪ್ಪಿನ[೬]ಮೊಂದು ದಿವಸಂ ಮಣಿಮಾಳಿ [೭]ಮತಿಚಾರಣರೆಂಬ ಚಾರಣರನವಧಿಜ್ಞಾ-ನಿಗಳಂ ಕಂಡಜಗರವೃತ್ತಾಂತಮಂ ಬೆಸಗೊಂಡು ವಿಷಮವಿಷಧರನಾತ್ಮೀಯ-ಜನಕನೆಂದಱಿದು ತತ್ ಸಮೀಪಕೆ ವಂದು,

ಸೀಗತಿಲೋಭದೊಳಿಲ್ಲಿ ಕು-
ಯೋನಿಯೊಳಜಗರನೆಯಾದೆಯಾಮೋಹಮದೇ-|
ನೇನಂ ಮಾಡದೊ ಬಿಸುಡಿ[೮]ದ-
ನಾನಿನ್ನೇನೆಂಬೆನೆಂಬುದಂ ಕೈಕೊಳ್ಳಾ ||೧೬||

ವಿಷಯಾಮಿಷಲಂಪಟತೆಯು
ವಿಷಧರನೆನಿಸಿದುದು ನಿನ್ನನೆಲೆ ವಿಷಧರ ನೀಂ |
ವಿಷಧರನಾಗದೆ ಬೇಗಂ
ವಿಷಯಾಮಿ[೯]ಷವಿಷಮನುಗುೞ್ದು ನಿರ್ವಿಷನಾಗಾ ||೧೭||

ವ|| ಎಂದು ತನ್ನಂ ಪ್ರತಿಬೋಧಿಸಿದ ನಿಜತನೂಜನ ವಚನತಿಗ್ಮ[೧೦]ರೋಚಿ-ರುಚಿ[೧೦]ನಿಚಯದಿನಾತ್ಮೀಯಚೇ[೧೧]ತೋನಿ[೧೧]ಚಿತಮೋ[೧೨]ಹಾಂಧತಮಸ್ತೋ[೧೨]ಮಮಂ ಕಳೆದು [೧೩]ಕೃತಾನುಶಯನನಶ[೧೩]ನವಿಧಾನದಿನಸುವಂ ವಿಸರ್ಜ್ಜಿಸಿ ಸೌಧರ್ಮ್ಮಕಲ್ಪದೊಳ್ ದೇವನಾಗಿ,

ನೆನೆದಾಗಳ್ ನಿಜನಂದನೋಪಕೃತಮಂ ತದ್ದೇವನೆಯ್ತಂದು ದೇ-ವನಿಕಾಯಂ ಬೆರಸಪ್ಪಿಕೊಂಡು ದಿವದೊಳ್[೧೪] ಮೇಲಪ್ಪ ರತ್ನಂಗಳಿಂ-|

೧ (ಚ) ರ್ಥ. ೨-೨ (ಅ) ದಿನ. ೩-೩ (ಚ) ನಾಗಿ ತನ್ನ. ೪-೪ (ಚ) ಳಂ. ೫-೫ (ಚ) ಯುಂ. ೬-೬ (ಚ) ಕೊಂಡಿರ್ಪುದು. ೭ (ಚ) ರ. ೮ (ಅ, ಬ) ಡ. ೯ (ಬ) ನಿ. ೧೦-೧೦ (ಬ) ರೋಚಿ. ೧೧-೧೧ (ಬ) ಚೇತನೋಚೇತ. ೧೨-೧೨ (ಬ) ಹಾಂಧತಾಮಸಮಂ; (ಚ) ಹಾಂಧತಮಸ್ತಮಮಂ. ೧೩-೧೩ (ಅ, ಬ) ಕೃತಾನುಶಯನನನಶನ. ೧೪ (ಅ) ದಿಂ ಮೇ.

[೧]ವಸಿತಂ ಮುಂ ಮಣಿಮಾಲಿಗಿತ್ತನವ ತನ್ಮಾಮ್ನಾಯದಿಂ ಬಂದೊಡೀ-
ತ್ರಮಹೀಶರ್ಗೆ ನೆಱೆ ತೊಟ್ಟು ಬಂದ[೨]ನಿವನೇಂ ನೀಮೆಲ್ಲರುಂ ಕಾಣಿರೇ ॥೧೮॥

ವ॥ ಇದನ್ನೆಗಮನುಭೂ[೩]ತಮಲ್ಲದೆಯುಂ[೩] ಪಯೋಧಿಕವ್ಯೋಪಮಚರ-ಪ್ರತ್ಯಕ್ಷಮೀ ಮಹಾಬಲನ ಪಿತೃಪಿತಾಮಹಂ[೪] ಸಹಸ್ರಬಲ[೫]ನೆಂಬನಂ[೫]ಬರಚರನಾತ್ಮೀಯ ಶ್ರೀಯನನುಭವಿಸಿ, ವಿಷಯವಿರಕ್ತನಾಗಿ, ನಿಜರಾಜ್ಯಪದವಿಯೊಳ್ ತನ್ನ ಪಿರಿಯ ಮಗನಪ್ಪ,

ಶತಬಲನಂ ಸಹಸ್ರಬಲಖೇಚರನಿಟ್ಟು ತಪೋನಿಯೋಗನಿ-
ಶ್ಚಿತಮನನಾಗಿ ನಂದನಪವರ್ಗ್ಗಪದ[೬]ಕ್ಕೆ ಬಟೆಕ್ಕೆ ಧಾತ್ರಿಯುಂ।
ಶತಬಲನಾತ್ಮಜಂಗೆ ನೆಗಳ್ದ್ದ ಖಚರೇಂದ್ರನ ತಂದೆಯಪ್ಪ ನಂ-
ದತಿಬಲ-ಖೇಚರಂಗೆ ತೊದಳಿಲ್ಲದೆ ಕೊಟ್ಟುಪಶಾಂತಮಾನಸಂ ॥೧೯॥

ವ॥ ಗೃಹೀತೋಪಾಸಕವ್ರತನನಶನಾವಮೋದರ್ಯ್ಯಾದ್ಯಾಚರಣಪರಿಣತಂ ಯಥೋಚಿತವಿಧಿಯಿಂದಾಯುರವಸಾನದೊಳ್[೭] ಸಂಸಾರಕ್ಷಪಕನಾಗಿ, ಸಮಾಧಾನಪುರಸ್ಸರಂ ಸನ್ಯಸನವಿಧಾನದಿಂ ಪರಿತ್ಯಕ್ತ[೮]ಜೀವಿತನಾ[೮]ಗಿ, ಮಾಹೇಂದ್ರಕಲ್ಪ[೯]ದೊಳಣಿಮಾದ್ಯಷ್ಟಗುಣೈಶ್ವರ್ಯ್ಯೋ[೯]ಪೇತನುಂ ಸಪ್ತಸಾಗರಪ್ರಮಿತಜೀವಿತನುಂ ಲಬ್ಧಾವಧಿಲೋಚನನುಮಾಗಿ ನಮ್ಮ ಕುಮಾರಕಾಲದಂದು ನೀಮುಮಾಮುಂ ಮಹಾಬಲನುಂ ಕ್ರೀಡಾನಿಮಿತ್ತಂ[೧೦] ಪೋಗಿ ಮಂದರಮಹೀಧರದ ನಂದನವನದೊಳ್[೧೧] ಜಲ[೧೧]-ವನಕ್ರೀಡೆಯ[೧೨]ನಾಡುತ್ತಮಿರ್ಪ್ಪಿ[೧೨]ನಮಲ್ಲಿಯಕೃತ್ರಿಮಚೈತ್ಯಾ[೧೩]ಲಯ[೧೩]ಮಂ ಬಂದಿಸಲಾಮಹೇಂದ್ರಕಲ್ಪಜನುಂ ಮಹಾವಿಭೂತಿಯಿಂ ಬಂದು,

ಜಿನಪಾದಾಂಭೋಜಮಂ ಪೂಜಿಸಿ ಪೊ[೧೪]ಱಮಡುತುಂ ಸಾರೆವಂದೀತನಂ ಭೋಂ-।
ಕನೆ ಕಂಡಟ್ಟಿತ್ತಿರ್ದ್ದ ನೋಟಂ ಬೆರಸು ಪರಸಿ ತಬ್ಬಿಕ್ಕಿಸಿಕೊಂಡಮ್ಮನೀಂ ಮ-

೧ (ಅ) ದಿ; (ಚ) ತ. ೨-೨ (ಕ) ಸಿವಸಂ; (ಖ) ನಿವುವಂ; (ಕ) ನವಸಿಂ. ೩-೩ (ಚ) ಭೂತಮಿಪಲ್ಲದೆಯು; (ಗ) ಯಾತಮಿಪಲ್ಲದೆಯುಂ. ೪ (ಬ) ಹ. ೫-೫ (ಬ) ನೆಂಭರ. ೬ (ಬ) ಥ. ೭ (ಚ) ಳೆಸಂ. ೮-೮ (ಅ) ಜಿವಿತನುಮಾಗಿ; (ಚ) ಜೀವಿತಂ. ೯-೯ (ಬ) ತನಾಗಿ ಲಬ್ಧಾತ್ಮನಾಗೆ; (ಚ) ತನುಂ ಲಬ್ಧಾತ್ಮಲಾಭನುಮಾಗಿ. ೧೦ (ಅ) ತ್ತನಿಂ. ೧೧-೧೧ (ಚ) ಳ್. ೧೨-೧೨ (ಬ) ನಾಡುತ್ತಿರ್ಪ್ಪಿನ. ೧೩-೧೩ (ಅ) ತ್ಯಾಲಯಂಗಳಂ. ೧೪ (ಬ) ಡ.

ಮ್ಮಸೆಯಪ್ಪೈ ನೋಡು ನಣ್ಪಿಂ ನಿಮಗಮೆಮಗಮಾಮ್ನಾಯದಿಂ ಬಂದು
ಜಿನಧರ್ಮ್ಮಂ ಪ್ರಾಣಿಗಾರ್ಮ್ಮಂ ಮಱೆಯದಿರಿ[೧]ಪೆನಿನ್ನೆಂದೆ[೧]ಮುಂಟಿಲ್ಲ ದಿಂತೀ-
ಪೇೞಿಂ ||೨೦||

ಅತಿಬಲಖೇಚರೇಂದ್ರನಿವರಮ್ಮಸುಮೀತನನೂರ್ಜ್ಜಿತಾತ್ಮಸಂ-
ತತಿಯೊಳನಾಕುಳಂ ನಿಱಿಸಿ ಸಂಯಮಸಾರಥಿಯಾಗಿ ಕರ್ಮ್ಮಸಂ-|
ತ[೨]ತಿಯನನಂತರಂ ಕಿಡಿಸಿ ಕೇವಳಿಯಾಗಿರೆ ಬರ್ಪ್ಪ ದೇವಸಂ-
ತ[೩]ತಿಯೊಡವೋಗಿ ನಾ[೪]ವುಮೊಸೆದರ್ಚ್ಚಿಸಿ [೫]ಬಂದಿಸಿ[೫] ಬಂಪೆವ[೬]ಲ್ಲಮೇ[೭] ||೨೧||

ಅನುಭೂತಶ್ರುತದೃಷ್ಟಖೇಚರಕಥಾನೀಕಂಗಳಿಂ ಯು[೮]ಕ್ತಿಯಿಂ-
ದಿನಿತಂ ಸಾಧಿಸಿ ಜೀವಸಿದ್ಧಿಯನಿದಂ ನಿಶ್ಚೈಸಿ ವಿದ್ವತ್ಸಭಾ-|
ಜನಮೆ[೯]ಲ್ಲಂ ತಿಳಿದತ್ತು ನಿಮ್ಮ ಮನದಿಂ ಮಿಥ್ಯಾಕಳಂಕಂ ತೆಱ-
ಲ್ಚಿಸಿಸುಂ ಪೋಗದು ಕಾಲಲಬ್ಧಿ ದೊರೆಕೊಂಡಂದಲ್ಲದೇಂ ಪೋಕುಮೇ ||೨೨||

ವ|| [೧೦]ಎಂದು ಪರಪಕ್ಷದೂಷಣಪುರಸ್ಸರಮನೇಕೋಪಪತ್ತಿಗಳಿಂ ಸ್ವಪಕ್ಷ-ಸ್ಥಾ[೧೧]ಪನೆಗೆಯ್ದು ಸನ್ಮಾರ್ಗ್ಗಪ್ರಕಾಶನದಿಂ ಮಾರ್ಗ್ಗಪ್ರಭಾವನೆಯುಂ ಮಾಡಿ ಸಭಾಸದರಿಂ ಲಬ್ಧ[೧೨]ಪ್ರಶಂಸನಾಗಿ[೧೨],

ಪರವಾದಿಗಳ ಮೊಗಂಗಳ್
ಕರಿಂಕುವರಿಪಂತೆ ಕಂದಿ ಕುಂದಿರೆ ಖಚರೇ-|
ಶ್ವರನೀಯೆ ಪಡೆದನತ್ಯಾ-
ದರದಿಂ ಜಯಪತ್ರಮಂ ಸ್ವಯಂಬುದ್ಧಬುಧಂ ||೨೩||

ವ|| ಅಂತು ಮಹಾಬಲ[೧೩]ಖಚರೇಂದ್ರಂ[೧೩] ಸ್ವಯಂಬುದ್ಧನೆ ತನಗೆ ಪರಮವಿಶ್ವಾಸಭೂಮಿಯಾಗೆ ತತ್ಪರ್ಯ್ಯಾಲೋಚಿತಕಾರ್ಯ್ಯಪರ್ಯ್ಯವಸಾನನುಂ-ಮನೋಭಿಲಷಿತವಿಷಯಸುಖಾನುಭವನಿರತನುಮಾಗಿ ಮೂವತ್ತಾಱುಲಕ್ಕೆಪುಬ್ಬಂ ರಾಜ್ಯಂಗೆಯ್ಯೆ,

---

೧-೧ (ಚ) ದು ನಿನ್ನೆಂದು; (ಅ) ದ ನೀನೆಂದು. ೨ (ಬ) ಸ್ವ. ೩ (ಬ) ದ ೪ (ಬ) ಮು. ೫-೫ (ಬ, ಗ) ಪೂಜಿಸಿ. ೬ (ಬ, ಚ) ಮು. ೭ (ಬ) ದೇ. ೮ (ಬ, ಕ) ದು. ೯ (ಚ) ತುಂ. ೧೦ (ಇ, ಬ) ಯೆಂ. ೧೧ (ಚ) ನಂ. ೧೨-೧೨ (ಅ, ಬ) ಪ್ರಸನ್ನನಾಗಿ. ೧೩-೧೩ (ಅ, ಗ) ಗಗನಚರೇಂದ್ರಂ; (ಬ) ಖೇಚರೇಂದ್ರಂ.

ಪೊಡರಪೆ ಕಪ್ಪಮೀವ ಪರಮಂಡಲಿಕರ್ಮ್ಮಱಸೆ[೧]ದೇವಿ ಮಕ್ಕಳಂ
ಪಡೆವಬಲ್ಲಾಜನಂ ನೆರೆದ ಮಕ್ಕಳ ಮಕ್ಕಳ ನೀಳ್ದ[೨]ಮೊಂದು ದಾಂ–
[೩]ಗುಡಿವಿಡಿದೀವೆ[೩] ಜಾಗಮೆಡಜರ್ಕೋಡುವಿಸಂ ಪೊರೆದೊಳ್ನೆಗಟ್ಟಿಯೊಳ್
ತೊಡರ್ದಿರೆ ವೃದ್ಧರಾಜ್ಯಮುಮದೇನೆಸೆದತ್ತೊ ಗಭಸ್ತಿರೇಂದ್ರ[೪]ನಾ ||೨೪||

ವ|| ಮತ್ತೊಂದು ಪುಣ್ಯದಿನದೊಳ್[೫] ಸ್ವಯಂಬುದ್ಧ[೬]ನಗಣ್ಯಪುಣ್ಯೋ[೬]–ಪಾರ್ಜ್ಜನಕರಸಪರ್ಯಾಸಮೇತನಪರಿಮಿತಭಕ್ತಿಯಿಂ ಪರಿಮಿತಪರಿಜನ[೭]–ನಾಗಿ[೭] ಪೋಗಿ,

|| ಪೃಥ್ವೀವೃತ್ತಂ ||

ಅನೇಕರಸಭಂಗಿಸಂಗತಸುರಾಂಗನಾ[೮]ಪಾದಜಂ[೮]–
ಕ್ವಣತ್ಕನಕಕಿಂಕಿಣೀಮೃದುನಿನಾದವಿಭ್ರಾಜಿಯುಂ
ಕ್ವಣತ್ಕನಕತುಂಗಶೃಂಗಕುಲಮುಂ ಮನೋವೇಗದಿ–
ಯ್ಪಿ ನೋಡಿದನೊಱಲ್ದು ಪುಷ್ಪಿತನಮೇರುವಂ ಮೇರುವಂ ||೨೫||

ವ|| ಅಂತುನೋಡಿ,

[೯]ಕಿಸು ಶಾಲ್ಮಲಿಪಾದಪಮಿಂ–
ತಿಸು ಜಂಬೂವೃಕ್ಷಮಿದುವೆ ಕುರುಭೂಮಿಗಳೊ–
ಪ್ಪಿದುವದ್ವಜಂಪ್ರವೃತ್ತಂ–
ಗದಿ[೧೦]ಸಂಚಿತದಶಾಂಗಕಲ್ಪಕುಜನಿಲಯಂಗಳ್ ||೨೬||

ಗಜದಂತಾಕಾರಂಗಳ್
ಗಜದಂತಾದ್ರಿಗಳಿವಲ್ತೆ ತೊಪ್ಪುವ ಮಧುಪ–
ವ್ರಜಪರಿವಾರಿತಮಾದ್ಯದ್–
ಗಜಕಟ[೧೧]ಕಷಣ[೧೧]ಪ್ರಭಗ್ನಚಂದನತರುಗಳ್ ||೨೭||

ನೀಲನಿಷಧಮುಮನೆಯ್ದಿದ
ನೀಲದ ಗಜದಂತಗಿರಿಗಳಾಳ್ದುವು ಪಿರಿದುಂ |

೧ (ಅ, ಬ) ಶೀ. ೨ (ಅ, ಬ) ಳ್ದ. ೩-೩ (ಬ) ಗುಡಿಬಿಡದೀವ. ೪ (ಬ) ನಂ. ೫ (ಬ) ಳಾ. ೬-೬ (ಬ) ನಗಣ್ಯಪುಣ್ಯ. ೭-೭ (ಜ) ಪರಿವೃತನಾಗಿ ೮-೮ (ಬ) ಪಾದ–ಪಂಕಜ. ೯ (ಜ) ಇ. ೧೦-೧೦ (ಜ) ನಾಕಾರದಿ. ೧೧-೧೧ (ಜ) ಕರ್ಷ; (ಕ, ಖ) ಕರ್ಷಣ.

ಲೀಲೆಯನದಂತೆ ಮಾಡದೆ
ಲೀಲೆಗಳಂ ಪಾದಸೇವೆ ಭೂಭೃತ್ಪತಿಯಾ ||೨೮||

ಇದು ಭದ್ರಶಾಲಿನಂದನ-
ಮ[೧]ದು[೧] ನನ್ದನವನಮದಱ್ತೆ ಸೌಮನಸಮದೇಂ|
ತುದಿಯೊಳ್ ಪಾಂಡುಕಮೆ[೨]ಸೆದಿ-
ರ್ದ್ದುದು ಜಿನಪತಿಸವನವಾರಿಪೂತಗ್ರಾವಮ್ ||೨೯||

ಅಗ್ರಹಮುಂ ಬಿಸುಟಿದುವೆ ಗ-
ಗಾಗ್ರಣಿಯೆಂದಿ[೩]ದನೆ ನೋಡೆ ಬಲಗೊಳ್ವವು ನಿ[೪]ರ್|
ವ್ಯ[೪]ಗ್ರತೆಯಿಂ ಚಂದ್ರಾದಿ-
ತ್ಯಗ್ರಹನಕ್ಷತ್ರತಾರಕಾನಿ[೫]ಕರಂಗಳ್[೫] ||೩೦||

ಇದುರಿತು ವಿಮಾನಮುಂ ತ-
ನ್ನದಗ್ರಚೂಳಿಕೆಯೊಳಾಂತುಕೊಂಡಿರೆ ಸಗ್ಗ-|
ಕ್ಕಿದು ಸಿಚ್ಚಣಿಗಿಪ್ಪವೊಲಿ-
ಪ್ಪು[೬]ದಱ್ತೆ ಜಿನಸವನಜಲಪವಿತ್ರತಕಟಕಂ ||೩೧||

ಸ್ಫುರಿತ ಮಣಿಕಲಶ[೭]ವಿರಚಿತ[೭]-
ಪರಭಾಗಂಗಳ್ ಮನೋಹರಂಗಳ್ ವಿದ್ಯಾ-|
ಧರವಿಬುಧವಂದಿತಂಗಳ್
ಕರಮೆಸೆದಪುವಿದಱ ನೆಲೆಯ ಚೈತ್ಯಗೃಹಂಗಳ್ ||೩೨||

ವ|| [೮]ಎಂದಿಂತು[೮] ನಿಜಪರಿಜನ[೯]ಕೆಲ್ಲಂ[೯] ಪೊಗಳುತ್ತಂ ಭದ್ರಶಾಲದಿಂ ತಗುಳ್ದು ಪಾಂಡುಕವನಂಬರಮದಱ [೧೦]ನೆಲೆಯೊಳಿರ್ದ್ದ[೧೦]ಕೃತ್ರಿಮಚೈತ್ಯಾಲಯಂಗಳನಖಿಲ[೧೧]ಜಗತ್ಪಾವನಸರ[೧೧]ಸ್ಸರಸೀ[೧೨]ಸರಿನ್ನಾಥ[೧೨]ತೀರ್ಥಜಲಂಗಳಿಂದಮತಿಮಸೃಣಘುಸೃಣಗೋಶೀರ್ಷಚಂದನಾಗುರುಕರ್ಪೂರರಸಮಿಶ್ರಿತಸುರಭಿಗಂಧಂಗಳಿಂದಮಗಣ್ಯಪುಣ್ಯಪು[೧೩]ಂಜಾಂಕುರಾನುಕಾ[೧೩]ರಿಕಳಮಾಕ್ಷ[೧೪]ತಂಗಳಿಂದ[೧೪]ಮಾಮೋ[೧೫]ದಮೋದಿ[೧೫]ತೋದ್ದಾಮವಾಚಾಲಷಟ್ಚರಣಕುಲಾಕುಲಕುಸುಮದಾಮಂಗಳಿಂದಮನೇಕಭಕ್ಷ್ಯೋಪದಂಶರಸಪ್ರಚುರಚಾ-

೧-೧ (ಬ) ಮಿಗು. ೨ (ಚ) ಪೆ. ೩ (ಅ, ಬ) ದ. ೪-೪ ಸವ್ಯ. ೫-೫ (ಬ) ನಿವಹಂಗಳ್. ೬ (ಬ) ಪ್ಪುರ್. ೭-೭ (ಬ) ವಿಲಸಿತ. ೮-೮ (ಚ) ಎಂದು. ೯-೯ (ಅ) ಕ್ಕೆ. ೧೦-೧೦ (ಬ) ನೆಲೆಗಳೊಳಿರ್ದ್ದ. ೧೧-೧೧ (ಚ) ಜಗತ್ಪಾವನಕರಸರ. ೧೨-೧೨ (ಅ) ಸರತ್ಸರಿನ್ನಾಥ. ೧೩-೧೩ (ಬ) ಪುಂಜಾನುಕಾರಿ. ೧೪-೧೪ (ಅ, ಬ) ಕ್ಷತಪುಂಜಂಗಳಿಂದ. ೧೫-೧೫ (ಅ) ಮೋದಿ.

ಸಂ ನಿಜಭೋಗಕಾಂಕ್ಷೆಯುಮಣಂ ಬಿಸುಡಲ್ ಬಗೆದಾರನಾತನ-
ತ್ಯುನ್ನತಬೋಧ ನೀಂ ಬೆಸಸಭವ್ಯನೊ ಭವ್ಯನೊ ದೂರಭವ್ಯನೋ ||೩೪||

ಪೋದುದು ಜೌವನಂ ಕ್ರಮದಿನಾದುದು ಮುಪ್ಪಿನಿಸಾ[1]ದೊಡಂ ಸ್ಮರೋ-
ನ್ಮಾದದೊಳೀ[2]ವಿಮೋಹ[2]ಮೋ[3]ದೇಕೆ ಗಡಂ ಬಗೆಯಂ ತಗುಳ್ಚಿ[4] ಬೇ[5]-|
ಳಾ[5]ದಪನಕ್ಕಟಾ ಖಚರನೆಂದೆನಗಿಂತಿದೆ ನಾಡೆಯುಂ ಮನಃ-
ಖೇದಮಿನಂ ಪ್ರಬೋಧಿಸಿ ನಿಜಾವಧಿಯಿಂ ಕಳೆಯಿಂ ಮುನೀಶ್ವರಾ ||೩೫||

ವ|| ಎಂದು ಬೆಸಗೊಂಡೊಡಾತನಭವ್ಯನಲ್ಲಂ ಭವ್ಯನೇ. ಭವ್ಯನಾಗಿಯು-
ಮಾಸನ್ನಭವ್ಯನೆಂತೆಂದೊಡೀ[6] ಜಂಬೂ[7]ದ್ವೀಪದಪರ[7]ವಿದೇಹದೊಳ್ ಗಂಧಿಳ-
ಮೆಂಬುದು ವಿಷಯಮಾ[8]ವಿಷಯ[8]ವಿಳಾಸಿನಿಗೆ ತಿಳಕಮಿಪ್ಪ[9]ಂತಿರ್ದು[10]ದು
ಜಿತಸುರಪುರಂ ಸಿಂಹಪುರಮೆಂಬುದು ಪುರಮದನಾಳ್ವನತುಲಭುಜಬಲ
ಸಂಚೂರ್ಣೀತಾರಾತಿಪಾಷಾಣಂ ಶ್ರೀಷೇಣನೆಂಬರಸನಾತಂಗೆ,

ಸೌಂದರಿಯರ ಗಾಡಿಗಳೊಳ-
[10]ಗೊಂದೊಂದನೆ ನೆಱೆ[10] ಮಾಡಿದಂ ಬಿದಿಯೆನೆ ಹೃತ್ |
ಸೌಂದರಿ ಜಿತಾಮರಾಧಿಪ-
ಸೌಂದರಿ ಸೌಂದರಿಯೆ ಪೆಸರೊಳಂ ರೂಪಿನೊಳಂ ||೩೬||

ಬರ್ಮೆಯುಮವಜಱಿದೊಲವಿನ
ಕೂರ್ಮೆಯ ತತ್ಪತಿಗಮಾಕೆಗಂ ನಿಜಪಂಶ-|
ಕ್ಕಾರ್ಮಿಸನೆ ಪುಟ್ಟಿದರ್ಜಯ-
ವರ್ಮ[11]ಶ್ರೀವರ್ಮರೆಂಬರಿರ್ವರ್ ತನಯರ್ ||೩೭||

ವ|| [12]ಅವರೊಳ್[12]ಕಿಱಿಯಾತನೆ ನೃಪತಿಗಂ [13]ಪರಿವಾರಕ್ಕಂ[13]ಮಣು-
ನನಾಗಿ ಬಳೆಯೆ ಪಲಕಾಲಂ ಶ್ರೀಷೇಣನರಸುಗೆಯ್ಯೆ,

ಎಡೆವೆತ್ತಿರ್ಮೆಯೆ ಮುಪ್ಪು ಕುತ್ತದೊಳೊಡಂಬಟ್ಟಿರ್ಪ ಮತ್ತಲ್ಲಿ ಮೆಳ್[14]
ಪು[14]ದವಾರ್ತೆ ಣ್ಕೆ ತಪಕ್ಕೆ ಪೋಪ ಪದದೊಳ್ ತನ್ನಗ್ರಪುತ್ರಂ ಕ್ರಮಂ|
ಬಿಡಿದಿರ್ದ[15] ಜಯವರ್ಮನಿರ್ದೊಡಮವಂ ಮುಟ್ಟಲ್ಲನೆಂದೊಳ್ಪಿ[16]ಡಂ
ಬಡುವನ್ನಂ ಕಿಱಿಯಾತನಂ ನಿಱಿಸಿದಂ ಶ್ರೀವರ್ಮನಂ ರಾಜ್ಯದೊಳ್ ||೩೮||

---

೧ (ಅ,ಬ) ತಾ. ೨-೨ (ಇ,ಬ,ಖ) ವಿಸೋದ. ೩ (ಚ) ಳ. ೪ (ಅ) ಳ್ದು ೫-೫ (ಚ) ಬೆಳ್ವಾ. ೬ (ಚ) ಡೆ. ೭-೭ (ಬ) ದ್ವೀಪದೊಳಪರ. ೮-೮ (ಅ) ಮಹೀ. ೯ (ಬ) ಪ್ಪ. ೧೦-೧೦ (ಅ,ಕ) ಗೊಂದೊಂದಂ ಪಡೆದು. ೧೧ (ಅ,ಬ) ರ್ಮ್ಮರ್. ೧೨-೧೨ (ಅ,ಕ) ಅಂತವರೊಳಗೆ. ೧೩-೧೩ (ಅ) ಪರಿಹಾರಕ್ಕಂ ಪುರಕ್ಕ. ೧೪ (ಬ) ಣ್ಪ. ೧೫ (ಅ) ರ್ದ್ದಂ. ೧೬ (ಅ) ಳ್ಪ.

ಘನಪಯೋಧರನಸಾಪಸ್ಕಂಭಪ್ರಾಗಲ್ಭ್ಯದೃಷ್ಟಿಪಾತತೃಣೀಕೃತತ್ರಿಭುವನನುಪ್ಪ-ನೊಪ್ಪಂ ರಾಜಕುಮಾರಂ, ದೂರೋತ್ಸಾರಿತವಾಹನಂ, ಸಸಂಭ್ರಮೋಪ-ಗತಪರಿಚಾರಕಸ್ಕಂಧವಿನ್ಯಸ್ತವಾಮಹಸ್ತನಾಗಿ,

ಧನು ಕಾಮಂಗಿಕ್ಷುದಂಡಂ ಪಟಿಯಿಗೆ ಮಕರಂ ಬಾಣಸಂಘಾತಮುಜ್ಜ್ಂ-
ನನೆಯೆಂಬೀಚಿಹ್ನಮಿಲ್ಲೆಂಬನಿತೆ ಮನಸಿಜಾಕಾರಮಾಕಾರಮೇಂ ಜಾ-।
ಣನೊ ಧಾತ್ರಂ ರೂಪನಿಷ್ಪಾದನವಿಧಿಯೊಳಿವಂ ಮುನ್ನಮೇಂ ನೋಂಪಿಯಂ ನೋಂ
ತನೊ ಪೇಟೆಂಬಂತೆ ಬಂದಂ ಸುಕವಿಜನಮನೋಮಾನಸೋತ್ತಂಸಹಂಸಂ॥೯೪॥

ವ॥ ಅಂತು ಬಂದು,

ಉದಯಂಗೆಯ್ವಮೃತಾಂಶುಬಿಂಬಮೆರ್ದಗಂ ಕಣ್ಗಂ ಮಹೋತ್ಸಾಹದೊಂ-
ದೊದವಂ ಮುಂದಿಡುವಂತೆ ತನ್ನ ಭುವನಪ್ರಖ್ಯಾತಸೌಂದರ್ಯದಿಂ।
ವಿದಿತೈಶ್ವರ್ಯದಿನೆನ್ನನಾಗಳೆ ೧ದಲಂತೆಲ್ಲಂಪದಿಂ೧ ಸೂಚಿತಾ-
ಭ್ಯುದಯಂ ಜಾತದಯಂ ಮನಂಗೊಳಿಸಿದಂ ಸಂಸಾರಸಾರೋದಯಂ ॥೯೫॥

ಗ॥ ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ-
ಚಂದ್ರವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣಸೂಕ್ತಿ-
ಕಲ್ಲೋಲಮಾಲಾಕೀರ್ಣಕವಿತಾಗುಣಾರ್ಣವ-
ಪ್ರಣೀತಮಪ್ಪಾದಿಪುರಾಣದೊಳ್-
ವಜ್ರಜಂಘದರ್ಶನವ್ಯಾವರ್ಣನಂ
ತೃತೀಯಾಶ್ವಾಸಂ
ಸಂಪೂರ್ಣಂ.

೬೧ (ಖ) ಪಲೆಲ್ತಂದಂಡದಿಂ.

# ಚತುರ್ಥಾಶ್ವಾಸಂ

ಶ್ರೀಮಜ್ಜಿನಭವನಮನಖಿ-
ಳಾಮರನರಖಚರಚಕ್ರವರ್ತ್ತಿಸ್ತುತಮಂ।
ಮೂಮೆ ಬಲಗೊಂಡು ಭವ್ಯಶಿ-
ಖಾಮಣಿಯೆನಿಸಿದ ಸರಸ್ವತೀಮಣಿಹಾರಂ ||೧||

ತ್ರಿಕರಣಶುದ್ಧಿಯೊಳಾರಾ-
ಜಕುಮಾರಂ ಮಾರಮಥನನಂ ಸ್ತುತಿಯಿಸಿ ತ-।
ತ್ಪ್ರಕಟಫಲಪ್ರಾಪ್ತಿಗೆ ಸಂ-
ಚಕರಂಗೊಳ್ವಂತೆ ಸಿದ್ಧಶೇಷೆಯನಾಗಳ್ ||೨||

ಕೊಂಡು ಜಿನಭವನದಿಂದಾ-
ಖಂಡಲನಿಭವಿಭವನಿರದೆ ಪೊಱಮಟ್ಟೆದಿರೊಳ್।
ಕಂಡಂ ನೆರೆದು [೧]ವಿಗುರ್ವಿಸಿ[೧]
ತಂಡಂಗೊಂಡಿರ್ದ್ದ ನರರ ಖಚರರ [೨]ಗುಂಡಂ[೨] ||೩||

ವ|| ಕಂಡೀನೆರೆದ ನೆರವಿ ವಿಸ್ಮಯಂಬಟ್ಟಿದೇನಂ ನೋಡಿದಪ್ಪುದೇನಾನು-ಮೊಂದು ಕೌತುಕಮಾಗಲೆ ವೇೞ್ಕುಮೆಂದೆಯ್ದೆವಂದು ನೋೞ್ಪನ್ನೆಗಮಲ್ಲಿ ಪಸ-ರಿಸಿದ ಚಿತ್ರಪಟಮುಂ ಭೋಂಕನೆ ಕಂಡು,

ರಸಭಾವಂಗಳೊಳಾದ ಚೆಲ್ವು ನುಡಿವಂತಾದಟ್ಟಱಿಂ ನೋಡುವಂ-
ತುಸಿರ್ವಂತಿರ್ದ್ದುದು ರೇಖೆ [೩]ಕೋಮಳತೆಯಂ[೩] ತಾಳ್ದಿತ್ತು ವರ್ಣಕ್ರಮಂ।
ರಸವತ್ ಕಾಂತಿಯನಾಂತು ನಿಂದುದೆಸೆವೀನಿಮ್ನೋನ್ನತಂಗಳ್ [೪]ವಿರಾ-
ಜಿಸಿ[೪] ಚೆಲ್ವಿಂ ಗೆಡೆಗೊಂಡುವಿಂತು ಬರೆಯಲ್ ಬ್ರಹ್ಮಂಗಮೇಂ ಬರ್ಕ್ಕುಮೇ ||೪||

ವ|| ಎಂದು ಮುನ್ನಂ ವಿಚಿತ್ರಚಿತ್ರವಿದ್ಯಾ[೫]ಕೌಶಲಮನತಿ[೫]ಕುತೂಹಲೋ-ತ್ತಾರಿತಲೋಚನನಾಗಿ ನೀಡುಂ ಭಾವಿಸಿ ನೋಡಿ,

ಇದಱಿಂದಂ ಬಿಸವಂದಮಿಂತಿದಮರೇಂದ್ರಾವಾಸದೊಂದಂದಮಿಂ-
ತಿದು ದಲ್ ದೇವವಿಮಾನದಂದಮಿದು ದೇವಾನೀಕದೊಂದಂದಮಿಂ-।

---

೧-೧ (ಚ) ನಿಗುಂಬಿಸಿ. ೨-೨ (ಅ) ಪುಂಜಂ. ೩-೩ (ಅ,ಬ) ಕೋಮಳಿಕೆಯಂ. ೪-೪ (ಅ) ವಿಚಾರಿಸೆ. ೫-೫ (ಅ,ಬ) ಕೌಶಲಮನೆ

ತ್ತಿದು ದೇವಾಂಗನೆಯರ್ ಪಲರ್ ಬಳಸಿಕೊಂಡಿರ್ದ್ದಂದಮೀತಳ್ತ್ತ ರೂ-
ಪಿಸು ಡಲ್ ದೇವನ ದೇವಿಯುಂದಮಿದು ಪೇೞ್ ಮುನ್ನೆಲ್ಲಿ ಕಂಡಂದಮೋ ||೫||

ವ|| ಎಂದು ಬಗೆದಿರುಳ್ ಕಂಡ ಕನಸಂ ಮಱುದಿವಸಂ ನೆನೆವಂತೆ ನಿರತಿಶಯಸುರಲೋಕಸಮುದ್ಭವಸುಖಾನುಭವಮನಾಗಳೆ [೧]ನೆನೆದು[೧],

|| ಪೃಥ್ವೀ ||

ಎಲೇ ಬಗೆದೆನೀಗಳೀಬರೆದ ಕಲ್ಪಮೀಶಾನಮೀ-
ಚಲಲ್ಲುಲಿತ[೨]ಕೇತನಂ[೨] ಸುರವಿಮಾನಮಾಶ್ರೀಪ್ರಭಂ|
ಸಲೀಲವಪನಾರವಿಂದಮಿದು ದೇವವೃಂದಂ ಲಸದ್
ವಿಲಾಸವರಹಾಸರಮ್ಯಮಿದು ದಿವ್ಯಕಾಂತಾಜನಂ ||೬||

ಇದಂದು ಲಲಿತಾಂಗದೇವನೆನೆ ಸಂದ ಮದ್ರೂಪಮೀ-
ಮದಾಲಸವಿಲೋಲಲೋಚನೆ ದಲೆನ್ನ ಮಾದೇವಿ ತ-|
ಪ್ಪದೀಲಲನೆ ತತ್ಸ್ವಯಂಪ್ರಭೆಯೆ ನೋಟ್ಪೊಡೀಚಿತ್ರಮಿಂ-
ತಿದಾಕೆಯದೆ ಬಲ್ಮೆ ಪೇೞ್ ಪೆಱರ್ಗಮಿಂತುಟೊಂದಕ್ಕುಮೆ ||೭||

ಇದೆನ್ನಯ ವಿಮಾನಮಂ ಬಳಸಿ ತಳ್ತ ಪುನ್ನಾಗನಾ-
ಗದಿವ್ಯತರುನಂದನಂ ಲತೆಯ ಜೊಂಪಮೀತೊಪ್ಪುರ್ದೆ-|
ಸ್ನದಲ್ತೆ ನೆರೆದಿರ್ಪ್ಪರಿರ್ದ್ದ ಕೃತಕಾಚಲಂ ಚೆಲ್ವಸ-
ಪ್ಪಿದೇ ಕನಕಪದ್ಮಿನೀನಿಲಯಮೆನ್ನ ಲೀಲಾಸರಂ ||೮||

ಇದು ಲೀಲಾಂದೋಳಮಿಂದೋಳದ ದನಿ ನೆಱೆಗೊಳ್ವನ್ನೆಗಂ ಪಾಡಲೆಂದೇ-
ಱಿದಳಂ ತೂಗುತ್ತುಮಿರ್ದ್ದೆನ್ನಯ ಪರಿಜಿದುವೇ[೩] ಮಾಧವೀಮಂಟಪಂ ತೋ-|
[೪]ರ್ಪ್ಪುದಿದಂತೇ[೪]ಕಾಂತದೊಳ್ ನೂಪುರರವವಿಳಸದ್ವಾಮಪಾದಪ್ರಹಾರ-
ಕ್ಕೆದಱಿತೊಳ್ ಪಕ್ಕಾಗಿ ಗೋತ್ರಸ್ಖಲನೆ ನೆಗಱೆ ಪೂಮಾಲೆಯಿಂ ಮೋದುವೆತ್ತೆಂ||

ವ|| ಮತ್ತಮಮರಸಮಿತಿವೆರಸೋಲಗಂಗೊಟ್ಟಿರ್ದ್ದಲ್ಲಿ ಮದೀಯಸಿಂಹಾಸನಾರ್ದ್ಧೈಕದೇಶಮನಳಂಕರಿಸಿ ಪದವಡೆ ಸೋಂಕಿ ಕುಳ್ಳಿರ್ದ್ದ ರೂಪು

---

೧-೧ (ಅ) ನೆನೆನೆನೆದು. ೨-೨ (ಅ) ನಂದನಂ. ೩ (ಅ,ಬ) ವೇಂ. ೪-೪ (ಅ) ರ್ಪ್ಪದದಂ ನೇ; (ಬ) ರ್ಪ್ಪದದೆನೇ.

ಮನಮರಾಂಗನೆಯರ ಬೀಸುವ ಚಾಮರದ [೧]ಗಾಳಿಯುಲಿಪಿನೊಳ್[೧]ಲ್ಲುಗುವ [೨]ಬಂಬಲ್ಗುರುಳ್[೨] [೩]ಬಂಬಲಿಂ[೩] ತಳರ್ವ್ವ ಚಿನ್ನ ಪೂಗಳನವಯವದೊಳ್ ಸಯ್ತು-ಮಾಡುವ ಕೆಯ್ತಮುಮನಮರೀಮಧುರಗೀತನಿನಾದಕ್ಕಾದಮೊ[೪]ಜಿಲ್ದ್ದ[೪] ಶಿರಃಕಂಪದೊಳಿನಿಸಾನುಮೆಱಗಿದ ಕರ್ಣ್ಣಪೂರಪಾರಿಜಾತಸ್ತಬಕಮನೋಸರಿಸುವ ವಿಳಾಸಮುಮಂ, ಕನಕಕದಳೀವನದೊಳಗಣ [೫]ಮಣಿಭವನ[೫]ದೊಳಗೆ ಪರಿ-ಮಿತ-ಪರಿಜನ-ಸಹಿತಮೆನ್ನ ಮನಮೊಱಲ್ಪಿನೆಗಮೆನ್ನ ಸೋಂಕಿನೊ[೬]ಳ್ ಕುಳ್ಳಿರ್ದ್ದು ವೀಣೆಯುಂ ಬಾಜಿಸುವ ರೂಪಮುಮನಚ್ಯುತೇಂದ್ರಪೂಜಾವಿಳಾಸ-ಮುಮಂ, ಮಂದರಕಂದರವಿಹಾರ[೭]ಮುಮನಲ್ಲಿಯೇ[೭] ಕಾಣ[೮]ಲಾದಪುದಿ-ದೊಂದೇ[೮],

ಒದವಿದ ಬೇಟದತ್ತಳಗದೊಳ್ ಮುಳಿಸಂ ಪುರುಡುಂಟುಮಾಡೆ ಜ-
ರ್ವ್ವಿದ ಕಡೆಗಣ್ಣ ಜರ್ವ್ವುಗಳೊ ಮೋದಿದ ನೀಲಸರೋಜಮಾಲೆಯಿಂ-।
ಪುದಿರ್ದ್ದ ಮದಂಗದೊಳ್ ತೊಡರ್ದ್ದ ತೋರ್ಪ್ಪದಳಂಗಳೊ ಪೇಱೊ ಮಾವುದೆಂ-
ಬುದನೆನೆ ಕಾದಿ ಮೋದಿದವಿನಾಣಮ[೯]ದಿಲ್ಲಿ ದಲಿಲ್ಲ[೯] ನಲ್ಲಳಾ ॥೧೦॥

ವ॥ ಮತ್ತಮೊರ್ಮ್ಮೆ ಮಣಿಮಯಸುರತಭವನದೊಳಗೆ ನಿರ್ಬ್ಭರಪ್ರಣ-ಯಕಲಹ[೧೦]ಕಲುಷಪರವಶೆ[೧೦]ಯಾಗಿ,

ಮುಳಿದಿರೆ ಪಾದಪಂಕಜಮನಾಂ ತಲೆಯೊಳ್ ನಿಲೆ ತಾಳ್ದಿ ನಲ್ಲಳೇ
ತಿಳಿಯೆನೆ [೧೧]ನಲ್ಲಳೆಂಬ[೧೧] ಪೆಸರಲ್ತೆ ಮಗಾಪೆಸರಾಕೆಯುಳ್ಳೊಡಂ।
ತಿಳಿಪೆನೆ ಮತ್ತಮಾಪೆಸರ್ಗೆ ನೀನಿರೆ ನೋಂತವಳಾವಳೆಂಬುದುಂ
ತಿಳಿದಮರ್ದಪ್ಪಿದಂದಮಣಮಿಲ್ಲ ದಲೀಪಟದೊಳ್ ಮೃಗಾಕ್ಷಿಯಾ ॥೧೧॥

ವ॥ ಮತ್ತಮೊರ್ಮ್ಮೆ ಪಂಚರತ್ನಪ್ರಭಾಪ್ರಸಾಧಿತಪ್ರಸಾಧನಶಾಲೆಯೊಳ್ ಸ್ವಯಂಪ್ರಭೆಯನಾನೆ ಪಸದನಂಗೊಳಿಸುತ್ತುಮಿರ್ದ್ದು,

ಚಳದಳಕಾಳಿ ನಿನ್ನ ವದನಾಂಬುಜಮಂ ನಡೆನೋಡಲೀಯದ-
ವ್ವಳಿಸುವುದೌಪರಿಷ್ಟಕದೊಳೆನ್ನನಿದೆಂದು ಕನಲ್ದು ಚೆನ್ನ ಪೂ-।
ಗಳನವಱೊಳ್ ತಗುಳ್ಚದೆ ಮೃಗೋದ್ಭವ ಪಂಕದೆ ಪತ್ರಭಂಗಮಂ
ತೊಳಪ ಕದಂಪಿನೊಳ್ ಬರೆದುದಂ ಬರೆಯಲ್ ಮಱೆದಂದಮಾವುದೋ ॥೧೨॥

---

೧-೧ (ಬ, ಚ) ಗಾಳಿಯುಲಂಪಿನೊಳ. ೨-೨ (ಚ) ಬಂಬಲ್ಗುರುಳ್ಗಳ. ೩-೩ (ಚ) ಬಂಬಲಿಂದಂ. ೪-೪ (ಅ) ಜಿಲ್ದಾದ; (ಬ) ಜಿಲ್ದ. ೫-೫ (ಚ) ಮಣಿಮಯಭವನ. ೬ (ಅ, ಬ) ಲೊ. ೭-೭ (ಚ) ಮುಮಂ ಇಲ್ಲಿಯೇ. ೮-೮ (ಚ) ಲಾದಪುದೆಂದೇ. ೯-೯ (ಅ, ಬ) ದಿಲ್ಲ ದಲಿಲ್ಲಿ. ೧೦-೧೦ (ಅ) ಕಲುಷಿತ ಪರವಶೆ; (ಬ) ಪರವಸೆ. ೧೧-೧೧ (ಚ) ನಲ್ಲಳೆನ್ನ.

ವ|| ಮತ್ತಮೊಪ್ಪೆ ಮಂದಪವನಾಂದೋಳಿತವಿಮಾನೋಪವನದೊ-ಗೆ ಪಸರಿಸಿ ಕುಸುಮಿಸಿದ ಕುಸುಮದೆಸಳ [೧]ಮಿಸುಗುವ[೧] ಪೊಸವಸೆಯೊಳಸ-ಲೆಳಮೆಸೆಯೆ [೨]ಬಯಸಿ[೨] ಪೊಸಯಿಸಿದ ಪೊಸ ಸುಸಿಲ ಮುಸಕದ ಬಸದೊಳ್ ಬಸದಾಗಿಯುಮಸಿಯಳಿನಗಸವಸದೊಳೆ ಬೆಸೆದು ಪೋಗಿ,

ಮುಜಿಗೊಳೆ ಪೂತ ಕಲ್ಪಲತೆಯಂ ಲಲಿತಾಂಗಿಯೆ ಗೆತ್ತಲಂಪಿನಿಂ-
ಪುಜಗುವುದುಂ ಲತಾಂಗಿ ಮುಳಿಸಿಂ ಲತೆಯಂ ಲಲಿತಾಂಗಿ ಗೆತ್ತು ಸೀ-|
ಸೆಜಗಿಪೆಮ್ಮ್ಷ ಪಕ್ಷದೆ ಪೆಜಳ್ಗೆನೆ ಬೆಚ್ಚಿ ಲತಾಂಗಿಗಾಗಳಾ-
ಸೆಜಗಿವನಾದುದಾಲತೆಯಿನಚ್ಚಿಗಮಿಂತೆನಗಂ ಲತಾಂಗಿಗಂ ||೧೩||

ವ|| ಇಂತಿರ್ಪ್ಪ [೩]ಮೊದಲಾಗೆ ಪೆಱವುಮನೇಕಕೆಯುಱಕೆಯವಿನಾಣಂಗಳ್ ಕೆಲವು[೩] ಬರೆದುವಿಲ್ಲಿಂದದನಾಕೃಷ್ಟದೃಷ್ಟಿಪ್ರಸರನುಮಚಲಿತಪಕ್ಷ್ಮನಿಸರನುಮ-ಕಂಪಿತಭ್ರೂವಿಭ್ರಮನುಂ ಪ್ರಕಟಿತಚಿತ್ತ[೪]ವಿಭ್ರಮನು[೪]ಮತಿಪ್ರಬಲಸ್ವೇದಜ-ಲಪ್ರಕ್ಷಾಲಿತನುಂ ಕುಸುಮಶರಶಲಾಕಾಕೀ[೫]ಲಿತನುಮಾಗಿ[೫],

ತರಲಾಪಾಂಗವಿಲಾಸ-
ಸ್ಫುರಿತಮೆ ಲೆಕ್ಕಣಿಕೆಯಾಗೆ ನಲ್ಲಳ್ ಮುನ್ನಂ|
ಬರೆದತನುಚರಿತಮಾಗಳ್
ಎರೆದಂತಿರ್ದ್ದಪುದು ಮನ್ಮನಃಪುಸ್ತಕದೊಳ್ ||೧೪||

ವ|| ಎಂದು [೬]ತನ್ನಮನದೊಳೆ[೬] ಬಗೆದು ಸಂಕಲ್ಪಸಮಾಗಮಸುಖಮನನುಭವಿಸಿ,

ಪದವು ಮನಕ್ಕೆ ನೋರ್ಕ್ಕೆ ನಯನಕ್ಕೆಸೆಯುತ್ತಿರೆ ಚುಂಬನಾಭಿಲಾ-
ಷದ ತನಿಗಿತ್ತು ಬಾಯ್ಗೆ ಬಳಸಲ್ ಪದೆದಪ್ಪುಜಳುಕ್ಕೆ [೭]ತೋಳ್ಗೆವಂ[೭]-|
ದುದವಿರೆ ನಾಣನೊಕ್ಕೆರ್ದೆ ವಿಚಿತ್ರವಿಕಾರರಸಾಂತರಂಗದೊಳ್
ಪುದಿದಿರೆ ಮಾಣದಾಡಿಸಿದನಾತನನಂಗಜನೆಂಬ ನಟ್ಟುವಂ ||೧೫||

ವ|| ಆಗಳ್ ಕದಂಬಸ್ತಬಕಕರ್ಣಪೂರಾಯಮಾನರೋಮಾಂಚಕಂಚುಕಿತ-ಕಪೋಲಮೂಲಸ್ಥಲನಿಶ್ವಾಸಕಲ್ಲೋಲನತಿಸೂಕ್ಷ್ಮಪಾಲಿಪರಿಚ್ಯುತತರಲತರನಯ-ನೋದಬಿಂದುಸಂದೋಹಮೋಹರಸವಶಗತನಾಗಿ,

---

೧-೧ (ಅ) ಮಿಸುಪ. ೨-೨ (ಚ) ಪಸರಿಸಿ. ೩-೩ (ಬ) ಮೊದಲಾಗನೇಕವಿನಾಣಂ-ಗಳುಮಂ ಕೆಲವು. ೪-೪ (ಆ,ಬ) ಭ್ರಮನು. ೫-೫ (ಅ) ಕೀಲಿತಾಂತರಂಗನುಮಾಗಿ. ೬-೬ (ಅ) ತನ್ನಮನದೊಳೆ. ೭-೭ (ಚ) ತೋರ್ಕೆವಂ.

ಪ್ರಿಯದಯಿತೆಯೆನಾಂ ನಿನಗೆಂ-
ಬೆಯೆಂದು ನೀನೆನ್ನನಿಂತಗಲ್ದಿರ್ಪ್ಪುದೆ ವಿ-|
ಸ್ಮಯಮಂ ¹ಮಾಡಿದಪುದು¹ ಹಾ!
ಸ್ವಯಂಪ್ರಭೇ ಎಂದು ಮೂರ್ಚ್ಛೆವೋಪುದುಮಾಗಳ್ ||೧೬||

ಪರಿಜನಮನಿತುಂ ತುರಿಪದೆ
ಪರಿತಂದಿನ್ನೇವೆವೆಂದು ಕಪ್ಪುರದ ರಜಂ|
ಬೊರೆದ ಕರಕಾಂಬುವಂ ²ತಳಿ-
ದರವುರನೆೞ್ಚಱಿಸೆ² ಮೂರ್ಚ್ಛೆತಿಳಿದು ಕುಮಾರಂ ||೧೭||

ವ|| ಈಪಟಮನಿಲ್ಲಿಗಾರ್ ತಂದರೆಂಬನ್ನೆಗಂ ಭವದೀಯಪ್ರಾಣವಲ್ಲಭಂ ಲಲಿತಾಂಗಚರನಪ್ಪ ವಜ್ರಜಂಘನೆಂಬುದನಾಂ ಮುನ್ನಮೆ ತಿಳಿದಾಮಹಾನುಭಾವನಂ ಬೇಗಮೆಯ್ದೆ ಪೋಗಿ,

ತುದಿಯೆಯ್ದಿತ್ತಿನಗೆನ್ನ ಪೂರ್ಣ್ಕೆ ನಿನಗಂ ಪುಣ್ಯೋದಯಂ ಸಾರ್ಚ್ಚಿ ಬಂ-
ದುದು ಧಾತ್ರಂಗಮುಳಂಕೆಗೊಂಡು ಪಿರಿದುಂ ಚಿಂತಾಂತರಂ ಪೋಯ್ತು ಕೂ-|
ಡಿನುದಾಶ್ರೀಮತಿಗಂ ಮನೋರಥಫಲಂ ಶ್ರೀವಜ್ರದಂತಂಗಮಾ-
ದುದು ರಾಗೋತ್ಸವಮೆಲ್ಲಮಿಲ್ಲಿಗೆ ಜಯಂ ಭದ್ರಂ ಶುಭಂ ಮಂಗಲಂ ||೧೮||

ವ|| ಎಂಬುದುಮಾವಿಲಾಸರಸವಾರಾಶಿವಿಸ್ಮಯಸ್ಮೇರಮುಖಚಂದ್ರಸಾಂದ್ರಚಂದ್ರಿಕಾಪ್ಲುತಾಚ್ಛಜಲಶಿಶಿರಶೀಕರಂಗಳೊಳೆ ಮುನ್ನಮೆನ್ನ ಮನಮಾಱುವಿನಮುನ್ನತೈಕಭ್ರೂಲತಾವಿಲಾಸನೆಂತೆಂಬುದೇನೆಂಬುದುಂ ನೀಂ ಲಲಿತಾಂಗ³ಚರನೆಯುಪ್ಪುದಱಿಂದಂ³ ಸ್ವಕೀಯಪ್ರಾಣೇಶ್ವರಿ ತತ್ಸ್ವಯಂಪ್ರಭಾದೇವಿ ನಿಮ್ಮ ಮಾವಂ ವಜ್ರದಂತಚಕ್ರವರ್ತ್ತಿಗಂ ನಿಮ್ಮತ್ತೆ ಲಕ್ಷ್ಮೀಮತಿಮಹಾದೇವಿಗಂ ಶ್ರೀಮತಿಯೆಂಬ ಮಗಳಾಗಿ ಪುಟ್ಟಿದಳ್,

ಅದು ದಿವಿಜೇಂದ್ರಲೋಕಮಿದು ಮನ್ಮಥರೂಪ ಮನುಷ್ಯಲೋಕಮೆಂ-
ಬಿದುವೆ ವಿಕಲ್ಪಮಲ್ಲಿ ಸುರಕಾಂತೆ ದಲಿಲ್ಲಿ ಮನುಷ್ಯಕಾಂತೆಯೆಂ-|
ಬಿದುವೆ ವಿಕಲ್ಪಮಲ್ಲದೆ ವಿಳಾಸದ ಕೆಯ್ತದ ರೂಪು ಸೊಲ್ತು ನೋ-
ಡಿದರ ಮನಕ್ಕಣಂ ಪಡೆಯದಲ್ತೆ ವಿಕಲ್ಪಮನಲ್ಪಮಧ್ಯೆಯಾ ||೧೯||

---

೧-೧ (ಅ, ಬ) ಪೂಡಿದಪ್ಪೆ. ೨-೨ (ಅ, ಬ) ತಳಿದರಿದಱನೆೞ್ಚಱಿಸೆ. ೩-೩ (ಖ) ಚರದೇವನೆಯುಪ್ಪುದರಿಂದಂ.

ಲತೆಯುಂ [೧]ಕನ್ನೆಯ್ದಲುಂ[೧] ಸೋಗೆಯುಮತನುಧನುರ್ಲ್ಲೀಲೆಯುಂ ವಿದ್ರು
ಮೋದ್ಯ-
ದ್ದ್ಯುತಿಯುಂ ಮುಕ್ತಾಕಳಾಪಸ್ಫುರಿತಮುಮೆಸೆದತ್ತಿತ್ತ ಬಂದಿರ್ದ್ದುವೆಂದೆಂ-।
ದು ತವಮಂ ಕೈಕೊಳ್ವಿನಂ ಕೋಮಲತನುವಲರ್ಗ್ಗಣ್ ನೀಳ್ದ ಧಮ್ಮಿಲ್ಲಮುದ್ಭ್ರೂ
ಲತೆ ಸದ್ದಂತಚ್ಛದಂ ದಂತರುಚಿ ರುಚಿರಶೋಭಾಕರಂ ವಜ್ರಜಂಘಾ ॥೨೦॥

ಒಳಪೊಯ್ಯಲ್ ನಿನ್ನ ನಾಕನ್ನೆಯ ತುಱುಗೆಮೆಗಳ್ ಸುತ್ತಲುಂ ನಿನ್ನನಾಕೊ-
ಮಳೆಯಿಂದಂ ಬೆತ್ತ ಸುತ್ತುಂಗುರುಳಳವಡಿಸಲ್ ನಿನ್ನನಾತನ್ವಿಯೆತ್ತಂ।
ಬಳೆಮತ್ತುಂಗಸ್ತನಂ ಮಾಣ್ದಿರದೆ ಬಳಸಲಿಂ ನಿನ್ನನಾಕಾಂತೆಯಂತಾ-
ನಳಿತೋಳ್ಗಳ್ ಪಕ್ಕುವಾರ್ದ್ದಿರ್ದ್ದುವು ಪಿರಿದು ತೊಡಪ್ಪಾದುದಿನ್ನೆತ್ತ ಪೋಪೈ॥೨೧

ವ॥ ಮತ್ತಮಾಕೆ ನೀಲೋತ್ಪಲದಲನಯನೆಯುಂ, ಕುಂದಕುಟ್ಮಲದಶ-
ನೆಯುಂ, ಶಿರೀಷದಾಮಕೋಮಲಬಾಹುಯುಗಲೆಯುಂ ಕಮಲದಲಕೋ-
ಮಲಕರತಲೆಯುಂ, ವಕುಲಮುಕುಲಸುರಭಿನಿಶ್ವಾಸೆಯುಂ ಚಂಪಕದಲದಾ-
ಮಾವದಾತೆಯುಮಾಗಿ, ಕುಸುಮಸುಕುಮಾರತನುವಪ್ಪುದಱಿಂದತನುಪರಿತಾ-
ಪಮಂ ಸೈರಿಸಲಾಱದೆ ನಿನ್ನೊಳಾದ ವೃತ್ತಾಂತಮನೀಪಟದೊಳ್ ಬರೆದಾಂ ತನಗೆ
ಪರಮವಿಶ್ವಾಸಭೂಮಿಯೆನಾಗಿ ಕಿಱಿಯಂದಿಂದಿತ್ತ ನಡಪಿಯೋ[೨]ದಿಸಿದ ದಾದಿ-
ಮನಪ್ಪುದಱಿಂ [೩]ಪಂಡಿತೆಯೆಂಬ ಬಱಿಯ ಪೆಸರ[೩]ಲ್ಲದೆ ರಾಜಕುಲಸತತ[೪]ಸಂ-
ವಾಸಪ್ರಾಗಲ್ಭ್ಯವೇಷಮೆನಗುಳ್ಳುದಱಿಂ[೪]ದಮಿಾಪಟಮಂ ಪ್ರಾಣಮನೆ ಕೈಯೆಡೆ
ಗುಡುವಂತೆನ್ನ ಕೈಯೊಳ್ ಕೊಟ್ಟು, ಮದೀಯಪ್ರಾಣವಲ್ಲಭನನೆಲ್ಲಿ ಪೊಕ್ಕುಮ-
ಲ್ಲಿಂದದೊಳಮಱಸೆಂದಟ್ಟಿದೊಡೆ, ಬಂದಿದನಿಲ್ಲಿ ಪಸರಿಸಿ ಪಾಳ್ ಪಕ್ಕೆವಟ್ಟಿರ್ದ್ದೆಂ.
ಮದೀಯಕಾಯಕ್ಲೇಶಫಲಮುಂ, ಜನ್ಮಫಲಮುಮೆನಗಿಂದು ನಿನ್ನ [೫]ಬರವಿ-
ನಿಂದಂ[೫] ಸಫಲಮಾಗುದೆಂಬುದುಂ, ತೆಂಕಣೆಲರಲೆಪದಿಂ[೬]ದಂಕುರಿಸಿದ[೬] ಚೂತ-
ದಂತೆ ರೋಮಾಂಚಕಂಚುಕಿತಶರೀರನಾಗಿ,

ನಿನಗಾನೇನೆಂಬೆನೆನ್ನಿರ್ದ್ದಿರವನಱಿದು ನೀನಿರ್ದ್ದೆಯಿನ್ನಾಕೆಗಂ ನೀಂ
[೭]ಮನದನ್ನಳ್ ತೋಱು ನಿನ್ನೀಪಟಮನೆನಗದಂ[೭] ನೋಡಿ ಮತ್ಕಾಂತೆಯಂ ಕಾ-।
ಣ್ಬೆನೆಗಂ ಸೈರಿಪ್ಪೆನೆನ್ನೀಬರೆದ ಪಟಮುಮಂ ಕೊಂಡುಪೋಗಾಕೆಗೆಂದಿಂ-
ತಿನಿತುಂ ವೃಂತ್ತಾಂತಮಂ ನಿನ್ನಿನಿಯನಱಿಯೆ ಪೇಳ್ದಟ್ಟಿದಂ ಲೋಲನೇತ್ರೇ॥

೧-೧ (ಅ,ಬ) ಕನ್ನೆಯ್ದಿಲುಂ. ೨ (ಚ) ದೋ. ೩-೩ (ಅ) ಪಂಡಿತೆಯೆಂಬಱಿಕೆಯ ಪೆಸರ. ೪-೪ (ಚ) ಸಂವಾಸಪ್ರಾಪ್ತಪ್ರಾಗಲ್ಭ್ಯತೆಯುಮುಳ್ಳುದಱಿಂ. ೫-೫ (ಅ) ಬರ-ವಿಂದಂ. ೬-೬ (ಅ) ದಂಕುರಿತಮಾದ. ೭-೭ (ಚ) ಮನದನ್ನೆ ತೋಱು ನಿನ್ನೀ ಬರೆದ ಪಟಮದಂ

ವ|| ಎಂದು [೧]ಮನಃಪ್ರಿಯತಮನ[೧] ಬರೆದ ಸಾಭಿಜ್ಞಾನ[೨]ಪಟಮನೀವುದು[೨]ಮಾಕೆಯುಮದಂ ನಿಮಿರ್ಚಿ ನೋಡಿ,

ಅವಿನಾಣಮೆನಿತುಮೆರ್ದೆವುಗೆ |
ಕಿವಿವುಗೆ ಪಂಡಿತೆಗೆ ನುಡಿದ ನಲ್ಲನ ನುಡಿ [೩]ತ- ||
ಕ್ತ[೩]ವಿರಳರೋಮಾಂಚವೆ ಮಾ-
ಧವಸಮಯದೊಳಲರ್ದ ಚೂತಲತೆಯನೆ ಪೋಲ್ತಳ್ ||೨೩||

ವ|| ಅನ್ನೆಗಮಿತ್ತ ಶ್ರೀಮತಿವಜ್ರಜಂಘರ ಜನ್ಮಾಂತರಸ್ನೇಹರಸಾಮೃತಪಾತ್ರಚಿತ್ರಪಟವ್ಯತಿಹಾರಮಂ ವಜ್ರಜಂಘಾನುಚರರಿಂದಮಱಿದು ವಜ್ರಬಾಹುಮಹೀನಾಥಂ ನಿಜತನೂಜಗುಣಮಣಿಮಾಲೆಗೆ ತತ್ಕನ್ಯಾರತ್ನಮಂ ನಾಯಕಮಣಿಮಾಡಲೆಂದಾತ್ಮೀಯವಿಲಾಸಂಬೆರಸು [೪]ಬಂದು ಪುಂಡರೀಕಿಣಿಗೆ ಮುಂದಟ್ಟಿದ ದೂತಂಗೆ ಪ್ರೀತನಾಗಿ ಮೆಚ್ಚಿ ಮೆಚ್ಚಿತ್ತು[೪] ವಜ್ರದಂತಚಕ್ರವರ್ತಿಯುಮನಂತಸಾಮಂತಾಂತಃಪುರಪರಿವಾರಪರಿವೃತನುಂ ಬಂಧುರಗಂಧಸಿಂಧುರಾರೂಢನುಮಾಗಿ,

ಕರಿಸೇನಾಸಾರಿನದ್ಧೋತ್ತರಲಕದಲಿಕಾಕಾನನೋಚ್ಚುಂಬ್ಯಮಾನಾಂ-
ಬರಚಕ್ರಂ ವಾಜಿರಾಜಿಶ್ರವಣಚಮರಜಶ್ರೇಣಿಸಂವೀ[೫]ಜಿತಾ[೫]ಶಾಂ-||
ಬ[೬]ರಭಾಗಂ ಪತ್ತಿಶಸ್ತ್ರದ್ಯುತಿಪರಿಕರಸಾಂದ್ರೀಭವಚ್ಚಂಡರೋಚಿಃ-
ಕಿರಣೌಘಂ ವಜ್ರಬಾಹುಕ್ಷಿತಿಪತಿಗಿದಿರಂ ಬಂದನುತ್ಸಾಹದಿಂದಂ ||೨೪||

ವ|| ಅಂತತಿಪ್ರೀತಿಯಿಂ ವಜ್ರಬಾಹುಕ್ಷಿತಿಪತಿಗಿದಿರ್ವೋಗಿ ನಿಜವಿಜಯಗಜದಿನಿೞಿದು ತನಗೆ ಪೊಡೆವಟ್ಟ ವಜ್ರಬಾಹುವನಾಶೀರ್ವಾದಪುರಸ್ಸರವಪ್ಪಿಕೊಂಡಾತ್ಮೀಯ[೭]ಶಿಖಂಡ[೭]ಮಣಿಮರೀಚಿಗಳಿಂ . ನಿಜಪದಕಮಲದೊಡನೆ ವಸುಂಧರೆಯುಮನಳಂಕರಿಸಿದ ವಸುಂಧರೆಯುಮಂ ನಿಜಾನುಜೆಯಂ ಪರಸಿ ವಿನಯವಿನಮಿತಮಣಿಮುಕುಟನಾದ ವಜ್ರಜಂಘನನನೇಕಭೋಗಭಾಗಿಯಾಗೆಂದು ಪರಸಿ ಪಿರಿದುಮುಚ್ಚಿಕೆಱನೊಳ್ ತರ್ಕೈಸಿಕೊಂಡು ನಿಜವಿಜಯಗಜೇಂದ್ರಮನೇಱಿಸಿ [೮]ಮುಂದಿಟ್ಟು[೮]ಬರೆ ಪುರಜನಂಗಳುತ್ತುಂಗಪ್ರಾಸಾದಕೂಟಕೋಟಿಗಳುಮನುದಗ್ರಸೌಧೋಪರಿಮತಳಂಗಳುಮನೇಱಿ ನೋಟ್ಪಲ್ಲಿ,

---

೧-೧ (ಅ) ಮನಃಪ್ರಿಯನ; (ಬ) ಮನಃಪ್ರಿಯತಂನ. ೨-೨ (ಅ) ಪಟಮಂ ನೀಡುವುದು. ೩-೩ (ಅ) ಮತ್ತ ೪-೪ (ಅ,ಬ) ಪ್ರತಿಗಳಲ್ಲಿಲ್ಲ. ೫-೫ (ಬ) ಜೀವಿತಾ. ೬ (ಅ) ತ. ೭-೭ (ಅ) ಶಿಖಂಡಮಂಡನ; (ಬ) ಶಿಖಂಡಿತ. ೮-೮ (ಚ) ಮುಂದಿಟ್ಟೊಡಗೊಂಡು

ಪುದಿದೀಕ್ಷ್ವೇತಾತಪತ್ರೋತ್ಕರದ ನಡುವಣಂ ವಜ್ರದಂತಂ ಸಮಂತೆ-
ತ್ತಿದ ಪಿಂಛಚ್ಛತ್ರಷಂಡಂಗಳ ನಡುವೆಸೆವಂ ವಜ್ರಬಾಹುಕ್ಷಿತೀಶಂ |
ಮದಗಂಧಭ್ರಾಂತಭೃಂಗಾವಳಿವಳಯಿತಮತ್ತದ್ವಿಪಂ ಕೂಡೆ ಮಿಂಚಿಂ
ಪುದಿದತ್ತೆಂಬಂತೆ ಕೂರಂಕುಸದ ಪೊಳೆಪನಾತೋಱುವಂ ವಜ್ರಜಂಘಂ ||೨೫||

ವ|| ಎಂದು [1]ತಮ್ಮೊಳೋರೊರ್ವರೊಳ್ನುಡಿಯುತ್ತುಂ[1] ಪೌರ[2]ಜನಂಗ[2]ಳ್ ಸೂಸುವ ಲಾಜವರ್ಷಮುಮಂ ಕುಸುಮವರ್ಷಮುಮನಾಂತುಕೊಳುತ್ತುಂ ಮುತ್ತಿನ ಮುಱಿದ ಲಂಬಣಂಗಳ್ವೆರಸೆಟಿಲ್ವ ಪಚ್ಚೆಯ ಸಾರದ ಹಾರದ ತೋರ-ಣಂಗಳಂ ನುಗುಳುತ್ತುಂ ಬಂದು, ರಾಜಮಂದಿರಮಂ ಪೊಕ್ಕು, ಕರುಮಾಡದ ಕೆಲದ ಮಾಡದೊಳ್ ವಜ್ರಬಾಹುನೃಪನನಿರಿಸಿ, ಮಜ್ಜನಭೋಜನತಾಂಬೂ-ಲಾಂಬರಾನುಲೇಪನಭೂಷಣಾದಿವಿವಿಧವಿಶೇಷಸತ್ಕಾರಂಗಳೊಳ್ ಸಂತಸಂಬ-ಡಿಸಿ, [3]ನಾನಾವಿಧವಿನೋದಂಗಳಂ[3] ತೋಱಿ ವಜ್ರದಂತಚಕ್ರವರ್ತಿ ನಿನಗಾ-ವುದು ಮನೋರಥಮದಂ ಬೇಡಿಕೊಳ್ಳೆನೆ,

ಎನಗರಿದುಂಟೆ ನಿನ್ನ ದಯೆಯಿಂದುಟಿದಾವುದುಮೆಲ್ಲಮುಂಟು ನೀ-
ನೆನಗೆ ನರೇಂದ್ರಮೌಳಿಮಣಿ[4]ರಾಜಿವಿರಾಜಿತಪಾದಪೀಠ[4] ನೆ-|
ಟ್ಟನೆ ದಯೆಗೆಯ್ವೊಡೀ ನಿಜತನೂಜೆಯನುತ್ಸವಮಂಗಳಾನಕ-
ಧ್ವನಿ [5]ದೆಸೆಯಂ[5] ಪಳಂಚಲೆವಿನಂ ನೆರಪೀಗಳೆ ವಜ್ರಜಂಘನೊಳ್ ||೨೬||

ವ|| ಎಂಬುದುಂ ಚಕ್ರಧರನಧರಕಿಸಲಯದ ಮೇಲೆ ದಂತಕಾಂತಿಲತಾಂತ ಪ್ರಭೆಗಳ್ ಪಸರಿಸೆ,

ಒಡೆಯಂ ಕೂಸಿಂಗದೊಂದೇ ಕುಲದ[6] ಚಲದ ಪೆಂಪೊಂದೆ ಚೆಲ್ವೊಂದೆ ಸಂದೊಳ್
ನುಡಿಯೊಂದೇ ವಿದ್ಯೆಯೊಂದೇ ಪುದಿದೊದವಿದ ಜನ್ಮಾಂತರಸ್ನೇಹಮೊಂದೇ|
[7]ನುಡಿಯಲ್ ವೈಕಲ್ಪದಂತಲ್ತೆ[7]ನಲೆಡೆ ಪೆಱರ್ಗಿನ್ನಿಲ್ಲ ಮುನ್ನಾವಿಧಾತ್ರಂ
ಕುಡಲಿರ್ದಂ ಕನ್ನೆಯಂ ಪೇಟಿ್ ನಿನಗಮೆನಗಮೇಂ ದಂದುಗಂ ವಜ್ರಬಾಹೂ||೨೭||

೧-೧ (ಅ,ಬ) ಪ್ರತಿಗಳಲ್ಲಿಲ್ಲ. ೨-೨ (ಅ,ಬ) ಜನದ. ೩-೩ (ಚ) ನಾನಾವಿನೋಡ್ಯೋಗಳಂ. ೪-೪ (ಗ) ರಾಜಿತಪಾದಪಯೋಜಪೀಠ. ೫-೫ (ಗ) ಶಿವಿಯಂ. ೬ (ಅ) ಥ. ೭-೭ (ಚ) ನುಡಿಯಲ್ಪಿಕ್ಕಲ್ಕದೊಂದಲ್ತೆ.

ವ|| ಅಂತುಮಲ್ಲದೆಯುಂ

ಬಾಲಸಹಕಾರತರು ನವ-
ಮಾಲಕೆಗತಿಲಲಿತಪೂಗಭೂಜಾತಂ ತಾಂ- |
ಬೂಲಲತೆಗೆಂಬವೋ[೧]ಲ್ ಸ್ಮರ[೧]-
ಲೀಲಂ ನಿಜತನಯನೆನ್ನ ತನುಜೆಗೆ ತಕ್ಕಂ ||೨೮[೨]||

ಸ್ತ್ರೀರತ್ನಮೀಗಳೀಕೆಯೆ
ಧಾರಿಣಿಯೊಳ್ ಪುರುಷರತ್ನಮೀತನೆ ಸದೃಶಾ-|
ಕಾರರನಿವರಂ ಕೂಡಿ ಪ-
ಯೋರುಹಜಂಗಕ್ಕೆ ಸಮಸಮಾಯೋಗ[೩]ಯಶಂ[೩] ||೨೯||

ವ|| ಎಂಬುದುಂ ವಜ್ರಬಾಹುಮಹೀಪತಿ ವಜ್ರದಂತಚಕ್ರವರ್ತಿಸೂಕ್ತಾ-
ಮೃತಸಿಕ್ತಮಪ್ಪ ನಿಜಮನೋರಥಾಮರದ್ರುಮದಿ[೪]ನೊಗೆದಂಕುರ[೪]ನಿಕರಮನ-
ನುಕರಿಸುವ ರೋಮಾಂಚನಿಚಯದಿಂ ನಿಚಿತಾಂಗನಾಗಿ,

ಪ್ರಣಯಮಿದನನ್ಯಸಾಧಾ-
ರಣಮೆನಿಪ ಭವತ್ಪ್ರಸಾದಮೆಂಬಮೃತದಿನಾಂ |
ತಣಿದೆಂ ಭೂಭುವನದೊಳಾ-
ರೆಣೆಯೆನಗೆಂ[೫]ಬಿನಿತು[೫] ಸಂತಸಕ್ಕೆಡೆಯಾದೆಂ ||೩೦||

ವ|| ಎಂದು ನಿಜೋತ್ತರೀಯಾಂಶುಕಮನೆ ಮಹೋತ್ಸವಧ್ವಜಮಂ ಮಾಡಿ ವಸುಂಧರಾಸೌಂದರಿಯುಂ ತಾನುಂ ಪ್ರಿಯತನಯನ ವಿವಾಹೋತ್ಸವಲಗ್ನಚಿತ್ತರಾಗಿ ಲಗ್ನಮನೆ ಪಾರುತ್ತಮಿರ್ದರಾಗಳ್ ವಜ್ರದಂತಚಕ್ರ[೬]ವರ್ತಿಯಾತ್ಮೀಯ[೬] ಪುತ್ರೀವಿವಾಹೋತ್ಸವಕ್ಕೆ ಮೌಹೂರ್ತಿಕರಂ ಕರೆದು ದಿವಸಮಂ ಬೆಸಗೊಳ್ವುದುಮವರಿಂದಿನ ವಾಸರಮೆ ಶೋಭನವಿಧೇಯವಾಸರಮಿಂದಿನ ದಿವಸಮೆ ಶುಭದಿವಸಾಗ್ರೇಸರಮಿಂದಿನ ನಕ್ಷತ್ರಮೆ ಸಕಲಕ್ಷೇಮಕ್ಷೇತ್ರಮಿಂದಿನ ಯೋಗಮೆ ಸಮಸ್ತಾಭಿವಾಂಛಿತಫಲಸಮಾಯೋಗಮಿಂದಿನ ಕರಣಮೆ ಕಲ್ಯಾಣಕರಣೀಯಾದಿಕರಣಮೆಂದು ಬಿನ್ನಪಂಗೆಯ್ವುದುಂ ಜಗಜ್ಜನ-ಜಂಗಮ-ಕಲ್ಪವೃಕ್ಷಂ

೧-೧ (ಚ) ಲ್ ಸಮ. ೨ (ಅ,ಬ,ಕ) ಪ್ರತಿಗಳಲ್ಲಿ ಈ ಪದ್ಯ ೨೯ನೆಯ ಪದ್ಯದ ಮುಂದೆ ಬಂದಿದೆ. ೩-೩ (ಗ) ಸುಖಂ. ೪-೪ (ಚ) ನೊಗೆದಂಕುರಿಸಿದಂಕುರ. ೫-೫ (ಚ) ಬೊಂದು. ೬-೬ (ಕ) ವರ್ತಿಯುಂ ಲಕ್ಷ್ಮೀಮತೀಮಹಾದೇವಿಯುಮಾತ್ಮೀಯ.

ಕಲ್ಪವೃಕ್ಷವೆಂಬ ಮಹಾಮಹಿಮೆಯುಂ ಮಹಾಪೂತಜಿನಾಲಯಮೊಳ್ ಮುನ್ನಂ ಮಾಡಿ ಬೞಿಯುಂ ನಿಜರಾಜಧಾನಿಯೊಳೊಸಗೆಯುಂ ಮಾಡಿ ವಿವಾಹಮಂಟಪಮಂ ಸ್ಥಪತಿರತ್ನಕ್ಕೆ ವಿರಚಿಸೆಂದು ಬೆಸಸಿದಾಗಳ್.

॥ ಮಂದಾನಿಲರಗಳೆ ॥

ಸ್ಫುರಿತೇಂದ್ರನೀಲಮಣಿಖಚಿತಭೂಮಿ
ಚೆಲುವಿಂಗಿ[೧]ದು ನೆಟ್ಟನೆ ಜನ್ಮಭೂಮಿ ॥
ಮರಕತ-ಮಣಿವಿರಚಿತ-ವಿಮಲಭಿತ್ತಿ
ಪೊಗೞಲ್ಕರಮರಿದು ಬೇಱೆ ಭಿತ್ತಿ ॥
ಪಳುಕಿನ ಕಂಭಂಗಳ ಪೊಳೆವ ಪೊಳಪು
ನವವಿದ್ರುಮದ ಪೊಳೆವ ಪೊಳೆಪು ॥
ಲಲಿತೋನ್ನತ ಮಣಿಮಯಕೂಟದಂಗ-
ಮದು ಪಱವುಂ ದೇಸೆಯ ಮಾಟದಂದ- ॥
ಮೆಱಲಿಕ್ಕಿದ ಮುಕ್ತಾದಾಮಶೋಭೆ
ಲಕ್ಷ್ಮೀಲಲನಾವರಹಾಸಶೋಭೆ ॥
ಚಂದನದೆಳ[೨]ದಳಿರ್ದೋರ[೨]ಣಂಗಳವು
ಸೂಚಿತಮಂಗಲ-ಕಾರಣಂಗಳವು ॥
ತುಂಗಕನಕಶೃಂಗಾರವಿರಾಜಿ
ರಾಜನ್ಮರಕತಮಯಶುಕವಿರಾಜಿ ॥
ಪುಣ್ಯಾಂಬು-ಪೂರ್ಣ್ಣ-ಕುಂಭಾಗ್ರಮುಚಿತ-
[೩]ಕಂಕೇಲಿ[೩]ಪಲ್ಲವೋಲ್ಲಾಸ-ರಚಿತ- ॥
ಮುಜ್ಜ್ವಲ-ಮಣಿದರ್ಪ್ಪಣ-ದೀಪ್ತಿರಮ್ಯ-
ಮಾವೇಷ್ಟಿತಸೂತ್ರತ್ರಿತಯ[೪]ರಮ್ಯ[೪]- ॥
ಮಾಲಂಬಿತ ಮಣಿಘಂಟಾ-ನಿನಾದ-
ಮದು ಕನಕಕಿಂಕಿಣೀ[೫]ಮೃದುನಿನಾದ[೫]- ॥

೧ (ಚ) ಗ. ೨-೨ (ಅ,ಬ) ದಳಿರ್ಗ್ಗಳ ತೋರಣ. ೩-೩ (ಅ,ಬ) ಕಂಕೆಲ್ಲ. ೪-೪ (ಚ) ಸೌಮ್ಯ. ೫-೫ (ಅ) ಕೃತವಿವಾದ.

ಮುನಿಮ್ರೀಲಿತನವಕುಸುಮೋಪಹಾರ-
ಮುದ್ದೀಧಿತಿ-ತಾರಾನಿಕರತಾರ-॥

ಮೆನೆ [1]ಪೊಸ ಪೊನ್ನದ[1] ಪಸರಮೆನಿಸಲಿದು
ಮದನನ ಮಂಗಳಭವನಮೆನಿಸಲಿದು॥

ರತಿಯ ವಿವಾಹಾಗಾರಮೆನಿಸಲಿದು
ಸಕಲ-ವಿಲಾಸ-ನಿವಾಸಮೆನಿಸಲಿದು॥

ಮದನಸಾರಸರ್ವಸ್ವಮೆನಿಸಲಿದು
ಸುರತೋತ್ಪತ್ತಿ-ಸ್ಥಾನಮೆನಿಸಲಿದು॥

ವಿಭವದ ಮೂಲಸ್ಥಾನಮೆನಿಸಲಿದು
ಕಾಮದೇವನಾಸ್ಥಾನಮೆನಿಸಲಿದು॥

ಓರಂತೆ ನೆರೆದುದೆನೆ ಜನ ಸಮೂಹ-
ಮಾಗಳೆ ಸಮೆದತ್ತು ವಿವಾಹ[2]ಗೇಹ[2]॥

ಜಾಗದ ನೆಲೆವಡಲಗೆಗಳ
ಜಾಗಂಗಳ ಪಸುರ್ಗಳೆಸೆಯೆ ರತ್ನದ ಕೇರ್ಗಳ್॥
ಜಾಗಂಬೊಯ್ದಂತಿರೆ ಪರ-
ಭಾಗಂಬಡೆದುವು ವಿವಾಹಗೇಹಾಂತರದೊಳ್ ॥೩೧॥

ನುಡಿವ ನಡೆನೋಡುವಾಡುವ
ಪೊಡೆವಡುವಮರ್ದಪ್ಪಿಕೊಳ್ವ ತಮ್ಮಿನಿಯರ ಕಾಲ್॥
ವಿಡಿವಂದದ ಚಿತ್ರದ ಪೆಣ್-
ಬಡೆಯಿಂ ಸ್ತ್ರೀರಾಜ್ಯದಂದಮುದಜಿಿಡೆಯೆಡೆಯೊಳ್ ॥೩೨॥

ಬಿಡುಮುತ್ತಿನ ಬಳಸಿದ[3] ಕಡೆ
ನಡುವಣ ಚೆಂಬೊನ್ನ ಪಟ್ಟವಣೆ ರನ್ನದ ಕ-।
ನ್ನಡಿವೆರಸು ಸರ್ವಧಾನ್ಯದ
ನಡುವಿರೆ ಮೊಸರಣ್ಕೆವೆರಸಿಪೆಳದಳಿಗ-ಳಸಂ ॥೩೩॥

---

೧-೧ (ಅ,ಬ) ಪೊಸತಿದು ಪುಣ್ಯದ. ೨-೨ (ಅ,ಬ) ಗೇಹಂ. ೩ (ಅ). ನ.

ವ|| ಆ ಚಂಚತ್ಪಂಚರತ್ನವೇದಿ[1]ಕಾಂತರಾಳಕ್ಕಳಂಕಾರ[1]ಮಾಗಿ.

ಬೆಳಗುವ ಮಂಗಳದೀಪಾ-
ವಳಿಗಳ ಬೆಳಗತ್ತಮಿತ್ತ ಮಚ್ಚೊತ್ತಿ[2]ರ್ದವೋಲ್ ।
ತಳತಳಸಿ ಬೆಳಗಿ ಬೆಳಗನೆ
ಮೊಳೆತಂತೊಪ್ಪಿದುವು ತೊಳಪ ರನ್ನದ ಕೇರ್ಗ[2]ಳ್ ||೩೪||

ವ|| ಆಗಳಾವಿವಾಹದೊಸಗೆಯೊಳೊಸಗೆಮರುಳ್ಗೊಂಡಂತಿತ್ತ ವಸುಂಧರಾ-ಸೌಂದರಿಯುಮತ್ತ ಲಕ್ಷ್ಮೀಮತಿಮಹಾದೇವಿಯುಮೆಕ್ಕೆಕ್ಕೆಯೊಳ್ಕೊಂಡಳಿಕಮ-ಹಾಸಾಮಂತ-ಮಂತ್ರಿಮಂಡಲಾಂತಃಪುರ-ಪುರಾಂಗನಾನಿಕರಕ್ಕೆ ಮಣಿಮಯ--ಭಾಜನಂಗಳೊಳ್ತೀಕ್ಕನೆ ತೀವಿದ ಪಂಚರತ್ನದ [ಕೇಸರಿ]ಯ ಕತ್ತುರಿಯ ಕೊಳ-ತದ[3] ಕಪ್ಪುರದ ಪಳಿಕಿನ ಬಾಯಿನಂಗಳಂ ಬೀಱು*ಸಾಹಿಯಾಣ*ದ [3]ಚೀನದ ಧವಳವಟ್ಟದ[3] ಜೊಂಗದ ದೇವಾಂಗದ ಸಕಳ ಪಟ್ಟೆ[4]ಗಳನೆ[4] ಮೆಟ್ಟುವೆಡೆಗಳೊ-ಳೆಲ್ಲಂ ಪಾಸಿಕಾರೋಹಣದ ಕಕ್ಕರವಳಯಿಗೆಯ [5]ಚಿತ್ರಾವಳಿಯ ಪಳಿವೆಡೆಯ ತುಳಿ[5]ವೆಡೆಯ ನೆಳಲಪಾಣಿಯ ಬಣ್ಣದ [6]ಕಣದ[6] ಬಣ್ಣವಣ್ಣಿಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್,

ಇದಿರೊಳ್ ಸೂಸುವ ಹೇಮಭಾಜನಚಯಕ್ಕತ್ಯಸ್ತ ವಸ್ತ್ರಕ್ಕೆ ಮೆ-
ಚ್ಚಿದನರ್ಘ್ಯಾಭರಣಕ್ಕೆ ಲೆಕ್ಕಮಣಮಿಲ್ಲಿಂತಿತ್ತರಾರ್ ಮುನ್ನ ತ-
ಪ್ಪದಿವಂ ಜಂಗಮಕಲ್ಪವೃಕ್ಷಮೆನೆ ಕೊಟ್ಟೀಮಾಟಿಕ್ಕೆಯಿಂ ಭಾಜನಾಂ
ಗದ ವಸ್ತ್ರಾಂಗದ ಭೂಷಣಾಂಗದಳವಂ ಚಕ್ರೇಶ್ವರಂ ತಾಳ್ದಿದಂ ||೩೫||

ವ|| ಆಗಳ್ಪಂಚರತ್ನಗರ್ಬ್ಭವಿನಿಧೌಷಧಿಸಂದರ್ಬ್ಭಶಾತಕುಂಭಕುಂಭಸಂ-ಭೃತಮಂಗಲಜಲಂಗಳಿಂದಂ ಮಿಸಿಸೆ [7]ಮಿಂದಲಂಕಾರಮಂದಿರಕ್ಕೆ[7] ವಂದು ನೆಱೆಯೆ ಕೈಗೆಯ್ಯೆ,

---

೧-೧ (ಚ) ಕಾಂತರಾಳವಳಯಕ್ಕಳಂಕಾರ. ೨ (ಚ) ಳ. ೩-೩ (ಬ) ಚೀನದ ನವಟದುಭಯುಕರ್ಮ್ಮದ; (ಚ) ಚಿನ್ನದ ನವದಿದ ಭರ್ಮದ. ೪-೪ (ಚ) ಗಳುಮಂ. ೫-೫ (ಅ,ಕ) ಚಿತ್ರಾವಳಿಯ ಪಳಿಯ ತುಳಿ. ೬-೬ (ಅ,ಬ) ಪ್ರತಿಗಳಲ್ಲಿಲ್ಲ. ೭-೭ (ಅ) ಮಿಂದಲಂಕಾರಾಗಾರಕ್ಕೆ; (ಬ) ಮಿಂದಲಂಕಾರನಿಲಯಕ್ಕೆ.

*-* (ಕ) ಸುಯಿಯಾಣದ.

ಕರೆವೆರಸಿದ ಪೊಸ ದುಗುಲದ
ತೆರಳ್ಕೆವೆತ್ತುಡೆ ಹಟತ್ಕಟೀಸೂತ್ರಪರಿ-॥
ಸ್ಫುರಿತದೊಳಂ ಕಟ್ಟಿದ ಪೊಂ-
ಜುರಿಗೆಯೊಳಂ ಜನಮನೇಂ ಮನಂಗೊಳಿಸಿ[೧]ದನೋ[೧] ॥೩೬॥

ತರಳತರವೃತ್ತಮೌಕ್ತಿಕ-
ಪರಿಕರಮೇಕಾಂತಕಾಂತಮೆಕ್ಕಾವಳಿ ಕಂ-।
ಧರದೊಳಮರ್ದೆಸೆಯೆ ಪೋಲ್ತುದು
ಪರಿವೇಷಂಗೊಂಡ ಚಂದ್ರನಂ ಮುಖಚಂದ್ರಂ ॥೩೭॥

ಹಿಮವದ್ಗಿರಿ[೨]ಕಟಕ[೨]ದಿನೊಗೆ-
ದಮರಸರಿತ್ ಸ್ರೋತಮೆಂಬ ಮಾತಂ ಪಡೆದೇಂ॥
ಹಿಮಗೌರಹಾರಮೆಸೆದುದೊ-
ಹಿಮಶೈಲಶಿಲಾವಿಶಾಲವಕ್ಷಸ್ಥಳದೊಳ್ ॥೩೮॥

ಶ್ರೀಮತಿಯ ಮನಮನೆಱಗಿಸ-।
ಲೀಮಣಿಮಯಮಕುಟಮಾಗಳುಂ ಸಾಲ್ವುದೆ ತ-॥
ತ್ಕೋಮಲೆ ಮುಳಿದಿರೆ ತಿಳಿಪ-
ಲ್ಕೀಮಕುಟಮೆ ಸಾಲ್ಗುಮೆನಿಸಲಾರ್ತುದು ಮಕುಟಂ ॥೩೯॥

ಕೇಯೂರ-ಕಟಕಸಮಿತಿಯು-
ಗ್ರಾಯತಬಾಹುಗಳಿನುನ್ಮಿಷದ್ರ[೩]ತ್ನಹೆಟ-।
ಚ್ಛಾಯೆ[೩]ಯೊಳೆ ಮುಸುಕಿ ದೇಹ-
ಚ್ಛಾಯೆಯುಮಂ ಪುದಿಯೆ ರತ್ನ[೪]ತರುವನೆ[೪] ಪೋಲ್ತಂ ॥೪೦॥

ಮನಸಿಜನಂಗನಾಜನವಶೀಕರಣೌಷಧಮಂಗಜನ್ಮನಂ-
ಬಿನಮದಶಕ್ತಿ ಮನ್ಮಥನ ಮೋಹನಯಂತ್ರಮಿದಪ್ಪುದಲ್ಲದಂ-॥

---

೧-೧ (ಚ) ದುದೋ. ೨-೨ (ಅ,ಬ) ನಿಕಟ. ೩-೩ (ಅ) ರತ್ನಾಂಶುಚ್ಛಾಯೆ; (ಬ) ರತ್ನನಖಚ್ಛಾಯೆ. ೪-೪ (ಅ) ತರುವಂ.

ದಿನಿತು ಪರಂ ಮನಂಗೊಳಿಸಪೆಂಬಿನಮುಜ್ಜ್ವಲಮಂಗಲಪ್ರಸಾ-
ಧನಮೆ ಮನೋಜರಾಜಜಯಸಾಧನಮಾದುದು ವಜ್ರಜಂಘನಾ ||೪೧||

ವ|| ಅನ್ನೆಗಂ ಶ್ರೀಮತಿಯುಂ ಅನಂತಸಾಮಂತಸೀಮಂತಿನೀಪರಿವೃತೆಯುಮತಿಪ್ರೌಢವಾರವನಿತಾಪರಿವೃತೆಯುಮಾಗಿ ಪಾಲ್ಗಡಲ ತೆರೆಯ ನೊರೆಯ ದೊರೆಯ ದುಕೂಲಾಂಬರಮನುಟ್ಟ [೧]ಟ್ಟ ದುಕೂಲವಸನ[೧]ವಾತ್ರೀಯಘನಜಘನದ ನುಣ್ಪಿನೊಳ್ ನುಣ್ಪಮೆ ಗೆತ್ತು ಝಣಝಣಾಯಮಾನಮಣಿಕಿಂಕಿಣೀವಿರಾಜಿತಕನಕಕಾಂಚೀಕಳಾಪಮನನಂಗರಾಗರಸಪ್ರವಾಹಕ್ಕೆ ಕಟ್ಟೆಗಟ್ಟುವಂತೆ-ಕಟ್ಟೆ ಸಾಂದ್ರಚಂದನಪ್ರವಾನುಲಿಪ್ತೋದ್ವೃತ್ತಕುಚಕಲಶಂಗಳಂ ತರಲತರತಾರಹಾರದಿಂದಲಂಕರಿಸಿ ಚಂಪಕದಲದಾಮಕೋಮಲನಿಜಭುಜಲತೆಗಳನನೇಕ ಮೌಕ್ತಿಕಮಣಿವಿಭೂಷಣಂಗಳಿಂ ಕುಸುಮಿಸಿ ಮನ್ಮಥೋತ್ಸವಾಭಿಮುಖ-ಮುಖಚಂದ್ರನಂ ಚಂದ್ರಕವಲದಿಂ ತೊಡೆದೋರೊಂದೆ ವಜ್ರದ [೨]ಪಂಚಲೋಹಮುಮನವರ್ಕ್ಕಮು[೨]ರ್ಕ್ಕವೆತ್ತ ಮುತ್ತಿನ ಮುಗುಳ್ಗಳುಮನಿಟ್ಟಾಮುಗುಳನೆ ಬಿಱಿ ಮುಗುಳ್ಗೆತ್ತೆಱಗಿದ ಮಱಿದುಂಬಿಯಂತೆ ಸೊಗಯಿಸೆ ತೀವಿದ ಕೊಗ್ಗಿಯ ಕತ್ತುರಿಯುಂ ಕತ್ತುರಿಯೊಳಂಟಿ ಪರಿಚೆಯುಂ ಪರಿಚೆಯೊಳ್ ಪರಿಚಯಂಬಡೆದ ಮದವಟ್ಟೆಯುಂ ಮದವಟ್ಟೆಯೊಳೊಡಂಬಟ್ಟ ವಿಪುಲಕಪೋಲತಲಲಿಖಿತವಿಚಿತ್ರಪತ್ರಲೇಖೆಯುಂ ಪತ್ರಲೇಖೆಯಂ ಮುಗುಳ್ನಗೆನಗುವಂತಿರ್ದ್ದಧರಮುಮಧರಮನಧರಂ ಮಾಡಿ ಪೊಳೆವ ಸುಲಿಪಲ್ಲ ಪೊಳಪುಂ ಸುಲಿಪಲ್ಲಪೊಳಪೆಂಬ ತನ್ನ ಬಾಳ ಪೊಳಪನೆ ಮೆಱೆದು ಸಮಱಿವ [೩]ಮದನನೊಡ್ಡಣದಂತೆ[೩] ಸಮಱಿದ ಪುರ್ವ್ವುಂ ಪುರ್ವ್ವೆಂಬ ಕರ್ಬ್ಬಿನ ಬಿಲ್ಲಿಂ ಬರ್ದುಂಕಿದ ಮದನನಲರಂಬೆಂಬಿನಮಿಂಬಾಗಿರ್ದ್ದ ನೆಲೆವೊಟ್ಟುಂ [೪]ನೆಲೆವೊಟ್ಟನೊಟ್ಟೈಸಿ[೪] ಪಳಂಚಲೆವ ಕುರುಳೋಳಿಯುಂ ಕುರುಳೋಳಿಯೊಳ್-ಮುಸ್ಸಮೆ ಸೊಗಯಿಸುವ ಚಿನ್ನಪೂಗಳುಂ ಚಿನ್ನಪೂಗಳೆಡೆಯೆಡೆಯೊಳ್ [೫]ನಿಮಿರ್ದ್ದು[೫] ಮಿಱುಮಿಱುಗುವ ತಲೆದುಡುಗೆಯುಂ ತಲೆದುಡುಗೆಯೊಳೊಡಂಬಡಂಪಡೆದು ಮಿಳಿರ್ದ್ದ ಪೊಳೆವ ಪೊಂದಳಿರುಂ ಪೊಂದಳಿರೊ[೬]ಳೊಂದವಿಂದಿಯಲ್ಲದೊಂದಿ ನಾಡೆಯುಮಂದಂಬಡೆದು ಪನನೆಱಿದು ತಳಿದ ಮೃಗಮದಸಲಿಲದೊಳ್ ಮೆಲ್ಲಮೆಲ್ಲನುಳ್ಕಲರ್ದ ಚೆಲ್ವಿಂಗೆ ಮುಡಿಗವಿದಂತೆ ತೋಱುವ ತೋರಮಲ್ಲಿಗೆಯ ಮುಡಿಯುಮೆಸೆಯೆ ಕೈಗೆಯ್ದಾಗಳ್,

---

೧-೧ (ಚ) ಪ್ರತಿಯಲ್ಲಿಲ್ಲ. ೨-೨ (ಅ) ಪಚ್ಚೆಯೋಲೆಯುಮನವಕ್ಕಮುರ್ಕ್ಕೆ. ೩-೩ (ಅ) ಮದನ ನೊಡ್ಡೋಲಗದಂತೆ. ೪-೪ (ಚ) ನೆಲೆವೊಟ್ಟನೊಳೊಟ್ಟೈಸಿ. ೫-೫ (ಅ) ನಿಮಿಱಿ. ೬ (ಅ) ಳ.

ಹಾರಾದ್ಯಾಭರಣಂಗಳಿ-
ನಾರೂಪಾಶ್ಚರ್ಯ್ಯವಾಗೆ ಮಾಣಿಕಚಟ್ಟಂ ।
ನೀರಂಜಿಸಿ ದಳಿವಿಡಿದ ಮ-
ಹಾ¹ರತ್ನದ ದೊರೆಗೆವಂದು¹ದಾಸ್ತ್ರೀರತ್ನಂ ॥೪೨॥

ವ॥ ²ಆಗಳನೇಕಪ್ರಸಾಧನ²ಪ್ರಯೋಗಪ್ರವೀಣೆಯರಪ್ಪತಿಪ್ರೌಢಪುರಂಧ್ರಿಯರ್ನ್ನೋಡಿನೋಡಿ,

ಮರಕತರತ್ನಚ್ಛವಿ ಪ-
ದ್ಮರಾಗರತ್ನಪ್ರಭಾಪರಿಸ್ಫುರದಧರಂ॥
ಹರಿನೀಲರತ್ನಕೇಶಂ
ಧರಿತ್ರಿಗೀಯುವತಿರತ್ನಮೇನೊಪ್ಪಿದುದೋ ॥ ೪೩ ॥

ಎಳವಿದಿರ ಬಣ್ಣವೊಳ್ನಡು
ಕಲಶಮುನವ್ವಳಿಪ ಪೊಲೆ ಪೊದಟಿದ್ದಿಳಸುವ ಬಾಯ್ ।
ಬಳಸುವ ಕಣ್ ಮಿಳಿರ್ವ ಕುರುಳ್-
ನಳಿವೊಗಮೆನೆ ಸೊಬಗಿವಳ್ಗೆ ಸಾಟ್ವೆರ್ತ್ತನಮೇ ॥೪೪॥

ಮದನನ ಮಣಿ-ದರ್ಪ್ಪಣಕಂ
ಮದನನದೀರತ್ನಶುಕ್ತಿಗಂ ಸೆಣಸುವುದಂ ।
ಕದಳೀಗರ್ಭ್ಭದೊಳೆಣೆಯೆಂ-
ಬಿದಾವ ಚಪುರಿವಳ ಬಾಹುಮೂಲದ ಪೊಳೆಪಂ ॥೪೫॥

ಈ ಧರೆಯ ಪೆಂಡಿರುದ್ಧ್ವಪ-
ಯೋಧರೆಯ ಮನೋಜರಾಗರಸಪೂರಿತಬಿಂ- ।
ಬಾಧರೆಯ ಕಂಬುಕಮ್ರಶಿ-
ರೋಧರೆಯ ಬೆಡಂಗನಾರುಮೇನೆಯ್ದುವರೇ ॥೪೬॥

ಅಣಮೆಮೆಯಿಕ್ಕದೊಪ್ಪುಗುಮೆ ಕಣ್ಮಲರೆಂತುಗೆ ದೇವಸೌಂದರೀ-
ಗಣದ ವಿಳಾಸಮಂಜಿಸುವವೋಲ್ಪೆಡೆಯಂ ಮುಡಿಯಲ್ಲಿ ತೋರ್ಪ್ಪನಾ-॥

೧-೧ (ಅ,ಬ) ರತ್ನದೊಳೆಣೆಗೆ ವಂದುದಾ. ೨-೨ (ಅ) ಆಗಳನೇಕಪ್ರಕಾರಪ್ರಸಾಧನ.

ಗಿಣಿಯುರ ಕೆಯ್ತ್ತಮೆಂತೊ ಕಳೆ ಪಾಱುವ ಪಾಱುಗಳಂದಮೇಂ ಬೆಡಂ-
ಗಣೆಯುನಿಱಿಕೆಗೆಂದು ಪೊಗಳ್ವರ್ ಕೆಲರಲ್ಲಿ ಹಿಮಾಂಶುವಕ್ತ್ರೆಯಂ ||೪೭||

ವ|| ಅಂತು ನೆಱೆಯೆ ಕೈಗೆಯ್ದು ವಧೂವರರಿರ್ವ್ವರುಮಂ ಮೌಹೂರ್ತ್ತಿಕಗಣನಿರೂಪಿತಪ್ರಶಸ್ತಮುಹೂರ್ತ್ತದೊಳತಿಪ್ರಮೋದನಿರ್ಭ್ಭರಪ್ರಣಯಪ್ರಹತಮಂಗಳಪಟಹರವಂಗಳುಮತಿಮಧುರಮಂದ್ರಮನೋಹರಮಂಗಳಗೀತಾರವಂಗಳುಮಲಕ್ತಕದ್ರವಾರುಣಚರಣಸಂಚರಣರಣಿತಮಣಿನೂಪುರಮುಖರಿತದಿಗಂತರಾಂತಃಪುರಜನಾಶೀರ್ವ್ವಾದಕೋಳಾಹಳಮುಮೆಸೆಯೆ, ಮುಂದಿಟ್ಟು [೧]ತಂದು[೧] ವಿವಾಹಮಂಟಪದ ನಡುವಣ ಮಣಿಮಯವೇದಿಕೆಯ ಹಾಟಕಪೀಠದ ಮೇಲೆ ಪಾಸಿದ ದುಗುಲದ ದಳಿಂಬದೊಳಿರಿಸಿದಾಗಳನೇಕಮಕುಟಬದ್ಧಚೂಡಾಮಣಿಚಕ್ರಚುಂಬನೋಚಿತಚರಣಕಮಲನಪ್ಪ ಸಕಳಚಕ್ರವರ್ತ್ತಿ,

ನೆಱೆದತ್ತೆತ್ತಾನುಮೀದಂಪತಿಯ ಬಯಕೆ ಸಂಪೂರ್ಣ್ಣಮಾಯ್ತುತ್ಸವಂ ಕ-
ಣ್ದೆಱೆದಂತಾಯ್ತೆನ್ನ ಸಾಮ್ರಾಜ್ಯದ ಫಲಮೆನು[೨]ತುಂ [೩]ರಾಗಮಂ[೩] ಬೀಱಲಾದ-|
ಟ್ಟಿಱ ಪೆಂಪಂ ತೋಱಲಾಗಳ್ ಕನಕಕಲಶಮಂ ತಾನೆ ಬಂದೆತ್ತಿ ಕೈನೀ-
ರೆಱೆದಂ ಶ್ರೀವಜ್ರದಂತ-ಕ್ಷಿತಿಪತಿ ಸತತೋತ್ಸಾಹ-ಸಂದೋಹದಿಂದಂ ||೪೮||

ವ|| ಅಂತು ಕೈನೀರೆಱೆದು ಪಾಣಿಗ್ರಹಣಂ [೪]ಗೆಯಿಸಿದಾಗಳ್[೪] ವಜ್ರಜಂಘಂ ಶ್ರೀಮತಿಯ ನಿಕಾಮ-ಕೋಮಲ-ಕರತಲ-ಪಲ್ಲವ-ಸ್ಪರ್ಶನಸುಖೋನ್ಮೀಲಿತ-ಲೋಚನನಾಗೆ,

ಇನಿಯನ ಕೆಂದಳಂ ತಳಮನೊಯ್ಯನೆ ಸೋಂಕೆ ಪೊದಟ್ದ ನಾಣ ಪೆಂ[೫]-
ಪಿನೊಳೊಗೆತರ್ಪ್ಪ ಘರ್ಮ್ಮಜಲಬಿಂದುಗಳಿಂ ನಮಿತಾನನಾಬ್ಜೆ ಬೆ-|
ಜ್ಚನೆ ಬಸಿವಿಂದುಕಾಂತಕರಸಂಕುಳಮೊಯ್ಯನಪುಂಕಿ ಸೋಂಕೆ ಸೋಂ-
ಕಿನೊಳೊಱೆವಿಂದು ಕಾಂತಮಣಿಪುತ್ರಿಕೆಯಂದದಿನೊಪ್ಪಿ ತೋಱಿದಳ್ ||೪೯||

ವ|| ಆ ಪ್ರಸ್ತಾನದೊಳ್,

ಪರಿವ ಕಟಾಕ್ಷಂಗಳನೋ-
ಸರಿಸುತ್ತುಂ [೬]ನಿಮಿರ್ವ[೬] ಸುಯ್ಗಳಂ ಕುಸಿಯುತ್ತುಂ|
ಶರಪಾಶಂಗಳ ನಡುವಣ
ಹರಿಣಿಯವೋಲ್ ಮನದೊಳಾಗಳಾಕುಳೆಯಾದಳ್ ||೫೦||

೧-೧ (ಅ) ಒಡಗೊಂಡು ಬಂದು. ೨ (ಅ) ನಿ. ೩-೩ (ಅ,ಬ) ಕೂರ್ಮ್ಮೆಯಂ. ೪-೪ (ಅ,ಬ) ಗೆಯ್ದಾಗಳ್. ೫ (ಅ) ಲಂ. ೬-೬ (ಅ) ಮಿಳಿರ್ವ್ವ.

ವ|| ಆಗಳ್ ವಜ್ರಜಂಘಂ,

ಪುಳಕಪ್ರೋದ್ಭೇದಘರ್ಮೋದಕವಿಸರಮನೊತ್ತಂಬದಿಂ ತಾಗೆಯುಂ ನಿ-
ಶ್ಚಲಧೈರ್ಯವ್ಯಾಜತಿರ್ಯಗ್ವಲನತರಲಿತಂ ದೃಷ್ಟಿ ಪೇೞ್ದತ್ತು ನಿರ್ವ್ಯಾ-|
ಕುಲಮಾಗ[೧]ಳ್ರಾಜಪುತ್ರೀಸ್ಮಿತ[೧]ಮಧುಮಧುರಾಪಾಂಗಜೈತ್ರಾಂಗಜಾಸ್ತ್ರಂ-
ಗಳ ಕೋಳಂ ನೂತನಪ್ರೇಮದೆ ನಿಮಿರ್ವೆಡೆಯೊಳ್ ದೃಷ್ಟಿಯಂ ಕಾವನಾವಂ||೫೧||

ವ|| ಅಂತಭಿನವಸಂಗಸಮುತ್ಪನ್ನಸಾಧ್ವಸರಸರಮಣೀಯತರಮುಗ್ಧವಧೂ-
ವದನವಿಲೋಕನಸುಖಮನನುಭವಿಸಿ,

ಇನಿವಿರಿದೊಂದು ಮೋಹಮುಮೊಡಂಬಡುವಟ್ಕಿಱುಮೆನ್ನ ನಿನ್ನ ಮು-
ನ್ನಿನ ಭವದೊಂದು ಕೂರ್ಮೆಯೊಳೆ ಕೂಡಿದುದೀಭವದಿಂದಮಾದ ವಾ-|
ಸನೆ ಮಱುಮೊಯ್ಗಮಕ್ಕುಮದಱಿಂದೆನಗಂ ನಿನಗಂ ಸಮಂತು ಮು-
ನ್ನಿನ ಭವಮೀಭವಂ ಮಱುಭವಂ ಸಫಲಂ ಮೃಗಲೋಲಲೋಚನೆ ||೫೨||

ವ|| ಎಂದು ಕೆಚ್ಚುವಿರ್ದ್ದ ಮುಚ್ಚುಮನುಚ್ಚಿ[೨]ಪ್ರೋದ[೨] ಮೋಹಮುಮನಳವಿಗಳಿದಲಂಪುಮಂ ಬಳವಿವಡೆದಟ್ಕಿಱುಮ[೩]ನೋರೊರ್ವರೊಳ್ ನೆ[೩]ಱೆದನೇಕವಿಧನಿಧುವನಸುಖಸುಧಾರಸಾಧೀನ[೪]ಚಿತ್ತರುಂ[೪], [೫]ಚಿತ್ತಜನೆ[೫] ವಿವಿಧವಿಳಾಸವಿಭ್ರಮೋಪದೇಶೋಪಾಧ್ಯಾಯನಾಗೆಯುಮುಪವನಾಂತರಾಳಕನಕಕದಳೀಭವನಂಗಳೇ ನಿವಾಸಭವನಂಗಳಾಗೆಯುಂ, ಭ್ರಮದ್ಭ್ರಮರಭರಭಗ್ನಮಾಧವೀ[೬]ಲತಾಂತ[೬]ಸಮುಧಿಕಮಕರಂದಬಿಂದುಚಿತ್ರಿತವಿಪುಲಪುಲಿನತಲಂಗಳೆವಿಶ್ರಮಣಭೂಮಿಗಳಾಗೆಯುಂ, ದರದಲಿತಕಮಲವನಗಲಿತಮಧುರಮದಮುದಿರಾಮೋದಮುದಿತಮಧುಕರನಿಕರನಿನಾದೋಪವೀಣಿತಕ್ರೀಡಾಸರೋವರಂಗಳೆ ಜಲಕೇಲೀಕುತೂಹಲನಿಲಯಂಗಳಾಗೆಯುಂ, ಸಕಲಕಲಿಕೋತ್ಕಲಿತಸರಸಸಹಕಾರಕೋರಕಕಬಲನಮದಮಧುಕರಕೋಕಿಲಕೋಲಾಹಲಾಕುಲಿತಕೃತಕಕೇಲೀಶೈಲಶಿಖರಂಗಳೆ ಸಕಲದಿಗವಲೋಕನನಿಕೇತನಂಗಳಾಗೆಯುಂ, ಸರಸಸರಸಿಜಸಂದರ್ಭಗರ್ಭಸರೋವರಸಲಿಲಲುಲಿತಶಿಶಿರಸುರಭಿಮಂದಮಾರುತಾಂದೋಳಿತಚಂದನವನವೀಥಿಗಳೆ ವಿಹಾರಮಾರ್ಗಂಗಳಾಗೆಯುಂ, ತ್ರಿಭುವನೈಕಪವಿತ್ರೀಭೂತ-

೧-೧ (ಚ) ರಾಜಪುತ್ರಸ್ಮಿತ. ೨-೨ (ಅ) ಪೊಕ್ಕ; (ಬ) ಪೋಪ. ೩-೩ (ಅ,ಬ) ನೊರ್ವರೊರ್ವರೊಳ್. ೪-೪ (ಅ,ಬ) ಚಿತ್ತರ್. ೫-೫ (ಅ) ಚಿತ್ತಜನ್ಮನೆ. ೬-೬ (ಚ) ಲತಾಲತಾಂತ.

ಮಹಾಪೂತಜಿನಾಲಯಮೆ ನಿರತಿಶಯಭಕ್ತಿಪುರಸ್ಸರಪೂಜಾವಿಚಿತ್ರವಿರಚನಾಸಂಪದಾಸ್ಪದಮಾಗೆಯುಂ, ಪಾತ್ರದಾನವಿಧಾನಮೆ ವಿನೋದಮಾಗೆಯುಮಿಂತು ನಿತ್ಯೋತ್ಸವಂಗಳೊಳ್ ಕೆಲವು ¹ಕಾಲಂ¹ ಸಲೆ, ಸಲ್ಗೆವೆರಸಿದ ತನ್ನ ನಣ್ಪಿನೊಟ್ಟಜೆಯುಂ ತೋಱ ವಜ್ರದಂತಚಕ್ರವರ್ತಿ ವಜ್ರಬಾಹುಮಹೀಪತಿಯುಂ ಕರೆದಮಿತತೇಜಂಗೆ ಭವದೀಯಾತ್ಮಜೆಯುಂ

ಕುಡು ಕುಡದಂದುಮೆನ್ನ ತನಯಂ ಭವದಾತ್ಮಜೆಗೀಶನೆಂದು ಬೆ-
ಳ್ಗೊಡೆಯೊಡೆಯಾತನರ್ಥಿವಡೆ ಕೊಳ್ಕೊಡೆಗಾಗಳೆ ವಜ್ರಬಾಹು ರಾಂ-|
ಗುಡಿವಿಡೆ ರಾಗಮರ್ಥಿಯೊಳೆ ಸೌಂದರಿಯುಂ ಕುಡೆ ಬಂಧುಗಳ್ ಮನಂ-
ಬಡೆ ಕಡುರಯ್ಯಮಾಯ್ತ್ತು ಮಿತತೇಜನೊಳಂದು ವಿವಾಹಮಂಗಳಂ ||೫೩||

ವ|| ಆ ವಿವಾಹಕಲ್ಯಾಣಾನಂತರಂ ನಿಜತನೂಜೆಯನಳಿಯನೊಡನೆ ಕಳುಪುವುದ್ಯೋಗಮನೆತ್ತಿಕೊಂಡು,

ಎನಗೀಷಟ್ಖಂಡಭೂಮಂಡಲಪತಿಯೆನಿಸಲ್ ಸಾಲ್ಗುಮುದ್ಯದ್ಯಶೋಲಾಂ-
ಛನಮೀಶ್ವೇತಾತಪತ್ರಂ ²ಕಳೆಯಲುಱದು²ವಂ ತನ್ನಿಮಿನ್ನೆಂದು ವಾರಾಂ-|
ಗನೆಯರ್ ಜಾತ್ಯಶ್ವವೃಂದಂ ಸಮದಕರಿಕುಲಂ ತಾರಹಾರಂಗಳಿಂದಿಂ-|
ತೆನಿತಾನುಂ ವಸ್ತುವಂ ತಾಂ ತರಿಸಿದನಧಿಕಪ್ರೀತಿಯಿಂ ವಜ್ರದಂತಂ ||೫೪||

ವ|| ಅಂತು ತರಿಸಿ ಮತ್ತಮಾತ್ಮೀಯಸ್ಫಟಿಕರತ್ನವಿರಚಿತಮಣಿಕನಕಖಚಿತಶಿಬಿಕಾಂದೋಳಾದಿಯಾನಂಗಳುಮಂ ಕನಕಯೋಗಾಳಂಕೃತಂಗಳಾಗಿ ಸೊಗಯಿಸುವ ಕರಿಯ ಪಿರಿಯ ಮೆಯ್ಯ ನಿಡಿಯ ಕಿವಿಯ ಕುಣಿದು ಮೆಟ್ಟ ವಜ್ಜರಿಗಟ್ಟಿಗಳುಮಂ ³ವ್ಯೂಹದೊಳ್ ನಿಟ್ಟವಟ್ಟ³ ಮಣಿಮಯಮಂಡನಾಯೋಗದೊಳೊಡಂಬಟ್ಟ ಪಿಡಿಗಳುಮಂ ಮುಳಿವ ತಿಳಿವ ಗಂಡರ ಪೆಂಡಿರ ನುಡಿಗಳನೆ ಬಣ್ಣಿಸುವ ಪುರುಳಿಗಳುಮನಕಾಂಡತಾಂಡವಾರಂಭಶೌಂಡಶಿಖಂಡಿಮಂಡಳಮುಮಂ ಲೀಲಾಲಸಗಮನಮಂ ಗಜಗಮನೆಯುಗ್ಗ್ರಪದೇಶಂಗೆಯ್ವ ದೀವದ ರಾಜಹಂಸೆಗಳುಮಂ ಕುಬ್ಜವಾಮನಬಧಿರಮೂಕಕಿರಾತೋನ್ಮತ್ತಜಡಜನಂಗಳುಮಂ ಗಾಯಕವಾದಕನರ್ತ್ತಕಕಥಕಪುಣ್ಯಪಾಠಕವೈತಾಲಿಕನಿಕರಮುಮಂ ಕೊಟ್ಟು ಪಂಡಿತೆಯುಮನೊಡವೋಪಂತು ಮಾಡಿ ರಾಜಾಧಿರಾಜನಳಿಯನ ಮೊಗಮಂ ನೋಡಿ,

---

೧-೧ (ಅ) ದಿವಸಂ; (ಬ) ಸಂವತ್ಸರಂಗಳ್. ೨-೨ (ಚ) ಕಳೆದುಱದುವುವಂ.
೩-೩ (ಬ) ವ್ಯೂಢದೊಳ್ನಿಟ್ಟಪಟ್ಟಣಿಗೆಟ್ಟು; (ಚ) ವ್ಯೂಹದೊಳ್ ನಿಟ್ಟುವಟ್ಟು.

ಬಗೆದುಂ ನಿನ್ನಸ್ವನಾಯೋನ್ನತಿಯುನಿವಳತಿಸ್ನೇಹಸಂಬಂಧಮಂ ನೀಂ
ಬಗೆದುಂ ಸಂದೆಮ್ಮ ನಣ್ಪಂ ಬಗೆದುಮಱಯದೇನಾನುಮೆಂದಾಗಳುಂ ಮೆ-|
ಲ್ಲನೆ ನೀಂ ಕಲ್ಪಿಪ್ಪುದೆಮ್ಮಂ ನೆನೆದೆರ್ದೆಗಿಡದಂತಾಗೆ ಪಾಲಿಪ್ಪುದಿಂತೀ-
ಮೃಗಶಾಬೇಕ್ಷಾಕ್ಷಿಯಂ ಮನ್ನಿಸುವುದಿನಿತನಾಂ ಬೇಡಿದೆಂ ವಜ್ರಜಂಘಾ ||೫೫||

ವ|| ಎಂದು ನುಡಿದು ಲಕ್ಷ್ಮೀಮತಿಮಹಾದೇವಿಯುಮಂ ತಾನುಮಾತ್ಮೀಯ-ಪ್ರಿಯಾತ್ಮಜೆಯ ಮೊಗಮನಟ್ಟಿಕೆತ್ತು ನೋಡಿ,

ಮನಮಱದಂಜಿ ಬೆಚ್ಚಿ ಬೆಸಕೆಯ್ ನಿಜವಲ್ಲಭನೇನನೆಂದೊಡಂ
ಕಿನಿಸದಿರೊಂದಿದಗ್ರಮಹಿಷೀಪದದಲ್ಲಿ ಪದಸ್ಥೆಯಾಗು ನಂ-|
ದನರನಗಣ್ಯಪುಣ್ಯಧನರಂ ಪಡೆಯೆಂದಮರ್ದಪ್ಪಿಕೊಂಡು ತ-
ತ್ತನುಜೆಯಗಲ್ಕೆಯೊಳ್ ನೆಗಪಿದರ್ ಬಸಮಲ್ಲದ ಬಾಷ್ಪವಾರಿಯಂ ||೫೬||

ವ|| ಆಗಳ್ ವಜ್ರದಂತನನಂತಸಾಮಂತಾಂತಃಪುರಪರಿವಾರಂ ಬೆರಸು ಪೋಗಿ ಮಗಳುಮನಳಿಯನುಮಂ ಕಿಱದಂತರಂಬರಂ ಕಳಿಪಿ ಮಗುಳ್ವಾಗಳ್,

ಪೊಡೆವಡುವಪ್ಪಿಕೊಳ್ವ ನೆನೆಯುತ್ತಿರಿಮೆಂಬ ಸಮಸ್ತವಸ್ತುವಂ |
ಕುಡುವ ಪಲರ್ಮೆಯಿಂ ಪರಸಿ ಸೇಸೆಯನಿಕ್ಕುವ ಬುದ್ಧಿವೇಳ್ವ ಕೈ-|
ಯೆಡೆ ನಿಮಗೆಂದೊಡಂಬಡಿಪ ನಲ್ಲರಗಲ್ಕೆಗೆ ಕಣ್ಣ ನೀರ್ಗಳಂ |
[1]ಮಿಡಿವ[1] ಬಹುಪ್ರಕಾರಜನಸಂಕಟಮೊಪ್ಪಿದುದಾಪ್ರಯಾಣದೊಳ್ ||೫೭||

ವ|| ಅಂತು ವಜ್ರದಂತಚಕ್ರವರ್ತಿ ಕಳಿಪಿ ಮಗುಳೆ ವಜ್ರಬಾಹುಮಹೀ-ಭುಜಂ ವಜ್ರಜಂಘನುಮಂ ಶ್ರೀಮತಿಯುಮಂ ಮುಂದಿಟ್ಟು ಕತಿಪಯ-ಪ್ರಯಾಣಂಗಳಿಂ,

|| [2]ಉಜ್ಜ್ವಳ[2] ||

ಜಲವಿಹಂಗಮಭೃಂಗನಿನಾದವ್ಯಾಪ್ತಸರೋವರಸಂಕುಲಂ-
ಗಳೊಳೆ ಪೂತದಿಮರ್ತ್ತೆಯ ಸುತ್ತಿ ಸುತ್ತಿದ ಸೈಕತಭೂತಳಂ |
ಗಳೊಳೆ ಮೆಲ್ಲನೆ ಬೀಡುವಿಡುತ್ತುಂ ಪೋಗಿ ಮಹೀಭುಜನೆಯ್ದಿದಂ
ಫಳವಿನಮ್ರ[3]ಮಹೀಜಸಹಸ್ರಾಘಾಟ[3]ಮನುತ್ಪಲಖೇಟಮಂ ||೫೮||

ವ|| ಆಗಳ್ ನಿರಂತರಂ ಸಮುತ್ಥಾಪಿತಂಗಳುಂ ಕನಕರಜತಮಯಾನೇಕ-ಸ್ಥಾಸಕಾಲಂಕೃತಂಗಳುಂ ವಿಚಿತ್ರಚೀನಾಂಶುಕರುಚಿರಂಗಳುಂ [4]ಪಿನದ್ಧ[4]ವಿವಿಧ-

೧-೧ (ಅ,ಬ) ಸಿಡಿವ. ೨-೨ (ಅ,ಬ) ಮುದ್ರಿಕೆ. ೩-೩ (ಚ) ಮಹೀಜಸಹಸ್ರಾಘಾಟ. ೪-೪ (ಅ) ಉನ್ನದ್ಧ: (ಬ) ಉನ್ನತ.

ಮಣಿದರ್ಪಣಧ್ವಜಂಗಳುಮಾಲಂಬಿತಜಾಂಬೂನದಘಂಟಾಜಾಲವಿರಾಜಿತಂಗಳುಮಾಮೋದಕುಸುಮದಾಮನಿಕಾಮಕಮನೀಯಂಗಳುಮಪ್ಪ ತೋರಣಂ[೧]ಗಳನೆಸಗುಳುತ್ತುಂ[೧] ಕಾಶ್ಮೀರಮೃಗಮದಚ್ಛಟಾಸಿಕ್ತಾಂಗಣಮುಮಂಗಣರಚಿತಮೌಕ್ತಿಕರಂಗವಲಿಯುಂ ಬಲಿಕುಸುಮನಿಪತದಲಿಕುಲಾರಬ್ಧಗೀತಮುಂ ಗೀತಾನುಗತವಾದ್ಯಲಯಲಲಿತವಿಲಾಸಿನೀನೃತ್ಯಮುಮಪ್ಪುತ್ಪಲಖೇಟಮಂ ಪುಗುವಾಗಳ್,

ತಳಿರ್ಗಳ ತೊಂಗಲಿಂ ಪವುಲರೋಳಿಗಳಲ್ಲುಗುವಂತೆ ಕೆಂದಳಂ-
ಗಳಿನುದಿರ್ವಕ್ಕಿಗಳ್ ನಿಮಿರ್ದ ದಾಂಗುಡಿಯಂತಿರೆ ನೀಳ್ದ ತೋಳ್ಗಳು-|
ಜ್ಜ್ವಲದಲಿಗಾನದಂತೆ ಮಣಿ[೨]ಕಂಕಣ[೨]ನಾದವೊಱಲ್ಕೆ ಸೇಸೆಯಂ
ತಳಿದರಸಂಗಜಂಗಮಲತಾಲಲಿತಾಂಗಿಯರೆಂದು ರಾಗದಿಂ ||೫೯||

ವ|| ಆ ಪ್ರಸ್ತಾವದೊಳಪೂರ್ವವಧೂ[೩]ವರರಂ[೩] ಶ್ರೀಮತೀವಜ್ರಜಂಘರಂ ನೋಡಲೆಂದು,

ಅಲಕೋತ್ಸಾರಿತಕೇಶಸಂಚಯಮನೀವೀಬಂಧನಾವಿಷ್ಕೃತ-
ಸ್ಖಲಿತಂ [೪]ವಿಸ್ಮೃತ[೪]ಪಕ್ಷ್ಮ[೫]ಪಾತಮುನಪೂರ್ವಾ[೫]ಲೋಕಸಾಕೌತುಕಾ-|
ಕುಲಿತಾಂತಃಕರಣಂ ಸ್ವಕೀಯಭವನವ್ಯಾಪಾರಚಿಂತಾಂತರಂ-
ಗಳನೆಲ್ಲಂ ಮರೆದಿಂತು ಕೂಡೆ ನೆರೆದತ್ತೆತ್ತಂ ಪುರಸ್ತ್ರೀಜನಂ ||೬೦||

ವ|| ಅಂತು ನೆರೆದು,

ದಿವಿಜೇಂದ್ರಾವಾಸದೊಳ್ ಮುನ್ನೊಡನೆ ದಿವಿಜಭೋಗಂಗಳಂ ಭೋಗಿಸಿದೀ-
ಭವದೊಳ್ ಬಂದಿಲ್ಲಿ ಜಾತಿಸ್ಮರರೆನೆ [೬]ನೆರೆದೋರೊರ್ವರೊಳ್ ಮತ್ತಮುತ್ತ್ಯ[೬]-|
ತ್ಸವದಿಂದಂ ಮರ್ತ್ಯಭೋಗಂಗಳನನುಭವಿಸಲ್ ನೋಂತರಿಂತೀ[೭]ಗಳೆಂತುಂ
ತವದಂತೇಂ ಪುಣ್ಯಮಂ[೭] ಪುಂಜಿಸಿದರೊ ಪಿರಿದುಂ ಶ್ರೀಮತೀವಜ್ರಜಂಘರ್ ||೬೧||

ವ|| ಎಂದತಿಪ್ರಮೋದ[೮]ಪ್ರಮತ್ತ[೮]ಪುರಜನ[೯]ಜನಿತಾನುರಾಗ[೯]ದೊಡನಾದಂಪ[೧೦]ತಿಯುಮೊಡನೆ[೧೦]ರಾಜಮಂದಿರಮಂ ಪೊಕ್ಕು ರಾಜ್ಯಲಕ್ಷ್ಮೀದೇವತೆಗೆ ಪರಿವಾರದೇವತೆಯರೆನಿಸುವ ವಾರಸುಂದರಿಯರ ಸೂಸುವ ಪರಮಾನಂದಸ್ಮಿತಸುಧಾಸ್ಯಂದಸಂತತಾರ್ದ್ರಂಗಳಪ್ಪಾರ್ದ್ರಾಕ್ಷತಸಿತಕುಸುಮಾಂಜಲಿಗಳನಿದಿ-

೧-೧ (ಬ) ಗಳನುಗುಳುತ್ತುಂ. ೨-೨ (ಅ,ಬ) ನೂಪುರ. ೩-೩ (ಚ) ಪರರಿರ್ವರಂ. ೪-೪ (ಅ,ಬ) ವಿಸ್ಮಿತ. ೫-೫ (ಚ) ಪಾತನವಪೂರ್ವಾ. ೬-೬ (ಅ) ನೆರೆದೊಂದಿರ್ವರೊಳೆತ್ತಮುತ್ಕ. ೭-೭ (ಚ) ಗಳೆಂತುಂ| ತವರಂತೇಂ. ೮-೮ (ಅ) ಮುದಿತ. ೯-೯ (ಅ) ವನಿತಾನುರಾಗ. ೧೦-೧೦ (ಅ,ಬ) ತಿಯುಮಧಿ. ೧೧ (ಅ) ದಿ.

ಗ್ಗೊಂಡು ಪಂಡಿತೆಗೆ ವಿವಿಧವಿನೋದಂಗಳಂ ತೋಱಿ ಮೆಱೆದು ದಾನಸ್ನಾನಾದಿಗಳೊಳ್ [1]ಸಂತೋಷಂ[1]ಬಡಿಸಿ ಪುಂಡರೀಕಿಣಿಗೆ ಕಳಿಪಿ ಕೆಲವುದಿವಸಮಿರ್ಪನ್ನೆಗಂ ಶ್ರೀಮತಿಗೆ ಗರ್ಭಚಿಹ್ನಂಗಳ್ತೋಱೆ,

ರಮಣೀಯಂ ಪುಷ್ಪಿತಲತೆ
ಕಮನೀಯಮುಮಾಯ್ತು[2] ಕಾಯ್ತುದೆನೆ ಭುವನಮನು-।
[3]ಕ್ರಮದಿಂ[3] ನಾಲ್ವತ್ತೊಂಭ-
ತ್ತಮಳ್ಗಳ್ ಪುಟ್ಟಿದುವು ಗುಣದಮಳ್ ಪುಟ್ಟಿದವೋಲ್ ॥೬೨॥

ವ॥ ಅನ್ನೆಗಂ ವಜ್ರಬಾಹುಮಹಾರಾಜಂ ಮತ್ತೊಂದು ದಿವಸಂ,

ಶರದುದಿತೇಂದುಕುಂದಧವಲೋನ್ನತಸೌಧತಲಸ್ಥಿತಂ ಮನೋ-।
ಹರಗಗನಾಂಬುರಾಶಿನವಫೇನಸಮಾನಮನುದ್ಘಕೂಟಸಾಂ-॥
ದರಮನದೊಂದು ನೀರದಮನಟ್ಟೆಯೆ ನೋಡಿ ಜಿನೇಂದ್ರರುಂದ್ರಮಂ-।
ದಿರಮನದೊಂದ[4]ನೀದೊರೆತು[4] ಮಾಡಿಪೆನೆಂದದಱಿಂದಮಂ ನೃಪಂ ॥೬೩॥

ವ॥ ಬರೆಯಲೆಂದು ಬಟ್ಟಿಗೆವಲಗೆಯಂ ತರಿಸಿ ತಿಟ್ಟಮಿಟ್ಟ[5]ಬರೆವನ್ನೆಗಂ[5],

ಸಿರಿಯ ಶರೀರದ ರೂಪಿನ
ನರರೈಶ್ವರ್ಯ್ಯದ ಪೊದಟ್ಕೆಗಳ್ ಕರಗುವವೋಲ್ ।
ಶರದಂಬುಧರಂ ಭೋಂಕೆನೆ
ಕರಗಿದೊಡೆರ್ದೆ ಕರಗಿ ಕೊರಗಿದಂ ಧರಣೀಶಂ ॥೬೪॥

ವ॥ ಆಗಳ್,

ಘನದ ಕರಗಿದುದನಱಿದಪ-
ಘನದ ವಿಲಾಸಮನದೆಂತು ನಂಬುವುದೊ ಘನಾ-।
ಘನದಿಂದಮಱಿಯಲಾದುದು
ಘನಾಘನಂ ಜವನ ದಾಟಿಗಿಲ್ಲೆಂಬಿನಿತಂ ॥೬೫॥

ಆನ್ನೋಡೆ ನೋಡೆ ನೋಡ[6]ಮ
ನನ್ನೋಡುವವೋಲ್ ಶರದ್ಘನಂ ಕರಗಿದುದೆಂ-।
ತೆನ್ನನೆನಗೆಂಬೆನೆಂದೊಡ-
ಮೆನ್ನಳಿಪಿಂಗೆನ್ನ ತನುವೊಡಂಬಟ್ಟಪುದೇ ॥೬೬॥

೧-೧ (ಅ) ಸಂತಸಂ. ೨ (ಅ) ಗಿ. ೩-೩ (ಬ) ಕ್ರಮದೊಳೆ. ೪-೪ (ಬ) ನೀದೊರೆಗೆ; (ಚ) ನೀದೊರತೆ. ೫-೫ (ಅ) ನೋಟ್ಪನ್ನೆಗಂ. ೬ (ಡ) ಡೆ.

ಜವನಾಣೆಗವೞ್ಗಿಗಮುಂ-
ಟೆ ವಕ್ರವಾಳಿಕನ ತುಱುವುಮಂ ಸೋಂಕುವನಾ-।
ವಧರಿಪರೆಂ[1]ತುಱುವನುವ-
ನವಯುವವೊಳೆ ಗೆಲ್ವ ಬಗೆಯನೀಂಗಳೆ ಬಗೆವೆಂ ॥೧೭॥

ವ। ಎಂದಾಮಹಾಪುಭಾವನಾಜನಂಜನನಿಭಾವಕ್ಷೀಂವಯಿಸಿ ವಜ್ರಜಂಘನೊಳಾತ್ಮೀಯಧರಾಭಾರಮಂ ನಿಱಿಸಿ ವಸುಂಧರೆವೆರಸು ಪಲಂಬರದಸಿಯರುಂ ಶ್ರೀಮತೀತನೂಜನ್ಮಿರಬಾಹುಪ್ರಭೃತಿಗಳಪ್ಪ ನಾಲ್ಸತ್ತೊಂಭತ್ತಮಳ್ಗಳುವ್ಯೈನೂರ್ವರುವ್ವೀಶ್ವರರುಂ [2]ಬೆರಸು[2] ಯಮಧರ ಮುನೀಂದ್ರಪಾದಪದ್ಮೋಪಕಂಠದೊಳ್ ಜಾತರೂಪಧರನಾಗಿ ಮೋಕ್ಷಲಕ್ಷ್ಮೀಕಟಾಕ್ಷೈಕ[3]ಲಕ್ಷ್ಯ[3]ನಾದನನ್ನೆಗಮಿತ್ತಂ,

ನಿಮ್ಮನೆ ನೋಡಿ ಮದ್ಗುರುವಿಯೋಗಮನಾಱುವೆಮೀಗಳೀತಪ-
ಕ್ಕೆನ್ನ ಮನಂದರಲ್ ನಿಮಗೆ ಸಲ್ಲದೊಡಂಬಡಿಮೆಂದು ಕಾಲ್ಗಳಂ।
ತಮ್ಮಯ ನೆತ್ತಿಯೊಳ್ ನಿಱಿಸಿ ಮಾರ್ಕೊಳೆ ಮಾಣದೆ ಪೋದಮಕ್ಕಳಂ-
ದೇಮ್ಮನದೊ[4]ಳ್ ಪಳಂಚಿದರೊ[4] ಚಕ್ರಿತನೂಜೆಯ[5] ವಜ್ರಜಂಘನಾ[6] ॥೧೮॥

ವ॥ ಅನ್ನೆಗಮಿತ್ತ ವಜ್ರಸಂತ [7]ಚಕ್ರವರ್ತಿ[7] ಸಕಲಮಕುಟಬದ್ಧಪರಿವೃತನಾಸ್ಥಾನಮಂಟಪಮಧ್ಯಸ್ಥಿತಸಿಂಹಾಸನದೊಳೊಂದು ದಿವಸಂ ಸುಖಾಸೀನನಾಗಿರೆ,

ವಿಕಸತ್ಕಾಂಚನಪದ್ಮಮಂ ವಿನಯದಿಂ ತಂದೊಂದನುದ್ಯಾನಪಾ-
ಲಕನಿತ್ತಲ್ಲಿ ತದಬ್ಜಮಂ ನೃಪವರಂ ವಕ್ತ್ರಾಬ್ಜದೊಳ್ ಸಾರ್ಚಿ ಕಂ-।
ಪು ಕರಂ ಪೊಂಪುಱಯೆಂದು ಸೋಲ್ತು ಸಿರ್ವಿನಂ ಘ್ರಾಣೇಂದ್ರಿಯೌತ್ಸುಕ್ಯಮಂ
ಪ್ರಕಟಂ ಮಾಡಿ ನೃಪಂಗಲಂಪುವಡೆದತ್ತಂಭೋಜಗಂಧಾಸವಂ ॥೧೯॥

ವ॥ ಮತ್ತಮಾಲೀಲಾಕಮಲಮನೆ ಲೀಲೆಯಿಂ ತಿರಿಪಿದಾಗಳ್,

ತಿರಿವೆಸಳ್ಗಳ್ ಮುಸುಱುವ ಮಧು-
ಕರಂಗಳಂ ಸೋಯೆ ಪರಿವ ಮಕರಂದ[8]ರಸಂ[8]।
ಪರಿವೇಷಂಗೊಂಡಂತಿರೆ
ಕರಮೆಸೆದುದು ನೃಪನ ಕಯ್ಯ ಲೀಲಾಂಭೋಜಂ ॥೨೦॥

---

೧ (ಅ) ರಂ; (ಬ) ರಿಂ. ೨-೨ (ಚ) ಬೆರಸು ಪರಿಚ್ಛೇದಿಸಿ. ೩-೩ (ಅ) ಲಕ್ಷಿತ; (ಬ) ಲಕ್ಷಣ. ೪-೪ (ಅ) ಪಳಂಚಿದುದೊ; (ಬ) ಪಳಲೆಂಚದು. ೫ (ಬ) ಯು. ೬ (ಬ) ನುಂ. ೭-೭ (ಚ) ಚಕ್ರವರ್ತಿಯುಂ. ೮-೮ (ಅ,ಬ) ರಜಂ.

ದಿನಪಾಸ್ತಸಮಯದೊಳ್ ಮು-
ನ್ನಿನ ದಿವಸಂ ತತ್ಸಯೋಜದೊಳ್ ಮಡಿದಳಿ ತೊ-।
ಟ್ಟನೆ ೧ಸಿಡಿಯೆ೧ ತೂಗಿ ತಲೆಯಂ
ಜನನಾಥಂ ವಿಸ್ಮಯಸ್ಮಿತಂಬೆರಸಿನಿಸುಂ೨ ॥೭೧॥

ಈ ಮಧುಪಂ ದಲಿತಾಂಭೋ-
ಜಾಮೋದಾಸಕ್ತನಕ್ಕಟಾ ಮಡಿದುದು ಪೇ-।
ಟೇಮನುಜರಖಿಳಕರಣ-
ಗ್ರಾಮಮನೊಂದೊಡಲೊಳೆಂತೊಡಂಬಡಿಸಿದರೋ ॥೭೨॥

ಒಂದೊಂದೆ ರಸದ ಸೋಲಮು-
೩ದೊಂದೊಂದನೆ೩ ಕೊಲ್ಗುಮೋವೊ ಲಂಪಳರಪ್ಪೈ-।
ವ್ಕಂದಿಗರಂ ಬಗೆವಂದದೆ
ಕೊಂದಿಕ್ಕವೆ ಸಕಲವಿಷಯವಿಷಮವಿಷಂಗಳ್ ॥೭೩॥

ಪಾಕದೊಳತಿವಿಷಮಂ ಕಿಂ-
ಪಾಕಫಲಪ್ರತಿಮಮಖಿಲವಿಷಯಸುಖಂ ಪೇ-।
ಟೇಕಳಿಪಿ ಸುಟ್ಟವೆನಱಿಯು-
ತ್ತೇಕೆ ವಿಮೋಹಿಸುವೆನೇಕೆ ಬರ್ದುಕುವೆನಿದಱೊಳ್ ॥೭೪॥

ತೃಣಶಿಖರಾಧ್ಯುಷಿತಾಂಭಃ-
ಕಣಸಂಚಲಮಮರಚಾಪಚಪಲಂ ವಿದ್ಯುತ್।
ಕ್ಷಣಿಕಂ ನಿಟ್ಟೆಯೆ ತನುಭೃ-
ದ್ಗಣಯೌವನರೂಪವಿಭವಭೋಗಾಭೋಗಂ ॥೭೫॥

ತೆಱಪನೆ ಪಾರ್ದಿರ್ಪ್ಪಂ ಮಾ-
ಯ್ದುಱುಗುಲಿ ಜವನದಱ೪ನಿನಿಸು ಪೊೞ್ತುಂ ತನ್ನಂ।
ಮಱೆದಿರಲಕ್ಕುಮೆ ತಳರದೆ
ತಱಸಲದಿನ್ನೆಱೆದುಮಱ೪ದು೪ಮಿರ್ಪ್ಪುದೆ೪ಚದುರಂ ॥೭೬॥

೧-೧ (ಚ) ಬೀೞೆ. ೨ (ಅ,ಬ) ಸಂ. ೩-೩ (ಚ) ದೊಂದೊಂದನೆ. ೪-೪ (ಅ) ಮಿರ್ಪ್ಪನೆ.

ಕಿಱಿಯುಂ ಮುತ್ತಂ ಧನದಂ
ಬಱಿಯುಂ ತೊಱೆ೩ದಂ ಗೃಹಸ್ಥನೆನ್ನದೆ ಮುಃಂ ಬಿ-|
ಟ್ಟೆಱಿಸಿ ಕೊಲುತಿರ್ಪ್ಪ ಜವನೆಂ-
ಬೞಕೆಯು ಸಗೆಸಂಗದೆಂತು ಸಂಗಿಗನಪ್ಪೆಂ ||೭೭||

ನಿಧಿ ರತ್ನವ್ರಾತಮಂತಃಪುರಮೆಸೆವ ಷಡಂಗಂ ಬಲಂ ೧ಹರ್ಮ್ಯಮ೧ಶೈಲಾ-
ವಧಿಷಟ್ಖಂಡಂ ಮಹೀಮಂಡಲಮನಿಧನಮಲ್ತೆಮ್ಮನೀಡಾಡಿ ಸಲ್ಗುಂ|
ನಿಧನಕ್ಕಂ ತಪ್ಪುಪಂ ಮುಂ ಬಿಸುಡುವುದೆ ಚದುರ್ನ್ನೆಟ್ಟನೆಂದಲ್ತೆ ಮುಂ ಪೋ-
ದ ಧರಾಧೀಶರ್ತ್ತಪೋಮಾರ್ಗ್ಗದೊಳೆಸಗಿದರಾಮಾರ್ಗ್ಗಮಿನ್ನೆಮ್ಮ
ಮಾರ್ಗ್ಗಂ ||೭೮||

ವ|| ಎಂದು ನಿರ್ವ್ವಾಣಸಾಮ್ರಾಜ್ಯಮನೆ ಬಯಸಿ ಸಕಲ ಸಾಮ್ರಾಜ್ಯಮಂ ರಾಜಾಧಿರಾಜಂ ನಿಜಾಗ್ರತನೂಜಂಗಮಿತತೇಜಂಗೆ ಕೊಟ್ಟಾಗಳಾತನಿಂತೆಂದಂ-

ಇನಿತಂ ನಿಮ್ಮ ಮನಕ್ಕೆ ಕೊರ್ಕ್ಕರಿಕೆಯಂ ಮಾಡಿರ್ದ್ದ ಸಾಮ್ರಾಜ್ಯಮೆಂ-
ತೆನಗೊಳ್ಪಂ ಪಡೆದಪ್ಪುದಿಂತೆನಗಿದಾಚಂದ್ರಾರ್ಕ್ಕಮೋ ದೇವ ನೀ-|
ಮೆನಗೀಗಳ್ ದಯೆಗೆಯ್ವೊಡಿಂತು ಬೆಸಸಲ್ವಾಸಲ್ಕಿಂದೆ ಪೋಪೆಂ ತಪೋ-
೨ವನಕೆನ್ನಟ್ಟಿಯೆ೨ ಪೊರ್ದ್ದದಿರ್ಕ್ಕೆ ಭವದಾಜ್ಞಾಲಂಘನಂ ಭೂಪತೀ ||೭೯||

ವ|| ಎಂಬುದುಂ ವಜ್ರದಂತಚಕ್ರವರ್ತ್ತಿ,

ನೀನೆಮ್ಮಂ ಮಿಱಿದೆ ರಾ-
ಜ್ಯಾನುಷ್ಠಾನಮನೊಡಂಬಡೀಗಳ್ ನಿಜಸಂ-|
ತಾನಕ್ಕೆ ಮಗಂ೩ಬಳೆಯೆ೩ ತ-
ಪೋನಿಯಮಂ ಮಗನೆ ಕಡೆಯೊಳಿರ್ದ್ದಪುದಲ್ತೇ ||೮೦||

ವ|| ಎಂದಾಗಳಮಿತತೇಜಂ ದಂತಾಂಶುಧೌತಕಪೋಲಫಲಕನಾಗಿ,

ಪಿರಿದೊಂದಾಗ್ರಹದಿಂದಮಾದ ದಯೆಯಿಂದಂ ದೇವರೆನ್ನಂ ಧರಾ-
ಭರದೊಳ್ತಂದು ತೊಡರ್ಚ್ಚೆ ಪೂಣ್ದು ೪ತಲೆಗೋದಿರ್ದ್ದಂ೪ ಬೞಕ್ಕೆಂತುಮಿಾ- |

೧-೧ (ಅ) ಹಿಮ್ಯ; (ಬ) ಹಿಮ; (ಕ,ಖ) ಹರ್ಮ್ಯ. ೨-೨ (ಅ,ಬ) ವನಕೆಂದತ್ತಲೆ. ೩-೩ (ಚ) ಬಡೆಯೆ. ೪-೪ (6 II) ತಲೆಗೊಟ್ಟಿರ್ದ್ದಂ, (ಖ) ತಲೆಗಂಡಿರ್ದಂ.

ಧರಣೀಭಾರಮನಾಂ ಬಿಸುಟ್ಟೊಡದು ಚಿಃ[1] ಲೋಕಕ್ಕೆ ಖಾತ್ಯಾ ಸವಿಾ-
ಕರಣಂ ಭೌತಿಕಮೋದಕವ್ಯತಿಕರಂ ತಾನೆಂಬುದಂ ಮಾಡದೇ ||೮೧||

ವ|| ಎಂಬುದುಮಾತನ ಪರಿಚ್ಛೇದಮನಱಿದು ತತ್ಸಹೋದರಸ್ತಾನಿಸಿರ್ವ್ವ-ರೊಳೊ[2]ರ್ವ್ವರುಮೊಲ್ಲದಿರ್ದ್ದೊಡಮಿತತೇಜಂಗಮನುಂದರಿಗಂ ಪುಟ್ಟಿದ ಪುಂ-ಡರೀಕನೆಂಬ ಬಾಳಕನಂ ಸಂತಾನಪಾಲನಾರ್ಥಂ ನಿಱಿಸಿ ಷಷ್ಟಿಸಹಸ್ರಾಂಗನಾ-ಜನಮುಂ ವಿಂಶತಿಸಹಸ್ರಮುಕುಟಬದ್ಧರುಂ ಸಹಸ್ರಪ್ರಮಿತನಿಜತನೂಜರುಂ ಪಂಡಿತೆಯೆಂಬ ಪೆಸರನಾ[3]ಪ್ರಸ್ತಾವ[3]ದೊಳ್ನನ್ನಿ ಮಾಡಿದ ಪಂಡಿತೆಯುಂ ಬೆರಸು ಯಶೋಧರಮುನೀಂದ್ರಪಾದಪದ್ಮೋಪಾಂತದೊಳ್ ವಜ್ರದಂತಮಹಾರಾಜಾ-ಧಿರಾಜಂ ದಿಗಂಬರಾಂಬರವಿಲಾಸದಿಂ ತ್ರಿಲೋಕಶಿಖರಿಶೇಖರನಾದಂ. ಲಕ್ಷ್ಮೀಮತಿ ಮಹಾದೇವಿಯುಮನುಂದರಿವೆರಸು ಚಕ್ರವಲ್ಲಭ[4]ವ್ಯಪಾಯದೊಳ್ ಪುಂ[4]ಡರೀ-ಕನಂ

ತನುವಿದುವೊಂದನುಳ್ಳ ಸಭದೊಳ್ ಶಿಶುಕೇಸರಿಯೊಂದನುಳ್ಳ ಕಾ-
ನನದೊಳದೊಂದು[5] ಕುಟ್ಮಲಮನುಳ್ಳ ಸರೋವರದೊಳ್ ಪೊಣರ್ಚ್ಚಿ ನೆ-|
ಟ್ಟನೆ ದೊರೆಯಾದುದೀಕುಲಮುಮೀಶಿಶುವೊರ್ವ್ವನಿನೆಂಬಿನಂ ಜಗ-
ಜ್ಜನಮತಿಮುಗ್ಧಬಾಲನರಪಾಲಕಮಾದುದು ಚಕ್ರಭೃತ್ಕುಲಂ ||೮೨||

ವ|| [6]ಇದಂ[6] ಕಂಡು ಕಪ್ಪಮೀಯದೆ ಚಪ್ಪರಿಸುವ ಮಂಡಳಿಕರುಮ-ನಡಂಗದಾಟವಿಕರುಮಂ ಒತ್ತಿಬರ್ಪ್ಪ ಪಾರ್ಷ್ಣಿಗ್ರಾಹಕರುಮನಱಿದು ಲಕ್ಷ್ಮೀ-ಮತಿಮಹಾದೇವಿ ವಜ್ರಜಂಘಂಗೆ ಬಱಿಯನಟ್ಟುವ ಕಜ್ಜಮಂ ಮಂತ್ರಿವರ್ಗ-ದೊಳಾಲೋಚಿಸಿ,

ವನಜಾನೀಕಮೆ ಪಳ್ಳಿವೋಪ ತೆಱದಿಂ [7]ಕಿಟ್ಟಿರ್ದು[7] ಭೂಪಂ ತಪೋ-
ವನಮಂ ಪುತ್ರಕಲತ್ರಮಿತ್ರಸಹಿತಂ ಪೊಕ್ಕಂ ಕರಂ ಬಾಲನೊ-|
ರ್ವ್ವನಿವಂ ರಾಜ್ಯದೊಳಿರ್ದ್ದನಾನಬಲೆಯೆಂ ಕಾದಿರ್ದ್ದೆನೇಮಾತೊ ತ-
ನ್ನನೆ ನಚ್ಚಿರ್ದ್ದುದು ಕಾಗುಮೆಂಬ ಬಗೆಯಿಂದಿಂತೀಮಹೀಮಂಡಲಂ ||೮೩||

೧ (ಅ,ಬ) ಮೀ. ೨ (ಚ) ರೊ. ೩-೩ (ಅ,ಕ) ಪದ. ೪-೪ (ಅ,ಕ) ವಿಯೋಗ ದೊಳ್ಪುಂ. ೫ (ಅ,ಬ) ದೆ. ೬-೬ (ಚ) ಅಂತದಂ. ೭-೭ (ಅ) ಕಿಟ್ಟಿತ್ತಿ.

ಜಲಧಿತರಂಗತಾಡಿತಧರಾತಲಭಾರಮಿದೆತ್ತ ಬಾಲನೆ-।
ತ್ತಳವಿನಿತುಂಟೆ ತಾಳ್ದಲಿದನೊಟ್ಟಜೆಯಿಂ ಕೊಳಲೆಂದು ವೈರಿಗಳ್-॥
ತಳರ್ದಪರೆಂತು ತನ್ನ ಬಲಮಿಲ್ಲದೆ ತಾಳ್ದುವೆನೊಪ್ಪುಗೊಳ್ಗೆ ತ-।
ನ್ನಳಿಯನನೆಯ್ದಿ ಪಾಲಿಸುಗೆ ಬಂದಿದನೀಗಳನಾಥಯೂಥಮುಂ ॥೭೩॥

ವ॥ ಎಂದು ಬರೆದು ರತ್ನಕರಂಡಕದೊಳಿಟ್ಟು ಮುಚ್ಚಿ ಮುದ್ರಿಸಿದೋ-ಲೆಯುಮನಪೂರ್ವ್ವಪಾಯನಮುಮಂ ಪರಿಣತಾಶೇಷಶಾಸ್ತ್ರಾರ್ಥರುಮುನ್ನ-ತಾನ್ವಯರುಂ ಗಂಧರ್ವ್ವಪುರಾಧಿನಾಯಕರುಮಪ್ಪ ಚಿಂತಾಗತಿಯುಂ ೧ಮನೋ-ಗತಿಯುಮೆಂಬ೧ ವಿದ್ಯಾಧರರ ಕೈಯೊಳ್ಕೊಟ್ಟಮ್ಮಳಿಯನಂ ತಡೆಯದೆ ಮುಂದಿ-ಟ್ಟೊಡಗೊಂಡು ಬನ್ನಿಮೆಂದಟ್ಟಿದೊಡಾಗಳಾಗಗನಚರರ್ವ್ವಿಮಾನಾರೂಢರತಿತ್ವ-ರಿತ೨ಗಮನದಿಂ೨ ಪೋಗೆವೋಗೆ,

೩ಗಾಳಿಯನೆಡೆಗಲಿಸಿದುದು ವಿ೩-
ನೀಲಘನಾಘನಮನಳಱಿ ಪಱಿದುದು ಮುಕ್ತಾ-।
ಜಾಲಪರಿಲಂಬಿಲೋಲದು-
ಕೂಲ-ಪತಾಕಾವಿರಾಜಮಾನ-ವಿಮಾನಂ ॥೭೪॥

ಪಾಱುವ ವಿಮಾನದೊಂದ-
ಳ್ಕೇಱಿಂ ಪರಿದುಗುವ ಮುಗಿಲ ನೀರ್ಗ್ಗಳ ಪಲವುಂ ।
೪ಜೀಱುಗಳೊಳೆಳಸಿ೪ ಖಚರರ-
ನಾಱಿಸಿದುದು ಗಗನದೊಳ್ ವಿಯತ್ತಳಪವನಂ ॥೭೫॥

ವ॥ ಅಂತು ಬಂದುತ್ಪಲಖೇಟಮನೆಯ್ದಿ ವಜ್ರಜಂಘನುಮಂ ಶ್ರೀಮತಿ-ಯುಮಂ ಕಂಡು ದೂರಾವನತಮಸ್ತಕರಾಗಿ ತಮ್ಮ ತಂದುಪಾಯನಂಬೆರಸು ರತ್ನಕರಂಡಕಮಂ ಮುಂದಿಟ್ಟಾಗಳದಱ ಮುದ್ರಿಕೆಯನೊಡೆದು ತನ್ನಿಹಿತಕಾರ್ಯ್ಯ-ಪತ್ರಮಂ ಬಾಜಿಸಿ ನೋಡಿ ವಿಸ್ಮಯಾಕ್ರಾಂತಚಿತ್ತನಾಗಿ,

ಅಱಿಪದೆ ಪದಗಳಿಪದೆ ಪೊಂ-
ಪುಱಿವೋಗೆ ಯಶಃ ೫ಪ್ರಕಾಶಮೀಗಳೆ ಧರೆಯಂ೫ ।

೧-೧ (ಬ) ಮನೋವೇಗಿಯುಮೆಂಬ. ೨-೨ (ಅ,ಬ) ಗತ್ತಿಯಿಂ. ೩-೩ (ಅ) ಘಾಳಿ-ಯ ನೆಲೆಗೆಡಿಸುವುವೆನೆ; (ಬ,ಕ) ಗಾಳಿಯನೆಡೆಗಲಿಸಿದುದೆನೆ. ೪-೪ (ಬ) ಪೀರುಗಳೊಳಸಿ; (ಜ) ಬೀರುಗಳೊಳೆಳಸಿ. ೫-೫ (ಅ,ಬ,ಕ) ಪ್ರಕಾಶಮೀಭುವನದೊಳೇಂ.

ಪಱಿಕೆಯ್ದು ತೊಱ್ತುನುಱಿವಂ-
ತುಱಿದಂ ಸಾಮ್ರಾಜ್ಯ¹ಲಕ್ಷ್ಮಿಯಂ¹ ಚಕ್ರಧರಂ ॥೮೭॥

ತಂದೆ ಕುಡೆ ರಾಜ್ಯಮಂ ತೃಣ-
ದಿಂದಂ ಲಘುವಾಗೆ ಬಗೆದು ಬಗೆದರ್ ತಾಮುಂ।
ತಂದೆಯು ಬಗೆವುದನೆಂದೊಡ-
ಗುಂದಲೆ ಪೊಗೞಲ್ಕೆ ಚಕ್ರಿ²ನಂದನರಳವಂ² ॥೮೮॥

ವ॥ ಎಂದು ನಿಜಸಭಾಜನಕ್ಕೆಲ್ಲಂ ಪೊಗೞ್ದು ತದ್ವಾರ್ತಾಕರ್ಣನೋದೀ-ರ್ಣಶೋಕವ್ಯಾಕುಳೆಯಾಗಿರ್ದ ನಿಜವಲ್ಲಭೆಯಲ್ಲಿಗೆ ಬಂದು,

ಗುರುಶೋಕಾವೇಗಮಾದಂ ಗುರುವೆ³ನಗಮು³ದೇಕೆನ್ನುಮಂ ನಮ್ಮ ಜನ್ಮಾಂ-
ತರದಿಂ [ಬಂದಿರ್ದ]ಮೋಹಂ ಬಿಡದಲೆವುದರಿಂದಾದೊಡಂ ಧೈರ್ಯದಿಂ ಸಂ-।
-ಸರಣಾಂಭೋರಾಶಿಯಂ ದಾಂಟುವ ಬಗೆಯನೆ ಕೈಕೊಂಡನೆಂದಂದೆ ಮಾವಂ
ಚರಿತಾರ್ಥಂ ನೀನಣಂ ಚಿಂತಿಸದಿರು ನಮಗಿನ್ನುಂಟೆ ಶೋಕಾವಕಾಶಂ ॥೮೯॥

ವ॥ ಎಂದಾಶೋಕಾವೇಗಮನಾಱಿಸಿ ಬಂದ ವಿದ್ಯಾಧರರಂ ಯಥೋ-ಚಿತಪ್ರತಿಪತ್ತಿಗಳಿಂ ⁴ಸಂತೋಷಂಬಡಿಸಿ⁴ ನಿಜಪ್ರಿಯಪ್ರಧಾನಮಂತ್ರಿಮತಿಪರ-ನೊಳಂ ಸೇನಾನಾಯಕನಕಂಪನೊಳಂ ಪುರೋಹಿತನಾನಂದನೊಳಂ ಪ್ರಧಾನ-ಶ್ರೇಷ್ಠಿ ಧನಮಿತ್ರನೊಳಮಾಲೋಚಿಸಿ,

॥ ಹರಿಣಿ ॥

ಸೆಣಸುವಹಿತರ್ ಮೆಲೇೞ್ವುದ್ಯೋಗಮಂ ಬಗೆದಿರ್ದರಿ-
ನ್ನಣುಗಿನಳಿಯಂಗೆನ್ನಿಂ ಮೇಗಿಲ್ಲ ಕೂರ್ಪವರಿಂತಿದೇಂ।
ಗಣಿದದೆಡೆಯೇ ಪೋಪೆಂ ಪೋಗೆಂದು ಮಾಣದೆ ಪುಂಡರೀ-
ಕಿಣಿಗೆ ಪಯಣಂಬೋಗಲ್ ನಿಶ್ಚೈಸಿದಂ ಧರಣೀಶ್ವರಂ ॥೯೦॥

ವ॥ ಅಂತತಿತ್ವರಿತಗಮನನಿಶ್ಚಿತಮನನಾಗಿ ಬಲಾಧ್ಯಕ್ಷನಂ ಬರಿಸಿ-

ಮನಮುಳ್ಳ ನೃಪಗಂಧಸಿಂಧುರಚಯಂ ⁵ಚಂಡಾಜಿವಿಕ್ರಾಂತಮು-
⁵ತ್ತ್ಯನಿಳಾಕ್ರಾಂತಹಯೌಘಮೂರ್ಜ್ಜಿತಜಯಪ್ರಖ್ಯಾತಜಂಘಾಳಪ-।

---

೧-೧ (ಅ) ಪದವಿಯಂ. ೨-೨ (ಆ,ಬ) ನಂದನರಣ್ಮಂ. ೩-೩ (ಆ,ಬ) ನಮುಗ. ೪-೪ (ಅ)ಸಂತಸಂ ಬಡಿಸಿ; (ಗ) ಮನ್ನಿಸಿ. ೫-೫ (ಕ) ಚಂಡಾಂಶುವಿಕ್ರಾಂತಮುತ್ತ.

ತ್ರಿನಿಕಾಯಂ ಕವಸ್ತೈಕಸುಜ್ಜನಯುಮದಸ್ಕಂಧಪ್ರಯಾಣಕ್ಷಮಾ-
ವನಿಪಾಲಪ್ರಜಮೀಗಳಿವ್ಮೊಡನೆ ಬರ್ಕ್ಕೆಂದಂ ರಣಾನಂದದಿಂ ||೯೧||

ವ|| ಅಂತು ಬೆಸಸಿದಂದದೊಳೆ ಬಂದು ಮುಂದೆ ನಿಂದ [೧]ಚತುರಂಗಬಲಂ[೧] ಬೆರಸಬಲಾಬಾಲವೃದ್ಧವೃದ್ಧೋಕ್ಷಶಕಟಸಂಕಟಮಪ್ಪ ಕಟಕಮುಂ ಮೆಲ್ಲಮೆಲ್ಲನೊಡಗೊಂಡು ಬರ್ಪ್ಪಂತು [೨]ಕೂಚ್ಚಾಂಲತುಂದಿಲ[೨]ಜರತ್ಸಾಮಂತಸಂದೋಹಕ್ಕೆಪ್ಪಯಿಸಿ ಶುಭದಿನ[೩]ಮುಹೂರ್ತ್ತದೊಳ್ ವಿಜಯಪ್ರಯಾಣ[೩]ಭೇರಿಯಂ ಪೊಯಿಸಿ ಪೊಱಮಟ್ಟಾಗಳ್,

ಕೊಡೆ ತಟಿ ತಳ್ತ ಸೀಗುರಿ ಕರೀಂದ್ರಘಟಾಳಿ ತುರಂಗಸೈನ್ಯಮು-
ರ್ಕ್ಕುಡುಗದೆ ಬರ್ಪ್ಪ ನಾಯಕಬಲಂ ರಥ[೪]ಸಂತತಿ[೪]ಖಡ್ಗಿವೃಂದಮೋ-|
ಗಡಿಸದ ಗಾಡಿಕಾರ್ತ್ತಿಯರ ಬರ್ಪ್ಪ ನಿಯೋಗಿಗಳಾದ ಚೆಲ್ವನಾ-
ವೆಡೆಯೊಳಮಿಲ್ಲ ಯೆ [೫]ಕಣ್ಗೊಸಗೆಯಂ[೫] ಪಡೆದತ್ತು ಸಮಸ್ತಸಾಧನಂ ||೯೨||

ವ|| ಅಂತು ಪುಂಡರೀಕಿಣಿಗಭಿಮುಖನಾಗಿ ಪಯಣಂಬಂದು [೬]ಶಷ್ಪಸರೋವರ[೬]ಮೆಂಬ ಕೊಳನಂ ಬಳಸಿದ ಮಾಧವೀಲತೆಯ [೭]ಮಂಟಪಂಗಳೊಳಂ[೭] ಚೂತಲತೆಯ ಬಳ್ಳಿಗಾವಣಂಗಳೊಳಮಶೋಕಲತೆಯ ವಿಳಾಸಗೃಹಂಗಳೊಳಂ ನವಮಾಲಿಕಾ[೮]ಲತೆಯಿಱುಂಬುಗಳೊಳಂ[೮] ತಮಾಳಲತೆಯ [೯]ಗೊಂಚಲಂಗಳೊಳಂ[೯] ತಾಂಬೂಲಲತೆಯಲಂಕಾರಭವನಂಗಳೊಳಮೆಳಲತೆಯ ಗಣಿಕಾನಾಸಂಗಳೊಳಮಿಂಬಱಿದು ಬೀಡಂಬಿಡಿಸಿದಾಗಳ್,

ಇದು ಗಹನಾಂತರಾಳಮಿದಱೊಳ್ನೆಲಸಿರ್ದ್ದ ಮದೀಯ[೧೦]ತೋಯದಿಂ[೧೦]-
ದೊದವಿದನೀರಜಾವಲಿಯ ಚೆಲ್ವು[೧೧]ನಿರರ್ಥಕಮಾಗದಿಂದು[೧೧]ಪೊ-
ರ್ದ್ದಿದ ಜನದಿಂ ಕರಂ ಸಫಲಮಾದುದು ಪೆಂಪೆನಗಾದುದೆಂದು ರಾ-
ಗದಿನುಲಿವಂತುಟಾಯ್ತು ಕಲಹಂಸನಿನಾದದಿನಾಸರೋವರಂ ||೯೩||

ಆಗಳೆ ಮಾಱ್ಪ [೧೨]ಪುಷ್ಪರಚನಾಳಿಗೆ[೧೨] ಜೈನಗೃಹಕ್ಕೆ ಕಾಂತಕಾಂ-
ತಾಗಣಕರ್ಣ್ಣಪೂರಕುಸುಮಾಭರಣಾಳಿಗೆ ಯೋಗ್ಯಮಾಗಿ ಮೇ-|

೧-೧ (ಅ,ಬ) ಚತುರ್ಬ್ಬಲಂ, ೨-೨ (ಕ) ಕೂರ್ಚಾಳರುಂ ದೀರ್ಕ್ಷಾಳ. ೩-೩ (ಚ) ಮುಹೂರ್ತದೊಳ್ ಪ್ರಯಾಣ. ೪-೪ (ಅ,ಬ) ಸಂಹತಿ. ೫-೫ (ಅ,II,ಖ,ಬ) ಕಣ್ಗೆ ಪಸರಂ. ೬-೬ (ಪೂ. ಪು. ಸರ್ಗ ೮-೧೫೦) (ಚ) ಸರ್ಪಸರೋವರ. ೭-೭ (ಅ) ಮಂಟಪಂಗಳೊಳಮಶೋಕಲತೆಯ ವಿಳಾಸಗೃಹಂಗಳೊಳಂ. ೮-೮ (ಅ,ಗ) ಲತೆಯ ಱೊಂಚೆಗಳೊಳಂ; (ಬ) ಲತೆಯ ಜೊಂಪಂಗಳೊಳು; (ಕ) ಲತೆಯ ಕುಂಜಂಗಳೊಳಂ. ೯-೯ (ಚ) ಕೊಂಚೆಯಂಗಳೊಳಂ; (ಖ) ಗೊಂಚಲ್ಗಳೊಳಂ. ೧೦-೧೦ (ಅ) ಸಂಗದಿಂ. ೧೧-೧೧ (ಅ,ಬ) ನಿರರ್ಥಕಮಾದುದಿಂದು. ೧೨-೧೨ (ಕ) ಚಿತ್ರರಚನಾಳಿಗೆ.

ಲಾಗಿ ತೆರಳ್ದು ಪೊಕ್ಕು ಪೊಱಮಟ್ಟ ಮದೇಭಗಣಕ್ಕೆ ಮಂಡನಾ-
ಯೋಗಮುಮಾದುವಾಕೊಳದ ಕೋಮಲನೀರಜಪುಷ್ಪಜಾತಿಗಳ್ ||೯೪||

ಚಲಕಲಹಂಸಸಾರಸರಥಾಂಗಮದಾಲಿನಿನಾದಕೈರವೋ-|
ತ್ಪಲಶತಪತ್ರಮಂದಮಕರಂದರಸೋತ್ಕಟಗಂಧಬಂಧುರಂ |
ಲಲಿತನೃಪಾಂಗನಾಲಕಚಯಂಗಳನಾಡಿಪುದಾಯ್ತು ಸಂತತೋ-
ಚ್ಚಲಿತತರಂಗಶೀಕರತುಷಾರಜಲಂ ಸರಸೀಸಮೀರಣಂ ||೯೫||

ವ|| ಅಂತಾಮಂಡಳೇಶ್ವರನಾಸರೋಜಷಂಡದೊಳ್ಪೀಡಂಬಿಟ್ಟಿರ್ಪನ್ನೆಗಂ ಸ್ವರ್ಗ್ಗಾಪವರ್ಗ್ಗಮಾರ್ಗ್ಗದಂತಪಗತಕಲ್ಮಷರುಮಂಬರದಂತೆ ಸನ್ಮಾರ್ಗರು-ಮಂಭೋಧಿಯಂತೆ ಗಂಭೀರಾಶಯರುಮಾದಿತ್ಯನಂತೆ ನಿರ್ದ್ಧಾತತಮಸ್ತಮರುಂ, ಚಂದ್ರನಂತೆ ಸರ್ವಸತ್ತ್ವ[೧]ಸೌಖ್ಯರು[೧]ಮನಿಲನಂತೆ ನಿಸ್ಸಂಗರುಂ, ಚಿಂತಾ-ಮಣಿಯಂತೆ ಭವ್ಯಜನಮನೋಭಿಲಷಿತಫಲಪ್ರದರುಂ, ಮೇರುವಿನಂತಚಲಿತ [೨]ಧೈರ್ಯಗುಣರುಮಪ್ಪ[೨] [೩]ದಮಧರಸಾಗರಸೇನರೆಂಬ[೩]ಗಗನಚಾರಣರ್ಕ್ಕಾಂ-ತಾರಚರ್ಯಾಮಾರ್ಗ್ಗ[೪]ದೊಳ್ ತ[೪]ಮ್ಮಾವಾಸಕ್ಕೆ ಬಪ್ಪರಂ ಶ್ರೀಮತಿಯುಂ ತಾನುಂ ಕಂಡು ಸಸಂಭ್ರಮಂಬೆರಸಿದಿರಂ ನಡೆದು ಬದ್ಧಾಂಜಲಿಪುಟಘಟಿತ-ನಿಟಿಲರಾಗಿ ನಿಲ್ಕೆಂದು [೫]ನಿಲಿಸಿ[೫];

ಇದಿರ್ಗೊಳ್ವುದು ಕಾಲ್ಗರ್ಚ್ಚುವು-
ದುದಾತ್ತಮಪ್ಪೆಡೆಯೊಳಿರಿಪುದರ್ಚ್ಚಿಪುದೆಱಗಿ-|
ರ್ಪ್ಪುದು ಕರಣಶುದ್ಧಿವಡೆವುದು
ಪದೆದನ್ನಮನೀವುದೆಂಬ ನವವಿಧಪುಣ್ಯಂ ||೯೬||

ವ|| ತಮಗೆ ದೊರೆಕೊಳೆ,

ನೆಱೆದಿರ್ದ್ದ ಭಕ್ತಿದಯೆ ಪುದಿ-
ದೆಱೆವೌದಾರ್ಯ್ಯಂ ಕ್ಷಮಾಗುಣಂ ಶಕ್ತಿಯುಮೆಂ-|
ಬಱೆಕೆಯಗುಣಮೇೞಱೊಳಂ
ನೆಱೆದಿರ್ದ್ದರ್ ಮುನಿಯುಗಕ್ಕೆ ದಾನಮನವರ್ಗಳ್ ||೯೭||

ವ|| ಅಂತಾಗಳ್.

ಸುರತೂರ್ಯ್ಯಧ್ವಾನಮೆಯ್ತಿರ್ಪ್ಪಲರ ಸರಿ ಪೊದೞ್ದಿರ್ದ್ದ ರೈಧಾರೆ ದೇವೇಂ-
ದ್ರರಹೋದಾನಪ್ರಸಿದ್ಧಧ್ವನಿಸುರಭಿಸಮೀರಪ್ರಚಾರಂ ಜಗಕ್ಕೆ-|

೧-೧ (ಬ) ಸೌಖ್ಯರು. ೨-೨ (ಅ) ಗುಣರುಮಪ್ಪ; (ಬ) ಗುಣಗಣರುಮಪ್ಪ; ೩-೩ (ಅ) ದಮುವರಸಾಗರಸೇನರೆಂಬ; (ಬ) ಯಮುಧರಸಾಗರಸೇನರೆಂಬ; (ಪೂ. ಪು. ೮-೧೬೭) ದಮುಧರ; (ಚ) ಧರ್ಮಧರಸಾಗರಸೇನರೆಂಬ. ೪-೪ (ಅ) ದಿಂ. ೫-೫ (ಅ, ಬ) ನಿಱಿಸಿ.

ಚ್ಚರಿ ಪಂಚಾಶ್ಚರ್ಯ್ಯಮೆತ್ತಂ ನೆಗೞೆ ಶಿಬಿರದೊಳ್ ವಿಸ್ಮಯಾಕ್ರಾಂತನಿರ್ದ್ದಂ
ಪಿರಿದೊಂದಾನಂದದಿಂದಂ ಸುಕವಿಜನಮನೋಮಾನಸೋತ್ತಂಸಹಂಸಂ ॥೯೮॥

ವ॥ ಅಂತು ಬೀಡಿಂಗಮಾಶ್ಚರ್ಯ್ಯಂ ನೆಗೞೆ,

[1]ಕ್ಷಿತಿಚಕ್ರಾರ್ಚ್ಚಿತ[1]ಚಕ್ರವರ್ತ್ತಿಪದಮುಂ ದೇವೇಂದ್ರರಾಜ್ಯೋದಯೋ-
ನ್ನತಿಯುಂ ಭವ್ಯಜನಂಗಳಾಸೆವಡುತಿರ್ಪ್ಪಾರ್ಹಂತ್ಯಮುಂ ಸಾಗ್ಗ್ರಮು-
ನ್ವಿತದಾನಂಗರಿದುಂಟೆ [2]ಸೌಖ್ಯಮೆನುತುಂ[2] ದಾನಪ್ರಭಾವಕ್ಕೆ ಸಂ-
ಚಿತಪುಣ್ಯೋದಯನಾಗಳಾದಮೊಸೆದಂ ಸಂಸಾರಸಾರೋದಯಂ ॥೯೯॥

ಗ॥ ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ-
ಚಂದ್ರವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣ್ಣಸೂಕ್ತಿ-
ಕಲ್ಲೋಲಮಾಲಾಕೀರ್ಣ್ಣಕವಿತಾಗುಣಾರ್ಣ್ಣವ-
ಪ್ರಣೀತಮಪ್ಪಾದಿಪುರಾಣದೊಳ್-
ಚಾರಣಯುಗಳದಾನೋತ್ಸವವರ್ಣ್ಣನಂ
ಚತುರ್ಥಾಶ್ವಾಸಂ
ಸಂಪೂರ್ಣ್ಣಂ.

೧-೧ (ಅ,ಖ) ಕ್ಷಿತಿಚಕ್ರೋಚಿತ. ೨-೨ (ಅ,ಬ) ಸೌಖ್ಯಮೆನುತಂ.

# ಪಂಚಮಾಶ್ವಾಸಂ

ಶ್ರೀಮತಿವೆರಸಾಗಳತಿ-
ಪ್ರೇಮದೆ ಮುನಿಯುಗಳನಿಕಟಮಂ ಸಾರ್ದನಿತೇ-|
ಕೀಮೋಹಮಿವರೊಳೆನಗೆಂ-
ದಾಮಹಿಮಹಿತಂ ಸರಸ್ವತೀಮಣಿಹಾರಂ ||೧||

ವ|| ಬೆಸಗೊಂಡಾಗಳ್ ವೃದ್ಧಕಂಚುಕಿ,

ಇನಿತುವರಂ ವ್ಯಾಮೋಹಂ
ನಿನಗೇಕಾದಪ್ಪುದು ಬಗೆದು ಭಾವಿಸಿ ನೋಡೀ-|
[೧]ಮುನಿಯು[೧]ರ್ ನಾಲ್ವತ್ತೊಂಭ-
ತ್ತನೆಯಮಳ್ಗಳ್ ನಿನ್ನ ತನಯರಲ್ಲರೆ ನೃಪತೀ ||೨||

ವ|| ಎಂಬುದು[೨]ಮರಸನಱಿದುಸಿರದಿರಿವೆಂ[೨]ದು [೩]ತನ್ಮುನಿಯುಗಲ[೩] ಪಾದಪ್ರಕ್ಷಾಲನೋದಕದೊಳ್ಪೊರಳ್ದು ಪುಷ್ಪವರ್ಷದ ಪೂಗಳೊಳ್ಪೊದಿದು ದಾನಾನುಮೋದ[೪]ಪ್ರಭಾವ[೪]ದಿಂದುಪಶಮಭಾವಮಂ ತಾಳ್ದಿ ಮುನಿಪತಿಯ ಮುಖಾರವಿಂದಮಂ ನೋಡುತ್ತಿರ್ದ್ದ ಶಾರ್ದೂಲವರಾಹಗೋಲಾಂಗೂಲನಕುಲಂಗಳಂ ನೋಡುತ್ತ[೫]ಮವರ್ಕೆ [೬][ಭಕ್ಷ್ಯಪೂಪಂಗಳಂ][೬] ತರಿಸಿ ನೀಡುತ್ತ[೭]ಮಿದ್ದಾರ್ಗ—ತ್ರೀಯಪರಮಪ್ರಸಾದಭೂಮಿಗಳಾಗಿರ್ದ್ದ ಮಂತ್ರಿಸೇನಾನಾಯಕಪುರೋಹಿತಶ್ರೇಷ್ಠಿಪದನಿಯುಕ್ತರಪ್ಪ ಮತಿವರಾಕಂಪನಾನಂದಧನಮಿತ್ರರೆಂಬ ನಾಲ್ವರ ಭವಾವಳಿಯುಂ ಬೆಸಗೊಳೆ [೮]ದಮಧರ[೮]ಮುನಿನಾಥನವಧಿಬೋಧದಿಂದನುಕ್ರಮಂದಪ್ಪದೆ,

ಕೆದಱೆದಪುದು ದೆಸೆದೆಸೆಗಮೃ-
ತದ ಪನಿಯುನಿದೊಂದು ಮುನಿಪ—ಮುಖಚಂದ್ರಮನೆಂ-|
ಬುದನೆನಿಸೆ ದಶನದೀಧಿತಿ
ಮೃದುಮಧುರಗಭೀರ[೯]ನಿನದದಿಂ ಮುನಿ ನುಡಿದೊಂ[೯] ||೩||

ವ|| ಈಮತಿವರನೀಭವಕ್ಕಯ್ದನೆಯ ಭವದೊಳೀಜಂಬೂದ್ವೀಪದ ಪೂರ್ವ್ವ

---

೧–೧ (ಅ) ಮುನಿಗಳ್. ೨–೨ (ಅ) ಮರಸನಱಿದು. ೩–೩ (ಚ) ತನ್ಮುನಿಗಳ. ೪–೪ (ಅ,ಬ) ಪ್ರಮೋದ. ೫ (ಚ) ತ್ತು. ೬–೬ (ಅ,ಬ) ಭಕ್ಷರೂಪಂಗಳಂ; (ಚ) (ಚ) ಭಕ್ಷಧೂಪಂಗಳಂ. ೭ (ಇ) ತ್ತು. ೮–೮ (ಅ,ಬ) ದಮವರ; (ಬ) ಯಮಧರ; (೪–೯ಚವಚನ ನೋಡಿರಿ.) ೯–೯ (ಅ) ನಿನದದಿಂದಂ ನುಡಿದರ್; (ಚ) ನಿನದದಿಂ ಮುನಿ ನುಡಿದಂ.

ವಿದೇಹದ ವತ್ಸಕಾವತೀವಿಷಯದ ಪ್ರತಿಬದ್ಧಪ್ರಭಾಕರೀಪುರದೊ[೧]ಳತಿಗೃದ್ಧನೆಂಬ[೧]ರಸನಾಗಿ,

ವಿವಿಧಾರಂಭಪರಿಗ್ರಹಂ ವಿಷಯಸೌಖ್ಯಾಯತ್ತಸತ್ಯಂತಲೋ-
ಭವಿಷಗ್ರಸ್ತನುಪಾದ್ರಿಯೊಳ್ ದ್ರವಿಣಮಂ ಬಯ್ತುದ್ಧತಂ ತನ್ನುಸಿರ್-|
ತವೆ ಪಂಕಪ್ರಭೆಯೊಳ್ ದಶಾಬ್ಧ್ಯುಪಮೆಯಿಂ ದುಃಖಾಗ್ನಿಯೊಳ್ ಬೆಂದು ಮ-
ತ್ತ್ರವನಲ್ಲಿಂ ಪೊಱಮಟ್ಟು ಮುನ್ನ ಧನಮಂ ಬಯ್ತಿರ್ದ್ದಗಾರಣ್ಯದೊಳ್ ||೪||

ಪುಲಿಯಾಗಿ ಪುಟ್ಟಿ ತನ್ಮಂ-
ಡಲನಾಥಂ ಪ್ರೀತಿವರ್ದ್ಧನಂ ರಿಪುನೃಪರಂ |
ಚಲದಲೆದು ಬಂದು ಚಾತು-
ರ್ಬ್ಬಲಯುತನಾನಗದ ಬಳಸಿ ಬೀಡಂ ಬಿಟ್ಟಂ ||೫||

ಬಿಡೆ ತಿರ್ದ್ದಿದ ಶಕುನದ ನಂಬು-
ದಡಿವಿಡಿದು ಪುರೋಹಿತಂ ನೃಪಂಗೀನುಡಿಯಂ |
ನುಡಿದಂ ಕನಕದ ಪೂಜೆಯು
ಪಡೆಪಾದಪುದಿಲ್ಲಿ ಮುನಿಯ ದಾನದಿನಧಿಪಾ ||೬||

ಈಗಳೆ ನಿನಗೆಂಬುದುಮನು-
ರಾಗದಿನಾಪ್ರೀತಿವರ್ದ್ಧನಂ ಮುನಿವರರಿಂ-|
ತೀಗಿರಿಗೆ ಚರಿಗೆವರ್ಪ್ಪರ-
ನಾಗತಮತಿ ಬಗೆಯ ನೀನುಪಾಯಾಂತರಮಂ ||೭||

ಎನೆ ಪೊೞಲ ಬೀದಿವೀದಿಗ-
ಳನಿತುಮ[೨]ನೋರಂತೆ[೨] ತಳಿದು ಗುಡಿಗಟ್ಟಿಸಿ ನೀಂ|
ನನೆಯ ಮುಗುಳಲರ ತುಱುಗಲ-
ನನಂತಮಂ ನೆಱೆಯೆ ಕೆದಱಿವೇೞ್ ನೃ[೩]ಪತಿಲಕಾ[೩] ||೮||

೧-೧ (ಚ) ಮತಿವೃದ್ಧನೆಂಬ; (ಗ) ಅತಿವೃದ್ಧನೆಂಬ. ೨-೨ (ಅ) ನೊರ್ಮ್ಮೊದಲೆ. ೩-೩ (ಅ) ನೃಪಮಹಿತಾ; (ಬ) ನೃಪಮಹಿಪಾ.

ಎಂದೊಡೆ ನೃಪನಾತನ ಪೇ-
ೞ್ದಂದದೊಳದನಂತೆ [೧]ಮಾಡವೇೞ್ದಿರೆ[೧] ಮುನಿಪಂ |
ಸಂದ ಪಿಹಿತಾಸ್ರವಂ ಪುಗು-
ತಂದಂ ನೋಂತೊಂದು ತಿಂಗಳಿಂಗಾಪುರಮಂ ||೯||

ತಳಿಯ ಕೆಸಱಾದ ಧರೆ ಪೂ-
ಗಳ [೨]ತುಱುಗಲೊಳೆಸೆಯೆ[೨] ಪೊಱಲಿದಪ್ರಾಸುಕಮೆಂ- |
ದೊಳಪುಗದೆ ನಿಯಮದಿಂ ನಿ-
ರ್ಮ್ಮಳಚರಿತಂ ಚರಿಗೆವೊಕ್ಕನರಸನ ಬೀಡಂ ||೧೦||

ಪುಗೆ ನೃಪನಿದಿರಂ ಬಂದಾ-
ವಗಮರ್ಥಿಯೊಳಱಿದು ನಿಱಿಸೆ ದಾನೋನ್ನತಿಯೊಳ್ |
ಗಗನತಲದಿಂದಮೊರ್ಮ್ಮೆಯೆ
ನೆಗೆದತ್ತಾಶ್ಚರ್ಯ್ಯಮಾಗೆ ಪಂಚಾಶ್ಚರ್ಯ್ಯಂ ||೧೧||

ವ|| ಆಗಳಾ[೩]ಪರ್ವ್ವತ[೩]ದೊಳಿರ್ದ್ದ ಶಾರ್ದ್ದೂಲಂ ಜಾತಿಸ್ಮರನಾಗಿ ಪರಿತ್ಯಕ್ತಾಹಾರ[೪]ಶರೀರನುಪಶಾಂತ[೪]ಸ್ವಾಂತನಿರ್ದ್ದುದೆಂಬುದಂ [೫]ತನ್ಮುನೀಂದ್ರರ[೫]ವಧಿಜ್ಞಾನದಿಂದಱಿದಾಪ್ರೀತಿವರ್ದ್ಧನನಂ ಪ್ರತಿಬೋಧಿಸುವ ಬಗೆಯೊಳಾಶಾರ್ದ್ದೂಲನ ಪೂರ್ವ್ವಭವವೃತ್ತಾಂತಮುಮಂ ಕಾಲಲಬ್ಧಿದೊರೆಕೊಳೆ ಶರೀರಪರಿತ್ಯಾಗಂಗೆಯ್ದಿರ್ದ್ದುದೆಂಬುದುಮನಱಿಪಿ ತದ್ಗಿರಿತಟದೊಳ್ ಮುನ್ನೆ ಪೂೞ್ದ ಸುವರ್ಣ್ಣಪೂರ್ಣ್ಣ[೬]ಘಟಂಗಳಂ[೬] ತೋಱಿದಾಗಳ್ ಚೋದ್ಯಂಬಟ್ಟು,

ಪಿರಿದುಂ ಪೂಜೆಯನರಸಂ
ಪರಿವಾರಂಬೆರಸು ಮಾಡೆ ಮುನಿಪತಿಯ ಪದಾಂ- |
ಬುರುಹದ ಮೊದಲೊಳ್ ನೋಂತುದು
ಭರದಿಂ [೭]ಪದಿನೆಂಟು[೭]ದಿವಸಮಾಶಾರ್ದ್ದೂಲಂ ||೧೨||

ವ|| ಅಂತು ನೋಂತು,

೧-೧ (ಚ) ಮಾಡವೇೞ್ದೊಡೆ. ೨-೨ (ಅ,ಬ) ತುಱುಗಲಿನೆಸೆಯೆ. ೩-೩ (ಅ) ನಗ. ೪-೪ (ಚ) ಶರೀರನಾಗಿ ಉಪಶಾಂತ. ೫-೫ (ಅ,ಬ) ತನ್ಮುನೀಶ್ವರನ. ೬-೬ (ಚ) ಕಟಾಹಂಗಳಂ. ೭-೭ (ಕ) ಪನ್ನೊಂದು.

ಸುಡುವುದರಾಗ್ನಿಯುಮೊಡಲಂ
ಮಿಡುಕುವಿನಂ ಕಡಿವ ಕಟ್ಟಿಜುಂಪೆಗಳುಮದಾ೧-|
೨ವೆಡೆಯನುರಿಸುವುದೊ೨ ನರಕದ
ಕಡುದುಃಖದೊಳಗಿದು ಸುಗಿದು ನಮೆದೆನಗೀಗಳ್ ||೧೩||

ವ|| ಎಂಬು ೩ಧೈರ್ಯಮನೆ೩ ಮನದೊಳವಲಂಬಿಸಿ ಸಮಾಧಿವಡೆದೀಶಾನಕಲ್ಪದೊಳ್ ದಿವಾಕರಪ್ರಭಮೆಂಬ ವಿಮಾನದೊಳ್ ದಿವಾಕರಪ್ರಭನೆಂ೪ಬೊಂ ದೇವನಾದನಾಪ್ರೀತಿವರ್ದ್ಧನನುಮಾಭಟ್ಟಾರಕರ್ ದಯೆಗೆಯ್ದು ದೀಕ್ಷೆಯೆಂಬ ಕಲ್ಪಲತೆಯ ಫಲದಿನಮೃತಪದವಿಯುಂ ಪಡೆದನಾತನ ಸೇನಾನಾಯಕಮಂತ್ರಿಪುಂಗವಪುರೋಹಿತರ್ ಮೂವರುಂ ನೃಪನ ದಾನಾನುಮೋದದ ಫಲದಿಂದಮುತ್ತರಕುರುವಿನೊಳಾರ್ಯ್ಯರಾಗಿ ಜೀವಿತಾಂತ್ಯದೊಳೀಶಾನಕಲ್ಪದೊಳ್ ಸೇನಾನಾಯಕನಪ್ಪಾರ್ಯ್ಯಂ ಪ್ರಭಾಕರವಿಮಾನದೊಳ್ ಪ್ರಭಾಕರನೆಂಬೊಂ ದೇವನಾದೊಂ; ಮಂತ್ರಿಯಪ್ಪಾರ್ಯ್ಯಂ ಕಾಂಚನವಿಮಾನದೊಳ್೫ ಕನಕಪ್ರಭನೆಂಬೊಂ ದೇವನಾದೊಂ೫; ಪುರೋಹಿತನಪ್ಪಾರ್ಯ್ಯಂ ೬ರುಷಿತಾಖ್ಯ೬ವಿಮಾನದೊಳ್ ಪ್ರಭಂಜನನೆಂಬೊಂ ದೇವನಾದೊಂ; ಮುನ್ನ ಪೇಟ್ದ ಶಾರ್ದ್ದೂಲಚ೭ರನಪ್ಪ ದೇವಂ೭ ಬೆರಸಂತು ನಾಲ್ವರ್ ದೇವರ್ ಲಲಿತಾಂಗದೇವನಾದಂದು ನಿನಗೆ ಪರಿವಾರದೇವರಾದರಾಲಲಿತಾಂಗದೇವನೈ ನೀನಿಲ್ಲಿ ಬಂದು ವಜ್ರಜಂಘನಾದೈ; ನಿನ್ನ ದೇವಿಯಪ್ಪಾಸ್ವಯಂಪ್ರಭೆಯುಮೀಗಳ್ ಶ್ರೀ೮ಮತಿಯಾದಳ್೮; ಶಾರ್ದ್ದೂಲಚರನಪ್ಪ ದಿವಾಕರಪ್ರಭದೇವಂ ಬಂದು ಮತಿಸಾಗರನೆಂಬಂಗಮಾತನಭಾರ್ಯ್ಯೆ ಶ್ರೀಮತಿಗಂ ತನೂಜನಾಗಿ ನಿನಗೆ ಮಂತ್ರಿ ಮತಿವರನಾದಂ; ಪ್ರಭಾಕರಾಮರಂ ಬಂದಪರಾಜಿತಂಗಮಾರ್ಜ್ಜವೆಗಂ ನಂದನನಾಗಿ ಸೇನಾನಾಯಕನಕಂಪನಾದಂ; ಕನಕಪ್ರಭದೇವಂ ಬಂದು ಶ್ರುತಕೀರ್ತ್ತಿಗಮನಂತಮತಿಗಂ ತನಯನಾಗಿ ಪುರೋಹಿತನಾನಂದನಾದಂ; ಪ್ರಭಂಜನಕಲ್ಪಜಂ ಧನದತ್ತಂಗಂ ಧನದತ್ತೆಗಂ ಪುತ್ರನಾಗಿ ನಿಜಶ್ರೇಷ್ಠಿ ಧನಮಿತ್ರನಾದಂ; ಅದು ಕಾರಣದಿಂ೯ದಿವರೊಳಪ್ಪ ಸ್ನೇಹಂ ಪಿರಿದಾದುದಿಂ೯ಭವಕ್ಕೆಂಟನೆಯ ಭವದೊಳ್ ಭರತದೊಳ್ ನೀನಾದಿತೀರ್ಥಪ್ರವ-

---

೧-೧ (ಅ) ವಾ. ೨-೨ (ಅ) ವೆಡೆಯನುಜಱಿಸುವವೊ; (ಬ) ವೆಡೆಯನರಿಪುಲುದೊ. ೩-೩ (ಅ,ಬ) ಧೈರ್ಯ್ಯಮಂ. ೪ (ಚ) ಬ. ೫-೫ (ಬ) ಕನಕಪ್ರಭನೆಂಬೊನಮರನಾದಂ; (ಚ) ಕನಕಪ್ರಭನೆಂಬ ದೇವನಾದಂ. ೬-೬ (ಅ) ಪ್ರಭಂಜನಾಖ್ಯ; (ಚ) ತುಷಿತಾಖ್ಯ; (ಪ್ರೊ. ಪು) ರುಷಿತಾಖ್ಯ-೮-೨೧೩. ೭-೭ (ಅ) ಶಾರ್ದೂಲಚರದಿವಾಕರಪ್ರಭದೇವಂ. ೮-೮ (ಅ) ಶ್ರೀಮತಿಯುಮಾಗಿ ಪುಟ್ಟಿದಳ್. ೯-೯ (ಅ,ಬ) ದಿವರೊಳತಿಪ್ರೀತಿಯಾದುದಿ.

ರ್ತ್ತಕನಾದಂದೀಶ್ರೀಮತಿ ದಾನತೀರ್ಥಪ್ರವರ್ತ್ತಕಂ ಶ್ರೇಯಾಂಸನಕ್ಕುಮೀನಿನ್ನ ಮಂತ್ರಿ ಮತಿವರನಂದು ನಿನಗೆ ಭರತೇಶ್ವರನೆಂಬನಾತ್ಮಜನಕ್ಕುಮೀಭವದೀಯ-ಸೇನಾನಾಯಕನಕಂಪನಂ ಬಾಹುಬಲಿಯೆಂಬ ತನಯನಕ್ಕುಮೀಭವತ್ಪುರೋ-ಹಿತನಾನಂದಂ ವೃಷಭಸೇನನೆಂಬೊಂ ತನೂಜನಕ್ಕುಮೀನಿನ್ನ ಶ್ರೇಷ್ಠಿ ಧನ-ಮಿತ್ರನನಂತವೀರ್ಯ್ಯನೆಂಬ ತನೂಭವನಕ್ಕುಮೆಂಬುದುಮತಿಪ್ರೀತಿವಿಕಸಿತ [೧]ವದನ ಸರೋಜನಾ[೧],

ಪಿಂಗಿದುದೀಗಳಿನ್ನ ಬೆಸಗೊಂಡೆಡೆಯೊಂದು ತಮಂ ತ್ವದೀಯವಾ-
ಕ್ಯಂಗಳಿನಿನ್ನುವೊಂದೆನಗೆ ವಿಸ್ಮಯಮಾದಪುದೀತ್ವದಂಘ್ರಿಪ-।
ದ್ಮಂಗಳನೈದೆ ಮಚ್ಚಿ ನೆಲಸಿರ್ದ್ದಪುವೀಪುಲಿ ಪಂದಿ ಕೋಡಗಂ-
ಮುಂಗುರಿಯೆಂಬ ನಾಲ್ಕಱ ಭವಾವಳಿಯುಂ ಬೆಸಸಿಂ ಮುನೀಶ್ವರಾ ||೧೪||

ವ|| ಎಂಬುದುಂ ಗಗನಚಾರಣರಿಂತೆಂದು ಬೆಸಸಿದರ್:—ಈ ಶಾರ್ದ್ದೂಲಂ ಪ್ರಾಗ್ಜನ್ಮದೊಳೀವಿಷಯದ ಹಸ್ತಿನಾಪುರದ ಪರದಂ [೨]ಸಾಗರದತ್ತ[೨]ಂಗಮಾತನ [೩]ಪರದಿತಿ[೩] [೪]ಧನವತಿ[೪]ಗಮುಗ್ರಸೇನನೆಂಬೊಂ ತನೂಜನಪ್ರತ್ಯಾಖ್ಯಾನಕ್ರೋಧ-ದಿಂ ತಿರ್ಯ್ಯಗಾಯುಷ್ಯಮಂ ಗಟ್ಟಿ,

[೫]ಅರಸನ[೫] ಕೋಷ್ಠಾಗಾರದ
ಕರಣಂಗಳ ಕಾಪನೆಯ್ದೆ ಬಂಚಿಸಿ ಕಳ್ದುಂ।
[೬]ಕರೆದುವೊಳಗೊಳಗೆ[೬] ಸುಱಿಯು-
ತ್ತಿರೆ ನೃಪನದನಱಿದು ಪಿಡಿದು ತರವೇೞ್ದಾಗಳ್ ||೧೫||

ಘಾತಿಸಿ ಚಪೇಟಚರಣಾ-
ಘಾತದೊಳೞಿದಿಲ್ಲಿ ಬಂದತಿಕ್ರೋಧನನಿಂ-।
ತೀತೆಱದಿಂ ಪುಲಿಯಾದನ-
ತೀತಭವಾಂತರದೊಳೀವರಾಹನುಮರಸಾ ||೧೬||

ವ|| ಈವಿಷಯದ ವಿಜಯಪುರದೊಳಾನಂದನೃಪತಿಗಂ ವಸಂತಸೇನೆಗಂ

೧-೧ (ಅ) ವದನಾರವಿಂದನಾಗಿ. ೨-೨ (ಚ) ಧನದತ್ತ; (ಪೂ.ಪು.) ಸಾಗರದತ್ತ-ಅ-೨೨೩. ೩-೩ (ಅ,ಬ) ಪರದಿ. ೪-೪ (ಚ) ಧನದತ್ತೆ; (ಪೂ.ಪು.) ಧನವತಿ-ಅ-೨೨೩. ೫-೫ (ಅ,ಬ) ಅರಸರ. ೬-೬ (ಬ) ಕಿರಿದೊಂದು ದಿವಸ.

[೧]ಹರಿಕಾಂತ[೧]ನೆಂಬ ತನಯನಪ್ರತ್ಯಾಖ್ಯಾನಮಾನದೊಳ್ ತಂದೆಗವಿನೀತನಾಗಿ ಪೇೞ್ದುದಂ ಗೆಯ್ಯದೆ,

ಶಿಲೆಯೊಳ್ ತಾಟಿಸಿ ತನ್ನಯ
ತಲೆಯಂ ಜರ್ಜ್ಝರಿತಮಸ್ತಕಂ ಮಡಿದತ್ಯಾ-।
ಕುಲನೀವರಾಹದೇಹಮ-
ನಲಸದೆ ಪೊತ್ತಿರ್ದ್ದುನಮುದಪಂ ಧರಣಿಪತೀ ॥೧೭॥

ವ॥ ಈವಾನರಂ ಪೂರ್ವಜನ್ಮದೊಳ್ ಧಾನ್ಯಪುರದೊಳ್ [೨]ವಣಿಗ್ವರಂ[೨] ಕುಬೇರದತ್ತಂಗಂ ತದ್ವನಿತೆ ವಸುದತ್ತೆಗಂ ನಾಗದತ್ತನೆಂಬೊಂ ಮಗನಪ್ರತ್ಯಾಖ್ಯಾನ ಮಾಯೆಯುಂ ಕೈಕೊಂಡು,

ಬಂಚಿಸಿ ತನ್ನನುಜೆಯ ಧನ-
ಮಂ ಚಪಲಂ ಕೊಂಡು ಪುಸಿದು [೩]ಕಳವಳಿಸಿ[೩] ಖಳಂ ।
ಪಂಚತ್ವಮನೈದಿ ಮರು-
ಜ್ಚಂಚಲಮನನೀಗಳಱ್ತೆ ವಾನರನಾದಂ ॥೧೮॥

ವ॥ ಈನಕುಳಂ ಪೋದ ಭವದೊಳ್ ಸುಪ್ರತಿಷ್ಠಪುರದೊಳಪ್ರತ್ಯಾಖ್ಯಾನಲೋಭಾಭಿಭೂತಂ [೪]ದ್ರವ್ಯಲೋಲುಪಂ ಲೋಲುಪನೆಂಬೊಂ[೪] ಕಲ್ಲುರಿಗನಾಗಿ,

॥ [೫]ಉಜ್ಜ್ವಳಂ[೫] ॥

ಪುರವರೇಶನ ಮಾಡಿದ ಚೈತ್ಯಕ್ಕಿಟ್ಟಿಗೆಗಳ್ ಬರೆ ನೋಡಿ ಕ-
ಲ್ಲುರಿಗನೊಯ್ಯನೆ ಪೂರಿಗೆಗೊಟ್ಟೈದಾಱನೆ ಕೊಂಡವಸಱ್ತಿಯಿಂ-।
ದೊರಸಿ ನೋೞ್ಪುದುಮೊಂದವಱೊಳ್ ಪೊನ್ನಿಟ್ಟಿಗೆಯಾದೊಡೆ ರಾಗದಿಂ
ಪಿರಿದು ಬಿಟ್ಟಿಯವಂದಿರ ಕಯ್ಯಿಂದಿಟ್ಟಿಗೆಗೊಂಡವನೊಟ್ಟಿದಂ ॥೧೯॥

ವ॥ ಒಂದುದಿವಸಮಾತಂ ಕೆಲದೂರ್ಗೆ ಪೋಗುತ್ತಂ ತನ್ನ ಮಗಂಗಿಟ್ಟಿಗೆಗೊಳ್ವ ಬೆಸನಂ [೬]ಪೇೞ್ದೊಡವನೊಂದುಮಂ[೬] ಕೊಳ್ಳದಿರೆ ಮಗುೞ್ದು ಬಂದು,

---

೧–೧ (ಪೂ. ಪು) ಹರಿವಾಹನ–೮–೨೨೮. ೨–೨ (ಅ,ಬ) ವಣಿಗ್ವಂಶಂ. ೩–೩ (ಆ) ಕಳಿಕಳಿದು; (ಬ) ಖಳಖಳಿಸಿ. ೪–೪ (ಬ) ಲೋಲುಪನೆಂಬೊಂ; (ಚ) ದ್ರವ್ಯಲೋಲುಪ್ನೆಂಬೊಂ. ೫–೫ (ಕ) ಮುದ್ರಿಕೆ. ೬–೬ (ಚ) ಪೇೞ್ದು ಪೋದೊಡವನೊಂದುಮಂ.

[೧]ಬಡಿ[೧]ಯೊಳ್ ನಿಜತನಯನ ತಲೆ-
ಯೊಡೆವಿನೆಗಂ ಬಡಿದ ಕಾರಣಂ [೨]ಕೊಂಡುಯ್ದರ್[೨]।
ಪಡೆವುಗಿಡುವಿನೆಗಮೆಂದಾ-
ಕಡುಲೋಭಂ ತನ್ನ ಕಾಲ್ಗಳಂ ಪಿಡಿದುಡಿದಂ ॥೨೦॥

ವ॥ [೩]ತದ್ವೃತ್ತಾಂತಮನಱಿದು[೩] ತತ್ಪುರಾಧೀಶಂ ದಂಡಿಸೆ ಗತಜೀ[೪]ವಿತ[೪]ನಾಗಿ ಬಂದಿಲ್ಲಿ ನಕುಳನಾದೊನಿಂತೀಶಾರ್ದೂಲವರಾಹಗೋಲಾಂಗೂಲನಕುಲಂಗಳ್ ನಾಲ್ಕುಂ ಭವದ್ದಾನಾನುಮೋದದಿಂ ಜಾತಿಸ್ಮರಂಗಳಾಗಿ ಭೋಗಭೂಮಿಗೆ ಬದ್ಧಾಯುಷ್ಯಂಗಳಾದುವಂತು ದಿವ್ಯಮಾನುಷಗೋಚರಮಪ್ಪ ಸುಖಂಗಳಂ ನಿನ್ನೊಡನುಣುತ್ತಂ ಬಂದು ಭರತದೊಳ್ ನೀಂ ಭವಿಷ್ಯತ್ತೀರ್ಥಕರನಾದಂದನುಕ್ರಮದೊಳ್ ನಿನಗನಂತವೀರ್ಯ್ಯಾಚ್ಯುತ[೫]ವೀರರೆಂಬ[೫]ತನಯರಪ್ಪರೆಂದಿಂತು ಚಾರಣಮುನೀಂದ್ರರ್ ಬೆಸಸಿ ಸತ್ಪಥೋನ್ನತಿಯಂ ನನ್ನಿಮಾಡುವಂತೆ ಸತ್ಪಥಾತಿಥಿಗಳಾದರರಸನುಂ ಶ್ರೀಮತಿಯುಮುಂದೆಲ್ಲರುಮವರ ಗುಣಂಗಳನೆ ಮತಿವರಾದಿಗಳೊಳ್ ನುಡಿಯುತ್ತಮಿರ್ದ್ದು ಮಱುದಿವಸಂ ಸಮಸ್ತಸಾಮಗ್ರಿಯಿಂ ಪಯಣದ ಮೇಲೆ ಪಯಣಂಬೋಗಿ ಪುಂಡರೀಕಿಣಿಯನೆಯ್ದಿ,

ವಿಗಳದ್ಬಾಷ್ಪಾಂಬುದೀನಾನನೆಯೆನಿಸಿದ ಲಕ್ಷ್ಮೀಮತೀದೇವಿಯಂ ಮೆ-
ಲ್ಲಗೆ ಸಂತೈಸುತ್ತುಮಾತ್ಮಾನುಜೆಯ ಮನದ ನಿರ್ವ್ವೇಗಮಂ ಪಿಂಗಿಸುತ್ತುಂ।
ಬಗೆಯುತ್ತಂ ಮಂತ್ರಿವರ್ಗ್ಗಂಗಳೊಳತಿನಯಮಂ ಪುಂಡರೀಕಂಗೆ ಸಾಮಾ-
ದಿಗಳಿಂ ನಿಷ್ಕಂಟಕಂ ಮಾಡಿದನಖಿಲಮಹೀಚಕ್ರಮಂ ವಜ್ರಜಂಘಂ ॥೨೧॥

ವ॥ [೬]ಅಂತಾತ್ಮೀಯ[೬]ಭಾಗಿನೇಯನನಾರಾಜ್ಯದೊಳ್ ಪದುಳಂ ಮಾಡಿ ಮಹಾಸಾಮಂತಮಂತ್ರಿಮಂಡಲಕ್ಕಪ್ಪಯಿಸಿ ನಿಜವಿಜಯರಾಜಧಾನಿಗುತ್ಪಲಖೇಟಕ್ಕೆವಂದು,

ದಿವಿಜೇಂದ್ರಾವಾಸಸೌಖ್ಯಕ್ಕತಿಶಯಮೆಸೆವೀಸೌಖ್ಯಮಾದೇವಿಗಂ ರೂ-
ಪವಿಲಾಸಶ್ರೀಯೊಳೀ[೭]ದೇವಿಯೆ[೭] ಮಿಗಿಲಮರಾಕಾರಮಂ ಗೆಲ್ದುದೀಮಾ-।

೧-೧ (ಗ) ಪಡಿ. ೨-೨ (ಚ) ಕೊಂಡುಯ್ವರ್. ೩-೩ (ಚ) ತದ್ವೃತ್ತಾಂತಮೆಲ್ಲಮನಱಿದು. ೪-೪ (ಅ,ಬ) ಪ್ರಾಣ. ೫-೫ (ಬ) ವೀರಸುವೀರರೆಂಬ. ೬-೬ (ಅ II, ಬ) ಅಂತಾತ್ಮ. ೭-೭ (ಅ) ದೇವಿಗೆ.

ನವದೇಹಾಕಾರಮೆಂಬಂತಿರೆ ಭುವನಜನಂ ಶ್ರೀಮತೀವಕ್ತ್ರಚಂದ್ರ-
ಜ್ಞನಿ[೧]ಪೆರ್ಚ್ಚಂ[೧] ಮಾೞ್ಪಿನಂ ಭೋಗಿಸಿದನಖಿಲಭೋಗಂಗಳಂ
ವಜ್ರಜಂಘಂ ॥೨೨॥

ವ॥ ಅಂತನೇಕಸಂವತ್ಸರಂಗಳ್ ಸಲ್ವಿನೆಗಮೊಂದುದಿವಸಂ ರಜನೀಸಮಯದೊಳನರ್ಘ್ಯಮರಕತಮಣಿಶಿಲಾ[೨]ಸಂಘಟ್ಟಿತಮೇದಿನೀಭಾಗದೊಳಮುರಖಚರಕಿನ್ನರಮಿಥುನಸನಾಥಚಿತ್ರಭಿತ್ತಿವಿರಾಜಿತದೊಳತಿಬಹಳಕಾಳಾಗರುಧೂಪಧೂಮಾಮೋದದೊಳತಿವಿಶದಮಣಿಪ್ರದೀಪಿಕೋದ್ದ್ಯೋತದೂರೀಕೃತತಮಸ್ತಮದೊೞನೇಕರತ್ನರಚಿತಪ್ರತಿಪಾದುಕವಿನ್ಯಸ್ತಕಾಂಚನಮಂಚೋಪಶೋಭಿತದೊಳ್ ಪಯಃಪಯೋಧಿಫೇನಸಂಕಾಶದುಕೂಲ[೩]ಪ್ರಚ್ಛದಾಚ್ಛಾದಿತವಿಚಿತ್ರನೇತ್ರೋಭಯೋಪಧಾನ[೪]ಶಯ್ಯಾತಲದೊಳನೇಕವಿಲಾಸಿನೀವಿಲಾಸಾವಾಸ[೪]ಭವನದೊಳಾದಂಪತಿಗಳನ್ಯೋನ್ಯಾಂಗಸ್ಪರ್ಶಸುಖೋನ್ಮೀಲಿತವಿಲೋಚನರಂತಂತೆ ನಿದ್ರಾರಸವಶಗತರಾದರನ್ನೆಗಮಲ್ಲಿ ಮುಚ್ಚಿರ್ದ್ದ ಹರಿನೀಲಗವಾಕ್ಷಜಾಲಕವಾಟಪುಟಂಗಳಂ ತೆಱೆಯಲ್ ಮಱೆದು ಸೂರ್ಯ್ಯಕಾಂತದ ಧೂಪಗುಂಡಿಗೆಯೊಳಳವಱಿಯದೆ ಸೆಜ್ಜೆವಳನಿಕ್ಕಿದ [೫]ಕೇಶಸಂಸ್ಕಾರ[೫]ಕಾಲಾಗರುಧೂಪಂ,

ಮೊದಲೊಳ್ ನೀಳ್ದು ಪೊದಟ್ದು ಪರ್ವಿ [೬]ಪರೆಪಂ[೬]ಕೈಕೊಂಡು ಮುಂದೈಸಿ ಮಾ-
ಣದೆ ತನ್ನಂದದೊಳೇೞ್ಗುಂದದೆ ನಿರುದ್ಧೋಚ್ಛ್ವಾಸಮಪ್ಪನ್ನೆಗಂ।
ಪುದಿದಾದಂಪತಿಯಂ ಪುದುಂಗೊಳಿಸಿ ಲೋಕಾಶ್ಚರ್ಯ್ಯಮಂ ಮಾಡಿ ಕೊಂ-
ದುದು [೭]ಕೃಷ್ಣಾ[೭]ಗರುಧೂಪಧೂಮನಿವಹಂ [೮]ಕೃಷ್ಣೋರಗಂ[೮]
ಕೊಲ್ವವೋಲ್ ॥೨೩॥

ಬಿಡದೆ ಪೊಗೆ ಸುತ್ತೆ ತೋಳಂ
ಸಡಲಿಸದಾ ಪ್ರಾಣವಲ್ಲಭರ್ ಪ್ರಾಣಮನಂ-।
ದೊಡೆಗಳೆದರೋಪರೋಪರೊ-
ಳೊಡೆಸಾಯಲ್ ಪಡೆದರಿನ್ನವೇಂ ಸೈಪೊಳವೇ ॥೨೪॥

ಭೋಗಾಂಗಮಾಗಿಯುಂ ಕೃ-
ಷ್ಣಾಗರುಧೂಪಂ ಮುಸುಂಕಿ [೯]ಕೊಂದಿಕ್ಕಿದುದಾ[೯] ॥

---

೧-೧ (ಚ) ಚೆಲ್ವಂ. ೨-೨ (ಚ) ಸಂಪಾದಿತ. ೩ (ಚ) ಲೋಪ. ೪-೪ (ಅ,ಬ) ಶಯ್ಯಾತಲವಿಲಸಿತದೊಳನೇಕವಿಲಾಸಿನೀವಾಸ. ೫-೫ (ಕ) ಶೇಷಸಂಸ್ಕಾರ. ೬-೬ (ಬ,ಖ) ಪರಪಂ; (ಛ) ಪದೆಪಂ. ೭-೭ (ಅ) ಕಾಲಾ. ೮-೮ (ಅ) ಕಾಲೋರಗಂ. ೯-೯ (ಖ) ಕೊಂದುದು ನೋಡಾ.

ಭೋಗಿಗಳನಿಂತು ಸಂಸೃತಿ-
ಭೋಗಂಗಳ್ ಭೋಗಿಭೋಗದಿಂ ವಿಷಮಂಗಳ್ ||೨೫||

ಅನಿತು ಸುಖದನಿತು ಭೋಗದ
ಮನುಜಯುಗಂ ನೋಡೆ ನೋಡೆ ತತ್‌ಕ್ಷಣದೊಳ್ ತಾ-|
ನಿನಿತೊಂದು ದೆಸೆಯನೆಯ್ದಿದು-
ದೆನೆ ಜಡರೇನೆಂದು ನಂಬುವರ್ ಸಂಸೃತಿಯಂ ||೨೬||

ಬೆಳಗುವ ಸೊಡರ್ಗ್ಗಿಡಿ ಕಿಡೆ ಮನೆ-
ಯೊಳಗೆ ತಮಂ ಪರ್ವ್ವುವಂತೆ ಜೀವಂ ತನುವಿಂ |
ತೊಳರಲೊಡಂ ವಿಚ್ಛಾಯತೆ-
ಗೊಳಗಾದುವು ತೊಳಗುವವರ ಸೌಂದರತನುಗಳ್ ||೨೭||

ವ|| ಆಗಳಾದಿತ್ಯೋದಯ[೧]ದೊಳ್[೧] ವರಂ ನೋಡಿ ಹಾಹಾಕ್ರಂದನಧ್ವನಿಗಳಂತಃಪುರಕ್ಕಂ ಪುರಕ್ಕಂ ನೆಗೞೆ ಮತಿವರಾದಿಗಳ್ [೨]ತದ್ದಂಪತಿಗಳ್ಗೆ[೨] ಶರೀರಶೋಭೆಯಂ ಮಾಡಿ ಚಂದನಹರಿಚಂದನೇಂಧನಂಗಳೊಳ್ ದಹನಕ್ರಿಯೆಯಂ ನಿರ್ವ್ವರ್ತ್ತಿಸಿ ತದ್ಧೂಪಧೂಮದೊಳಲ್ಲಿಯೆ ವಿಗತಜೀವಿತಂಗಳಾದ ತಿರ್ಯ್ಯಗ್ಜಾತಿಗಳುಮಂ ಸಂಸ್ಕರಿಸಿ, ಬೞಿಯಂ ಶ್ರೀಮತೀತನಯಂ ವಜ್ರಬಾಹು[೩]ವೆಂಬನಂ ಧರಾಭಾರದೊಳ್ ನಿಱಿಸಿ[೩] ತಪೋಭರದೊಳ್ ನಾಲ್ವರುಂ ನಿಂದು [೪]ಜೀವಿತವ್ಯಪಾಯದೊಳ್[೪] ಗ್ರೈವೇಯಕದೊಳಹಮಿಂದ್ರಪದವಿಯಂ ತಾಳ್ದಿದರಂತು ಪಂಚತ್ವಮನೈದಿದ ವಜ್ರಜಂಘಂಗಂ ಶ್ರೀಮತಿಗಮಾ[೫]ತಿರಿಚಂಗಳ್ಗ-ಮು[೫]ತ್ತಮಪಾತ್ರದಾನಾನುಮೋದದ [೬]ಪುಣ್ಯಫಲ[೬]ದಿಂದಮೀಜಂಬೂದ್ವೀಪದ ಮಂದರಮಹೀಧರದುತ್ತರದಿಗ್ಭಾಗದೊಳಿರ್ದ್ದುತ್ತರಕುರುವೆಂಬುತ್ತಮಭೋಗಭೂಮಿಯೆ ಜನ್ಮಭೂಮಿಯಾದುದಲ್ಲಿ,

ದರ್ಪ್ಪಣಸಮತಳಮೆನೆ ಸಂ-
ಸರ್ಪ್ಪದ್ರತ್ನಾಂಶುಜಾಲಜಟಿಲಿತಮೆನೆ ಕಂ-|
ದರ್ಪ್ಪಸುಖನಿಲಯಮೆನೆ ಸಂ-
ತರ್ಪ್ಪಣಕರಮಖಿಲಭೋಗಭೂಮಿವಿಭಾಗಂ ||೨೮||

ವ|| ಮತ್ತಮಲ್ಲಿ,

---

೧-೧ (ಚ) ದಿನ. ೨-೨ (ಅ) ತದ್ದಂಪತಿಗಳ; (ಬ) ತದ್ದಂಪತಿಗೆ. ೩-೩ (ಚ) ವೆಂಬಂಗೆ ಧರಾಭಾರಮಂ ಕೊಟ್ಟು ರಾಜ್ಯದೊಳ್ ನಿಱಿಸಿ. ೪-೪ (ಅ) ಜೀವಿತಾಂತ್ಯದೊಳ. ೫-೫ (ಅ) ತಿರಿಯಂಚಂಗಳ್ಗಮು. ೬-೬ (ಅ.ಬ)

ಹಿಮವಾತಾತಪಬಾಧೆಯೆಂದು ಮಱೆಯೆಂದಿಲ್ಲಾನೆಲಂ ಪಂಚರ-
ತ್ನಮಯಂ ನಾಲ್ಕೆರಲಲ್ಲದಾಗದೆಳವುಲ್ ನೀಲೋತ್ಪಲಾಬ್ಜಾಕರಾ-|
ಳಿ ಮಸಂಗೊಳ್ವುದು ಮೆಲ್ಲನಲ್ಲಿ ಸುೞಿಗುಂ ಮಂದಾನಿಲಂ ನೀರ್ ಸುಧಾ-
ಸಮಮುದ್ಯಾನವನಂ ಮದೋತ್ಕಪರಪುಷ್ಟೋದ್ದಾಮಕೋಲಾಹಲಂ ||೨೯||

ಪಗಲಿರುಳೆಂಬ ಭೇದಮುಮಯಂ ಬಡವರ್ ಕಡುಬಲ್ಲಿದರ್ ವಿಷಾ-
ಹಿಗಣಮನೇಕರೌದ್ರಮೃಗಜಾತಿಗಳಾಳರಸೆಂಬುದೊಂದು ದಂ-|
ದುಗಮಳಿಪಾಯಿಲಂ ಮಱುಕಮಾಮಯಮುಪ್ಪಪಮೃತ್ಯುವೆಂಬಿವ-
ಲ್ಲಿಗೆ ಪೊಱಗೆಂದೊಡಿಂ ಸುಖಮನೇವೊಗೞ್ದಪ್ಪುದೊ ಭೋಗಭೂಮಿಯಾ ||೩೦||

ವ|| ಮತ್ತಮಲ್ಲಿ,

ಮದ್ಯವಿಭೂಷಣವಸ್ತ್ರಾ-
ತೋದ್ಯಸ್ರಗ್ಭವನಭಾಜನಾಶನದೀಪ-|
ಪ್ರೋದ್ಯಜ್ಜ್ಯೋತಿಸ್ಥಿತಿಯೊಳ-
ಮುದ್ಯೋತಿಸೆ ತುದಿಯೊಳಂಗಮಿಂತು ದಶಾಂಗಂ ||೩೧||

ವ|| ಎನಿಸಿದ ನಾನಾರತ್ನಮಯಂಗಳುಮಪ್ರತಿಹತಪ್ರಭಾದ್ಯೋತಿತ-
ದಿಙ್ಮುಖಂಗಳುಮಪ್ಪ ಕಲ್ಪವೃಕ್ಷಂಗಳ್,

ಕುಡಿದೊಡೆ ಸೊರ್ಕಿಸದವು ನಾಣ್
ಗಿಡಿಸದವು ಮನಕ್ಕಲಂಪನೀವುವು ರತಮಂ |
ನಡೆಯಿಪುವೆನಿಸುವ ಮಧುಗಳ-
ನೆಡೆಯುಡುಗದೆ ಕುಡುಗುಮುಚಿತಮದ್ಯಾಂಗಕುಜಂ ||೩೨||

ಮಕುಟಂ ಕೇಯೂರಂ ಕ-
ರ್ಣ್ಣಕುಂಡಲಂ ಕೊಪ್ಪು ಸರಿಗೆ ದುಸರಂ ಮಣಿಮು-|
ದ್ರಿಕೆ ತಿಸರಮೆಂಬ ಭೂಷಾ-
[೧]ನಿಕರಮನಾಭೂಷ[೧]ಣಾಂಗತರು ಕುಡುತಿರ್ಕ್ಕುಂ ||೩೩||

ಪಟೆ ಚಿತ್ರಾವಳಿ [೨]ಭೋಗಂ[೨]
ಪಟೆಯಂ ದೇವಾಂಗಮೆಂಬ ವಸನಂಗಳನೇಂ |

೧-೧ (ಅ,ಬ) ನಿಕಾಯಮುಮಂ ಭೂಷ. ೨-೨ (ಚ) ಜೋಗಂ.

ಗಱಯಿಸುವವೊ ಮಡಿವಳ್ಳನ
ಪಱಯತನನೆ ಪೋಲ್ತು ವಿಶದವಸನಾಂಗಕುಜಂ ||೩೪||

ಅತಿಮೃದುರವದಾಯಿಗಳಂ
ತತಘನಸುಷಿರಾವನದ್ಧವಾದ್ಯಂಗಳನೇಂ |
ಸತತಮುಱದೋಲಗಿಪುದೊ ದಂ-
ಪತಿಗೆಂದುಮವಾರ್ಯವೀರ್ಯತೂರ್ಯಕ್ಷ್ಮಾಜಂ ||೩೫||

ಮುಗಮುಗಿಪ ಜಾದಿ ಪೊಂಗೇ-
ದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಂ |
[1]ಬಗೆಯುಱದು ನೀಡುಗುಂ[1] ಮಾ-
ಲೆಗಾಱನಂ ಪೋಲ್ತುದಗ್ರಮಾಲ್ಯಮಹೀಜಂ ||೩೬||

ಹಾಟಕಭಿತ್ತಿಸಮನ್ವಿತ-
ನಾಟಕಶಾಲೆಗಳ ವಿವಿಧಸೌಧಂಗಳ ಕೊಂ- |
ಡಾಟಮನೆ ಮೆಱೆದು ಮೆಚ್ಚಂ
ಪಾಟಿಸುವುವು ಮಿಥುನತತಿಗೆ ಗೃಹಮಹಿಜಾತಂ ||೩೭||

ಅನತಿಶಯಸೌಖ್ಯಭಾಜನ-
ಜನಕ್ಕೆ ಭಾಜನಮಿವಪ್ಪುವೆಂಬಂತೆ ಕನತ್ |
ಕನಕಮಣಿಖಚಿತಬಹುಭಾ-
ಜನಂಗಳಂ ಭಾಜನಾಂಗತರು ಕುಡುತಿರ್ಕುಂ ||೩೮||

ಅನುದಿನ [2]ಸವಿಯೊಳಗೀಸವಿ[2]
[3]ಸಮನೆನೆ[3] ತೇಜೋಬಲಾಯುರಾರೋಗ್ಯಸಮೇ- |
ತಮನಮೃತಾನ್ನಮ[4]ನೊಲ್ದೀ[4]-
ಗುಮಾಗಳುಂ ಭೋಜನಾಂಗಕಲ್ಪಾವನಿಜಂ ||೩೯||

ಆಪೊತ್ತುಂ ಮಣಿದೀಪಕ-
ಲಾಪೋದ್ಯಜ್ಜ್ಯೋತಿಗಳ್ ದಿಶಾಮಂಡಲಮಂ |

೧–೧ (ಚ) ಬಗೆಯುಱದೋಲಗಿಪುದು. ೨–೨ (ಅ,ಬ) ಸವಿಯೊಳ್ಸವಿ. ೩–೩ (ಅ,ಬ) ಸಮನೆನೆಯುಂ. ೪–೪ (ಅ) ನೊಸೆದೀ; (ಬ) ನೊಲಿದೀ.

ವ್ಯಾಪಿಸುತಿರೆ ಸೊಗಯಿಸುವುವು
ದೀಪಾಂಗಜ್ಯೋತಿರಂಗಕಲ್ಪಕುಜಂಗಳ್ ॥೪೦॥

ನೀಡಿದ ಕಯ್ಗೆ ನೀಡಿರದೆ ಬೇಡಿದ [೧]ಭೋಗಮನೇನ[೧]ನಾದೊಡಂ
ನೀಡುವ ಕಲ್ಪವೃಕ್ಷನಿಕರಂಗಳೆ ಭೋಗದಲಂಪನಾವಗಂ ।
ಮಾಡೆ ಮನಂ ವಿನೋದರಸದೊಳ್ ತಡ[೨]ಮಾಡೆ ಮರಳ್ದು[೨] ಮನ್ಮಥ-
ಕ್ರೀಡೆಗೆ ಸೋಡೆ ನಾಡೆ ಗುಱಿಯಪ್ಪುವು ದಂಪತಿ ಭೋಗಭೂಮಿಯೊಳ್ ॥೪೧॥

ವ॥ ಮತ್ತಮಲ್ಲಿ ಕುಶೀಲಕುತ್ಸಿತಾಚಾರಕುವೇಷಕುದೃಷ್ಟಿಗಳುಂ ಗೃಹೀತ-ವ್ರತಪರಿಚ್ಯುತರುಂ, ಮಾಯಾಚಾರಪರಿಣತರುಮಪ್ಪ ಪಾತ್ರದಾನಿಗಳುಂ, ತಿರ್ಯಗ್ಜಾತಿತ್ವಮಂ ಪೊರ್ದಿದ ಮಿಥುನಂಗಳಾಗಿ ಪುಟ್ಟಿ ಪರಸ್ಪರವೈರಂಗಳಿಲ್ಲದೆ ಅನಾಮಯಂಗಳುಮಪಗತಬಾಧಂಗಳುಮಾಗಿ ರಮಿಯಿಸುವುವು; ಮತ್ತಮುತ್ತ-ಮಪಾತ್ರದಾನ[೩]ದಾನಾನುಮೋದಫಲ[೩]ದಿಂದಲ್ಲಿ ಪುಟ್ಟುವ ಜೀವಂಗಳ್ ನಾರೀ-ಪುರುಷಸಂಯೋಗನಿಯೋಜಿತಶುಕ್ಲಾರ್ತವಂಗಳೊಳ್ [೪]ಜೀವಯುಗಲಂಗಳಾಗಿ ನೆಲಸಿ[೪] [೫]ಕಲಲಘನಪೇಶ್ಯಬ್ಬುದಾದಿ[೫]ಪರಿಣತಿಯಂ ನವಮಾಸಾವಸಾನಸಮ-ಯದೊಳ್ ಸ್ತ್ರೀಪುರುಷಯುಗಲಮೆಯಾಗಿ ಪುಟ್ಟುಗುಂ; ಪುಟ್ಟಿದಾಗಳೆ ಮಾತಾ-ಪಿತೃಯುಗಲಂಗಳ್ ಸೀಂತುಮಾಗುಳಿಸಿಯುಂ ಪರಾಸುಗಳಾಗೆ ನಿಜಶರೀರಂಗಳ್ ಮಂಜು ಕರಗುವಂತೆ ಕರಗೆ ಸಹಜದೊಳಪಾಪಿಗಳು[೬]ಮಾರ್ಜವಂಗಳು[೬]ಮತಿ-ಮೃದುಗಳುಮಪ್ಪುದಱಿಂದಂ ನಾಕಲೋಕಪ್ರಾಪ್ತಂಗಳಕ್ಕುಂ; [೭]ಅವರ್ಗೆ[೭] ಪುಟ್ಟಿದ ಯುಗಲಂಗಳೇೞುದಿವಸಮುಂ ಪುರಾತನಪುಣ್ಯಕರ್ಮ್ಮಕಾಮಧೇನುಸ್ತ-ನೋಪಮಾನನಿಜಾಂಗುಲಿಜನಿತರಸಾಯನಾಸ್ವಾದನದೊಳಮುತ್ತಾನಶಯ್ಯೆಯೊಳಂ ಕಳಿಸಿ, [೮]ಪೆಱವೇೞು[೮]ದಿವಸದೊಳ್ ತೆವಳ್ದುಂ, ಪೆಱವೇೞುದಿವಸದೊಳ್ ತಳರ್ ನಡೆನಡೆದುಂ, ಪೆಱವೇೞುದಿವಸದೊಳ್ ಪದುಳಂ ನಡೆದುಂ, ಪೆಱವೇೞುದಿವಸದೊಳ್ [೯]ಕಲಾಕಲಾಪ[೯]ಪ್ರವೀಣಂಗಳಾಗಿಯುಂ, ಪೆಱವೇೞುದಿವಸದೊಳ್ ವಿಜ್ಞಾನವಿದಂಗಳಾಗಿಯುಂ, [೧೦]ಪೆಱವೇೞು[೧೦]ದಿವಸದೊಳ್ ಸಂಪೂರ್ಣ್ಣನವ-ಯೌವನಂಗಳಾಗಿ ಶುಭಲಕ್ಷಣಲಕ್ಷಿತ[೧೧]ಶರೀರಂಗಳಾಗಿಯುಮಂತು[೧೧] ನಾಲ್ವ-

---

೧-೧ (ಬ) ವಸ್ತುವನೇನ. ೨-೨ (ಬ) ಮಾಡದೆ ಮರಳ್ದು; (ಚ) ಮಾಡೆ ಮುಗಱ್ದು. ೩-೩ (ಅ,ಬ) ದಾನಾನುಮೋದದಫಲ. ೪-೪ (ಅ.ಬ) ಜೀವಯುಗಳಮೆ ನೆಲಸಿ, ೫-೫ (ಬ) ಕಲಲಘನಫೇನಕ್ಕ್ಯಾವುರ್ವ್ವದಾದಿ; (ಚ) ಕಲಲಘನಫೇನಬುದ್ಬುದಾದಿ. ೬-೬ (ಅ,ಬ) ಮಾರ್ಜ್ಜವರುಂ. ೭-೭ (ಚ) ಅವರ್ಕೆ. ೮-೮ (ಚ) ಪೆಱಗೇೞು. ೯-೯ (ಅ) ಸಕಲಕಲಾ. ೧೦-೧೦ (ಅ,ಬ) ಮತ್ತಮೇೞು. ೧೧-೧೧ (ಅ,ಬ) ಶರೀರಂಗಳಂತು.

ತ್ತೊಂಬತ್ತು ದಿವಸದೊಳ್ ಸಮಚತುರಸ್ರಸಂಸ್ಥಾನ[೧]ಸಂಹನನಂ[೧]ಗಳಱುಸಾಸಿರಬಿಲ್ ನಿಡಿಯ[೨]ರಾಗಿ ದಿನತ್ರಯದೊಳ್ ಬದರೀಫಲಮಾತ್ರಾಹಾರಿಗಳುಮಾರೋಗ್ಯ[೩]ಶರೀರರುಂ[೩] ಸೌಂದರಾ[೪]ಕಾರರುಂ[೪] ತ್ರಿಪಲ್ಯೋಪಮಜೀವಿಗಳುಮಾಗಿ,

ತೊಲಗದ ಜವ್ವನಂ ತವದ ಮೆಚ್ಚು ಮರಲ್ಚುವ ನೋಟಮುಟ್ಟಿಯಂ
ಸಲಿಸುವ ಭೋಗಮೊಲ್ದಗಲದೋಪರ ಕೂಟಮನಂಗರಾಗದೊಳ್|
ನಲಿವ ವಿನೋದಮಾದಮೆರ್ದೆಯೊಳ್ ತಡಮಾಡೆ ಸುಖಂಗಳೊಳ್ ಪಳಂ–
ಚಲೆವುದು ನಾಕಲೋಕಮುಮನೇನಿರದೀವುದೊ ಭೋಗಭೂತಲಂ ||೪೨||

ವ|| ಅಂತನೇಕಭೋಗನಿವಾಸಮೆನಿಸುವ ಭೋಗಭೂಮಿಯೊಳ್,

ಅಗರುವ [೫]ಧೂಪ[೫]ಧೂಮದೊಳೆ ಸೊರ್ಕ್ಕಿದ ಸೊರ್ಕ್ಕುಗಳಾಗಳಲ್ಲಿ ತೊ-
ಟ್ಟಗೆ [೬]ತಿಳಿದಂತೆ[೬] ತನ್ಮನುಜದಂಪತಿ ದಂಪತಿಯಾಗೆ ತೋಳ[೭] ತ-|
ಳ್ಕಗಲದ[೭]ಲಂಪಿನಿಂಪು ತವದಟ್ಟುಱುಕ್ಕಿ ನಿಮಿರ್ಕ್ಕೆಗುಂದದಾ-
ವಗಮತಿಸೌಖ್ಯಮಂ ಪಡೆವುದೀದೊರೆಯುನ್ನತಿ ಪಾತ್ರದಾನದಾ ||೪೩||

ದಾನಾನುಮೋದದಿಂದಂ–
ತಾನಾಲ್ಕುಂ ಮೃಗಮುಮಲ್ಲಿ ಪುಟ್ಟಿದುವೆನೆ ಪೇ-|
ೞೀನಂ ಸುಖಮಂ ಮಾಡದೊ
ದಾನದ ದಾನಾನುಮೋದದನುಪಮಪುಣ್ಯಂ ||೪೪||

ವ|| ಒಂದು ದಿವಸಮಾವಜ್ರಜಂಘಾರ್ಯ್ಯನಾತ್ಮೀಯಪ್ರಾಣೇಶ್ವರಿವೆರಸು,

ತುಱುಗಿದುದೊಂದು ಕೊಂಬು ತಳಿರಿಂ [೮]ಮುಗುಳಿಂ[೮] ಪೆಱತೊಂದುಕೊಂಬು ಸು-
ತ್ತಿಱಿದುದು ತಳ್ತ ಬಲ್ಮಿಡಿಯ ಕಾಯ್ಗಳೆ ಗೊಂಚಲಿನೊಂದುಕೊಂಬು ಪ್ರೊ-|
ತ್ತೆಱಗಿದುದೊಂದು ಮಾನುರದೊಳೊಂದೆಳಗೊಂಬಿದು ನೋಡ [೯]ಕೂಡೆ[೯] ಪ-
ಕ್ತೆಱಗಿದುದೇನಿದಂಗಜ[೧೦]ಮಹೀಭುಜನಿರ್ಕ್ಕೆಯೊ[೧೦] ಚಿತ್ರಶಾಲೆಯೋ ||೪೫||

ವ|| ಎಂದು ಮತ್ತಮನೇಕಕುಸುಮಕಿಸಲಯಫಲಪರಿಣತಫಲಾವನಮ್ರಾಮ್ರಕಮ್ರತರುನಿರಂತರಿತವನ[೧೧]ಲಕ್ಷ್ಮಿಯನೊಱಲ್ದು[೧೧] ನೋಡುತ್ತಿರ್ಪನ್ನೆಗಂ ಗಗನತಲಜಲಧಿಯೊಳ್ ಬಹಿತ್ರದಂತೆ ಪರಿವ ಸೂರ್ಯ್ಯಪ್ರಭನೆಂಬ ದೇವನ ವಿಮಾನಮಂ ನೋಡಿ,

---

೧–೧ (ಚ) ಸಂವಾಹನಂ. ೨ (ಚ) ವಾ. ೩–೩ (ಚ) ಶರೀರಂಗಳುಂ. ೪–೪ (ಚ) ಕಾರಂಗಳುಂ. ೫–೫ (ಬ) ಸೊಕರ್ು. ೬–೬ (ಅ,ಬ) ತಿಳಿವಂತೆ. ೭–೭ (ಚ) ತಳ್ತಗಲದ. ೮–೮ (ಅ,ಬ) ನನೆಯಿಂ. ೯–೯ (ಚ) ನೋಡ. ೧೦–೧೦ (ಅ,ಬ) ಮಹೀಭುಜನಿಕ್ಕೆಯ. ೧೧–೧೧ (ಅ) ಲಕ್ಷ್ಮಿಯಂ ತೊಳಲ್ದು.

ಪ್ರೋದ ಭವಂಗಳಂ ನೆನೆವಿನಂ ಗಗನಾಂತರದಲ್ಲಿ ಸೂರ್ಯ್ಯಯು-
ಗ್ಮ್ಯೋದಯಮೆಂದುಮಿಲ್ಲದುದಿದಾದಪುದೆಂಬಿನೆಗಂ ವಿಶಾಲಪು-|
ಣ್ಯೋದಯಮುಂದು ದಂಪತಿಗೆ ಸಾರ್ತ್ತರೆ ಸಾರ್ತ್ತರೆವಂದು ದಾರರಾ-
ಗೋದಯಮಂ ನಿಮಿರ್ಚ್ಚಿಸುದು ಕಣ್ಗೆ ವಿಯತ್ತಳಚಾರಣೋದಯಂ ||೪೬||

ವ|| ಅಂತವತರಿಸಿದ ಚಾರಣದ್ವಂದ್ವಕ್ಕಾದ್ವಂದ್ವಮಿದಿರ್ವ್ವಂದು ಭಕ್ತಿ ಭರಾನತನಿಪತತ್ಕರ್ಣ್ಣಪೂರಪಲ್ಲವಂ ತದೀಯಪಾದಪಲ್ಲವಂಗಳನಾನಂದಾಶ್ರುಮಿಶ್ರಿತಜಲಂಗಳೊಳ್ ತೊಳೆದು ನಿಜೋತ್ತರೀಯಪಲ್ಲವಂಗಳೊಳ್ ೧ತೊಡೆದು ಸಮುತ್ತುಂ೧ಗಮಣಿಮಯಾಸನದೊಳ್ ಕುಳ್ಳಿರಿಸಿ,

ಮುನಿವೃಂದಾರಕವಂದ್ಯ ನಿಮ್ಮ ಚರಣಾಂಭೋಜಂಗಳಂ ಕಂಡು ಕ-
ಣ್ಬನಿಗಳ್ ಮಾಣ್ದಪುವಿಲ್ಲ ಕಾರಣಮಿದೇಂ ಚಿತ್ತಕ್ಕತಿಪ್ರೀತಿ ತೊ-|
ಟ್ಟನೆ ಕೈಗಣ್ಮುವುದೇಕೆ ಪೂರ್ವ್ವಭವದೊಳ್ ಬಂಧುತ್ವಮುಂಟಕ್ಕುಮಿಂ-
ತಿನಿತೊಂದಲ್ಲದೊಡಾಗಲಾಯ್ತೆನಗಿದಂ ಕೇಳ್ವೊಂದು ಕೌತೂಹಲಂ ||೪೭||

ವ|| ಎಂಬುದುಮವರೊ೨ಳಗ್ರಮುನಿ೨ ಮುಗುಳ್ನಗೆ ನಕ್ಕು ಮಹಾಬಲವಿಯತ್ತಳಚರನಾದ ಭವದೊಳಾಂ ನಿನಗೆ ಸಚಿವನೆಂ ೩ಸ್ವಯಂಬುದ್ಧನೆಂಬೆನಾಗಿ೩,

ಪಡೆದು ಸಮಾಧಿಯಂ ನಿನಗೆ ನಿನ್ನ ವಿಯೋಗದ ದುಃಖದೊಳ್ ತಪ-
ಕ್ಕೊಡರಿಸಿ ಘೋರವೀರತಪದೊಳ್ ತನುವಂ ಬಡಮಾಡಿ ನೋಂಪಿಯೊಳ್|
ಮುಡಿಪಿ ನಿರಾಕುಲಂ ಮೊದಲ ಸಗ್ಗದೊಳಾಂ ಮಣಿಚೂಲನಾಮಮಂ
ಪಡೆದಮರೇಂದ್ರಲೋಕಸುಖಸಾರಸಮುಚ್ಚಯದಂತನೆಯ್ದಿದೆಂ ||೪೮||

ವ|| ೪ಅಂತಲ್ಲಿ೪ ತಳರ್ದು ಜಂಬೂದ್ವೀಪದ ಪೂರ್ವ್ವವಿದೇಹದ ಪುಷ್ಕಲಾವತೀವಿಷಯದ ಪುಂಡರೀಕಿಣಿಯನಾಳ್ವ ಗುಣಪ್ರಿಯಂ ಪ್ರಿಯಸೇನಮಹೀಭುಜಂಗಂ ತತ್ಸೌಂದರಿ ಸೌಂದರಿಗಂ,

ಪ್ರೀತಿಂಕರನೆಂಬೊಂ ತನು-
ಜಾತನೆನಾಂ ಪ್ರೀತಿದೇವನೆನ್ನಿಂ ಕಿಱಿಯಂ |

ನೀತಪದಿಂದವಧಿವೆ೫ರಸು ಚಾರಣಗುಣಮಂ ||೪೯||

೧–೧ (ಅ) ತೊಡೆದತ್ಯುತ್ತುಂಗ; (ಬ) ತೊಡೆದುತ್ತುಂಗ. ೨–೨ (ಅ) ಳಗ್ರಜಮುನಿ; (ಬ) ಳಗ್ರಜಮುನಿಗಳ್. ೩–೩ (ಅ,ಬ) ಸ್ವಯಂಬುದ್ಧನೆನಾಗಿ. ೪–೪ (ಚ) ಅಲ್ಲಿಂ. ೫ (ಚ) ಬೆ.

ಪಡೆದವಧಿಬೋಧದಿಂದೀ-
ಯೆಡೆಯೊಳ್ ನೀಂ ಬಂದು ಪುಟ್ಟಿದುದನಱಿದಱಿವಂ
ಕುಡಲೆಂದು ಬಂದೆವಿದು ನಿನ-
ಗೆಡೆಯುಡುಗದೆ ಕುಡುಗುಮುಚಿತಮುಕ್ತಿಶ್ರೀಯುಂ ।।೫೦।।

ನಿನಗೆ ಜಯಪರ್ಮ್ಮನಾದಂ-
ದಿನ ಭವದಿಂದಿತ್ತ ಭೋಗಕಾಂಕ್ಷೆಯೆ ತಿಣ್ಣಂ।
ಮನದೊಳ್ ಸಮ್ಯಕ್ತ್ವದ ದೆಸೆ-
ಯಿನಿತಿಲ್ಲ ದಲಮ್ಮ ಕೈಕೊಳಲ್ಕಿದು ಕಾಲಂ ।।೫೧।।

[1]ಘನಮಿಥ್ಯಾತ್ವದಪಾನಳ-
ಪಿನದ್ಧಜೀವಕ್ಕೆ ದೃಷ್ಟಿಮೋಹಪ್ರವಿನಾ-।
ಶನಮಿಲ್ಲದಂದು[1]ಪುಟ್ಟದು
ಮನದೊಳ್ ಸ್ವರ್ಮ್ಮೋಕ್ಷ [2]ಸಾಧನಂ[2] ಸಮ್ಯಕ್ತ್ವಂ ।।೫೨।।

ದೊರೆಕೊಳೆ ಕಾಲಲಬ್ಧಿ ಬಗೆದಂತಿರೆ ಕೂಡೆ ಗುರೂಪದೇಶಮಾ-
ವರಿಸೆ ಜಿನೇಂದ್ರಭಕ್ತಿ ಪೂಜೆಪೊಣ್ಮೆ ದಯಾರಸಮಿಂತು ನಾಡೆಯುಂ।
ಪರಿಕರದಿಂ ಮನಕ್ಕೆಱಿವು ಸಾರೆ ಭವಾಬ್ಧಿತಟಂ ಸಮೀಪಮಾ-
ಗಿರೆ ದೊರೆಕೊಂಡ ದೃಷ್ಟಿವಿಭವಂ ಕಳೆಗುಂ ಖಲಕರ್ಮ್ಮಬಂಧಮಂ ।।೫೩।।

ಸಮವಾಯಮುಪ್ಪುದಲ್ತೆಂ-
ದು ಮನಂ [3]ಬಸಮಾಡಿ[3] ದೋಷವಿರಹಿತನಾಪ್ತಂ।
ಕ್ರಮದಾಪ್ತನೆ ಪೇೞ್ದುದದಾ-
ಗಮಮಾಗಮದರ್ಥಮಾವುದದುವೆ ಪದಾರ್ಥಂ ।।೫೪।।

ಪರಮೋಪಶಮಂ ಧರ್ಮ್ಮಾ-
ನುರಾಗಮನುಕಂಪೆ ನೆಱೆದ ನಂಬುಗೆಯೆಂಬೀ-।
ಪರಮಜಿನಗದಿತಗುಣಪರಿ-
ಕರದೊಳ್ ಕೂಡಿದುದೆ ನಿರುಪಮಂ ಸಮ್ಯಕ್ತ್ವಂ ।।೫೫।।

---

೧–೧ (ಖ) ಘನಮಿಥ್ಯಾತ್ವಾಶುಭಭಾ-। ವನಂಪಜೀವಕ್ಕೆ ದೃಷ್ಟಿಮೋಹಪ್ರವಿಕಾ-। ಸನಮಿಲ್ಲದಂದು. ೨–೨ (ಅ) ಕಾರಣಂ. ೩–೩ (ಅ II) ಬಿಡಬೇಡ.

ಜೀವಾದಿನವಪದಾರ್ಥದೊ-
ಳಾವಗಮರ್ಥಿಯನೆ ಮಾಡು ಮೂಢತ್ರಯದೊಳ್ |
ಭಾವಮನೆ ಬಿಸುಡು ಬೆಳಗುಗು-
ಮೀವಿಧದಿಂ ನೆಗಟಿ ನಿನ್ನ ದರ್ಶನರತ್ನಂ ||೫೬||

ಜಿನಮತಪದಾರ್ಥಶಂಕಾ-
ಪನಯನಮುಂ ಭೋಗಕಾಂಕ್ಷೆಯೊಳ್ ವಿಮುಖತೆಯುಂ |
ಮುನಿಜನತನುಮಳವಿಚಿಕಿ-
ತ್ಸನವರ್ಜನಮುಂ ತ್ರಿಮೂಢತಾನಿರಸನಮುಂ ||೫೭||

ಉಪಗೂಹನಮುಂ ಸದ್ಧ-
ರ್ಮ್ಮಪಥಚ್ಯುತಭವ್ಯಸಂಹತಿಸ್ಥಾಪನಮುಂ|
ವಿಪುಲಗುಣವತ್ಸಲತ್ವಮು-
ಮುಪಗತಮಲಜೈನಶಾಸನೋದ್ಭಾಸನಮುಂ ||೫೮||

ವ|| ಎಂದು ಪೇೞ್ದೀಯೆಂಟುಗುಣಂಗಳುಂ ಸಮ್ಯಗ್ದರ್ಶನಾವಯವಂಗಳ್,

ಇವಱಿಂ ಸಮ್ಯಗ್ದರ್ಶನ-
ಮವಶ್ಯಮುಜ್ಜ್ವಲಿಕುಮದುವೆ ಸಮ್ಯಗ್ಜ್ಞಾನ-|
ಕ್ಕವಕಾಶಮಕ್ಕುಮಂತದು
ಕವಲ್ತು ಸಮ್ಯಕ್ಚರಿತ್ರಮುಂ ಪ್ರಕಟಿಸುಗುಂ ||೫೯||

ಈಸಂಸಾರಾಂಭೋಧಿಯ-
ನೀಸುವ ‘ನಿನಗಿದುವೆ’ ನಾವೆ ತಡಿಗಾಣ್ಬೆಯನಾ-|
ಯಾಸದೊಳೆ ನಿನಗೆ ಮುಕ್ತಿ-
ಪ್ರಾಸಾದಮನಡರಲಿವುವೆ ಸೋಪಾನಂಗಳ್ ||೬೦||

ಸೂಕ್ತಂ ಭವ್ಯಜನಪ್ರ-
ವ್ಯಕ್ತಂ ಜೈನಾಗಮೋಕ್ತಮಿಂ ನಿನಗೆ ಮದೀ-|
ಯೋಕ್ತಮಿದೆರ್ದೆಯೊಳ್ ನೆಲಸುಗೆ
ಮುಕ್ತಿಶ್ರೀಹಾರವಿಭ್ರಮಂ ಸಮ್ಯಕ್ತ್ವಂ ||೬೧||

೧-೧ (ಕ) ಬಗೆಗಿಡುವೆ.

೧ಎಂದೆಂದೊಡಪ್ಪ೧ ನೀನುಂ
ಸಂದೆಯಮಣಮಿಲ್ಲದಿದನೆ ನಂಬಿನಿತಂ ನೀ-
೨ನೊಂದಿದ ನಾರೀರೂಪದ೨
ಪಂದುಗದೊಳ್ ತೊಡರ್ದು ಬಿಡದೆ ನವೆಯುತ್ತಿರ್ಪೈ ॥೬೩॥

ರಮಣೀಜಾತಿಯೊಳಲ್ತೆ ನಂಬಿದವರ್ಗಳ್ ಸಮ್ಯಕ್ತ್ವಮಂ ೩ಪುಟ್ಟಿರಾ-
ರು೩ಮಧೋಭೂಮಿಯೊಳಂತೆ ಮೂಱುಮಮರಾವಾಸಂಗಳೊಳ್ ಪೇೞ್ವೊಡು-
ತ್ತಮಸಮ್ಯಕ್ತ್ವಫಲಂ ಪಗುಂತಿ ಮಗಳೇ ನೀನಿಂತಿದಂ ನಂಬಿಸು-
ಕ್ರಮದಿಂದಂ ದೊರೆವೆತ್ತ ಸಪ್ತಪರಮಸ್ಥಾನಂಗಳಂ ಪೊರ್ದುವೈ ॥೬೪॥

ವ॥ ೪ಎಂದತಿ೪ಪ್ರೀತಿಯಿಂ ಪ್ರೀತಿಂಕರಾಚಾರ್ಯ್ಯರ್ ವಜ್ರಜಂಘಾರ್ಯ್ಯಂಗಂ ಶ್ರೀಮತ್ಯಾರ್ಯ್ಯೆಗಂ ಶಾರ್ದೂಲಾರ್ಯ್ಯಾದಿಗಳ್ಗಂ ಮುಕ್ತಿಸಾಮ್ರಾಜ್ಯಪದವಿಗಿದುವೆ ಯುವರಾಜಚಿಹ್ನಮೆನಿಸಿದ ಸೂತ್ರಾನುಗತಮಪ್ಪ ಸಮ್ಯಗ್ದರ್ಶನಮೆಂಬ ಕಂಠಿಕೆಯುಂ ಕಂಠಿಕಾಬಂಧನಮುಂ ಮಾಡಿ,

ದರ್ಶನಮಘಸಮಿತಿಗೆ ಸ-
ದ್ದರ್ಶನದಿಂದಪ್ಪುದಕ್ಕೆ ನಿಮಗಕ್ಕೆ ಪುಸರ್-
ದರ್ಶನಮೆಂದಾರಾಧಿತ-
ದರ್ಶನರಾಚಾರಣರ್ ನಭಕ್ಕೊಗೆದಾಗಳ್ ॥೬೫॥

ಆದಂಪತಿಗಳ್ ಜೊಮ್ಮನೆ-
ವ್ರೋದಂತಿರ್ದ್ದವರ ಗಗನತಲಗಮನದೊಳಂ-
ದಾದ ಬೆಡಂಗಂ ನೋಡಿದ-
ರಾದರದಿಂ ತಮ್ಮ ೫ಕಣ್ಬೊಲಂಗಳಿವಿನೆಗಂ೫ ॥೬೬॥

ವ॥ ನೋಡಿ ತಮ್ಮ ೬ಮನದೊಳವರುಪದೇಶಪರಾನುಗ್ರಹ೬ಬುದ್ಧಿಯುಂ ಸನ್ಮಾರ್ಗ್ಗದರ್ಶನಕೌಶಲಮುಂ ನಿಸರ್ಗ್ಗಸ್ನೇಹಸಂಬಂಧಮು೭ಮಂತರಂಗದೊಳ್೭ ತಣ್ಮಲೆಯೆ,

೧-೧ (ಅ,ಬ,ಕ) ಎಂದೆಂದರಬ್ಬ. ೨-೨ (ಖ) ನೊಂದಿದನಾದಿಯ ರೂಪದ. ೩-೩ (ಅ) ಪುಟ್ಟರಾಱುಮ; (ಬ) ಮುಟ್ಟಿ ತೋಱುವುದಾ. ೪-೪ (ಅ) ಎಂದಿಂತತ್ತಿ. ೫-೫ (ಬ) ಕಣ್ಬೊಣರ್ ದಣಿವಿನೆಗಂ. ೬-೬ (ಅ) ಮನದೊಳವರ ಪರಮಾನುಗ್ರಹ; (ಬ) ಮನದೊಳವರ ಪರಾನುಗ್ರಹ ೭-೭ (ಅ,ಬ) ಪ್ರತಿಗಳಲ್ಲಿಲ್ಲ.

ಪಱಮತಪ್ರೋಷಧಪರ್ ಪುಗುವರೆಂಬುದಸಂಭವಮತ್ತೆ ಭೋಗಭೂ-
ಚರರ ನಿವಾಸಮಂ ಕಿಱಿದು ನಮ್ಮ ಪುರಾತನಪುಣ್ಯಮಿಲ್ಲಿಗಂ ।
ಬರಿಸಿದುದೀಮುನೀಶ್ವರರನೀಯುಪದೇಶದಿನಾಮು[೧]ದಗ್ರಸಂ-
ಸರಣಮಹಾಸಮುದ್ರತರಣಂ ಚರಣಂ ಶರಣಂ ಮುನೀಂದ್ರರಾ ॥೬೬॥

ಮುನ್ನೆ[೨] ಮಹಾಬಳನಾದಂ-
ದೆನ್ನಂ ಪ್ರಿಯಸಚಿವನಾಗಿ ಸಂಬೋಧಿಸಿ ಮಾ-
ಸೋನ್ನತರೀಗಳುಮೞ್ಕಱೊ-
ಳೆನ್ನಂ ಸಮಜಿಲ್ಕೆ ಬಂದರಿಂತುಟು[೩] ಮೋಹಂ ॥೬೭॥

ಕಾಮಸುಖೋಚಿತಮತಿಗಳ್-
ನಾಮೆತ್ತ ಮುಮುಕ್ಷುವೃತ್ತಿಯುಂ ತಾಳ್ದಿದವರ್।
ತಾಮೆತ್ತಂತುಮನುಗ್ರಹ-
ಮೀಮುನಿಪತಿಗೆಮ್ಮೊಳಾಯ್ತಿದೇಂ ವಿಸ್ಮಯಮೋ ॥೬೮॥

ವಾಮಂ ಕರತಳಮದು ಕೆಂ-
ದಾಮರೆಯರಲೆನಿಪುದುಚಿತಪರ್ಯ್ಯಂಕದೊಳು-।
ದ್ದಾಮಮುಪದೇಶಹಸ್ತಮ-
ವಾಮಂ ಮಾರ್ದ್ದವಮನಭಿನಯಿಪ್ಪುದು ಮುನಿಯಾ ॥೬೯॥

ವ॥ ಎಂದು ತದ್ಗಗನಚಾರಣಮುನಿಗುಣಮಣಿಹಾರಮನಾತ್ಮೀಯಹೃದಯದೊಳನಿಬರುಂ ತಾಳ್ದಿ ಸಮ್ಯಗ್ದರ್ಶನಮನಸ್ಖಲಿತಮಾರಾಧಿಸಿ ಪಲ್ಯೋಪಮತ್ರಯಾಯುಷ್ಯಾವಸಾನದೊಳೋಷಧಿಗಳಂತೆ ಫಲಪಾಕಾಂತದೊಳ್ ಕ್ಷುತವಿಜೃಂಭಣವ್ಯಾಜದಿಂ ಲೋಕಾಂತರಿತರಾಗಿ,

ಮನೆಯಿಂದಂ ಮನೆಗೆಂದು ಪೋಪ ತೆಱದಿಂ [೪]ಮೇಣ್ ನೂಕೆ ಪಾಸೆಂಬ[೪] ಮಾ-
ತಿಸ ಪಾಂಗಿಂದನಿತುಂ ಯುಗಂ ತಳರ್ದು ತದ್ಭ್ಯೋಗಾವನೀಭಾಗದೊಳ್ ।
ತನುಗಳ್ ವೈಕ್ರಿಯಕಂಗಳಂತೆ ಕರಗುತ್ತಿರ್ಪನ್ನೆಗಂ ಪುಣ್ಯಸಂ-
ಜನಿತೈಶ್ವರ್ಯದಿ[೫]ನಂತೆ[೫] ಬಂದು ನೆಲಸಿತ್ತೀಶಾನಕಲ್ಪಾಗ್ರದೊಳ್ ॥೭೦॥

ವ॥ ಅಲ್ಲಿ ವಜ್ರಜಂಘಾರ್ಯ್ಯಂ ಸುರತಸುಖ[೬]ನಿಧಾನ[೬]ದೊಳ್ ಶ್ರೀಪ್ರಭವಿಮಾನದೊಳ್ ಶ್ರೀಧರನೆಂಬೊಂ[೭] ದೇವನಾದೊಂ[೮], ಶ್ರೀಮತ್ಯಾರ್ಯ್ಯೆಯುಂ

೧ (ಚ) ದ. ೨ (ಅ,ಬ) ನ್ನೆ. ೩ (ಚ) ಟೆ. ೪–೪ (ಚ) ಮೇಣ್ ಸೂಸೆ ಪಾಸೆಂಬ. ೫–೫ (ಬ) ನಿಂದು; (ಚ) ನಿಂತು. ೬–೬ (ಚ) ನಿವಾಸ. ೭ (ಚ) ಬ. ೮ (ಚ) ದಂ.

ಸಮ್ಯಕ್ತ್ವಮಹಾತ್ಮ್ಯದಿಂ [೧]ಸ್ತ್ರೀತ್ವಮಂ[೧] ಪತ್ತುವಿಟ್ಟು ತತ್ಸ್ವಯಂಪ್ರಭವಿಮಾನದೊಳ್ ಶ್ರೀಧರಂಗೆ ಸಾಮಾನಿಕದೇವಂ ಸ್ವಯಂಪ್ರಭನೆಂಬೊಂ [೨]ದೇವನಾದೊಂ[೨]; ಶಾರ್ದೂಲಾರ್ಯ್ಯನುಂ ಚಿತ್ರಾಂಗವಿಮಾನದೊಳ್ ಚಿತ್ರಾಂಗದಾಮರನಾದೊಂ[೩]; ವರಾಹಾರ್ಯ್ಯನುಂ ನಂದನವಿಮಾನದೊಳ್ ಮಣಿಮುಕುಟಕೇಯೂರಮಣಿಕುಂಡಲವಿ[೪]ಭೂಷಿತಂ[೪] ಮಣಿಕುಂಡಲನೆಂಬೊಂ ದಿವಿಜನಾದೊಂ[೫]; ವಾನರಾರ್ಯ್ಯನುಂ ನಂದ್ಯಾವರ್ತ್ತವಿಮಾನದೊಳ್ ಸುರನಾರೀಮನೋಹರಂ ಮನೋಹರನೆಂಬನಿಮಿಷನಾದಂ; ನಕುಳಾರ್ಯ್ಯನುಂ ಪ್ರಭಾಕರವಿಮಾನದೊಳ್ ಮನೋರಥಾವಾಪ್ತ[೬]ದಿವ್ಯಭೋಗಂ ಮನೋರಥನೆಂಬ ಕಲ್ಪಜನಾದನಂತಿನಿಬರುಂ ಸಹಾಯರೊಡನೆ,

ನಯನಾನಂದವಿಲಾಸರೂಪನಮರೀನೀಲಾಲಕಾಲೀಢಪಾ-
ದಯುಗಂ ತತ್ಕುಚಕೂಟಘಟ್ಟಿತವಿಶಾಲೋರಸ್ಸ್ಥಲಂ ಸ್ವರ್ಗ್ಗಲ-|
ಕ್ಷ್ಮಿಯ ಮೇಲಿಟ್ಟ ಬಿಳಂದವೇಂ ನಲಿವನೋ ಸಂಭೋಗಸಮ್ಮರ್ದ್ದನಿ-
ರ್ದ್ದಯನಿಷ್ಪೀಡಿತದೇವವಾರವನಿತಾಬಿಂಬಾಧರಂ ಶ್ರೀಧರಂ ||೭೧||

ವ|| ಒಂದು ದಿವಸಮಾದೇವನವಧಿಬೋಧದಿಂ ಪ್ರೀತಿಂಕರಾರ್ಯ್ಯರ ಕೇವಲಜ್ಞಾನೋತ್ಪತ್ತಿಯನಱಿದು ದೇವ[೭]ನಿಕಾಯದೊಡನನೇಕವಿನೋದದೊಳಪೂರ್ವ್ವ[೭]ಪ್ರಭೆಯಿಂ ತಾಳ್ದಿರ್ದ್ದುತ್ತುಂಗಶ್ರೀಪ್ರಭಾಚಳಕ್ಕೆ ಪೋಗಿ,

ವಿವಿಧಾರ್ಚ್ಚನೆಗಳಿನರ್ಚ್ಚಿಸಿ
ವಿವಿಧಸ್ತುತಿಶತಸಹಸ್ರದಿಂ ಸ್ತುತಿಯಿಸಿ ಬಂ-|
ದವನತಮುಕುಟಂ ಶ್ರೀಧರ-
ದಿವಿಜಂ ಬೆಸಗೊಂಡನಖಿಲಭವಭಯಹರನಂ ||೭೨||

ಪ್ರೀತಿಂಕರ ಶಂಕರ ವಿ-
ದ್ಯಾತಿಶಯನಿಧಾನ ನಿನ್ನ ದಯೆವೆರಸಿದತಿ-|
ಪ್ರೀತಿಯೊಳಾನತ್ಯುತ್ತಮ-
ಜಾತಿಗಳೊಳ್ ಪುಟ್ಟಿ ಸುಖಮನುಣುತಂ ಬಂದೆಂ ||೭೩||

೧-೧ (ಚ) ಸ್ತ್ರೀರೂಪಮಂ. ೨-೨ (ಚ) ದಿವಿಜನಾದಂ. ೩ (ಚ) ದಂ. ೪-೪ (ಚ) ಭೂಷಣನಾಗಿ. ೫ (ಚ) ದಂ. ೬ (ಅ,ಬ) ಪ್ತಿ. ೭-೭ (ಅ) ನಿಕಾಯಸಹಿತಂ ಬರೆಯುವರಿರವಿನೊಳಪೂರ್ವ್ವ; (ಬ) ನಿಕಾಯಮೊಡವರೆ ಆವರಿರವಿನೊಳಪೂರ್ವ್ವ.

ಅನಂಬರಚರನಾದಂ-
ದಾನಾಲ್ವರೊಳಲ್ಲಿ ಮೂವರುಂ ಮಂತ್ರಿಗಳಂ-।
ತೇನಾಪರವಿಲಮಿಥ್ಯಾ-
ಜ್ಞಾನಾವೃತಚರಿತರುಚಿತಪರಹಿತಚರಿತಾ ॥೭೪॥

ಬಿಸಸೆನೆ ದಿವಿಜನ ಮನದೊಳ್
ಪಸರಿಸಿದ ತಮಸ್ತಮಂ ತೆರಳ್ದಿರೆ ಪರಮಂ ।
ಬಿಸಸಿದನಾಗಳ್ ಭವ್ಯ-
ಪ್ರಸಾದಕರನಿಜವಚೋಂಶುಗಳ್ ಬೆಳಗುವಿನಂ ॥೭೫॥

ಸಂಭಿನ್ನಮಹಾಮತಿಗಳ್-
ಗಂಭೀರನಿಗೋದದೊಳ್ ತಮೋಮಯದೊಳ್ ದುಃ-।
ಖಾಂಭೋಧಿಯ ಕಡೆಗಾಣದೆ
ಜೃಂಭಿತದುಷ್ಕರ್ಮ್ಮದಿಂದೆ ನವೆಂದಪರಿನ್ನುಂ ॥೭೬॥

ಶತಮತಿ ಮಿಥ್ಯಾಜ್ಞಾನಾ-
ವೃತಮತಿ ಸಂದಂ ದ್ವಿತೀಯನರಕಕ್ಕೀಸಂ-।
ಸೃತಿಯೊಳ್ ಧರ್ಮ್ಮಾಧರ್ಮ್ಮ-
ಸ್ಥಿತಿಯೆ ವಲಂ ಸ್ವರ್ಗ್ಗನರಕಸುಖದುಃಖಕರಂ ॥೭೭॥

ಧರ್ಮ್ಮಮುಮುರೇಂದ್ರಗತಿಯನ-
ಧರ್ಮ್ಮಮಧೋಗತಿಯನೆಸಗುವೆಸಕದೊಳೀಗುಂ।
ಧರ್ಮಾಧರ್ಮ್ಮಕ್ರಿಯೆಗಳೆ
ನೆರ್ಮ್ಮಂ ಜೀವಕ್ಕೆ ಮನುಜಗತಿಯೊಳೆ ಮಾಳ್ಕುಂ ॥೭೮॥

ಪುಸಿಯದುದು ಪರಾಂಗನೆಗಾ-
ಟಿಸದುದು ಕೊಲ್ಲದುದು ಮೋಹಮಿಲ್ಲದುದಱವಂ।
ಪೊಸಯಿಸುವುದು ವೈರಾಗ್ಯದ
ದೆಸೆಗೆಸಪುದು ಧರ್ಮ್ಮಮುದಱ ತಡೆವುದಧರ್ಮ್ಮಂ ॥೭೯॥

ಮಾಂಸಮಧುಮದ್ಯಸೇವನೆ
ಹಿಂಸಾರುಚಿ ಪರಮಜಿನಮತಾರುಚಿ ಕುಲಟಾ-।

ಸಂಸರ್ಗಮೆಂಬಿವಲ್ಲದೆ
ಸಂಸಾರಭ್ರಮಣಕಾರಣಂ ಪೆಱವೊ[೧]ಳವೇ ||೮೦||

ಕಳಿಪಂ ಕಳ್ವನಗುರ್ವ್ವ ಪರ್ವ್ವ ಕೊಲಿಪಂ ಕೊಲ್ವಂ ಪರಸ್ತ್ರೀಯರಂ
ಕೊಳಿಪಂ ಕೊಳ್ವನೆನಿಪ್ಪ ಪಾಪಿಯುಮತಿಕ್ರೂರಾತ್ಮನುಂ ಸಾಧುಸಂ-|
ಕುಲಮಂ ಕಂಡೊಡೆ ಕಾಯ್ವನುಂ ಪೞಿವನುಂ ಧರ್ಮ್ಮಕ್ಕತಿದ್ರೋಹನುಂ
ಖಳನುಂ ಕಳ್ಳುಣಿಯುಂ ಘುಳುಮ್ಮನಿೞಿಗುಂ [೨]ಶ್ವಭ್ರಾಂತಮಂ[೨] ತಾಪಿನಂ||೮೧||

ವ|| ಆ ನರಕಂಗಳುಂ ರತ್ನಶರ್ಕರಾವಾಲುಕಾಪಂಕಧೂಮತಮೋಮಹಾತಮಃಪ್ರಭಾನಾಮಮುಂ ತಾಳ್ದಿದುವವಱೊಳ್,

ಮೇಗಣ ನಾಲ್ಕಱೊಳೈದಱ
ಮೇಗಣ ಭಾಗದೊಳಗುರ್ವ್ವ ಘರ್ಮ್ಮಂ ಹಿಮದಿಂ-|
ದಾಗಳೆ ಮುರುಂಟುವರ್ ಮಿ-
ಭಾಗದೊಳುೞಿದವಱೊಳಿನ್ನವೇೞುಂ ನರಕಂ ||೮೨||

ವ|| ಮತ್ತಮವಱೊಳನುಕ್ರಮಂದಪ್ಪದೆ,

ಮೂವತ್ತಿರ್ಪ್ಪತ್ತೈಪ-
[೩]ತ್ತಾವಗೆ[೩] ಪದಿನೈದು ಪತ್ತು ಮೂಱೈಯ್ದೂನಂ |
ಭಾವಿಪೊಡಿಂತಿವು ಲಕ್ಕೆಗ-
ಳೇವೋಗಟ್ಟುವೆದೊ [೪]ಬೞಿಯುಮೆಯ್ದು[೪] ನರಕಬಿಲಂಗಳ್ ||೮೩||

ವ|| ಆ ಬಿಲಂಗಳುಮಿಂದ್ರಕಶ್ರೇಢೀಬದ್ಧಪ್ರಕೀರ್ಣ್ಣಕಂಗಳೆಂದು ಮೂಱುತೆಱನಕ್ಕುಮವಱ ಮೇಗಣಟ್ಟುಗಳೊಳಿಟ್ಟ ಜೀವ [೫]ಪುಟ್ಟು[೫]ಗಳನನುಕರಿಸುವತಿರೌದ್ರ[೬] ಬೀಭತ್ಸಕುತ್ಸಿತೋತ್ಪತ್ತಿಸ್ಥಾನಂಗಳೊಳ್ ಕೃಷ್ಣನೀಲಕಪೋತಲೇಶ್ಯಾಬಹ್ವಾರಂಭಪರಿಗ್ರಹತ್ವಾದ್ಯಶುಭಪರಿಣಾಮಂಗಳಿಂ ಜೀವಂ ನೆಲಸಿ ಬೞಿಯುಮಂತರ್ಮ್ಮುಹೂರ್ತ್ತದೊಳಾಹಾರಶರೀರೇಂದ್ರಿಯೋಚ್ಛ್ವಾಸಭಾಷಾಮನಃಪರ್ಯಾಪ್ತಿಗಳೊಳ್ ನೆಱೆದು,

೧ (ಅ,ಬ) ತೊ. ೨-೨ (ಅ) ಶ್ವಭ್ರಾಂತ್ಯಮಂ. ೩-೩ (ಅ,ಬ) ತ್ತಾವಗ. ೪-೪ (ಅ,ಬ) ಬಳಿಕಮಯ್ದು. ೫-೫ (ಅ) ಪುಟ್ಟು. ೬-೬ (ಬ) ಕರಿಸುವೊಟ್ಟೆಗೆಯ ತೋಳನ ಬಳ್ಳುವಿನ ನರಿಯಾಕಾರದ ಪೆರಉಮತಿರೌದ್ರ; (ಗ) ಕರಿಸುವ ಬಟ್ಟೆಯ ನಾಯ ತೋಳನ ಬಳ್ಳುವಿನ..........ರೌದ್ರ.

ಕೊಟ್ಟಿಸುಗಟ್ಟುಗಳಿಂದಂ
ತೊಟ್ಟನೆ ಪಱಿಪಟ್ಟು ಬೀೞ್ವವೊಲ್ ಬಿರ್ದ್ದ ನಭಂ ।
ಪುಟ್ಟಿ ಸಿಡಿಲ್ದಿಡೆಗಿಡುವಿನ-
ವೊಟ್ಟಿದ ಕ್ರೈಮಿಗಳ ಮೇಲೆ ಬರ್ದ್ದನನಾಗಳ್ ॥೮೪॥

ಮನದೊಳ್ ಮುನಿಸೊದವೆ ಪುರಾ-
ತನನಾರಕರೋವದಿವಸನಿಱಿ ತಱಿ೧ಕೊಲ್ ಮೆ-೧
ಲ್ಲನೆ೧ ಬಗೆ೨ದು ಬಗೆದು ಮನದೊಳ್೨
ಜನಿಯಿಸುಗುಮವಂಗೆ ಖಲವಿಭಂಗಜ್ಞಾನಂ ॥೮೫॥

ವ॥ ಅಂತು ಪುಟ್ಟಿದ ವಿಭಂಗಜ್ಞಾನದಿಂದವಗ೩ತನರಕಲೋಕವೃತ್ತಾಂತ-ರಾದಿಂ೪ಬಱಿಯವೋರೊರ್ವ್ವರ ಸೆಱಿಂಗಳುಮನನ್ಯೋನ್ಯವೈರಕಾರಣಂಗಳುಮ-ನುಗ್ಗಡಿಸುತ್ತುಮೋರೊರ್ವ್ವರನಿಕ್ಷುಯಂತ್ರಂಗಳೊಳ್ ಕರ್ಪ್ಪಂ ೫ಪಿಱಿವಂತೆ೫ ಪಿಱಿವರುಂ, ಕಾಯ್ದ ವಜ್ರಮೂಷೆಯೊಳಿಕ್ಕಿ ಲೋಹಮುಂ ಕರಗಿಸುವಂತೆ ಕರಗಿಸುವರುಂ, ಬಾಱಿ೩ವಾಱಿ೩ ತಿದಿಯೂಗಿವರುಂ, ಮಿಡುಮಿಡುಕೆ ೬ಬಡಿತಂಗಾ-ಸುವರುಂ೬, ನೋಡೆ ನೋಡೆ ಕಣ್ಗಳಂ ಮೀಂಟುವರುಂ, ನುಡಿಯೆ ನುಡಿಯೆ ನಾಲಗೆಯಂ ಪಿಡಿದು ಪೆಡತಲೆಯಿಂದುಚ್ಚುವರುಂ, ಕಾಯ್ದ ಕಬ್ಬೊನ್ನ ಸೂಜಿಗಳಂ ಬೆರಲ್ಗಳೊಳ್ ಬೆಟ್ಟುವರುಂ, ನಟ್ಟು ಪರಗುವರುಂ, ತಳ್ತಳನೆ ಕುದಿವ ಕಬ್ಬೊನ್ನ ೭ಕಾಯ್ಗೊಂಡೆಣ್ಣೆಯೊಳ್೭ ಬಳಲೆ ತೆಗೆವರುಂ, ಪಸಿಯ ತೊವಲ ತಿದಿಯೊಳ್ ಪುದಿದು ಪುಟಪಾಕಂ ಸುಡುವರುಂ, ಕಾಯ್ದ ಕಾವಲಿಗಳೊಳ್ ೮ಮೊರ್ಮೊ೮ರನಾಗೆ ತಾಳಿಸುವರುಂ, ಕೂಟಶಾಲ್ಮಲಿಗಳನಡರ್ವೇೞ್ದಿದಿರಂ ಬಱಿಯುಮುಚ್ಚುವರುಮುರಿವ ಕೈದೀವಿಗೆಗಳೊಳ್ ಮೊಗಮುಂ ಚುಚ್ಚುವರು-ಮೊಳ್ಪನುರಿವ ಪುಣ್ಗಳೊಳ್ ಕ್ಷಾರವಾರಿಗಳನೆಱೆದೊಱಸಿ ಕಚ್ಚುವರು-ಮಂತುಮಲ್ಲದೆಯುಂ,

ಅಡಗಿನ ಬಸನಿಗನ್ನೈ ತಿನ್
ಪಿಡಿಯೆಂದವನಡಗನವನ ಬಾಯೊಳ್ ಗಿಡಿಪರ್ ।
ಕುಡಿ ಕಳ್ಳನೆಂದು ಕರಗಿಸಿ
ಕುಡಿಯಿಸುವರ್ ಲೋಹರಸಮನೆರ್ದೆ ಕರಗುವಿನಂ ॥೮೬॥

೧-೧ (ಅ) ಕೊಲ್ಲೆಂದೆನೆ. ೨-೨ (ಅ) ಯೆ ಬಗೆಯೆ ಮನದೊಳ್; (ಬ) ಬಗೆಯೆ ಮನದೊಳಾಗಳು. ೩ (ಚ) ಪ. ೪ (ಚ) ರಾ. ೫-೫ (ಅ,ಬ) ಕಡಿವಂತೆ ಕಡಿದು. ೬-೬ (ಅ) ಬಡಿತಂಗೊಂಡು ಕಾಸಿ ಸುಡುವರುಂ. ೭-೭ (ಅ) ಕಾಯ್ದ ಕೊಂಡಹೆಣ್ಣೆಯೊಳ್. ೮-೮ (ಚ) ಳ್ ಹೆರ್ಮ.

ಪುಸಿಬಸನಮೆಂದು ಕೇಳಬರ್
ಕುಸಿವರ್ ನಾಲಗೆಯನಿಕ್ಕುಟಿಕೊಳ್ ಪರ[೧]ವಧೂ-
ವ್ಯಸನಂ[೧] ನಿನಗೆಂದವರುರ್ದ-
ಪ್ಪಿಸುವರ್ ಕೆಂಪೆಸೆಯೆ ಕಾಯ್ದಯಃಪುತ್ರಿಕೆಯಂ ||೮೭||

ವ|| ಅಂತು ಸಪ್ತಸ್ಸಂತಾಪಿತಲೋಹಪುತ್ರಿಕಾಪರಿರಂಭ[೨]ಸಂಭವಪ್ಲೋಷಗಳಜ್ಜಾಂಗಲ[೨]ಗಲದ್ರುಧಿರವಿಚಲದಸ್ಥಿಶಿರ್ಯ್ಯಸ್ನಾಯುಮಜ್ಜಾಶುಷ್ಯತ್ಕಂಠಸ್ವಿದ್ಯದ್ವದನನಿಮೀಲನ್ನೇತ್ರಸೀವದ್ಗಾತ್ರಸಮುಹ್ಯನ್ಮಾನಸಾಕ್ರಂದತ್ಸ್ವರಪರಿಗತರ್ ಸೈರಿಸಲಾಱದೆ ತಡದಡಿಸಿ ಪರಿತಂದತಿದ್ರುತಪ್ರವಾಹ[೩]ಮಾನಾರುಷ್ಕರದ್ರವಾವರ್ತ್ತಗರ್ತ್ತಗಂಭೀರೆಯಂ ಗಂಭೀರನಾರಕಭೀಷಣಮಕರಮುಖಕುಹರನಿಪತಿತಾ[೪]ಕ್ರಂದದಾರ್ತ್ತಪರುಷಸ್ವರವಿಸರ[೪]ಭಯಂಕರೆಯಂ ಭಯಂಕರಶಿಂಶುಮಾರವಿಕಟದಂಷ್ಟ್ರಾಕ್ರಕಚಪಾಟ್ಯಮಾನನಾರಕನಿಕರ[೫]ರುಧಿರಚ್ಛಟಾಚ್ಛಾರುಣಾರುಣಿತ[೫]ಸಲಿಲಲಹರಿಕಾನಿಕರಕರಾಳೆಯಂ ಕರಾಲನಕ್ರಚಕ್ರ[೬]ಚರ್ವಿತೋದ್ಗೀರ್ಣ್ಣವಿಶೀರ್ಣ್ಣ[೬] ನಿರಯಜನಿಕುರುಂಬಶಲ್ಯ[೭]ಶಕಲ[೭]ಪರಿಪೂರಿತಧವಲಪ್ಲವದು[೮]ರ್ನ್ನಿರೀಕ್ಷ್ಯ[೮]ವಿಷಮೆಯುಂ ವಿಷಮಕಠೋರಕೂರ್ಮ್ಮನಿರ್ಭರರೋಚ್ಛ್ವಾಸಭರವೃದ್ಧೀಭವದಂಭಃಪ್ರಕಟಿತಾಗಾಧರಂಧ್ರಾವರ್ತ್ತಮಾನಜಲಚರಸಂಚರಣವಿಸ್ಮಯನೀಯಭಯಾನಕೆಯುಂ ಭಯಾನಕೋಭಯತಟಗುಹಾಗಹ್ವರನಿರ್ಯ್ಯಜ್ಜರದಜಗರಗಲಗಲಿತಗರಲಶಬಲಿತಸಲಿಲಪ್ರವಾಹೆಯುಂ ಪ್ರವಾಹಾತ್ಯುಷ್ಣತಾಪಹಸಿತಪ್ರಳಯಕಾಲಪ್ರೌಢತರತರಣಿಯುಂ ವೈತರಣಿಯುಂ ಪೊಕ್ಕಾಗಳ್,

ಸುಡುವುದು ನಂಜುನೀರ್ ಪಿಡಿದು ನುಂಗುವುವಲ್ಲಿಯ ಮೀಂಗಳೆತ್ತಮೋ-
ರಡಿ ಮಿಡುಕಲ್ಕೆ ಬಾರದೆಮಗಾರ್ ಶರಣೆಲ್ಲಿಗೆ ಪೋಪೆವೆಂದು ಮೆ-
ಯ್ಪಡಿನಸಿಪತ್ರನಂದನಮನೊಯ್ಯನೆ ಸಾರ್ವ್ವುದುಮಲ್ಲಿ ಮೆಯ್ಯೊಳು-
ರ್ದ್ದಿಡುವುವು ಪತ್ರಪುಷ್ಪಫಲಸಂಕುಲದಂದದ ಶಸ್ತ್ರಕೋಟಿಗಳ್ ||೮೮||

ವ|| ಅಂತು [೯]ಶಾರೀರ[೯]ಮಾನಸಕ್ಷೇತ್ರಜಪರಸ್ಪರೋದೀರಿತವಸುಜೋದೀರಿತಂಗಳೆಂಬಯ್ದುಂ ತೆಱದ ದುಃಖಂಗಳೊಳರ್ದ್ದು ನಿಮಿಷಮಾತ್ರಮುಪ್ಪೊಡಮುಸಿರ್ ಪೊತ್ತಂ ಪಡೆಯದೆ,

---

೧-೧ (ಆ,ಬ) ವಧುವ್ಯಸನಂ. ೨-೨ (ಚ) ಸಂಭೃತಪ್ಲೋಷಚಲಜ್ಜಾಂಗಳ. ೩ (ಚ) ದಿ. ೪-೪ (ಅ) ಕ್ರಂದದಾರ್ತ್ತಪರುಷಸ್ವರವಿಸರ; (ಬ) ಕ್ರಂದದಾರ್ತ್ತಶಫರಿಕಾಸ್ವರವಿಸರ. ೫-೫ (ಬ) ರುಧಿರಚ್ಛಟಾಚ್ಛೋಟನಾರುಣಿತ; (ಚ) ರುಧಿರಚ್ಛಟಾಚ್ಛುರಣಾರುಣಿತ. ೬-೬ (ಚ) ಚರ್ವಿತನಿಕೀರ್ಣ; (ಬ) ಚರ್ವಿತವಿಕೀರ್ಣ್ಣ. ೭-೭ (ಅ) ಸಂಕುಲ; (ಬ) ಸಕಲ. ೮-೮ (ಚ) ದುರ್ನಿರೀಕ್ಷಣ. ೯-೯ (ಅ) ಅಂತಶರೀರ; (ಬ) ಅಂತುಶರೀರ.

ನರಕನಗರಲಗ್ನಾಕಸ್ಮಿಕಾಗ್ನಿಸ್ಫುಲಿಂಗ-
ಸ್ಫುರದವಿರಲಲಾಕ್ಷಾಗೇಹಪ್ರೋಕ್ತೈಕಭಾವ-|
ತ್ವರಿತ[1]ವಿಚಲದಸ್ಥಿ[1]ಗ್ರಂಥಿಸಂಸ್ಥಾನಬಂಧರ್
ಖರಪರುಷನಿನಾದರ್ ನಾರಕರ್ ಬರ್ದುಂತಿಪ್ಪರ್ ||೮೯||

ವಾನರವಾರಣೋಷ್ಟ್ರಖರ[2]ಮರ್ತ್ಯ[2]ಕಳೇವರಪೂತಿಗಂಧಮೋ-
ಸೇನೊಳವುಳ್ಳ ಪೊಂದೆಡೆಗೆ ಬಂದುಮಿವಂದಿರ ಮೆಯ್ಯ ಗಂಧದು-|
ಷ್ಟಾನಿಗೆ ಪಾರ[3]ವೆಂಬಿನಮದೇಂ ನೆಱೆ ಪೋಲ್ತುದೊ ಚಂಡಹುಂಡಸಂ-|
ಸ್ಥಾನದೆ ಗುಂಡುದೀವಿದ ತಡಂಗಮನಂಗದ ಪಾಂಗವಂದಿರಾ ||೯೦||

ದೊರೆಕೊಂಡ ಕೃಷ್ಣ ಲೇಶ್ಯಾ-
ಪರಿಣಾಮಮೆ ಕೃಷ್ಣವರ್ಣಮಂ ಪುಟ್ಟಿಸಿದಂ
ತಿರೆ [4]ಕರಿಯರ್[4] ಪೇಡಿಗಳತಿ-
ಪರುಷಸ್ವರಪರುಷನಯನಪರುಷಶರೀರರ್ ||೯೧||

ಏೞ್ ಧನು ಮೂಱು ಮೊೞನಿಂ
ಪೇೞ್ ಷಡಂಗುಲಮೆ ಮೊದಲ ನಾರಕರೊಡಲಂ- |
ತೀೞುವರಂ ತದ್ವಿಗುಣಮೆ
ಸೂೞೊಳ್ ನಾರಕರ ಕಠಿನದೇಹೋತ್ಸೇಧಂ ||೯೨||

ಮೊದಲಿಂದಂ ತುದಿಯೆಯ್ದೆ ಸಂದ ನರಕಾಯುಷ್ಯಾಬ್ಧಿ ಕೇಳೊಂದು ಮೂ-
ಱಿದಱಿಂದಂ ಬೞಿಕೇೞು ಪತ್ತು ಪದಿನೇೞಿಪ್ಪತ್ತೆರೞ್ ಮೂಱು ಪೆ-|
ರ್ಚಿದ ಮೂವತ್ತೆನೆ ತಮ್ಮ ಮುಂ ನೆರಪಿದಾಯುಷ್ಯಂಬರಂ ಮಾಯುಮಾ-
ಗದು ಮೆಯ್ಸಣ್ಣಿಗೆಯೊಳ್ಮಗುೞ್ಚಿದೊಡಮೇಂ ದುಃಖಕ್ಕವನ್ನೋಂತರೋ||೯೩||

ಕ್ರಮದೊಳ್[5]ಸಂಜ್ಞಿಯುಂ[5]ಸರಿಸೃಪಾವಳಿಯುಂ ವಿಹಗಾಳಿಯುಂ ಭುಜಂ-
ಗಮತತಿಯುಂ ಮೃಗಾರಿಗಣಮುಂ ಲಲನಾಜನಮುಂ ಮನುಷ್ಯದು-|
ಸ್ತಿಮಿಕುಳಮುಂ ಹಿಮಾಂಶುನಯನಾಗ್ನಿಕಷಾಯಹೃಷೀಕಷಣ್ಮುನಿ-
ಕ್ರಮನರಕಂಗಳೊಳ್ ನೆಲಸುಗುಂ ದಿವಿಜೋತ್ತಮ ನಂಬು ನೀನಿದಂ ||೯೪||

---

೧–೧ (ಅ) ವಿಚಟದಸ್ಥಿ. ೨–೨ (ಚ) ಮತ್ಸ್ಯ. ೩ (ಚ) ದೆ. ೪–೪ (ಚ) ಕರಿಕರ್
೫–೫ (ಚ) ಸನ್ನೆಯಿಂ.

ವ॥ ಮುನ್ನೆ ನಿನ್ನ ಬೆಸಗೊಂಡ ಶತಬುದ್ಧಿಯುಮತ್ಯಂತಪಾಪಬುದ್ಧಿಯಿಂದ-ಮಿಂತುಟಪ್ಪ ದುಃಖಮನೆರಡನೆಯ ನರಕದೊಳನುಭವಿಸಿದಪ್ಪನೆಂಬುದುಂ ಶ್ರೀಧರಾಮರನತ್ಯಂತಧರ್ಮ್ಮಸಂವೇಗಪರಾಯಣನಾಗಿ ಸರ್ವಾಂಗಾಲಿಂಗಿತ-ಮಹೀತಲಂ ಗುರೂಪದೇಶದಿಂ[೧]ದಸಾ[೧]ತನಂ ಪ್ರತಿಬೋಧಿಸಲಲ್ಲಿಗೆ ಪೋಗಿ,

ಅಱಿಯವೆ ತಿಣ್ಣಂ ನಿನಗೇ-
ನಱಿವೊ ಮಹಾ[೨]ಬಳನನೆನ್ನ[೨]ನೆಲೆ ಶತಮತಿ ನಿ-।
ನ್ನಱಿಯಮೆಯೆ ನಿನ್ನನಿನಿತಂ
ಮಱುಗಿಸಿದುದು ಪಾಪಕರ್ಮ್ಮ ನೀಂ ಕಂಡುಂಡೈ ॥೯೫॥

ಇನ್ನುಂ ನಿಜಮಿಥ್ಯಾಜ್ಞಾ-
ನೋನ್ನತಿಯುಂ ಬಿಸುಟು ನಂಬು ಸಮ್ಯಕ್ತ್ವಮನಿಂ-।
ತೆನ್ನನೆ ಕಂಡಿಂ ತಿಳಿಯೆನೆ
[೩]ಸನ್ನುತಸಮ್ಯಕ್ತ್ವ[೩]ರತ್ನಮಂ ಕೈಕೊಂಡಂ ॥೯೬॥

ವ॥ ಕೈಕೊಂಡು ಕಾಲಾಂ[೪]ತರದಿಂದಾ[೪]ನರಕದಿಂದಾತಂ ಬಂದು ಪುಷ್ಕರ-ವರದ್ವೀಪದ [೫]ಪೂರ್ವ್ವಮಂದರದ[೫] ಪ್ರಾಗ್ವಿದೇಹದ ಮಂಗಲಾವತೀವಿಷಯದ ರತ್ನಸಂಚಯಪುರಮನಾಳ್ವ ಮಹೀಧರಂಗಂ ತತ್ಸೌಂದರಿ ಸಾಂದರಿಗಂ ಜಯಸೇ-ನನೆಂಬ ಮಗನಾಗಿ ಪುಟ್ಟಿ, ವಿವಾಹಸಮಯದೊಳ್ ತನ್ನನಾಶ್ರೀಧರದೇವನೇ ಬಂದು ಮಗುಳ್ದುಂ ಮೂದಲಿಸೆ, ಯಮಧರಗುರುಗಳ ಪಾದಮೂಲದೊಳ್ [೬]ದುಶ್ಚರ[೬]ತಪಶ್ಚರಣಪರಾಯಣಂ ಜೀವಿತಾಂತ್ಯದೊಳ್ ಸಮಾಹಿತಚಿತ್ತನಾಗಿ,

ಪಡೆದಂ ಬ್ರಹ್ಮೇಂದ್ರತೆಯಂ
ಗಡಮಾತಂ ಬಗೆದು ನೋಡೆ ನಾರಕನೆತ್ತಲ್ ।
ಗಡ ದೇವನೆತ್ತ ಕರ್ಮ್ಮಮೆ
ಕಡು ಬಲ್ಲಿತ್ತದಱ ತಿರಿವದೇಂ ಬಹುವಿಧಮೋ ॥೯೭॥

ಉಪಕಾರಸ್ಮರಣೆ ಮನ-
ಕ್ಕೆ [೭]ಪುಟ್ಟೆ ತದ್ದಿವಿಜವಲ್ಲಭಂ ಶ್ರೀಧರನಂ।

೧-೧ (ಚ) ದಾ. ೨-೨ (ಚ) ಬಳನೆ ನಿನ್ನ. ೩-೩ (ಅ II) ಮುನ್ನಮೆ ಸಮ್ಯಕ್ತ್ವ. ೪-೪ (ಅ) ತರದೊಳಾ. ೫-೫ (ಅ) ಪೂರ್ವಾರ್ದ್ಧ; (ಬ) ಪ್ರತಿಯಲ್ಲಿಲ್ಲ. ೬-೬ (ಅ) ದುರ್ದ್ಧರ. ೭-೭ (ಅ) ಪೊರ್ದ್ದೆ.

ನಿಪುಣಂ ಪೂಜಿಸಿದಂ ಗಡ-
ಮುಪಕಾರಮನಱಿಯದಾತನುಂ ಮಾನಸನೇ ||೯೮||

ವ|| ಅನ್ನೆಗಂ,

ದಿವಿಜವನಿತಾಸವಿಭ್ರಮ-
ಧವಳಾಪಾಂಗಮೆ ನಿಜಾಯುರಂಭೋನಿಧಿಯಂ |
ತವೆ ಪೀರ್ದ್ದುದೆನಿಸೆ ತೊಟ್ಟನೆ
ದಿವದಿಂದಂ ಶ್ರೀಧರಂ ಪರಿಚ್ಯುತನಾದಂ ||೯೯||

ವ|| ಆಗಿ ಜಂಬೂದ್ವೀಪದ ಪೂರ್ವ್ವವಿದೇಹದ ವತ್ಸಕಾವತೀವಿಷಯದ ಸುಸೀಮಾನಗರಮನಾಳ್ವ ಸುದೃಷ್ಟಿಮಹೀಪಾಳಂಗಂ ೧ಸೌಂದರೆಸುನಂದಾ೧ ಮಹಾದೇವಿಗಂ,

ತವೆ ನೋಡಲ್ ನೋಡಿ ಮೆಚ್ಚಲ್ ಮನದೊಳಸದಳಂ ಮೆಚ್ಚಿ ನಾನಾವಿಶೇಷ-
ಸ್ತವದಿಂದಂ ಕೀರ್ತಿಸಲ್ ಕತ್ತಳಗಮಮರನಾಥಂಗಮೆಂಬನ್ನೆಗಂ ರೂ-
ಪವಿಲಾಸಶ್ರೀಯೊಳಾಶ್ರೀಧರನಧಿಕಯಶಶ್ಶ್ರೀಧರಂ ಪುತ್ರನಾದಂ
ಸುವಿಧಿಶ್ರೀನಾಮದಿಂದಂ ಸುಕವಿಜನಮನೋಮಾನಸೋತ್ತಂಸಹಂಸಂ ||೧೦೦||

ಪ್ರಿಯಪುಷ್ಪಸ್ತಬಕಂಗಳಿಂ ತುಱುಗಿದೊಂದಿಮ್ಮಾವನತ್ಯಂತಕಾಂ-
ತಿಯೊಳಾಶಾಂತರಮೆಲ್ಲಮಂ ೨ತೊಳಪ೨ ಸಂಪೂರ್ಣ್ಣೇಂದುವಂ ತನ್ನ ಶೋ-
ಭೆಯ ತನ್ನುಜ್ಜ್ವಳಕಾಂತಿಯೊಂದು ವಿಭವಂ ಗೆಲ್ವನ್ನೆಗಂ ಯೌವನೋ-
ದಯದೊಳ್ ನೋಡಿದರಂ ಮನಂಗೊಳಿಸಿದಂ ಸಂಸಾರಸಾರೋದಯಂ ||೧೦೧||

ಗ|| ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ-
ಚಂದ್ರವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣ್ಣಸೂಕ್ತಿ-
ಕಲ್ಲೋಲಮಾಲಾಕೀರ್ಣ್ಣಕವಿತಾಗುಣಾರ್ಣ್ಣವ-
ಪ್ರಣೀತಮಪ್ಪಾದಿಪುರಾಣದೊಳ್-
ಚಾರಣಯುಗಳದಾನೋತ್ಸವವರ್ಣ್ಣನಂ
ಪಂಚಮಾಶ್ವಾಸಂ
ಸಂಪೂರ್ಣ್ಣಂ.

೧-೧ (ಪೂ. ಪು. ೧೧-೧೩೨ರಲ್ಲಿ) 'ಸುಂದರನಂದಾ' ಎಂದಿದೆ. ೨-೨ (ಅ) ತೊಳೆವ; (ಬ) ತಳೆದು.

# ಷಷ್ಠಾಶ್ವಾಸಂ

ಶ್ರೀಯುಂ ಸೊಗಯಿಸುವ [೧]ವಚ[೧]-
ಶ್ರೀಯುಂ ತನ್ನೇೞ್ಗೆಯೊಳ್ ಪೊಪಟ್ಟಿಸೆಯುವಾ[೨]-।
ಶ್ರೀಯುಮನೇಂ [೩]ಸುಭಗವಯ[೩]-
ಶ್ರೀಯುಮನಾಂತನೊ ಸರಸ್ವತೀಮಣಿಹಾರಂ ॥೧॥

ನೆಗೞ್ದಭಯಘೋಷಚಕ್ರಿಯ
ಮಗಳ ಮನೋರಮೆಯ ಮದುವೆಗಂ ರಾಜ್ಯದ ಪ-।
ತ್ತುಗೆಗಂ ಗುರೂಪರೋಧ-
ಕ್ಕಗಿದು ಮನಂದಂದನೇಂ ಜಿತಾತ್ಮನೊ ಪುರುಷಂ ॥೨॥

ವ॥ ಅಂತಗಣ್ಯಪುಣ್ಯನಿಧಿಯೆನಿಸಿದ ಸುವಿಧಿಗಮಾತನ ಮನೋರಮೆ ಮನೋರಮೆಗಂ ಶ್ರೀಮತೀಚರನೆನಿಸಿದಾಸ್ವಯಂಪ್ರಭದೇವಂ ದೇವಲೋಕ-ದಿಂದವತರಿಸಿ,

ಪ್ರಿಯವನಿತಾ[೪]ಚರನೆ ಗಡಂ[೪]
ಪ್ರಿಯತನಯಂ ಕೇಶವಾಂಕನಾದನಿದೇಂ ವಿ-।
ಸ್ಮಯಕರಮೊ ಸಂಸೃತಿಸ್ಥಿತಿ
ಬಯಸುವ[೫]ದೆಂತಯ್ಯ[೫] ಪೇೞಿಮಿಂತಪ್ಪುದುಮಂ ॥೩॥

ವ॥ ಮತ್ತಮಾವಿಷಯದೊಳ್ ಶಾರ್ದೂಲಚರನಪ್ಪ ಚಿತ್ರಾಂಗದೇವಂ ದೇವಲೋಕದಿಂದವತರಿಸಿ[೬] ಬಂದು ಸಮಾನಪುಣ್ಯತ್ವಂ ಕಾರಣಮಾಗಿ ಸುವಿಧಿ ಸಮಾನನಪ್ಪ ಮಂಡಳಿಕಂ ವಿಭೀಷಣಂಗಂ ಪ್ರಿಯದತ್ತೆಯೆಂಬ ತತ್ಪ್ರಿಯಲಲನೆಗಂ ವರದತ್ತನೆಂಬೊಂ ಮಗನಾದೊಂ; ವರಾಹಾರ್ಯ್ಯಚರನಪ್ಪ ಮಣಿಕುಂಡಲದಿವಿಜಂ ನಂದಿಷೇಣಂಗಮನಂತಮತಿಗಂ ವರಸೇನನೆಂಬೊಂ ತನಯನಾದೊಂ; ವಾನರಾರ್ಯ್ಯಚರನಪ್ಪ ಮನೋಹರಾಮರಂ ರತಿಷೇಣಂಗಂ ಚಂದ್ರಮತಿಗಂ ಚಿತ್ರಾಂಗದನೆಂಬೊಂ [೭]ತನಯನಾದೊಂ[೭]; ನಕುಳಾರ್ಯ್ಯಚರ-

೧-೧ (ಖ) ಜಯ. ೨ (ಅ) ವ. ೩-೩ (ಅ) ಸುಭಗಯಶಶ್ರೀ, (ಬ, ಖ) ಸುಭಗವಚಶ್ರೀ. ೪-೪ (ಅII) ಚರನೊಗೆದಂ. ೫-೫ (ಕ) ದೇಕಯ್ಯ. ೬ (ಚ) ಸೆ. ೭-೭ (ಅ) ತನೂಭವನಾದಂ; (ಬ) ತನೂಜನಾದೊಂ.

ಸಪ್ಪ ಮನೋರಥಕಲ್ಪಜಂ ಪ್ರಭಂಜನಂಗಂ ಚಿತ್ರಮಾಲೆಗಂ ಶಾಂತ[೧]ಮದನ-
ನೆಂಬ ಪುತ್ರನಾಗಿ[೧],

ಪೂರ್ವಭವಸ್ನೇಹಮುದೋ-
ರ್ವ್ವರನಲಿದೊಂದುಮಾಡೆ ತಮ್ಮನಿಬರುಮಂ-|
ದೊರ್ವ್ವಳಿ ನೆರೆದತಿಲಲಿತತ-
ರೋರ್ವ್ವೀತಳಸುಖಮನುಣುತ[೨]ಮಿರೆ ಪಲಕಾಲಂ ||೪||

ವ|| ಒಂದು ದಿವಸಂ ಸುವಿಧಿಧರಾಧೀಶಂ ತಮ್ಮ ಮಾವನಪ್ಪಭಯಘೋಷ ಚಕ್ರವರ್ತ್ತಿ ವಿಮಲವಾಹನಜಿನಚರಣವಂದನಾಭಕ್ತಿಗೆ ಪೋಗೆ, ತಾನುಂ ವರದತ್ತ-ವರಸೇನಚಿತ್ರಾಂಗದಶಾಂತಮದನರೆಂಬ ನಾಲ್ವರ್ ಸಹಾಯರುಂ ತನ್ನ ಮಗಂ ಕೇಶವನುಂ ಬೆರಸು ಪೋಗಿ ಸುವಿಧಿ ಸುವಿಧಿಯಿಂ ಜಿನೇಂದ್ರಪಾದಾರವಿಂದಂಗಳಂ [೩]ವಂದಿಸತ್ತಿರ್ಪನ್ನೆಗ[೩]ಮುಭಯಘೋಷಂ ಧರ್ಮ್ಮಾಮೃತರಸಮನಾಸ್ವಾದಿಸಿ ಸಂಸಾರಶರೀರಭೋಗ[೪]ನಿರ್ವೇಗಪರಾಯಣ[೪]ನಾಗಿ,

ಸಾಸಿರ್ವರ್ ವನಿತೆಯರಯ್
ಸಾಸಿರ್ವರ್ ಪ್ರಿಯತನೂಜರಱುಕೆಯ ಪದಿನೆ-|
ಣ್ಛಾಸಿರ್ವರರಸುಗಳ್ ವೆರ-
ಸಾಸಾಸಿಗಸುಚಿತದೀಕ್ಷೆಯಂ ಕೈಕೊಂಡಂ ||೫||

ಸುವಿಧಿಯುಮಾತ್ಮತನೂಭವ-
ಭವವಿಪುಳಸ್ನೇಹನಿಗಳದಿಂದಮೆ ತೊಡರ್ದಾ-|
ಧವಳಾತಪವಾರಣ[೫]ಕಕು-
ದವಿಭೂತಿಯು[೫]ನುೞಿದು ನೆಗೞ್ದುಪಾಸಕನಾದಂ ||೬||

ಪದಪು ಜಿನೇಂದ್ರಪಾದಕಮಲಂಗಳೊಳಾವಗಮಾಗೆ ಕರ್ಮ್ಮಬಂ-
ಧದ ಬಿಗಿಪೊಯ್ಯನೊಯ್ಯನೆ ಸಡಿಲ್ದಿರೆ [೬]ಬಾಂಧವರೂಪದಿಂದೆ[೬] ಕೊ-|
ಲ್ಲದ ಪರನಾರಿಗಾಟಿಸದ ಕಳ್ಳದಸತ್ಯದೊಳೊಂದದಾಗಳುಂ
ಕುದಿದಪತೃಷ್ಣೆಯಂ ಕುಸಿದು ಮಾಣಿಸುವಯ್ದುಮಣುವ್ರತಂಗಳಂ ||೭||

---

೧-೧ (ಅ) ಮದನನೆಂಬಂ ತನೂಜನಾಗಿ; (ಬ) ಮದನನೆಂಬೊಂ ಮಗನಾದೊನಾಗಿ. ೨ (ಚ) ತು. ೩-೩ (ಆ,ಬ) ಬಂದಿಸಿದ್ದರ್ನನಂನೆಗಂ. ೪-೪ (ಅ) ನಿರ್ವೇಗಪರಿಣಾಮಪರಾ-ಯಣ. ೫-೫ (ಅ,ಬ,ಕ) ಚಮರವಿಭೂತಿ. ೬-೬ (ಚ) ಬಾಡವರೂಪದಿಂದೆ; (ಖ) ಬಾಡ-ರರೂಪದಿಂದೆ.

ದೆಸೆಗಳ ಮೇರೆಯಂ ನಿಱಿಸಿ ಪೋಪುದುಮಾಭರಣಪ್ರಸೂನಸ-
ದ್ವಸನ[೧]ವಿಲೇಪನಾದಿಗಳೊಳಂ[೧] ಕೆಲವಂ ಗುಱಿಮಾಡಿಕೊಂಡು ಸೇ-|
ವಿಸುವುದುಮಸ್ತ್ರದಂಡವಿಷಪಾಶವಿಶೇಷಮನೀಯದಿರ್ಪ್ಪುದೊಂ-
ದೆಸಕಮುಮೆಂದು ಮೂಱುಂ ತೆಱದಿಂ [೨]ನೆಗೞ್ದಿರ್ದ್ದ[೨] ಗುಣವ್ರತಂಗಳ್ ||೮||

ವಿವಿಧಪ್ರಾಣಿಗಣಂಗಳೊಳ್ ಸಮತೆ ಸಂದಾಹಾರದಾನಂ ಜಿನ-
ಸ್ನಪನಕ್ಕಂ ಜಿನಪೂಜೆಗಂ [೩]ಮನಮನೊಲ್ದೋರಂತೆ[೩] ತಂದಾವಮು-|
ತ್ಸವದಿಂ ನೋಂಪುದು ಜೀವಿತಾಂತ್ಯದೆಡೆಯೊಳ್ ಸನ್ನ್ಯಾಸಮಂ [೪]ಪೂಣ್ಬುದೆಂ[೪]-
ಬಿವು ನೇರ್ಪಟ್ಟಿಸೆವನ್ನೆಗಂ ನೆಗೞ್ವವಂ ಶಿಕ್ಷಾವ್ರತಂ ನಾಲ್ಕುಮಂ ||೯||

ವ|| ತಾಳ್ದಿ

ನುತ [೫]ಸಮ್ಯಕ್ತ್ವಗುಣವ್ರತ[೫]ಸ್ಥಿತಿ ಸಮತ್ವೀಭಾವನಂ ಪ್ರೋಷಧ-
ವ್ರತಮೆಂದುಂ ಪಸಿಯೊಂದುಮಂ [೬]ಪಱಿಯೆನೆಂಬೀಪೂಣ್ಕೆ ಮಾಡೆಂ ಪಗಲ್ |
ರತಿಯಂ ಸ್ತ್ರೀಯರೊಳೆಂಬುದೊಂದು ನಿಯಮಂ ಸದ್ಬ್ರಹ್ಮಚರ್ಯ್ಯವ್ರತಂ
ಸತತಾರಂಭಪರಿಗ್ರಹಚ್ಯುತಿ ಪರಿತ್ಯಕ್ತಾನುಮೋದೋದಯಂ ||೧೦||

ಪರಮ[೭]ಮುನಿ[೭]ಗದಿತಮಾರ್ಗ್ಗ-
ಚರಣಮುಮೆಂದಿಂತು ನೆರೆಯೆ ಭೂಭುವನದೊಳಂ |
ಪರೆದೇಕಾದಶನಿಳಯಮು-
ನರಸನನುಕ್ರಮದಿನಿನಿತುಮಂ ಕೈಕೊಂಡಂ ||೧೧||

ವ|| ಅಂತು ಕೈಕೊಂಡುತ್ಕೃಷ್ಟಚಾರಿತ್ರದೊಳ್ ನೆಗೞ್ದು ಜೀವಿತಾವಸಾನ-ದೊಳ್ ಸಂಸಾರಕ್ಷಪಕನಾಗಿ ಸಮಾಧಿವಿಧಿಯಿಂ ಶರೀರಪರಿತ್ಯಾಗಂ ಗೆಯ್ದು,

ಎನಗಿದು ಚೋದ್ಯಂ ಪನ್ನೊಂ-
ದನೆಯದು ನೆಲೆ [೮]ತನ್ನ[೮] ನೆಗೞ್ದ ದಂತದು ಪದಿನಾ-|
ಱನೆಯ ನೆಲೆಗುಯ್ದುದೆಂಬುದ-
ನೆನೆ ಸುವಿಧಿನರೇಂದ್ರನಚ್ಯುತೇಂದ್ರನುಮಾದಂ ||೧೨||

---

೧-೧ (ಖ) ವಿಲೇಪನಂಗಳೊಳವಂ. ೨-೨ (ಅ,ಬ) ನೆರೆದಿರ್ದ್ದ. ೩-೩ (ಖ) ಮನಮನೋರಂತೆಯ್ದೆ. ೪-೪ (ಅ) ಪೂಣ್ದುದೆಂ. ೫-೫ (ಚ) ಸಮ್ಯಕ್ತ್ವಮಣುವ್ರತ. ೬ (ಚ) ಮು. ೭-೭ (ಅ) ಜಿನ. ೮-೮ (ಅ) ತನಗೆ.

ವ|| ಕೇಶವಸುಮಾತ್ರೀಯಗುರುನಿಯೋಗದೊಳ್ ಪರಿತ್ಯಕ್ತಸಕಲರಾಜ್ಯಪರಿಚ್ಛೇದಂ ಪ್ರವ್ರಜ್ಯ[೧]ಪದವಿಯೊಳ್ ಪರಿತ್ಯಕ್ತ[೧]ನುಮಾಗಿ ತದಚ್ಯುತಕಲ್ಪದೊಳ್ ಪ್ರತೀಂದ್ರನಾದಂ,

|| ತ್ರಿಪದಿ ||

ವರದತ್ತಂ ಮೊದಲಾಗೆ ಧರಣೀಶರವರ್ಗೆಲ್ಲಂ
ಸುರಲೋಕಂ ಸುವಿಧಿಯೊಡನಾದುದಂತುಟೆ
ನೆರೆವರನಿತೀ ಸುರಲೋಕಂ ||೧೩||

ವ|| ಅಂತು [೨]ಮೇರುಮೂಲ[೨]ದಿಂ ತಗುಳ್ದಾಱುರಜ್ಜು ನೆಗೆದೆಡೆಯೊಳಚ್ಯುತಕಲ್ಪಮಿರ್ದ್ದದಲ್ಲಿ ತನ್ನ ನಾಲ್ವರುಂ ಸಹಾಯರಪ್ಪ ಸಾಮಾನಿಕದೇವರುಂ ತತ್ಪ್ರತೀಂದ್ರನುಂ ಬೆರಸಚ್ಯುತೇಂದ್ರಂ [೩]*ಪಂಚಾ[೩]ಶದಧಿಕತ್ರಿಶತವಿಮಾನಾಧೀಶನುಂ,* ತ್ರಯಸ್ತ್ರಿಂಶತ್ಪರಿಮಿತತ್ರಯಸ್ತ್ರಿಂಶಾಮರ[೪]ಪರಿವೃತನುಂ[೪], ಅಯುತಪ್ರಮಿತಸಾಮಾನಿಕಸುರಾನೀಕನುಂ, ಚತುರಯುತಮಿತಾಂಗರಕ್ಷಕಪರಿವೃತನುಂ, ಲೋಕಪಾಲ[೫]ಚತುಷ್ಟಯಾಧಿಷ್ಠಿತನುಂ[೫], ಹಸ್ತ್ಯಶ್ವರಥಪದಾತಿವೃಷಭಗಂಧರ್ವ್ವನರ್ತ್ತಕೀಪ್ರಮುಖಸಪ್ತಾನೀಕಸಮೇತನುಮಂತರ್–ಮಧ್ಯಬಾಹ್ಯಪರಿಷತ್ಪ್ರಕಟಿತವಿಭವನುಂ, ದ್ವಾತ್ರಿಂಶತ್ಪ್ರಮಾಣಪ್ರಧಾನದೇವೀನಿವಹವಿಲಾಸ[೬]ಧವಲವಿಲೋಚನಗೋಚರನುಂ[೬], ತ್ರಿಷಷ್ಟಿಸಂಖ್ಯಾತವಲ್ಲಭಿಕಾವಿಭ್ರಮಭ್ರೂಲತಾತ್ರಿಭಾಗಭಾಜನನುಮಾಗಿ,

ಮಾದೇವಿಯರೆಣ್ಬರ್ ಮದ-
ನೋದಯಮುಂ ಕುಡೆ ಮನಃಪ್ರವೀಚಾರದೊಳಂ |
ತಾದೇವಂ ಸಂಚಿತಪು-
ಣ್ಯೋದಯದಿಂದನಿತು ಮಹಿಮೆಯಂ ಕೈಕೊಂಡಂ ||೧೪||

ದೇವಿಯರೊಳೊರ್ವ್ವರೊರ್ವ್ವರ್
ದೇವಿಯ ಪರಿವಾರರಪ್ಸರೋಗಣಮುಂ ತ-|
ದ್ದೇವೀವಿಕರಣಸಂಭವ-
ದೇವಿಯರುಂ ಪಲಬರೆನಗೆ ಪೊಗೞಲಳುಂಬಂ ||೧೫||

---

೧-೧ (ಅ) ಪದವಿಯೊಳ್ನಿಂದು ಪರಿತ್ಯಕ್ತ. ೨-೨ (ಅ) ಮೇರುವಿನ ಮೂಲದಿಂ; (ಬ) ಮೇರುವಿನ ಮೊದಲಲ್ಲಿಂ. ೩-೩ (ಚ) ನವಪಂಚಾ. ೪-೪ (ಅ,ಬ) ಪರೀತನುಂ. ೫-೫ (ಅ,II) ಚತುಷ್ಟಯಾಭೀಪ್ಸಿತನುಂ. ೬-೬ (ಅ) ಧವಳಮಾನವಿಲೋಚನಗೋಚರನುಂ; (ಬ) ಧವಲಾಯಮಾನವಿಲೋಚನಗೋಚರನುಂ.

*-* "ಮೂನೂಱೈವತ್ತೆಸೆವ ವಿಮಾನಂಗಳ್ಗಮಲಮಣಿಮಯಂಗಳ್ಗೆ" ಅಗ್ಗಳ-ಚಂ-ಪ್ರ-ಪು_೯-೪೯. ಜಿನಸೇನಾಚಾರ್ಯರ ಪೂರ್ವಪುರಾಣದಲ್ಲಿ ೧೫೯ ವಿಮಾನಗಳೆಂದು ಹೇಳಿದೆ ೧೦-೧೮೬.

ಸ್ಫುರಿಯಿಪನಿಷ್ಪ್ರತಿಚ್ಛಾ-
ಸಿರ[೧]ವರ್ಷ[೧]ಕ್ಕೊರ್ಮೆ ಮನದೊಳುಣಿಸಂ ಸುಯ್ಯಂ |
ಸುರಭಿಯ ಕಂಪನೆ ಗೆಲೆ ತ-
ತ್ಸುರಪತಿ ಪನ್ನೊಂದು ತಿಂಗಳಿಂಗೊರ್ಮೆ ಗಡಂ ||೧೬||

ದ್ವಾವಿಂಶತ್ಯಂಬುಧಿಮಿತ-
ಜೀವಿತಮುಂ ಮೂಱುಮೊೞದ ದಿವ್ಯಾಂಗಮುಮಾ- |
ದೇವಂಗಾಯ್ತು ಜಿನಾಗಮ-
ಭಾವನೆಯಿಂ ಪಿರಿದುಮಕ್ಕುಮಿದು ಪಿರಿದಾಯ್ತೇ ||೧೭||

ವ|| ಅಂತು ದಿವ್ಯಭೋಗಸಂಪತ್ಪರಂಪರಾ[೨]ಪರಿಗತನಾಗಿ[೨],

ದೆಸೆಯೆಲ್ಲಂ ಪಂಚರತ್ನದ್ಯುತಿಜಟಿಲಿತನಾನಾವಿಮಾನಂಗಳೊಳ್ ರಂ-
ಜಿಸೆ ದೇಹಚ್ಛಾಯೆಯೆಲ್ಲಂ ಸಹಜಮಣಿವಿಭೂಷಾಮಯೂಖಂಗಳೊಳ್ ರಂ-|
ಜಿಸೆ [೩]ತನ್ನಾಸ್ಥಾನಮೆಲ್ಲಂ[೩] ಲಲಿತಸುರವಧೂರಮ್ಯಸಂಗೀತದಿಂ ರಂ-
ಜಿಸೆ ಪೀರ್ದಂ ದಿವ್ಯಭೋಗಾಮೃತರಸಮನೊಱಲ್ದುಟ್ಟಿಯಿಂದಚ್ಯುತೇಂದ್ರಂ||೧೮||

ಸಮೆತಂದಪುದು ಸಮುದ್ರೋ-
ಪಮಮೆನೆ ಮಂದಾರಮಾಲಿಕಾಮ್ಲಾನತೆಯುಂ |
ಸಮಕೊಳಿಸಲಾರ್ತ್ತುದಿಲ್ಲ ಪ-
ಲಮರೇಂದ್ರನದೊಂದು ಮುಖಪರಿಮ್ಲಾನತೆಯುಂ ||೧೯||

ಜಿನಪತಿಪದಪಂಕಜಮನೆ
ಮನದೊಳ್ ಬಗೆವಮರಿ ಮುಗಿದ [೪]ಕೈವೆರಸಮರಾಂ[೪]- |
ಗನೆಯರ್ ನಿಜ[೫]ವದನಮನಿ-
ಮ್ಮನೆ ನೋಟ್ಪಿನ[೫]ಮಚ್ಯುತಂ ಪರಿಚ್ಯುತನಾದಂ ||೨೦||

ವ|| ಅಂತಾದೇವನಲ್ಲಿಂ ತಳರ್ದು ಜಂಬೂದ್ವೀಪದ ಪ್ರಾಗ್ವಿದೇಹದ ಸೀತಾನದಿಯ ಬಡಗಣ ಕಡಿಯ ಪುಷ್ಕಳಾವತೀವಿಷಯದ ಪ್ರತಿಬದ್ಧಪುಂಡರೀಕಿಣೀಪುರದೊಳ್,

೧-೧ (ಚ) ಬರಿಸ. ೨-೨ (ತ) ಪರಿಗತನುಮಾಗಿ. ೩-೩ (ಅ) ತನ್ನಾವಾಸಮೆಲ್ಲಂ. ೪-೪ (ಚ) ಕೈವೆರಸು ಸುರಾಂ, ೫-೫ (ಖ) ವದನಮನಿರ್ಮ್ಮನಮಾರ್ಪಿನ.

ಅಸುರೇಂದ್ರಾವಳಿಯಿಂದಮಿಂದ್ರಗಿರಿಯೊಳ್ ಜನ್ಮಾಭಿಷೇಕಕ್ಕೆ ನೋಂ-
ತು ಮಹೀವಲ್ಲಭನಪ್ಪುದೊಂದು ಪದದೊಳ್ ರಾಜ್ಯಾಭಿಷೇಕಕ್ಕಮಾ-|
ದಮೆ ನೋಂತುನ್ನತವಜ್ರಸೇನವಿಭುಗಂ ಶ್ರೀಕಾಂತೆಗಂ ಪುತ್ರನಾ-
ಗಿ ಮನೋಜಾಕೃತಿ ವಜ್ರನಾಭಿವೆಸರಿಂದುತ್ಸಾಹಮಂ ತಾಳ್ದಿದಂ ||೨೧||

ವ|| ಮತ್ತಮಾಪುಣ್ಯದಂಪತಿಗೆ ಮುಂ ಪೇೞ್ದ ಶಾರ್ದೂಲಾರ್ಯ್ಯಸುರವರದತ್ತಚರಸಾಮಾನಿಕನುಂ, ವರಾಹಾರ್ಯ್ಯದಿವಜವರಸೇ[1]ನಚರಸಾಮಾನಿಕನುಂ, ವಾನರಾರ್ಯ್ಯವೈಮಾನಿಕಚಿತ್ರಾಂಗದಚರಸಾಮಾನಿಕನುಂ, ನಕುಲಾರ್ಯ್ಯಾಮರಶಾಂತಮದನಚರಸಾಮಾನಿಕನುಮನುಕ್ರಮದೊಳ್ ವಿಜಯವೈಜಯಂತ-ಜಯಂತಾಪರಾಜಿತರೆಂಬ ನಾಲ್ವರ್. ತನೂಜರಾದರ್ ವಜ್ರಜಂಘನಾದ ಭವದೊಳಾತನ ಮಂತ್ರಿಪುರೋಹಿತಸೇನಾಧಿಪ[2]ಪ್ರಧಾನಶ್ರೇಷ್ಠಿ[2]ಗಳಪ್ಪ ಮತಿವರಾನಂದಾಕಂಪನಧನಮಿತ್ರರೆಂಬ ನಾಲ್ವರುಮಧೋಗ್ರೈವೇಯಕದೊಳಹಮಿಂದ್ರರಾ[3]ಗಿರ್ದರಲ್ಲಿಂ[3] ಬಂದು ಸುಬಾಹುಮಹಾಬಾಹು [4]ಪೀಠಮಹಾಪೀಠ[4]ರೆಂಬ [5]ತನಯರಾಗಿ[5] ವಜ್ರನಾಭಿಗೆ ಸಹೋದರರಾದರ್. ಶ್ರೀಮತ್ಯಾರ್ಯ್ಯೆಸ್ವಯಂಪ್ರಭದೇವಂ ಕೇಶವಚರಪ್ರತೀಂದ್ರಂ ಬಂದಾಪುರದೊಳ್ ವಣಿಗ್ವಂಶಾಗ್ರಣಿ ಕುಬೇರನಿಂದಧಿಕನೆನಿಸಿದ ಕುಬೇರದತ್ತಂಗಮನಂತಮತಿಗಂ ಧನದೇವನೆಂಬ ಪ್ರಿಯತನೂಭವನಾದನಿಂತು,

ನಿಗಳಂಬೊಲ್ತೊಡರ್ದೊಂದು ಮೋಹನಿಗಳಂ ತಜ್ಜನ್ಮದೊಳ್ ನೋಡೆ ತೊ-
ಟ್ಟಿಗೆ ಮತ್ತಂ ಪೊಸತಾಗೆ ತಮ್ಮ ಮನದೊಳ್ ತಳ್ಪೊಯ್ಯ್ದು ತಳ್ತಾತಗು-|
ಳ್ಪುಗಳೊಳ್ ಪೊಕ್ಕುವು ವಜ್ರಲೇಪದ ತಗುಳ್ಪಂ ಪೋಲ್ವಿನಂ ವಜ್ರನಾ-
ಭಿಗತಿಪ್ರೀತಿಯನುಂಟುಮಾಡಿದರವರ್ ಜನ್ಮಾಂತರಸ್ನೇಹದಿಂ ||೨೨||

ವ|| ಅಂತು ವಜ್ರನಾಭಿ ಚೆಲ್ವಿಂಗೆ ನಾಭಿಯುಂ ವಿಲಾಸಕ್ಕಾವಾಸಮುಮುಳವಿಂಗೆ ದಳಮುಂ ಅಱಿವಿಂಗೆ ಗುಱಿಯುಂ ಕೆಳೆಗೆ ಕುಲಭವನಮುಂ ಪ್ರತಾಪಕ್ಕಡಪ್ಪುಮಾಗಿ ಬಳೆವನ್ನೆಗಂ; ವಜ್ರಸೇನ-ಮಹಾರಾಜನಾಕುಮಾರ[6]ನೊಳಾದೊಂದು[6] ಯೋಗ್ಯತೆಗೆ ಸಂತೋಷಂಬಟ್ಟು,

ನೆಱೆದಂ ಭೂತಲರಾಜ್ಯಭೂರಿಭರಮಂ ತಾಳಲ್ಕೆ ಮತ್ಪುತ್ರನೀ-
ಪೊಱೆಗಿನ್ನೀತನೆ ಯೋಗ್ಯನೆಂಬ ಬಗೆಯಿಂ ರಾಜ್ಯಾಭಿಷೇಕೋತ್ಸವಂ |

೧ (ಚ) ನಾ. ೨-೨ (ಚ) ಪ್ರಧಾನರಾಜಶ್ರೇಷ್ಠಿ. ೩-೩ (ಚ) ಗಿರ್ದವರಲ್ಲಿಂ. ೪-೪ (ಚ) ವೀರಮಹಾವೀರ; (ಪೂ.ಪು.) "ಪೀಠಮಹಾಪೀಠ" --೧೧-೧೨, ೧೩. ೫-೫ (ಅ,ಬ) ತನಯರ್ ೬-೬ (ಅ,ಬ) ನೊಳಾದುದೊಂದು.

ಪೊಱಪೊಣ್ಮುತ್ತಿರೆ ರಾಜ್ಯಮಂ ಕುಡೆ ಮಗಂಗಾಶ್ಚರ್ಯ್ಯದೊಳ್ ತಳ್ತದೇ-
ನೊಱೆಯಿಂದುೞ್ಚಿದ ಬಾಳ್ವೊಲಾದುದೊ ಪರಿಚ್ಛೇದಂ ಧರಾಧೀಶನಾ ||೬೩||

ವ|| ತದನಂತರಮೇ ಲೋಕಾಂತಿಕಾಮರವೃಂದಂ ಬಂದು [೧]ಬಿಚ್ಚಳಿಸಲೊಡಂ[೧] ವಜ್ರಕ್ಕೆ ಬಳಮಿತ್ತಂತೆ ವಜ್ರಸೇನಮಹಾರಾಜಂ ಪರಿನಿಷ್ಕ್ರಮಣಕಲ್ಯಾಣಪರಿಣತಮನನಾಮ್ರವನೋದ್ಯಾನದೊಳ್ ಸಹಸ್ರಸಂಖ್ಯಾವನಿಪಾಲಕರೊಡನೆ,

ಒಡಗವೊಗದಿರ್ದ್ದ ಕರ್ಮ್ಮದ
ತೊಡರಂ ಪಱಿವಂತೆ ಕೇಶಪಾಶಮನಂತಾ-|
ಗಡೆ ಪಱಿದು ತಪಂಗೊಂಡಂ
ಪೊಡರ್ವರಿಯುಂ ವಜ್ರನಾಭಿಯುಂ ಬೆಂಕೊಂಡಂ ||೬೪||

ವ|| ಅಂತಾತ್ರಿಲೋಕಗುರು ಧರಾತಲಂ ಪೊಗೞ್ವನಂ ಯತ್ಯಾಶ್ರಮದೊಳ್ ನಿಂದಂ, ಈ ಧರಾಧಿಪಂ ಗುರುರಾಜ್ಯಾಶ್ರಮದೊಳ್ ನಿಂದನಾಮುನೀಂದ್ರಂ ತಪೋನುಷ್ಠಾನದೊಳ್ ನಿಷ್ಠಿತನಾದನೀನರೇಂದ್ರಂ ರಾಜ್ಯಾನುಷ್ಠಾನದೊಳ್ ನಿಷ್ಠಿತನಾದನಾಮುನೀಶಂ ಮುಮುಕ್ಷುವೃತ್ತಿಯೊಳ್ ನೆಗೞ್ದನೀಕ್ಷಿತೀಶಂ ಕ್ಷತ್ರವೃತ್ತಿಯೊಳ್ ನೆಗೞ್ದನಾಮುನಿನಾಥಂ ತ್ರಿಗುಪ್ತಿಯೊಳ್ ನೆರೆದನೀಮಹೀನಾಥಂ ಮಂತ್ರಗುಪ್ತಿಯೊಳ್ ನೆರೆದನಾತಪಸ್ವಿ ಪರೀಷಹಂಗಳಂ ಗೆಲ್ದನೀತೇಜಸ್ವಿ ಬಲ್ಲಿದರಂ ಗೆಲ್ದನಾಮಹಾಯೋಗಿ ಗುಣಂಗಳಂ ಪಾಲಿಸಿದನೀಮಹಾಭೋಗಿ ನೆಲನಂ [೨]ಪರಿಪಾಲಿಸಿದ[೨]ನಾಮುನಿಯ ಮನೋಗಾರದೊಳ್ ಧ್ಯಾನಚಕ್ರಂ ಪುಟ್ಟಿತ್ತೀರಾಜ್ಯಾಶ್ರಮಮುನಿಯಾಯುಧಾಗಾರದೊಳ್ ಚಕ್ರರತ್ನಂ ಪುಟ್ಟಿತ್ತಾಮುನಿಚಕ್ರವರ್ತ್ತಿಯ ಮನದೊಳ್ ಮೂಱು[೩]ರತ್ನಂಗಳ್ ಬೆಳಗಿದವೀ[೩]ಸಕಲಚಕ್ರವರ್ತ್ತಿಯ ಮನೆಯೊಳ್ ಪದಿನಾಲ್ಕು ರತ್ನಂಗಳ್ ಬೆಳಗಿದುವಾಮುನಿವೃಷಭಂಗೆ ಕೇವಲಜ್ಞಾನೋತ್ಪತ್ತಿಯಾದುದೀರಾಜವೃಷಭಂಗೆ ಸಕಲಸಾಮ್ರಾಜ್ಯಸಂಪತ್ತಿಯಾದುದಾಪರಮೇಶ್ವರಂಗೆ [೪]ದೇವೇಂದ್ರ[೪]ರ್ಕ್ಕಳೆಱಗಿದರೀಧರಾಧೀಶ್ವರಂಗೆ ನರೇಂದ್ರರ್ಕ್ಕಳೆಱಗಿದರಾತ್ರಿಲೋಕತಿಲಕಂಗೆ ದಿವ್ಯಧ್ವನಿನೆಗೞ್ದುದೀಕುಲತಿಲಕಂಗೆ ದಿಗ್ವಿಜಯದುಂದುಭಿಧ್ವನಿ ನೆಗೞ್ದುದಾಮುನಿರಾಜಂ ಕರ್ಮ್ಮಂಗಳಂ

೧–೧ (ಚ) ಬಿಚ್ಚಳಿಸೆ. ೨–೨ (ಅ) ಪ್ರತಿಪಾಲಿಸಿದನಾ. ೩–೩ (ಅ) ರತ್ನಂ ಬೆಳಗಿದುವೀ (ಬ) ರತ್ನಂಗಳುಂ ಬೆಳಗಿದುವೀ. ೪–೪ (ಅ,ಬ) ದೇವರ್ಕ್ಕಳ್.

[೧]ಘಾತಿಸಿದನೀ[೧]ರಾಜರಾಜಂ ಷಟ್ಖಂಡಮಂಡಲಮಂ ಬಾಯ್ಕೇಳಿಸಿದನಾ[೨]ಭವ್ಯ-ರತ್ನಾಕರಂ[೨] ಚತುಸ್ತ್ರಿಂಶದತಿಶಯಭೋಗದೊಳ್ ಕೂಡಿದನೀಪುರುಷರತ್ನಾ-ಕರಂ ದಶಾಂಗಭೋಗದೊಳ್ ಕೂಡಿದಂ ಇಂತು,

ಗೃಹಪತಿರತ್ನಮಾಗೆ ಧನದೇವನಿಳಾತಳನಾಥನಾ ಮಹಾ-
ಮಹಿತಲ ಭೋಗಮಂ ನೆಱೆಯೆ ಭೋಗಿಸೆ ಸಂಸ್ಕೃತಿಭೋಗಮೆಯ್ದೆ ನಿ-|
ಸ್ಪೃಹತೆಯನಾಮಹೀಪತಿಗೆ ತಂದುದು ಭವ್ಯತೆ ಪುಣ್ಯಜೀವನುಂ
ಸಹಜಸುಖಾಸ್ಪದಂಬರೆಗಮುಯ್ವನಮಲ್ಲಿ ತೊಡಂಕಲೀಗುಮೇ ||೨೫||

ವ|| ಅಂತು ವಿಷಯವಿರಕ್ತನಾಗಿ,

ನೆಗಟ್ದೀಷಟ್ಖಂಡಮಂ ಸಾಧಿಸಿದೊಡೆ ಫಲಮೇಂ ಭೋಗದಿಂ
ಸಾಧ್ಯಮೇಂ ಬಂ-
ಧುಗಳಿಂದಂ ಪ್ಪುದೇಂ ಸುತ್ತಿದ ಪರಿಜನದಿಂದಪ್ಪುದೇನೊಂದುಮಿಲ್ಲ-|
[೩]ಚ್ಚಿಗವೊಂದುಂಟಲ್ಲಿ[೩] ಗಾಂಪಿಂ ತೊಡರ್ವೆನೆ ಪಡೆವೆಂ ಶಾಶ್ವತಶ್ರೀಯನೆಂಬು-
ಜ್ಜುಗದೊಳ್ ಚಿತ್ತಂ ಕರಂ ತಣ್ಮಲೆಯೆ ನೆಱೆಯೆ ನಿಶ್ಚೈಸಿದಂ
ಸಾರ್ವಭೌಮಂ ||೨೬||

ವ|| ಅಂತು ನಿಶ್ಚಯಿಸಿ ವಸುಂಧರಾಭಾರಮಂ ವಜ್ರದಂತನೆಂಬ ನಿಜಾಗ್ರ-ತನೂಜನೊಳ್ ನಿಱಿಸಿ ನಿಜಗುರುಚರಣಸಮೀಪದೊಳ್,

|| ಅಕ್ಕರಂ ||

ನಿಜತನೂಭವರ್ಸಾಸಿರ್ವರ್ ಪದಿನಾಱುಸಾಸಿರ್ವರ್ ಮಕುಟಬದ್ಧರ್
ನಿಜಲತಾಂಗಿಯರಯ್ವತ್ತುಸಾಸಿರ್ವರೆಣ್ಬರುಮಣುಗಿನ [೪]ಸೋದರರ್ಕ್ಕಳ್[೪] |
ನಿಜಸಹಾಯಂ ಗೃಹಪತಿರತ್ನಂ ಧನದೇವನುಂ ಬೆರಸಾಗಳ್ ವಜ್ರನಾಭಿ
ನಿಜದ ರೂಪುಮಂ ನಿರ್ಗ್ರಂಥರೂಪುಮಂ [೫]ಕೈಕೊಂಡು[೫] ನೆಗಟ್ದನಿಂತೀ
ಮಾಱ್ಕೆಯಿಂ ||೨೭||

ವ|| ಅದೆಂ[೬]ತೆಂದೊಡೆ[೬] ಹಿಂಸಾನೃತಸ್ತೇಯಾಬ್ರಹ್ಮಪರಿಗ್ರಹಪರಿತ್ಯಾಗಮೆಂ-ಬಯ್ದು ಮಹಾವ್ರತಂಗಳೊಳ್ ನೆರೆದು,

ನಡೆವ ನುಡಿವುಣ್ಬ [೭]ಕೊಳ್ವಿಡು-
ವೆಡೆಗಳೊಳ್ ಕಾಯು[೭] ಮಲಮನುಗುಟ್ವೆಡೆಯೊ[೮]ಳೊಡಂ-|

೧-೧ (ಚ) ಗಾಳಿಸಿದಂ ಈ. ೨-೨ (ಚ) ಭವ್ಯವರರತ್ನಾಕರಂ. ೩-೩ (ಚ) ಚ್ಚಿಗ-ವೊಂದುಂಟಲ್ಲಿ. ೪-೪ (ಅ,ಬ) ಸೋದರರ್ಕ್ಕಳ್. ೫-೫ (ಚ) ಕೈಕೊಂಡೇ. ೬-೬ (ಅ,ಬ) ತೆನೆ. ೭-೭ (ಚ) ಕೊಳ್ವಿಡುವೆಡೆಯೊಳ್ ತಾಂಕಾಯ; (ಬ) ಕೊಳ್ವಿಡುವೆಡೆಯೊಳ್ಕಾಯ; (ಗ) ಕೊಳ್ವರಿದಿಡುವೆಡೆಯೊಳ್ಕಾಯ. ೮ (ಅ,ಬ) ಳ.

ಒಡನೆನಿಸದೋವಿ ಜೀವಮ-
ನಡಕಂಬೆರಸಯ್ದುಸಮಿತಿಯೊಳ್ ಮುನಿ ನೆಗಱ್ದಂ ||೭೮||

ವ|| ಮತ್ತಮಿವು ಮೊದಲಾಗಿಪ್ಪತ್ತೆಂಟು ಮೂಲಗುಣಂಗಳೊಳಮುತ್ತರಗುಣಂಗಳೊಳಮುತ್ತರೋತ್ತರಂ ನೆಗಱ್ದು,

ಮನಮಂ ನುಡಿಯುಂ ಮೆಯ್ಯುಂ
ತನಗೆ ವಶಂಮಾಡಿ ಗುಪ್ತಿಗುಪ್ತಂ ಮುನಿಯಿಂ- ।
ಬಿನೆಗಂ ನೆಗಱ್ದಂ ಗುಪ್ತಿಯೆ
ತನಗಿಲ್ಲದೆ ಕರ್ಮ್ಮಾರಿಪುಗೆ ಮುನಿವುದು ಮೊಗ್ಗೇ ||೭೯||

ವ|| ಮತ್ತಂ ಚತುರಶೀತಿಶತಸಹಸ್ರಗುಣಮಣಿಭೂಷಣ[೧]ಭೂಷಿತ[೧]ನುಮಷ್ಟಾದಶಸಹಸ್ರಶೀಲರತ್ನಾಕರನುಮಾಗಿ ಪಂಚದಶಪ್ರಮಾದಂಗಳಂ ಬಂಚಿಸಿ,

ಏಕಧನುರ್ಧರನಾದನಿ-
ಳಾಕಾಂತೆಯನೊಲಿಸುವಂದು ಮುನಿಪತಿಯಾಗಿ- ।
ರ್ದ್ದೇಕೆಂದಱಿಯೆಂ ದಶಧನು-
ರಾಕಲಿತಕರಾಗ್ರನಾದನೆನಗಿದು ಚೋದ್ಯಂ ||೮೦||

ವ|| ಎಂಬಿನಮುತ್ತಮಕ್ಷಮಾಮಾರ್ದ್ದವಾರ್ಜ್ಜವಸತ್ಯಶೌಚಸಂಯಮತಪಸ್ತ್ಯಾಗಾಕಿಂಚನ್ಯ[೨]ಬ್ರಹ್ಮಚರ್ಯ್ಯಪರ್ಯ್ಯಾಯಪರ್ಯ್ಯಾ[೨]ಪ್ತದಶ[೩]ಧರ್ಮ್ಮಾಂಗಳಂ[೩] ಕೈಕೊಂಡು ಸಾಕಾರನಿರಾಕಾರಗತಮಪ್ಪನಶನಮೆಂಬ ಮೊದಲ ತಪದೊಳಮೇಕಕಬಲೋನಾದ್ಯೇಕಸಿಕ್ಥಪ್ರಮಾಣಾಹಾರಂಬರಂ ಬಪ್ಪವಮೋದರ್ಯ್ಯಮೆಂಬೆರಡನೆಯ [೪]ತಪದೊಳಮಿಂತಪ್ಪೆಡೆಯೊಳಿಂತೆಂಬವರ್ ನಿರಿಸಿ[೪]ದೊಡಲ್ಲದೆ ನಿಲ್ಲೆನೆಂಬ ನಿಯಮಮಂ ಮೊದಲಾಗೆ ವೃತ್ತಿಪರಿಸಂಖ್ಯಾನ[೫]ನಾಮದ[೫] ಮೂಱನೆಯ ತಪದೊಳಂ, ಕ್ಷೀರದಧಿಘೃತಲವಣತೈಲಾದಿರಸಂಗಳಂ ಪರಿತ್ಯಾಗಂಗೆಯ್ವ ರಸಪರಿತ್ಯಾಗಮೆಂಬ ನಾಲ್ಕನೆಯ ತಪದೊಳಂ, ಸ್ತ್ರೀಪುನ್ನಪುಂಸಕಮೃಗಪಶುಪರಿವರ್ಜ್ಜಿತವಿವಿಕ್ತಸ್ಥಾನಂಗಳೊಳ್ ನೆಲಸುವ ವಿವಿಕ್ತಾ[೬]ವಾಸಮೆಂಬಯ್ದನೆಯ ತಪದೊಳಂ ನೆಱೆದು, ಕಾಯಕ್ಲೇಶಮೆಂಬಾಱನೆಯ ತಪಮನೆತ್ತಿಕೊಂಡು,

೧-೧ (ಚ) ವಿಭೂಷಿತ. ೨-೨ (ಚ) ಬ್ರಹ್ಮಚರ್ಯಾಪರ್ಯಾಪ್ತ. ೩-೩ (ಚ) ಧರ್ಮಾಂಗಳುಮಂ. ೪-೪ (ಚ) ತಪದೊಳಂ, ಇತೆಂಬೆಡೆಯೊಳಿಂತೆಂಬವರ್ ನಿಱಿಸಿ. ೫-೫ (ಚ) ನಾಮಮಾದ. ೬ (ಚ) ಕ್ತ.

ಸುತ್ತಲುಮುಱಿಮಾಲೆಗಳನೆ
ಪೊತ್ತಿಸಿದವೊಲುೞುರೆ ತಪನಕಿರಣಾಳಿ ಮುನೀಂ-|
ದ್ರೋತ್ತಮಗುರು ಕಲ್ಲನೆ ನಿಂ-
ದೆತ್ತಿದ ಬೆಳ್ಗೊಡೆಯ ನೆೞಲೊಳಿರ್ಪ್ಪಂತಿರ್ದ್ದಂ ||೩೧||

ಮೊರೆದೆಱಗಿ ಕೊರ್ವ್ವ ಮುೞಿಕಿ ಭೋ-
ರ್ಗ್ಗರೆದೂದುವ ಗಾಳಿ ಸಿಡಿದು ಪೊಯ್ವ ಸಿಡಿಲ್ ಕಾ-|
ಱಿರುಳೊಳಗುರ್ವ್ವಂ ಪಡೆದಿರೆ
ಮರವಾನಸಸನೆನೆ ತಪಸ್ವಿ ಮರಮೊವಲಿರ್ದ್ದಂ ||೩೨||

ತನು ಪಂಜಿವೊಲ್ ಬೆಳತ್ತಿ-
ರ್ಪ್ಪಿನೆಗಂ ಹಿಮಮೆಕ್ಕಿದರಲಿವೊಲ್ ಪುದಿದಿರೆಯುಂ|
ತನುತನಗಲ್ತೆಂದೇಕಾಂ-
ತನಿವಾಸದೊಳಿಂತು ಬೆಳ್ಳವಾಸದೊಳಿರ್ದ್ದಂ ||೩೩||

ವ|| ಮತ್ತಮಭ್ಯಂತರತಪಷ್ಷಟ್ಕದೊಳಂ ಪ್ರಾಯಶ್ಚಿತ್ತವಿನಯವೈಯಾ-ವೃತ್ಯಸ್ವಾಧ್ಯಾಯಧ್ಯಾನವ್ಯು[೧]ತ್ಸರ್ಗ್ಗಂಗಳನೊಳಕೊಂಡಿಂತು ಪನ್ನೆರಡು ತೆಱದ-ತಪ[೧]ದೊಳ್ ನೆಱೆದಿರ್ಪ್ಪತ್ತೆರಡುಪರೀಷಹಂಗಳಂ ಗೆಲ್ದು [೨]ಗುಣಧರಗಣಮಂ ಬಿಸುಟ್ಟೇ[೨]ಕವಿಹಾರಿಯಾಗಿ ಬೞಿಯುಂ ತ್ರೈಲೋಕ್ಯಕ್ಷೋಭಕಾರಣತೀರ್ಥಕರ-ಪುಣ್ಯಹೇತುಗಳಪ್ಪ ಷೋಡಶಭಾವನೆಗಳಂ ಭಾವಿಸಿ, ಭಾವನೆಯೊಳಾದ ಬುದ್ಧಿ-ತಪೋವಿಕ್ರಿಯೌಷಧಿರಸಬಲಾಕ್ಷೀಣಾಭಿಧಾನಸಪ್ತರ್ದ್ಧಿಗಳೊಳಂ ನೆಱೆದು, ಬೞಿಯುಂ ಮೋಹನೀಯಕರ್ಮ್ಮೋಪಶಮದೊಳ್[೩] ವಿಶುದ್ಧ್ಯತಿಶಯ[೩]ವಿಶೇಷದಿ-ನುಪಶಮಶ್ರೇಣ್ಯಾರೋಹಣಂಗೆಯ್ದು ನಿರವಶೇಷಮೋಹೋಪಶಮೋದ್ಭೂತ-ಯಥಾಖ್ಯಾತಚಾರಿತ್ರಸಂಪನ್ನನಂತರ್ಮ್ಮುಹೂರ್ತ್ತದಿಂ ಸ್ವಸ್ಥಾನಸ್ಥಿತನಾಗಿ ಕಾಲಾಂತರದೊಳ್ ಶ್ರೀಪ್ರಭಾದ್ರಿಶಿಖರದೊಳ್ ಪ್ರಾಯೋಪಗಮನವಿಧಿಯಿಂ ತ್ವಗಸ್ಥಿಭೂತಸರ್ವ್ವಾಂಗಂ ಧೈರ್ಯ್ಯಮನೆ ಮನದೊಳವಲಂಬಿಸಿ,

ಬಿಸಿಲ್ಕೈಕಿಲ್ ಪಸಿವುಗ್ರದಂಶಮಶಕವ್ಯಾಬಾಧೆ ನೀರಟ್ಕೆ ಪೊ-
ಯ್ವಸಿಡಿಲ್ ತಿಂಬರೆವಾವು ಪಾಯ್ವ ಪುಲಿಯೆಂಬೀಬಾಧೆಯೊಳ್ ಮೆಯ್ಯನೊ-|
ಡ್ಡಿಸೆ ಮೆಯ್ಯೊಳ್ ಮಿಡುಕುಳ್ಳ ತಾಣಮಣಮಿಲ್ಲೆಂಬಂತುನಿಷ್ಪಂದನಾ-
ಗಿ [೪]ಸಮನ್ವಿತಗುಣಂ[೪]ಗುಣಂಗೊಳಿಸಿದಂ [೫]ಯೋಗೀಂದ್ರವೃಂದಾರಕಂ[೫] ||೩೪||

೧-೧ (ಚ) ವ್ಯುತ್ಸರ್ಗಂಗಳಂ ಕೈಕೊಂಡು ಪನ್ನೆರಡುತಪ. ೨-೨ (ಚ) ಗಣಧರಗ-ಣಮುಂ ಬಿಟ್ಟೇ. ೩-೩ (ಚ) ವಿಶುದ್ಧಾತಿಶಯ. ೪-೪ (ಚ) ಸಮನ್ವಿತಮನಂ. ೫-೫ (ಚ) ಯೋಗೀಂದ್ರವೃಂದಂಗಳಂ.

ವ|| ಅಂತನಿತ್ಯಾದಿದ್ವಾದಶಾನುಪ್ರೇಕ್ಷಾನುಸ್ಮರಣಪರಿಣತಾಂತಃಕರಣನಾಗಿ ಮತ್ತಮೆರಡನೆಯ ಸೂೞೊಳಮುಪಶಮಶ್ರೇಣಿಯನೇಱಿ ಚತುರ್ವ್ವಿಧಶುಕ್ಲಧ್ಯಾನದೊಳ್ ಪೂರ್ವ್ವಾಪರವಿಷಯ[೧]ವಿವಿಕ್ತಾರ್ತ್ಥವ್ಯಂಜನಯೋಗ[೧]ಸಂಕ್ರಮಣ[೨]ಲಕ್ಷಣಮಪ್ಪ[೨] ಪೃಥಕ್ತ್ವವಿತರ್ಕ್ಕವಿಚಾರಮೆಂಬ ಮೊದಲ ಶುಕ್ಲಧ್ಯಾನದೊಳ್ ಸಮಾಹಿತನುಪಶಾಂತಗುಣಸ್ಥಾನದೊಳ್ ಪ್ರಾಣಪರಿತ್ಯಾಗಂಗೆಯ್ದು ಸರ್ವ್ವಾರ್ತ್ಥಸಿದ್ಧಿಯೊಳಹಮಿಂದ್ರನಾದನದು ಜಂಬೂದ್ವೀಪೋಪಮಾನವಿಸ್ತಾರಪರಿಣಾಹ[೩]ಪರಿಮಾಣಮಂ[೩]ಕೈಕೊಂಡು,

ಪನ್ನೆರಡುಯೋಜನಂ ಲೋ-
ಕೋನ್ನತಿಯೆನೆ ತತ್ತ್ರಿಷಷ್ಟಿಪಟಲದ ತುದಿಯೊಳ್ |
ರನ್ನದ ಕಳಶಕ್ಕೆಣೆಯಿಂ-
[೪]ಬನ್ನಿಗಮದು ಸುಖಸುಧಾಕರಂ ಸ್ವಸ್ತಿಕರಂ[೪] ||೩೫||

ಅದು ನೀಲಮಯಮಹೀತಲ-
ಮದು ನವಪುಷ್ಪೋಪಹಾರತಾರಕಿತಮದ- |
ಭ್ಯುದಯಸುಖನಿಲಯಮದು ಮೋ-
ಕ್ಷದ [೫]ನೆರೆಮನೆ[೫] ಲಂಬಮಾನಮುಕ್ತಾದಾಮಂ ||೩೬||

ನೆರೆದಹಮಿಂದ್ರರ ತನುಪರಿ-
ಕರದ ನೆೞಲ್ಗಳ್ ಪಳಚ್ಚನೆಸೆದಿರೆ ನೋಟ- |
ಕ್ಕೆರಡನೆಯ ನಾಕಲೋಕದ
[೬]ವಿರಚನೆಯಂ[೬] ಪಡೆವುದದಱ ರನ್ನದ ಕೇಗ್ಗಳ್ ||೩೭||

ವ|| ಅದರ [೭]ಪರಾರ್ದ್ಧ್ಯ[೭]ರತ್ನರಚನಾವಿಚಿತ್ರೋಪಪಾತಶಯನತಳದೊಳಂತರ್ಮ್ಮುಹೂರ್ತ್ತದೊಳ್ ಪರ್ಯ್ಯಾಪ್ತಿಯಂ ಕೈಕೊಂಡು,

ಧಾತುಮಲದೋಷರಹಿತಂ
ವೀತನಖಶ್ಮಶ್ರುಕೇಶಲೋಮಂ ಶೋಭಾ- |
ನ್ವಿತಪರಿಪೂರ್ಣ್ಣಯೌವನ-
ಮಾತತಶುಭಲಕ್ಷಣಂ ಮನೋಹರರೂಪಂ ||೩೮||

೧-೧ (ಚ) ವಿವಿಕ್ತಾರ್ತ್ಥವ್ಯಂಜನವೀರ್ಯವಿಧಿವ್ಯಂಜನಯೋಗ. ೨-೨ (ಚ) ಲಕ್ಷಣಲಕ್ಷಿತಮಪ್ಪ. ೩-೩ (ಚ) ಪರಿಣಾಮಮಮಂ. ೪-೪ (ಅ) ಬನ್ನಿಗಮದು ಸುಖಸುಧಾಕರಂ ಸ್ವಸ್ತಿಳಕಂ; (ಬ) ಬನ್ನಿಗಮೆಸೆದಿರ್ದ್ದ ಕಣ್ಗೆಸೊಗಯಿಸಿ ತೋರ್ಕ್ಕುಂ. ೫-೫ (ಅ) ನೆರೆಯನೆ. ೬-೬ (ಅ) ವಿರಚನೆಯನೆ. ೭-೭ (ಚ) ಪರಾರ್ಥ್ಯ.

ಪಳುಕಿನ ಪಾಪೆಯುನವುರ್ದಿಂ
ತೊಳೆದಂತೊರ್ಮ್ಮೊಟಿದ ದಿವ್ಯವಪು ಮಣಿಮಯಕುಂ-।
ಡಲಮಕುಟಕಟಕಭೂಷಣ-
ವಿಲಾಸದಿಂದೇಂ ವಿಲಾಸಮಂ ತಾಳ್ದಿದುದೋ ॥೩೯॥

ಬಾಡದ ಬಾಸಿಗಮುಡೆ ಜೆ-
ಲ್ಪೋಡದ ದಿವ್ಯಾಂಬರಂ ಮನಂಗೊಳೆ ಸುಖದೊಳ್
ಮೂಡುವ ಮುಟ್ಟಾಡುವ ತಡು-
ಮಾಡುವ [೧]ಬಗೆಯಲ್ಲದಲ್ಲಿ[೧] ಬಗೆ ಪೆಱತುಂಟೇ ॥೪೦॥

[೨]ಅಣಿಮಾದ್ಯಷ್ಟಗುಣಂಗಳ[೨]
ಕಣಿಯಿರ್ಪ್ಪಂತಿರ್ದ್ದುದಮಖಿಲಸುರಲೋಕಶಿಖಾ-।
ಮಣಿಗಳ್ ಲೋಕೈಕಶಿಖಾ-
[೩]ಮಣಿಗಳ್ಗಲ್ಲಿರ್ದ್ದ[೩] ವಿನತಮಸ್ತಕರಪ್ಪರ್ ॥೪೧॥

ಶುಭಭಾವಶುಕ್ಲಲೇಶ್ಯಾ-
ಸುಭಾವದಿಂ ಧವಳಪುಂಡರೀಕನಿಕಾಶ-।
ಪ್ರಭೆ ದೊರೆಕೊಂಡುದು ಪರಿಣಾ-
ಮಭೇದಮೇಂ ಚಿತ್ರವಿಧಮೊ ತನುಭೃದ್ಗಣದಾ ॥೪೨॥

ಪದಿನಾಱು ತಿಂಗಳಿಂದಂ
ತುದಿಯೊಳ್ ಪದಿನೈದು ದಿವಸಮಾದೊಡೆ ಸುಯ್ವಂ।
ತೊದಳುಂಟೆ ನಿಃಪ್ರವೀಚಾ-
ರದಿಂದಮಹಮಿಂದ್ರನಖಿಲಸುಖಮಂ ಪಡೆವಂ ॥೪೩॥

ಸ್ತ್ರೀಸಂಸರ್ಗ್ಗಂ ಸುಖಮೆಂ
ಬೀಸಂಸಾರಿಗಳೆ ಜಡರದಪ್ಪೊಡೆ ತನುಗಾ-।
ಯಾಸಕರಂ ಶುಕ್ಲಾರ್ತ್ತವ-
ವಾಸಿತಮಾಪಾತಮಾತ್ರರಮಣೀಯತರಂ ॥೪೪॥

ಆದಱಿಂದಂ ತನ್ನೊಳ್ ಪು
ಟ್ಟಿದ ಸಂತಸದಿಂದಮಾದ ಸುಖಮದು ಸುಖಮ-।

---

೧ (ಜ) ಬಗೆಯಿಲ್ಲದಲ್ಲಿ. ೨-೨ (ಅ.ಬ) ಅಣಿಮಾದಿಗುಣಗಣಂಗಳ. ೩-೩ (ಜ) ಮಣಿಗಳುಮಲ್ಲಿರ್ದ್ದ.

ಲ್ಲದುದಲ್ತು [೧]ವಸ್ತುವಿಂದಾ-
ಮದು[೧]ವಸ್ತುವೆ ಕುಂದೆ ಕುಂದುಗುಂ ನಿಮಿರ್ದಪುದೇ ||೪೫||

ಆನಾಕನಿಕಾಯದ ಸುಖ-
ಮೇಸುಂ ದೊರೆಯಲ್ಲದಕ್ಕೆ ಮೋಕ್ಷದ ಸುಖದಿಂ-|
ದೇನಾನುಂ ಕುಂದುಗುಮದು
ತಾನೆನೆ ಬಣ್ಣಿಸುವನಾವನಲ್ಲಿಯ ಸುಖಮಂ ||೪೬||

ನೆನೆದಹಮಿಂದ್ರಂ ತಣಿವೊಂ
ಮನದೊಳ್ ಮೂವತ್ತುಮೂಱುಸಾಸಿರ ವರ್ಷ-|
ಕ್ಕನತಿಶಯ[೨]ಸುಧಾಶನದೊಳ್[೨]
ವನನಿಧಿ ಮೂವತ್ತುಮೂಱುಮಂ ಸಲೆ ಬಾಳ್ವಂ ||೪೭||

ಧನದೇವನುಮೆಣ್ಬರ್ ತ
ನ್ನನುಜರುಮಹಮಿಂದ್ರರಾಗೆ ನೆಱೆದವರೊಳ್ ಮು-|
ನ್ನಿನ ಭವದ ಪುಣ್ಯಕಲ್ಪಾ-
ವನಿಜದ ತನಿವಣ್ಣರಸದೆ ತಣ್ಣನೆ ತಣಿವಂ ||೪೮||

ವ|| ಅನ್ನೆಗಮಿತ್ತ ಮೇರುಗಿರಿಯೆ ತನಗೆ ನಾಭಿಯಾಗಿ[೩] ಸೊಗಯಿಸುವ ಜಂಬೂಮಹೀರುಹಲಾಂಛನದ್ವೀಪಾಂತರ್ಗ್ಗತಭರತ[೪]ಕ್ಷೇತ್ರಮಧ್ಯಮ[೪]ಖಂಡದೊಳ್ ಮುಖ್ಯಂ ವ್ಯವಹಾರಮೆಂಬೆರಡುಂ [೫]ಕಾಲದೊಳಾದಿಮಧ್ಯಾವಸಾನ[೫]ವಿರಹಿತಮುಂ ವರ್ತ್ತನಾಲಕ್ಷಣಮುಂ [೬]ಪರಿಣಾಮದ್ರವ್ಯ[೬]ಪರಿವರ್ತ್ತನಕಾರಣಮುಂ ಲೋಕಾಕಾಶ[೭]ಪ್ರದೇಶಪರಿಮಾಣಮು[೭]ಮಸ್ಮದಾದ್ಯಸುಮೇಯಮುಂ ಸರ್ವ್ವಜ್ಞಪ್ರತ್ಯಕ್ಷಗೋಚರಮುಮಪ್ಪುದು ಮುಖ್ಯಕಾಲಂ ವ್ಯವಹಾರಕಾಲಮೆಂಬುದು ಮುಖ್ಯಕಾಲನಿರ್ವ್ವರ್ತ್ತಿತಕ್ರಿಯಾರೂಪಮದು ಸಮಯಾವಲಿಕೋಚ್ಛ್ವಾಸಸ್ತೋಕನಿಮೇಷನಾಡಿಕಾಮುಹೂರ್ತ್ತದಿವಸಪಕ್ಷಮಾಸರ್ತ್ವಯನಸಂವತ್ಸರಾದಿಗಣನಾನುಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದದು ಶರೀರಬಳಾಯುರುದ್ದೇಹಪ್ರಮಾಣೋಪಚಯಾಪಚಯಹೇತುತ್ವದಿಂದಮುತ್ಸರ್ಪ್ಪಿ-

೧-೧ (ಚ) ವಸ್ತುವಿಂದಾದುದೆ. ೨-೨ (ಅ) ಸುಧಾಶನಮಂ; (ಕ) ಸುಖಾಸನದೊಳ್ ೩ (ಚ) ಗೆ. ೪-೪ (ಚ) ಕ್ಷೇತ್ರ ಮಧ್ಯಮಧ್ಯಮ. ೫-೫ (ಬ) ಕಾಲದೊಳನಾದಿಮಧ್ಯಾವಸಾನ; (ಚ) ಕಾಲದೊಳಗಾದಿ ಮಧ್ಯಾವಸಾನ. ೬-೬ (ಚ) ಪರಿಮಾಣದ್ರವ್ಯ. ೭-೭ (ಚ) ಪ್ರದೇಶಪ್ರಮಾಣಪರಿಮಾಣಮುಂ.

ಣ್ಯ[೧]ವಸರ್ಪಿಣಿಸಾಮಮುಂ ಪಡೆದುವದೊಂದು ಪತ್ತುಕೋಟಿಕೋಟಿಸಾಗರೋಪಮಸಂಖ್ಯೆಯುಂ ತಾಳ್ದಿ ಸುಷಮಸುಷಮಮುಂ ಸುಷಮಮುಂ ಸುಷಮದುಷ್ಷಮಮುಂ ದುಷ್ಷಮಸುಷಮಮುಂ ದುಷ್ಷಮಮುಮತಿ[೨]ದುಷ್ಷಮಮುಮೆಂದೊಂದೊಂದು[೨] ಷಡ್ಭೇದಭಿನ್ನಮಾದುದಲ್ಲಿ ಮುನ್ನಮವಸರ್ಪಿಣಿಯೊಳುತ್ತಮಭೋಗಭೂಮಿಸ್ಥಿತಿಯೊಳ್ ನಾಲ್ಕು*ಕೋಟಾಕೋಟಿ* ಸಾಗರೋಪಮಪ್ರಮಾಣಂ ಸುಷಮಸುಷಮಮೆಂಬಕಾಲಮುಂ ಮಧ್ಯಮ ಭೋಗಭೂಮಿಸ್ಥಿತಿಯೊಳ್ ಮೂಱುಕೋಟಾಕೋಟಿಸಾಗರೋಪಮಪ್ರಮಾಣಂ ಸುಷಮಮೆಂಬಕಾಲಮುಂ ಜಘನ್ಯಭೋಗಭೂಮಿಸ್ಥಿತಿಯೊಳೆರಡುಕೋಟಾಕೋಟಿಸಾಗರೋಪಮಪ್ರಮಾಣಂ ಸುಷಮದುಷ್ಷಮಮೆಂಬ ಕಾಲಮುಂ ಕ್ರಮದೊಳ್[೩] ಷಟ್ಚತುರ್ದ್ವಿಸಹಸ್ರಚಾಪೋತ್ಸೇಧಂಗಳುಂ ತ್ರಿದ್ವ್ಯೇಕಪಲ್ಯೋಪಮಾಯುಷ್ಯಂಗಳುಂ ತ್ರಿದ್ವ್ಯೇಕದಿನಾಂತರಿತ[೪]ಬದರಾಕ್ಷಾಮಲ[೪]ಕಪ್ರಮಾಣಾಹಾರಂಗಳುಮಪ್ಪ ಮಿಥುನಂಗಳ್ಗೆ[೫]ಸಂಭೋಗ್ಯ[೫]ಮಾಗಿ ನಲೆ ಜಘನ್ಯಭೋಗಭೂಮಿಯ ಕಡೆಯ ಪಲಿತೋಪಮದೆಂಟನೆಯ ಭಾಗಮುೞಿದುದಂ[೬]ಬಂದಿಂಗೆ[೬],

ಉತ್ತಮಮಧ್ಯಮಾಧಮಗುಣಂ ನಿಜದಾನದೆ[೭] ಭೋಗಭೂತಳ-
ಕ್ಷೇತ್ರಮೊಡಂಬಡಂ ಪಡೆಯೆ ಬೇಡಿದ ಭೋಗಮನಿತ್ತು ಪೇೞ್ವುದಿಲ್ |
ತ್ರಿತ್ರಿವರ್ಗಿಗೆತ್ತೆ[೮]ವೆಂಬಲ್ ಬಗೆ ತೊಟ್ಟನೆ ಪುಟ್ಟಿರೆ ಮುನ್ನಮಿತ್ತು ಬಿ-
ಳ್ಕುತ್ತಿ[೯]ನಿಸಿರ್ದ್ದ ಪಾರ್ಥಿವರೊಳೇಂ ದೊರೆಯಾದುದೊ ಕಲ್ಪಪಾರ್ಥಿವಂ ||೪೯||

ಮರಗಳೆ ಮುನ್ನಿತ್ತಿನಿಸಂ
ಮರವಟ್ಟವು ಪೆಟ್ಟುವೆಚ್ಚಿ ಕುದಿದಿತ್ತೊಡಮೀ-|
ಧರಣಿತಲಕ್ಕವಿವೇಕಿಯ
ಮರವಾನಸ್ ನೀವ್ ಚಾಗಮೇಂ[೧೦]ನಿಮಿರ್ದಪುದೇ[೧೦] ||೫೦||

ಪಿಂಗದೆ ಬೆಳಗುವ ಗುಣಮದು
ಪಿಂಗಲೊಡಂ ಜ್ಯೋತಿರಂಗಭೂಜಂಗಳ [೧೧]ತೇ-|
ಜಂಗಳ್ ಮಸುಳ್ದುವು[೧೧] ದಾನಗು-
ಣಂಗಳ್ ಕಿಡೆ ತೇಜದುಡುಕಮುಂ[೧೨] ಪಿರಿದಾಯ್ತೇ ||೫೧||

೧ (ಚ) ಣೆಯ. ೨-೨ (ಅ) ದುಷ್ಷಮಮೆಂಬೊಂದು; (ಬ) ದುಷ್ಷಮಮೆಂದೋರಂತು. ೩ (ಚ) ಳ್. ೪-೪ (ಚ) ಬದರಾಕ್ಷಧಾತ್ರೀಫಳ. ೫-೫ (ಅ) ಸುಭೋಗ್ಯ. ೬-೬ (ಚ) ಬನ್ನೆಗಂ. ೭ (ಚ) ದ. ೮-೮ (ಅ) ಮ|ತ್ತೆತ್ತಿವರ್ಗಿಗೆತ್ತೆನೆಂಬ. ೯-೯ (ಚ) ನಿತ್ತ. ೧೦-೧೦ (ಚ) ಮೆನಿರ್ದಪುದೇ. ೧೧-೧೧ (ಅ) ತೇಜಂಗಳ್ನೆರೆ ಕೆಟ್ಟವು; (ಬ) ತೇಜಂಗಳ್ಕೆಟ್ಟವು. ೧೨ (ಚ) ಮೇಂ.

*—* (ಚ) ಎಲ್ಲ ಕಡೆಗೆ "ಕೋಟಿ ಕೋಟಿ" ಎಂದಿದೆ.

ವ|| ಅನ್ನೆಗಮಾಷಾಢಪೌರ್ಣಮಾಸೀವಾಸರಸಾಯಂತನಸಮಯದೊಳ್ ಪರಭಾಗಂಬಡೆದು ಗಗನೋಭಯಭಾಗದೊಳ್ ದಿಗ್ಭಿತ್ತಿಗಳುಂ ಭೋಗಭೂಮಿಜರ ಚಿತ್ರಭಿತ್ತಿಗಳುಮೊಡನೊಡನೆ ಬೆಳಗೆ ಕಾಲರಾಜನ ಜಗದ್ಗೃಹಪ್ರವೇಶಕ್ಕೆ ನಿಱಿ-ಸಿದ ಕನಕಕಲಶಯುಗಲಮುಮಾಪೌರ್ಣಮಾಸೀಸೌಂದರಿಯ ಸಿಂದೂರಾರುಣ-ಕ್ರೀಡಾಗೋಲಕಂಗಳುಮಂ ಪೋಲ್ತು,

ಗಗನಗಜಕ್ಕಿಕ್ಕಿದ ಪೊ-
ನ್ನ ಗಂಟೆಯಿರಡೆನಲುಮಂಬರಾಂಭೋನಿಧಿಯೊಳ್ |
ನೆಗೆದುರಿವೌರ್ವ್ವಾನಲದು-
ರ್ಬ್ಬುಗಳೆನಲುಂ ನೆಗೆದುವಹಿಮಹಿಮಕರಬಿಂಬಂ ||೫೨||

ವ|| ಅಂತವಂ ಕಂಡು ಬೆರ್ಚ್ಚಿ ಬೆಗಡುಗೊಂಡ ಭೋಗಭೂಮಿಜರಂ ಜಾಜ್ವಲ್ಯಮಾನ[೧]ಮುಕುಟಮಕರಕುಂಡಲನುಂ[೧] ನಾನಾ[೨]ಭರಣಭಾಭಾಸುರೋ[೨]ದಾರವಿಗ್ರಹನುಂ ನಿಜತೇಜೋನಿರ್ಭ್ಭರನಿರ್ಭ್ಭರ್ತ್ಸಿತತರವಿಗ್ರಹನುಂ ಜನ್ಮಾಂತರಾ-ಭ್ಯಾಸಜನಿತಾವಧಿಬೋಧೋದಯವಿದಿತ[೩]ಕಾಲನಿಯೋಗನು[೩]ಮಷ್ಟಶತಾಧಿಕ-ಚಾಪಸಹಸ್ರೋತ್ಸೇಧನುಂ ಪಲ್ಯೋಪಮದಶಮಭಾಗಾಯುಷ್ಯನುಮಪ್ಪ[೪]ಗ್ರಿಮ-ಕುಲಧರಂ[೪] ಪ್ರತಿಶ್ರು[೫]ತಿಯೆಂಬಂ[೫],

ಜ್ಯೋತಿರ್ಬ್ಬಜಾತತೇಜಂ ಪಸರಿಸುವುದಱಿಂದಿಂನೆಗಂ[೬]ಕಂಡಿರಿಲ್ಲಿಂ[೬]-
ತೀತೇಜೋರೂಪಮಾಗಿರ್ದ್ದಪುವಿನಶಶಿಬಿಂಬಂಗಳೀತೋರ್ಪ್ಪುದೇನಾ-|
ಜ್ಯೋತಿರ್ ಲೊಕಂ ಮನಂಗುಂದದಿರಿಮಿವು ಮನಸ್ತಾಪಮಂ ಮಾಡವೆಂದಾ-
ಭೀತಾತ್ಮಾರ್ಯ್ಯರ್ಕ್ಕಳಂ ಸಂತಯಿಸಿದನಮೃತಾಸಾರಸಾರಪ್ರಣಾದಂ ||೫೩||

ವ|| ಆಮನ್ವಂತರಮಸಂಖ್ಯೇಯವರ್ಷಕೋಟಿ ಕುಂದುತ್ತುಂ ಬರ್ಪ್ಪಿನಂ ತತ್ಪ್ರಸ್ತಾವದೊಳ್ತ್ರಿಶತಯುತ ಸಹಸ್ರ[೭]ದಂಡೋಚ್ಛ್ರಿ[೭]ತಶರೀರನುಂ[೮]ಪಲ್ಯೋ-ಪಮದಶಭಾಗಾಯುಷ್ಯನುಮಪ್ಪ[೮] ಸನ್ಮತಿಯೆಂಬೆರಡನೆಯ ಮನು ಪುಟ್ಟಿದಂದು,

ತಾರಗೆಗಳಗೆಗಳಂತಿರೆ
ತಾರಾಪಥದೊಳ್ ನಿರಂತರಂ ತುಱುಗಿರೆ ಕಂ-|

೧-೧ (ಚ) ಮುಕುಟಕುಂಡಳನು. ೨-೨ (ಚ) ಭರಣಭಾಸುರೋ. ೩-೩ (ಅ) ಕಾಲ-ವಿನಿಯೋಗನುಂ; (ಬ) ಕಲಾನಿಯೋಗನುಂ. ೪-೪ (ಅ) ಗ್ರಿಮಪ್ರಥಮಕುಲಧರಂ. ೫-೫ (ಅ) ಶ್ರುತಿಯೆಂಬಂ ಪುಟ್ಟೆ; (ಬ) ಸ್ರುತಿಯೆಂಬನಿಂತೆಂಪಂ. ೬-೬ (ಚ) ಕಂಡುದಿಲ್ಲಿಂ. ೭-೭ (ಅ) ದಂಡೋತ್ಸೇಧ. ೮-೮ (ಅ) ಅಮುಮುಮಿತ ಪರಮಾಯುಷ್ಯನುಮಪ್ಪ; (ಬ) ಅಮುಯುಮಿತಸಮಾಯುಷ್ಯನುಮಪ್ಪ; (ಗ) ಮುಖಮುಪೋತಪರಮಾಯುಷ್ಯನುಮಪ್ಪ.

ಡೋರಂತೆ ನಡುಗುವಾರ್ಯ್ಯರ-
ನಾರಾಧಿತ[1]ಬೋಧನಾತನಿಂತಿರೆ[1] ನುಡಿದಂ ||೫೪||

ಉದಯಾಸ್ತಸಮಯಮೀ ಚಂ-
ದ್ರದಿವಾಕರ[2]ಮಂಡಲಕ್ಕಮಿಲ್ಲಿಂದಂ[2] ತೋ-|
ರ್ಪ್ಪುದು ತಾರಕಾಳಿ ನಭಮುಂ
ಪುದಿದಿರ್ಕ್ಕುಮಿದರ್ಕ್ಕೆ ನಿಮಗೆ ಮನಕತಮುಂಟೇ ||೫೫||

ವ|| ಎಂದವರ್ಗೆ ಸನ್ಮತಿವಿಕಾಸಮಂ ಮಾಡಿದುದಱಿನಾ ಮನುಗೆ ಸನ್ಮತಿಯೆಂಬ ಪೆಸರಾದುದಾತನಿಂ ಬೞಿಯಮಸಂಖ್ಯೇಯಸಂವತ್ಸರಪ್ರಮಿತಮನ್ವಂತರಾವಸಾನದೊಳಷ್ಟಶತವಿಶಿಖಾಸನೋತ್ಸೇಧನುಮಸಂಖ್ಯೇಯಾಯುಷ್ಯನುಮಾಗಿ ಮೂಱನೆಯ ಕುಲಧರನಾದನಾಕಾಲದೊಳ್,

ಎಳಸಿ ಬಳಸಿರ್ಪ್ಪ ಮೃಗಸಂ-
ಕುಲಂಗಳಂದನಿತುಮೊಡನೆ ಕೋಟ್ಳೆಸಗಿದೊಡಾ-|
ಕುಲರಾದಾರ್ಯ್ಯಜನಕ್ಕವ-
ನಳವಡಿಸುವ ಬಗೆಯನಾ ಮಹಾತ್ಮಂ ಪೇೞ್ದಂ ||೫೬||

ವ|| ಅದಱಿಂದಾತನಂ [3]ಕ್ಷೇಮಂಕರನೆಂದ[3]ರಾತನಿಂಬೞಿಯಮನಿತಾನುಂ ಕಾಲದಿಂ ಪಂಚೋತ್ತರಸಪ್ತತಿಯುತಸಪ್ತಶತಕಾರ್ಮ್ಮುಕೋತ್ಸೇಧಕಾಯನುಂ [4]ತುಟಿಕಾಬ್ದ[4]ಪ್ರಮಿತಜೀವಿತನುಮಾಗಿ ನಾಲ್ಕನೆಯ ಕುಲಧರಂ ಪುಟ್ಟಿ ಪಾಪಸತ್ವಂಗಳ್ ಕಾಡೆ ಲಕುಟಯಷ್ಟ್ಯಾದಿರಕ್ಷಾವಿಧಿಯನುಪದೇಶಂಗೆಯ್ದಾತಂ [5]ಕ್ಷೇಮಂಧರನೆಂಬ[5] ಪೆಸರಂ ಪಡೆದನಲ್ಲಿಂ ಬೞಿಯಮನೇಕ ಕೋಟಿ[6]ಸಂವತ್ಸರಂಗಳ್ಪೋಂದಿದಿಂಬೞಿಯಂ[6] ಪಂಚಾಶದಧಿಕಸಪ್ತಶತಕೋದಂಡಪ್ರಮಾಣಮೂರ್ತ್ತಿಯುಂ ಕಮಲಪ್ರಮಿತಾಯುಷ್ಯನುಮಾಗಿ ಕಮಲವದನಂ ಪಂಚಮಕುಲಧರಂ ಪುಟ್ಟಿ,

ಸೀಮಾವಿವಾದದಿಂ ತ-
ದ್ಭೂಮಿಜರೋರೊರ್ವ್ವರಂ ಪಳಂಚಲೆವೆಡೆಯೊಳ್-|
ಸೀಮೆಗಳ ತೊಡರನುಡುಗಿಸಿ
ಸೀಮಂಕರನೆಂಬುದೊಂದು ಪೆಸರಂ ಪಡೆದಂ ||೫೭||

---

೧-೧ (ಅ,ಬ) ಬೋಧನಾದನಿಂತಿರೆ. ೨-೨ (ಅ) ಮಂಡಳಕ್ಕಿದಿಲ್ಲಂ; (ಬ) ಮಂಡಳಕ್ಕಳಿಲ್ಲಿಂದಂ. ೩-೩ (ಚ) ಕ್ಷೇಮಂಕರನೆಂದು ಪೆಸರನಿಟ್ಟರ್ ಅ. ೪-೪ (ಚ) ತುಟಿತಾಬ್ದ. ೫-೫ (ಅ,ಬ) ಕ್ಷೇಮಂಕರ. ೬-೬ (ಅ) ಸಂವತ್ಸರಂಗಳ್ಸಲೆ; (ಬ) ಸಂವತ್ಸರಂಗಳೊಳ್.

ವ|| ಆತನ ವಿರಾಮದೊಳನೇಕಾಬ್ಧಕೋಟಿಗಳ ಕಡೆಯೊಳ್ ಪಂಚವಿಂಶತ್ಯ-ನ್ವಿತಸಪ್ತಶತ[೧]ಬಾಣಾಸನೋಚ್ಛ್ರಿತನುಂ[೧] ನಲಿನಪ್ರಮಾಣಾಯುಷ್ಯನುಮಾಗಿ ನಲಿನಾನನನಾಜಿನೆಯ ಕುಲಧರಂ ಪುಟ್ಟಿ ಮರ್ಯ್ಯಾದಾವಿಪ್ರತಿಪತ್ತಿಯಿಂದ-ಮುಳ್ಳಾರ್ಯ್ಯಜನಕ್ಕಾಘಾಟಿಶುದ್ಧಿಯಂ ಮಾಡಿ ಸೀಮಂಧರನೆಂಬನಾದನಾ ಮ-ಹಾಪುರುಷನಿಂ ಬೞಿಯಮನೇಕವರ್ಷಕೋಟಿಕೋಟ್ಯಂತರದೊಳ್ಸಪ್ತಶತಶಿಲೀ-ಮುಖಾಸನೋನ್ನತಾಪಘನನುಂ ಪದ್ಮಪ್ರಮಿತಾಯುಷ್ಯನುಮಾಗಿ ಪದ್ಮವದನ-ನೇಚಿನೆಯ [೨]ಕುಲಧರಂ[೨] ಪುಟ್ಟಿ,

ಬನಕಂ ಪೊಲಕಂ ನಡೆಯ-
ಲ್ಕನಿಸಾಜದೆ ಮಱುಗುವಾರ್ಯ್ಯರಂ ಕಂಡು ಮನೋ-|
ಜನಿತದಯಂ ಕರಿಹರಿವಾ-
ಹನಂಗಳಂ ಪಡೆದು ವಿಮಲವಾಹನನಾದಂ ||೫೮||

ವ|| ಆತನಿಂ ಬೞಿಯಮಸಂಖ್ಯಾತವರ್ಷಂಗಳ್ ಸಲೆ ಪಂಚಸಪ್ತತ್ಯುತ್ತರ-ಷಟ್ಛತಬಾಣಾಸನೋತ್ಸೇಧನುಂ ಪದ್ಮಾಂಗ[೩]ಪ್ರಮಿತಾಯುಷ್ಯ[೩]ನುಮಪ್ಪೆಂಟನೆಯ ಮನು ಪುಟ್ಟಿ,

ಸುತಮುಖಕಮಲಾಲೋಕನ-
ಮತಿವಿಸ್ಮಯಮಾಗೆ ಮಱುಗುವಾರ್ಯ್ಯಜನಕ್ಕಾ-|
ಯತಿಯುಕ್ತಂ ತದ್ವ್ಯಕ್ತಿಯ-
ನತಿವಿದಿತಂ ಮಾಡಿ ತಿಳಿಪಿದಂ ಚಕ್ಷುಷ್ಮಂ ||೫೯||

ವ|| ಆತನಿಂ ಬೞಿಯಂ ಪಲಕಾಲಂ ಕೞಿಯೆ ಪಂಚಾಶದಧಿಕಷಟ್ಛತ-[೪]ಚಾಪೋತ್ಸೇಧ[೪]ವಪುವುಂ ಕುಮುದಪರಿಮಿತಾಯುಷ್ಯನುಮಪ್ಪೊ[೫]ಂಬತ್ತನೆಯ ಮನು

ಪೆಸರಿಲ್ಲದಾರ್ಯ್ಯರೆಂಬೀ-
[೬]ಪೆಸರೊಳೆ ಮುಂ[೬] ನಡೆಯೆ ನಡೆಯದೀವ್ಯವಹಾರಂ|
ಪೆಸರಿಲ್ಲದೊಡೆಂದಾಮನು
ಪೆಸರಿಟ್ಟು ಯಶಸ್ವಿಯೆಂಬ ಪೆಸರಂ ಪಡೆದಂ ||೬೦||

---

೧-೧ (ಬ) ಬಾಣಾಸನೋಚ್ಛ್ರಿತಾಂಗನು. (ಚ) ಬಾಣಾಸನೋಚ್ಛ್ರಯನುಂ. ೨-೨ (ಅ) ಮನು. ೩-೩ (ಅ,ಬ) ಪ್ರಮಿತಜೀವಿತ. ೪-೪ (ಅ) ಕಾರ್ಮುಕೋತ್ಸೇಧ; (ಬ) ಧನೂತ್ಸೇಧ. ೫ (ಅ) ಪ್ಪನೊಂ. ೬-೬ (ಚ) ಪೆಸರೊಳ್ ಮುಂ.

ವ|| ಅತನಿಂ [೧]ಬೞಿಯುಮನೇಕಸಂವತ್ಸರಸಹಸ್ರಾತಿಕ್ರಮದೊಳ್ ಪ[೧]ಂಚವಿಂಶತ್ಯಧಿ[೨]ಷಟ್ಛತಧನುರುತ್ಸೇಧನುಂ ಕುಮುದಾಂಗಸಂಖ್ಯಾತವರ್ಷಾಯುಷ್ಯನುಮಾಗಿ ದಶಮಕುಲಧರಂ ಪುಟ್ಟಿ ಚಂದ್ರನಂ ತೋಱಿ ಕೂಸುಗಳನಾಡಿಸುವುದಂ [೨]ತೋಱಿದನಪ್ಪುದಱಿಂದಭಿಚಂದ್ರನೆಂಬ[೨]- [೩]ನಾದನಾ[೩] ಮನುವಿನ ಕಡೆಯೊಳನೇಕವರ್ಷಸಹಸ್ರಂಗಳ್ ಸಲೆ ಷಟ್ಛತ[೪]ಕಾಂಡಾಸನೋತ್ಸೇಧಶರೀ[೪]ರನುಮಯುತಪ್ರಮಾಣಾಯುಷ್ಯನುಮಾಗಿ ಪನ್ನೊಂದನೆಯ ಕುಲಧರಂ ಪುಟ್ಟಿ,

ಮಂಜಿನ ಮಱೆಯೊಳ್ ಮುಸುಕಿರೆ
ಕಂಜಪ್ರಿಯ ಕುಮುದಬಂಧುಗಳ್ ಜನಮಂ ನೀ-
ಮಂಜಲಿಮೆಂಬಱಿವಮರ್ಪಿನ
[೫]ಮಂಜಮೆಗೊಟ್ಟಱಿದು[೫]ನಿಱಿಸಿದಂ ಚಂದ್ರಾಭಂ ||೬೧||

ವ|| ಆತನ ಕಡೆಯೊಳಸಂಖ್ಯೇಯ[೬]ವರ್ಷಾನಂತರ[೬]ವಿರಾಮದೊಳ್ ಪಂಚಸಪ್ತತ್ಯುತ್ತರಪಂಚಶತ[೭]ಪ್ರಸತ್ಕಾಸನೋತ್ಸೇ[೭]ಧಸಂಹನನನುಂ [೮]ನಯುತಾಂಗಾಯುಷ್ಯ[೮]ನುಮಾಗಿ ಪನ್ನೆರಡನೆಯ [೯]ಮನು[೯] ಪುಟ್ಟಿದಂದು,

ತುಱುಗಿದ ಮುಗಿಲಾಮುಗಿಲಿಂ-
ದೆಱಗುವ ಮೞೆ ಕಡಿದು ಬರ್ಪ್ಪ ತೊಱೆ ಬೆಟ್ಟು ತೆವರ್-
ವೊಱಡುವ ಜಲಧಿಗಳೆನೆ ಜನ-
ಮಱುಯಱಿಯೆ ವಲುದ್ಧಬಿದ್ದಮಾಯ್ತ್ತವನಿತಳಂ ||೬೨||

ವ|| ಅಂತು ಕರ್ಮ್ಮಭೂಮಿಸ್ಥಿತಿಯೊಳುಪನದ್ಯುಪ[೧೦]ಸಮುದ್ರೋಪಪರ್ವ್ವ[೧೦]ತಂಗಳತಿಪ್ರಕಟಮಾಗೆ ಸೋಪಾನಪದ್ಧತಿಗಳೊಳ್ ಗಿರಿ[೧೧]ದುರ್ಗ್ಗಾರೋಹಣ[೧೧]ಮುಮಂ ದ್ರೋಣಿಯಾನಪಾತ್ರಾದಿಗಳೊಳ್ ಜಲದುರ್ಗ್ಗೋತ್ತರಣಮುಮನುಪದೇಶಂಗೆಯ್ದು,

ಇದು ಕರ್ಮ್ಮ[೧೨]ಭೂಮಿಯಿಂದಂ[೧೨]
ಪೊಡಮಟ್ಟು ತೋಱಿದುದು ಭೋಗಭೂಮಿಸ್ಥಿತಿ ಕುಂ-|
ದಿಪುದೆಂದು [೧೩]ಪೇೞ್ದ[೧೩]ಮನು ಜನ-
ಮೊಪವೆ ಮರುದ್ದೇವನೆಂಬ ಪೆಸರಂ ಪಡೆದಂ ||೬೩||

---

೧–೧ (ಅ) ಬೞಿಯುಮನೇಕಸಹಸ್ರಾತಿಕ್ರಮಣಸಂವತ್ಸರವಿರಾಮದೊಳ್; (ಬ) ಬೞಿಯುಮನೇಕಸಹಸ್ರಾತಿಕ್ರಮದೊಳು. ೨–೨ (ಚ) ತೋಱುವನಪ್ಪುದಱಿಂದಾತನಭಿಚಂದ್ರನೆಂಬನಾಮಮೆಸೆಯೆ. ೩–೩ (ಚ) ಪೆಸರ್ವಡೆದಂ. ೪. ೪–೪ (ಅ) ಕೋದಂಡೋಚ್ಛ್ರಿತಶರೀರ; (ಬ) ಕೋದಂಡಾಸನೋಚ್ಛ್ರಿತಶರೀರ. ೫–೫ (ಅ,ಬ) ಮಂಜಮೆಗೆಟ್ಟಱಿದು. ೬–೬ (ಅ,ಬ) ಹಾಯನಾಂತರ. ೭–೭ (ಚ) ಶರಾಸನೋತ್ಸೇಧ. ೮–೮ (ಚ) ಅಯುತಾಂಗಾಯುಷ್ಯ. ೯–೯ (ಚ) ಕುಲಧರಂ. ೧೦–೧೦ (ಚ) ಸಮುದ್ರಮುಪಪರ್ವ. ೧೧–೧೧ (ಅ) ದುರ್ಗ್ಗಾಧಿರೋಹಣ. ೧೨–೧೨ (ಅ,ಬ) ಭೂಮಿಯಿಂದಂ. ೧೩–೧೩ (ಅ,ಬ) ಪೇೞ್ದ.

ವ|| ಆತನ ಕಡೆಯೊಳುಚಿತಮನ್ವಂತರ[೧]ವ್ಯತಿಕ್ರಮದೊಳ್[೧],

ಆತತಯಶೋವಿತಾನಸ-
ಜಾತಭಯಂ [೨]ಪೂರ್ವ[೨]ಪರಿಮಿತಾಯುಷ್ಯಂ ಸಂ-|
ಜಾತಪಯಂ ಪಂಚಾಶದು-
ಪೇತಧನುಃಪಂಚಶತಸಮುಚ್ಛ್ರಿತದೇಹಂ ||೬೪||

ವ|| ಪದಿಮೂಱನೆಯ ಕುಲಧರಂ ಪುಟ್ಟಿ,

ಪಸರಿಸೆ ಜರಾಯುಪಟಲಂ
ಪಸುಗೂಸುಗಳೊಡಲೊಳವನಗಲ್ಚುವ [೩]ಮತಿಯಂ[೩] |
ವಸುಮತಿಗಱಿಪಿ ಮಹಾತ್ಮಂ
ಪ್ರಸೇನಜಿನ್ನಾಮಧೇಯಮಂ ಪ್ರಕಟಿಸಿದಂ ||೬೫||

ವ|| ಆತನಿಂ ಬೞಿಯಮಸಂಖ್ಯೇಯವರ್ಷಪ್ರಮಿತ[೪]ಮನ್ವಂತರಾತಿಕ್ರಮ-
ದೊಳ್[೪] ಪದಿನಾಲ್ಕನೆಯ ಮನು ಪುಟ್ಟಿದನಾತಂ,

ಶಶಿವಿಶದಯಶಂ ನಿಜಕುಲ-
ವಿಶೇಷಕಂ ಕರುಣಿ ಪಂಚವರ್ಗಾಧಿಕಪಂ-|
ಚಶತಶರಾಸನತನು ಬುಧ-
ಕುಶೇಶಯೋದ್ಬೋಧಕರಲಸತ್ತಿಗ್ಮಕರಂ ||೬೬||

[೫]ಸುಕವ ಕಣಿಯೆನಿಸಿ[೫] ಮಾಪು-
ಬ್ಬಕೋಟಿಪರಮಾಯು ನಾಭಿನಾಮಮನುಮಾಯ್ತು- |
ಬ್ಜಕನಿಕರನಾಭಿನಾಳ-
ಪ್ರಕರನಿಕರ್ತ್ತನಮನಱಿಯೆ ಪೇೞ್ದದಱಿಂದಂ ||೬೭||

ಸಹಜಮಣಿಭೂಷಣಂಗಳ
ಬಹಳೋದ್ಯದ್ದೀಪ್ತಿಯಿಂದೆ ಚಂದ್ರಾದಿತ್ಯ-|
ಗ್ರಹತಾರಾನಕ್ಷತ್ರದಿ-
ನಹರ್ನಿಶಂ ಬೆಳಗುವಮರಗಿರಿಯನೆ ಪೋಲ್ತಂ ||೬೮||

---

೧-೧ (ಚ) ವ್ಯತಿಕರಣದೊಳ್. ೨-೨ (ಚ) ಪೂರ್ವಪ. ೩-೩ (ಅ) ಬಗೆಯಂ.
೪-೪ (ಅ) ಮನ್ವಂತರಾತಿಕ್ರಾಂತಿಯೊಳ್. ೫-೫ (ಅ) ಶ್ಲೋಕದ ಕಣಿಯೆನಿಸಿಯೆ.

ಮಕರಸರಿಜ್ಜಲಸಿಧಿಮ-
ತ್ಸ್ಯಕೂರ್ಮ್ಮಚಂದ್ರಾರ್ಕ್ಕಲಕ್ಷಣಂ ಪದಯುಗದೊಳ್ ।
ಪ್ರಕಟಂ ನೆಲಸೆ ಚರಾಚರ-
ಮೆ ಕಾಲ್ಗೆ ಬಂದೆಱಗಿದಂದದಿಂ ಸೊಗಯಿಸುಗುಂ ॥೧೯॥

[೧]ಮನುಗಳೊಳೀತಂ[೧] ಪದಿನಾ-
ಲ್ಕನೆಯಾತಂ ತಪ್ಪದಪ್ಪನೆನಿಸಿಯುಮಂತಾ-।
ಮನುಗಳೊಳೀತನೆ ಮೊದಲಿಗ-
ನೆನಿಸಿದನೇಂ ನಾಭಿ ನಾಭಿಯೋ ಗುಣಗಣದಾ ॥೨೦॥

ವ॥ ಆನಾಭಿರಾಜನ ಕಾಲದೊಳ್ ಪಯೋಧರಕಾಲಸ್ವರೂಪಂ ಚಿತ್ರರೂಪದಿಂ ನಭೋಭಾಗಮಂ ಪರ್ವ್ವಿದಾಗಳ್,

ತ್ರಿದಶಶರಾಸನಂ ತಳಿರ ತೋರಣಮಾಗಿರೆ [೨]ಕುಕ್ಕಿನೋಳಿ[೨] ಚಿ-
ಲ್ಪಿದಿರ್ಗ್ಗೊಳೆ ಬರ್ಪ್ಪ [೩]ಸೊನ್ನಲಿಗೆಯಾಗೆ ಘನಧ್ವನಿ[೩] ತೂರ್ಯ್ಯಮಾಗೆ ರಾ-।
ಗದಿನಿನರಶ್ಮಿಯೆಂಬ ಕಸಮಂ ಕಟಿದಂಬರಮೆಂಬ ಪಾಟಿನೇ-
ಱದುದಸಿತಾಂಬುವಾಹಕುಲಮೆಂಬ ಕುಟುಂಬಕದಂಬಕೋತ್ಕರಂ ॥೨೧॥

ನವಮೇಘಧ್ವನಿ ಪುಷ್ಕರಧ್ವನಿ [೪]ಲಸತ್ತಾರಾಳಿ[೪] ಪುಷ್ಪೋಪಹಾ-
ರವಿಲಾಸಂ ರುಚಿರಾಂಬುದಂ ಯವನಿಕಾವಿನ್ಯಾಸಮಾದಲ್ಲಿ ಚಿ।
ತ್ರವಿಧಂ ಬಂದವಸರ್ಪ್ಪಿಣೀನಟನ ಪೇಟಿಕ್ಕೊಂದಂದದಿಂದೆತ್ತಮಾ-
ಡೆ ವಿಯತ್ಪ್ರಂಗದೊಳಂದ[೫]ದೇಂ ನಲಿದುದೋ[೫] ವಿದ್ಯುನ್ನಟೀನರ್ತ್ತನಂ ॥೨೨॥

ವ॥ ಅಂತು ಕೊಂಡ ಪದವಟಿಗಳೊಳ್ ಕಳಮಷಷ್ಟಿಕಾವ್ರೀಹಿಯವಯಾವನಾಳಗೋಧೂಮಕಂಗುಸ್ಯಾಮಾಕಕೋದ್ರವನೀವಾರತಿ[೬]ಲತಲಮಸೂರಿ[೬]ಕಾಕುಲತ್ಥಮುದ್ಗಮಾಷರಾಜಮಾಷಾಢಕೀನಿಷ್ಪಾವಚಣಕಕುಸುಂಭಕಾರ್ಪ್ಪಾಸಸರ್ಷಪಜೀರಕಧಾನ್ಯಕಾದಿವಿವಿಧಧಾನ್ಯ[೭]ಭೇದಂಗಳುಂ[೭] ಕಲ್ಪವೃಕ್ಷಪರಿಕ್ಷಯದೊಳ್ ಪ್ರಜಾಜೀವನೋಪಾಯಹೇತುಗಳಕೃಷ್ಟಪಚ್ಯಂಗಳಾಗಿ,

ಬೆಳೆವೆಱಗಿರೆಯುಮದಂ ಪು-
ಲ್ಗಳೆಂದೆ [೮]ಬಗೆದಳುರ್ರೆ[೮] ಪಸಿವುನಾಮೇಗೊಂಡೇಂ ।

೧-೧ (ಚ) ಮನುಗಳೊಳೀತನೆ. ೨-೨ (ಅ) ಗುಕ್ಕಿನೋಳಿ. ೩-೩ (ಅ,ಬ) ಸೊಂನಲಿಗಳಾಗೆ ಘನಧ್ವನಿ; (ಚ) ಸೊಂನಲಿಗೆಯಾಗೆ ನಿಜಧ್ವನಿ. ೪-೪ (ಚ) ತರತ್ತಾರಾಳಿ. ೫-೫ (ಅ) ದೇನೆಸೆದುದೋ. ೬-೬ (ಅ,ಬ) ತಿಲಾತಸೀಮಸೂರಿಕಾ. ೭-೭ (ಅ) ಭೇದಂಗಳವು; (ಬ) ಭೇದಂಗಳು. ೮-೮ (ಚ) ಬಗೆದಳುರ್ವ.

ಗೞ ಗೆಯ್ವುವೆಂಬ ಪಕ್ಷಿಪು-
ಕುಲಧರನೆನೆ ನೆಗೞ್ದ ನಾಭಿಯಲ್ಲಿಗೆ ವಂದರ್ ||೭೩||

ಬಂದತಿ[೧]ದೀನ[೧] ಮುಖರ್ ನೆಱೆ-
ವೆಂದರ್ ಮರವಟ್ಟು ಕುಡವೆ ಕಲ್ಪಮಹೀಜಂ |
ನಿಂದುವು ಜಠರಾನಲನಿಂ
ಬೆಂದುವು ತನು ಬಾೞ್ವುಪಾಯಮಾವುದು ದೇವಾ ||೭೪||

ಒಡಲನುಣಿಸಿಲ್ಲದಾಗಳ್
[೨]ನಡಪುವುದರಿ[೨]ದಾವನಸ್ಯಶರಣರೆವೆಮ್ಮಂ |
ನಡಪುಪದೇಶದಿನಲ್ಲದೊ-
ಡೊಡಗಱಿದಪೆವಸುವನಿಲ್ಲಿ ನಿನ್ನಡಿವೊದಲೊಳ್ ||೭೫||

[೩]ಎಂಬುದುಮುಂಜದಿರೆಂದಸ್ಮ-
ತಾಂಬು[೩]ವಸುಗುಟ್ಟಭಯವಚನದಿಂದಾಱಿಸಿ ರ-|
ಕ್ತಾಂಬುಜದ ಚೆಲ್ವನಭಯಕ-
ರಾಂಬುಜಮುಳವಡಿಸೆ ನಾಭಿರಾಜಂ ನುಡಿದಂ ||೭೬||

ಬಗೆಯಲ್ ವೇಡ ಸುಧಾಮಹೀರುಹದೊಳಾದೌದಾರ್ಯಮಂ ವೀರ್ಯ-
ಮೀಯುಗದೊಳ್ ತತ್ತರುಗಿಲ್ಲ ಪಕ್ವಫಲನಮ್ರಾಮ್ರಾದಿಭೂಜಂಗಳೀ-|
[೪]ಯುಗದೊಳ್[೪] ಕಲ್ಪಕುಜಂಗಳಿಂತಿವಱ ಪಣ್ಭೋ[೫]ಗ್ಯಂಗಳಾ[೫]ರೋಗ್ಯಹೇ-
ತುಗಳೀಪಣ್ಗಳ್[೬]ಭೋಗ್ಯಮೆಂದು ವಿಲಸದ್ಭಾಗ್ಯೋದಯಂ ತೋಱಿದಂ ||೭೭||

ವ|| ತೋಱಿ ಫಲಪಾಕಾಂತಂಗಳಪ್ಪೌಷಧಿಗಳಂ ಸ್ತಂಬಕರ್ಯಾದಿ ನಾನಾವಿಧಧಾನ್ಯಂಗಳಂ ಪದನಱಿದುಡುಗುವ [೭]ಕಳಂಮಾಡು[೭]ವೊಕ್ಕುವಡುಕುವ ಬಯ್ತಿಡುವಕ್ಕಿಮಾಡುವ ವಿವಿಧಭಾಜನಂಗಳೊಳಡುವ ಘೃತಲವಣತೈಲಕ್ಷೀರದಧಿ-ವ್ಯಂಜನಂಗಳೊಳ್ ಸಂಸಾರಂ ಮಾಡುವಳವಿಯಱಿದುಣ್ಬ[೮]ಪಾಯಂಗಳುಮಂ[೮] ಪುಂಡ್ರೇಕ್ಷುದಂಡಂಗಳಂ ಕಡಿಕಡಿದು ಯಂತ್ರಪೀಡನೆಯಿಂ ರಸಂಗೊಳ್ವ ತೆಱನು-ಮನಱಿಯೆ ಪೇೞ್ದು,

ಚ್ಯುತಿಯಾಗೆ ಭೋಗಭೂಮಿ-
ಸ್ಥಿತಿ ಕಲ್ಪಮಹೀರುಹವ್ಯಪಾಯದೊಳಿಂತುಂ|

೧-೧ (ಅ) ವಿನಯ. ೨-೨ (ಅ,ಬ) ನಡಯಿಪುದರಿದಾ. ೩-೩ (ಅ) ಎಂಬುದುಮುಂಜಲ್ವೇಡಮ್ಮತಾಂಬು. ೪-೪ (ಅ.ಬ) ಜಗದೊಳ್. ೫-೫ (ಚ) ಭೋಜ್ಯಂಗಳಂ. ೬-೬ (ಚ) ಭೋಜ್ಯಮುಂದು. ೭-೭ (ಚ) ಕಣಂಮಾಡು. ೮-೮ (ಚ) ಪಾಯಮುಂ.

ಕ್ಷಿತಿಪತಿ ಕಲ್ಪಮಹೀಜ-
ಸ್ಥಿತಿಯಿಂ ತಾನಿಂತು ಜನಮನೇಂ ನಿಱಿಸಿದನೋ ||೭೮||

ಕುಲಧರನುಂ ಕುಲಕರನುಂ
ಕುಲತಿಲಕನುಮೆನಿಪ ನಾಭಿರಾಜಂಗೆ ಲತಾ-|
ಲಲಿತೆ [೧]ದಲಿತಾಂಬುಜಾನನೆ[೧]
ವಿಲಾಸಲಾವಣ್ಯಕಾಂತಿಯುತೆ ಸತಿ ರತಿವೊಲ್ ||೭೯||

ಮರುದೇವಿಯೆಂಬಳಂಬರ-
ಚರನರಸುರಯುವತಿರೂಪಸರ್ವ್ವಸ್ವಮನಾ-
ದರದೆ ಬಿದಿ ನೆಱಪಿ ಲಲನಾ-
ಸ್ವರೂಪದಿಂ [೨]ನಿಱಿಸಿತೆನ್ನದಿನ್ನೇ[೨]ವೊಗಳ್ವೆಂ ||೮೦||

ಪೊಳೆವಲರ್ಗಣ್ ಚಾಮರಮೆನೆ
ಲಲಿತಭ್ರೂಲತೆ ಪತಾಕೆಯೆನೆ ಪೆರ್ಮ್ಮೊಲೆ ಪೊಂ-|
ಗಳಸಮೆನೆ ಮದನಮಂಗಲ-
ವಿಲಾಸಚಿಹ್ನಂಗಳವಯವಂಗಳ್ ಸತಿಯಾ ||೮೧||

ಮದನ ಕೋಕಿಲಕಲನಿನದೆಯ
ವದನಸುಧಾಸೂತಿ ಬೆಳಗೆ ಪೆಳಱಿದ [೩]ತಮಮೀ[೩]-|
ಪುದಿದು ಪೆಱಗಿರ್ದ್ದುದೆನಿಪುದು
[೪]ಮದಗಜಗಮನೆಯ ವಿನೀಲ[೪]ಕೇಶಕಲಾಪಂ ||೮೨||

ಘನಕುಚ[೫]ಕಲಶೆಯು[೫] ಮುಖರಸ-
ವನಧಿಯಿನೊಗೆ[೬]ದೊಂದುವಿಂದುಬಿಂಬಕರಂ[೬] ಚೆ-|
ಲ್ವಿನೆ ಮೆಱೆವ ಕುಮುದಕುವಲಯ-
ವನಂಗಳಾಕೆಯ ಕಟಾಕ್ಷವಿಕ್ಷೇಪಂಗಳ್ ||೮೩||

ಮದನತರುಕುಸುಮಮಂಜರಿ
[೭]ಮದನಾಂಬುಧಿ[೭]ವೇಳೆ ಮದನಮದಗಜವಿಲಸ-|

---

೧-೧ (ಅ) ವಿಕಚಾಂಬುಜಾನನೆ. ೨-೨ (ಅ,ಬ) ನಿಱಿಸಿದಂನಳಿಂನೇ. ೩-೩ (ಚ) ತಮಮಿರಿ. ೪-೪ (ಅ) ಸುದತಿಯ ಮೃದುಲೋಲನೀಲ. ೫-೫ (ಅ) ಯುಗಳೆಯ. ೬-೬ (ಅ,ಬ) ದೊಂದುಬಿಂದುವಿಂದುಕರಂ. ೭-೭ (ಅ) ವದನಾಂಬುಧಿ.

ನ್ಮದಲೇಖೆ ಮದನಲಕ್ಷ್ಮೀ-
ಮದಲಕ್ಷ್ಮಿಯೆನಲ್ ಮದೇಭಗಮನೆಯೆ [೧]ತಕ್ಕಳ್[೧] ||೮೪||

ಮೊಗಮುಂ ತಾವರೆ ಕಣ್ಣನುತ್ಪಲದಲಂ ಧಮ್ಮಿಲ್ಲಮುಂ ಸೋಗೆ ಸೆ-
ಳ್ಪುಗುರಂ ಕೇದಗೆ ಪುರ್ಬ್ಬನಂಗಜನ ಬಿಲ್ ದಂತಾಳಿಯುಂ ಮುತ್ತು ಕೈ-|
ಮುಗಿದಾರಾಧಿಸಿ ಪೋಲ್ತುವೆನ್ನದೆ ಸರೋಜಾತಾದಿನಿಸ್ಸಾರವ
ಸ್ತುಗಳೊಳ್ ಪೋಲಿಸುವಂತುಟೇಂ[೨]ಮರುಳನೇ[೨] ರೂಪಂ ವಿಚಿತ್ರಾಂಗಿಯಾ||೮೫||

ಪಿರಿದುಂ ವಿಭೂತಿಯಿಂದಂ
ಸುರರಾಜನ ಬೆಸದೊಳಮರನಾಯಕರೆಲ್ಲಂ |
ನೆರೆದು ವಿವಾಹಮನಾಕೆಗೆ
ದೊರೆಕೊಳಿಸಿದರಿಂತು ನೋಂತ ಕಾಂತೆಯರೊಳರೇ ||೮೬||

ಆಭುವನನಾಭಿಯೆನಿಸಿದ
ನಾಭಿಮಹೀಭುಜಭುಜಾಂತರಾಳಂ ಲಕ್ಷ್ಮೀ-|
ವ್ಯಾಭಾಸಿ ಮತ್ತಮತಿಶಯ-
ಶೋಭೆಯನಾಕಾಂತೆಯಿರವಿನೊಳ್ ಸೂವ್ಕೃಡಿಪುಂ ||೮೭||

ಧವಲಾಪಾಂಗವಿಲೋಕನಾಮೃತಮಯಂ ಭ್ರೂಲಕ್ಷ್ಮರಮ್ಯಂ ಮನೋ-
ಭವರಾಜ್ಯೋದಯಹೇತು ಚಾರುಮರುದೇವೀವಕ್ತ್ರಚಂದ್ರಂ ಸಲೀ-|
ಲವಿಲಾಸಸ್ಮಿತಚಂದ್ರಿಕಾಪ್ರಸರದಿಂದೋಪಂಗೆ ನೇತ್ರೋತ್ಪಲೋ-
ತ್ಸವಮಂ ಮಾಡಿಯುಮೇನೊ ಮಾಡುವುದು ತಚ್ಚಿತ್ತಾಂಬುಧಿಕ್ಷೋಭಮಂ ||೮೮||

ವ|| ಅಂತನ್ಯೋನ್ಯಪ್ರೇಮ[೩]ಸಂಜಾತ[೪]ಸಂಪತ್ಪರಂಪರಾ[೪]ಪರಿಗತಮಾ[೫]ಗಿನಿಳಿಂಪದಂಪತಿಯನೆ ಪೋಲ್ವ[೬]ತದ್ದಂಪತಿಯಿಂದಂ ಪವಿತ್ರೀಭೂತಮಾದ[೬] ಭೂತಳೋದ್ದೇಶದೊಳುತ್ಪತ್ಸ್ಯಮಾನಭಾವಿತೀರ್ಥಕರಪುಣ್ಯದೂತಾಹೂತಂ ಪುರುಹೂತಂ ಬಂದು,

ಕಿದಱ ಮನುಷ್ಯದಂಪತಿಗಳಿರ್ದ್ದವನೊಂದೆಡೆಯೊಳ್ ತೆರಳ್ಚಿ ನಾ-
ಕದ ಫಣಿ[೭]ಲೋಕದಂಕದ[೭] ಪೊಟಿಲ್ಗಳನೀಪೊಟಲೊಂದು ರಮ್ಯಹ-|
ರ್ಮ್ಯದ[೮]ಬೆಲೆಗಂ ಬರ[೮]ಲ್ ನೆಱೆಯುವೆಂಬಿನಮುಜ್ಜ್ವಲಪಂಚರತ್ನಭಾ[೯]-
ಸುರ[೯]ಸದನಂಗಳಿಂ ನೆಱೆದುದಂ ಸಮೆದಂ ಪುರಮಂ ಪುರಂದರಂ ||೮೯||

---

೧-೧ (ಬ) ಸಾಲ್ಗುಂ. ೨-೨ (ಅ,ಬ) ಮರುಳನೋ. ೩ (ಅ) ರಸ. ೪-೪ (ಚ) ಸ್ವಾಂತಸಂಪತ್ಪರಂಪರಾ. ೫ (ಅ) ನಾ; (ಬ) ರಾ. ೬-೬ (ಚ) ದಂಪತಿಗೆ ಪವಿತ್ರೀಭೂತಮಪ್ಪ. ೭-೭ (ಚ) ಲೋಕದಂದದ. ೮-೮ (ಅ) ಚೆಲುವಿಂಗಮೇಂ. ೯-೯ (ಚ) ಭಾಸ್ಪದ.

ಕನಕಗಿರಿಶಿಖರರತ್ನಾಂ-
ಶುನಿಕಾಯಂ ಬೆಳಗೆ ಪ್ರೊಳೆದು ಪಜ್ಜಳಿಸುತ್ತಿ-।
ರ್ಪಿನಪಥಮಣಿಮುಕುರದೊಳಿಂ-
ದ್ರಸ ಪ್ರೊಟಿಲಾಪೊಟಿಲ ನೆಟಿಲನನುಕರಿಸಿಕ್ಕುರ್ಗಂ ॥೯೦॥

ಆಪುರಲಲನೆಯ ಕೇಶಕ-
ಲಾಪದವೊಲ್ ಮಧುಪನಿಕರನೀಲಂ ಕುಸುಮ-।
ಶ್ರೀಪರಿಪೂರ್ಣ್ಣಮಸಂಗನ
ಕಾಪೆನೆ ಸೊಗಯಿಪುದು ಬಳಸಿದುದ್ಯಾನವನಂ ॥೯೧॥

ತುಂಬಿ-ಗಿಳಿ-ಪುರುಳಿ-ಕೋಗಿಲೆ
ಯೆಂಬಿವುವೆರಸಖಿಲತರುಗಳಿಂದ್ರಸ ಬೆಸದಿಂ-।
ದಂ ಬಂದುವೆಂದೊಡುಪವನ-
ಮಂ ಬಣ್ಣಿಸಲೆನಗೆ ನಾಡೆಯುಂ ಕುಱುಪಲ್ತೇ ॥೯೨॥

ವಿಲಸದಳಿಗೀತಮುತ್ಕೋ-
ಕಿಲನಾದಂ ಸಾಲಕಾನನಂ ಸತ್ತಿಲಕಂ।
ಲಲಿತಲತಾಂಗಂ ರಮಣೀ-
ವಿಲಾಸಮಂ ವನವಿಲಾಸಮೇನಿಱಿಸಿದುದೋ ॥೯೩॥

ಎಳೆಸುವ ಪುರುಳಿಯ ಗಳಪುವ
ಗಿಳಿಯ ತೆಱಂದಿರಿದು ಮೊರೆವ ಪೆಣ್ದುಂಬಿಯ ಬಿ-।
ಚ್ಚಳಿಪ ಪರಭೃತದ ಕಳಕಳ-
ದೊಳೆ ಮಸುಳ್ದುದು ದಿವಿಜಯುಗಲಕಲಕಲನಿನದಂ ॥೯೪॥

ಸಾರಸಹಕಾರಧಾರಾ-
ಸಾರಂ ಕೊಳದಟವಿವೆಯಂತೆ ಸುರಿತರೆ ಪಲವುಂ।
ಧಾರಾಗೃಹಂಗಳತನುವಿ-
ಕಾರಮನೊದವಿಪುದು ದೇವದಂಪತಿಗದಱೊಳ್ ॥೯೫॥

ಕುಸುಮಾಪಚಯವ್ಯಸನಾ-
ವಸಕ್ತಸುರಯುವತಿಪಾಣಿಪಲ್ಲವರಾಗಂ।

ಮುಸುಕಿದುದೆನಿಸಿದುದಸುಗೆಯ
ಪೊಸದಳಿರ್ಗಳೊಳಿಸೆವ ಕೆಂಪುನಂದನವನದೊಳ್ ||೯೬||

ಬಾಸಣಿಸಿದುದುತ್ಕಟಕುಸು-
ಮಾಸವಸೌರಭದೆ ದೆಸೆಗಳೊಡನಳಿಕುಳಮುಂ |
ವಾಸವವನಿತಾವದನಾ-
ಬ್ಜಾಸವಸೇಕಪ್ರಭಿನ್ನಮುಕುಲಂ ವಕುಲಂ ||೯೭||

ಕಿಱುನಿಱುಯೊಳೆ ಕಿಱುದೆಲೆಗಳ
ತುಱುಗಿದ ಚೆಲ್ವೆಳಸಿ ಬಳಸಿ ವನವನಿತೆಯ ಕ-
ಣ್ಣಱುಯೆನೆ [೧]ನಿಱುಗೊಂಡಿರೆ ನಿಱು[೧]
ನಿಱುಗನ ನಿಱುದಳಿರ ನಿಱುಯನಱುಯೆಂ ಪೊಗೞಲ್ ||೯೮||

ಶತಮುಖನರಸಿಗೆ ಕರ್ಣಾ-
ವತಂಸಮಾಗಲ್ಕೆ ನೋಂತ ಪಲ್ಲವಪುಷ್ಪ-|
ಪ್ರತತಿಯನೆ ಮೆಱೆದು [೨]ಚೆಲ್ವೆಳೆ[೨]-
ಗತಿಶಯಮೆನಿಸಿದುದು ಪಾರಿಜಾತಕುಜಾತಂ ||೯೯||

|| ತ್ರಿಪದಿ ||

ಸುರಯಿಯೊಳ್ ಗಿಳಿ ಮುಗುಳ್ವಿರಗಿಳಿ ಬಿರಯಿಗೆ
ಮೊರೆವಂತೆ ಮೊರೆವ ಮಱುದುಂಬಿ ತಳಿರೊಳ್ |
ಪರಭೃತಂ ಮುಗುಳ್ವಿ ಪರಭೃತಂ ||೧೦೦||

ವ|| ಸೊಗಯಿಸುಗುಂ ಮತ್ತಮಲ್ಲಿ,

ಸರಯೂತರಂಗಶೀಕರ-
ಪರಿಚಿತಮೇಲಾಲವಂಗಕುಸುಮರಜೋಧೂ-|
ಸರಮುಬಲಾಲಕ[೩]ಸಂಚಲ-
ತರಲಂ[೩] ಪುೞಿಲೊಳಗೆ ಸುೞಿವುದುಪವನಪವನಂ ||೧೦೧||

ವ|| [೪]ಮತ್ತಮಕೃತ್ರಿಮ[೪]ಪ್ರಣಯರಸವಿಸರವಶಗತವಿಬುಧಮಿಥುನಶತರತ-
ರಭಸಬಧಿರೀಕೃತಕೃತಕಗಿರಿಗಳೊಳಂ ಕೃತಕಗಿರಿಪರೀತನೂತಚೂತಲತಾಲಿಂಗಿತ-

೧-೧ (ಅ,ಬ) ನಿಱು ನಿಱುಗೊಂಡಿರೆ. ೨-೨ (ಚ) ಚೆಲ್ವಡೆ. ೩-೩ (ಅ) ಸಂಚಳನರತಂ
೪-೪ (ಅ) ಮತ್ತಮಕೃತಕ; (ಬ) ಮತ್ತಮಲ್ಲಿ ಕೃತಕ.

ಶಾತಕುಂಭರಂಭಾವನಾಂತರ್ಗ್ಗತಮಣಿಭವನಂಗಳೊಳಂ ಮಣಿಮಯಭವನ ಮರಕತಸೋಪಾನಪಙ್ಕ್ತಿತಂತನ್ಯಮಾನದೀಪ್ತಿ[೧]ಸಂತಾನಾವೃತ[೧]ನಾನಾನೀರಜರಜಃಪಿಂಜರಿತಜಲಜಲಾಶಯಂಗಳೊಳಂ ನೆಱೆದು ಸೊಗಯಿಸುವುದ್ಯಾನವನದ ಕುಸುಮಕಿಸಲಯ[೨]ಪರಾಗಪಿಶಂಗಿತ[೨]ರಂಗತ್ತುರಂಗಮಾದಂತೆ,

ಕನಕಸರೋಜಸಂಕುಲರಜಃಪಟಲಾರುಣಿತಂ ಸಮಗ್ರಕಾಂ-
ಚನಮಯ[೩]ಸಾರ[೩]ದೀಪ್ತಿಜಟಿಲಂ ಕಲಗೀತವಿಹಂಗಭೃಂಗನಿ-|
ಸ್ವನಸುಭಗಂ ವಿಚಿತ್ರತರಪತ್ರಮಯಂ ನೆಱೆ ಪೋಲ್ಕುಮಾಪುರಾಂ-
ಗನೆಯ ಪೊದೆದ್ದ ಹೇಮರಶನಾತ್ರಯಮಂ ಪರಿಖಾ[೪]ತ್ರಯಾಂತರಂ[೪] ||೧೦೨||

ಪರಿಖಾತ್ರಿತಯಕ್ಕೆ ಚತು-
ಶ್ಯರಾಸನಾಂತರದೆ ಸುರೆಶರಾಸನಭಾಭಾ-|
ಸುರಮೊಪ್ಪಿ ತೋಱುಗುಂ ಪಂ-
ಚರತ್ನಪಾಂಶೂಚ್ಚದೀಪ್ತಿದೀಪ್ರಂ ವಪ್ರಂ ||೧೦೩||

ವ|| [೫]ಆವಪ್ರದ ಮೇಗೆ[೫],

[೬]ಆಕಾಶಂಬರಮೆಯ್ದೆ[೬] ನೀಳ್ದ ವಿಕಟಾಟ್ಟಾಲಂಗಳೊಳ್ ಕೇತನಾ-
ನೀಕಂಗಳ್ ರವಿರಶ್ಮಿಗಳ್ ಪುಗಲಿವೇಡೀರಶ್ಮಿಗಳ್ ಸಾಲ್ಗುಮಿಂ-|
ತೇಕಜ್ಞಂ ಬೆಳಗೆಂಬವೊಲ್ ತುಱುಗಿ ತಳ್ತಿಂಬಪ್ಪಿನಂ ಕಾಂಚನ-
ಪ್ರಾಕಾರಂ ನಿಲೆ ತಾಳ್ದುಗುಂ [೭]ಕಲಿಯುಗ[೭]ಪ್ರಾಕಾರದಾಕಾರಮಂ ||೧೦೪||

[೮]ಶಾಲಹರಿನೀಲ[೮]ಮಣಿಕಿರ-
ಣಾಳಿ ಪೊದಟ್ದಿಸೆಯೆ ರಾಹುಗ[೯]ತ್ತಗಿದಗಿದ[೯]-|
ಟ್ಟಾಳಕೆಗಳಲ್ಲಿ ನಾಡೆಯು-
ಮಾಳೋಚಂಬೆರಸು ತಡೆದು ನಡೆವಂ ದಿನಪಂ ||೧೦೫||

ಎರಡೆರಡಟ್ಟಳೆಗೆ ತರಂ-
ತರದಿಂದೊಂದೊಂದು ಗೋಪುರಂ ಪ್ರವಿರಾಜ-|
ನ್ಮರಕತಮಣಿತೋರಣಪರಿ-
ಕರಿತಂ ಪುರವಧುಗೆ ವದನಮಿರ್ಪ್ಪಂತಿರ್ಕ್ಕುಂ ||೧೦೬||

---

೧-೧ (ಬ,ಚ) ಸಂತಾನಾವೃತ. ೨-೨ (ಬ,ಅ) ಪರಾಗದೊಳ್ಪಿಶಂಗಿತ. ೩-೩ (ಆ,ಬ) ಶಾಲ. ೪-೪ (ಅ) ತ್ರಯಂಕರಂ. ೫-೫ (ಬ) ಆವಪ್ರದ ಮೇಲೆ; (ಚ) ಆವಪ್ರಪ್ರಮದೆಗೆ. ೬-೬ (ಚ) ಆಕಾಶಾಂತಮನೆಯ್ದೆ. ೭-೭ (ಚ) ಕೃತಯುಗ. ೮-೮ (ಚ) ಶಾಳಿಹರಿನೀಲ ೯-೯ (ಚ) ಗೆತ್ತಗಿದಿರ್ದ.

ವ|| ಅದಱೊಳಗೆ ಸುತ್ರಾಮನೆ ಸೂತ್ರಧಾರನಾಗಿಯುಂ, ಕಲ್ಪಜರೆ ಶಿಲ್ಪಿಗಳಾಗಿಯುಂ, ಸಮೆದ ಚೆಲ್ವಿಂಗೆ ಸರ್ವ್ವತೋಭದ್ರಮೆನಿಸಿದ ಸರ್ವ್ವತೋಭದ್ರಂಗಳೊಳಂ, ಛಂದೋವಿದ್ಯೆಯಂತೆ ನಾನಾಚ್ಛಂದಮಪ್ಪ ವಲಭಿಚ್ಛಂದಂಗಳೊಳಂ, ನಾಭಿರಾಜಾಂಗಸಂಗತಮಪ್ಪ ನಂದ್ಯಾವರ್ತ್ತದಂತೆ ಸೊಗಯಿಸುವ ನಂದ್ಯಾವರ್ತ್ತಂಗಳೊಳಂ, ಜನಿಷ್ಯಮಾಣವೃಷಭಜಿನಾವತರಣಮಂಗಲನಿಹಿತ-[೧]ಕಲಶದರ್ಪಣದಂತೆ[೧] ಪ್ರಶಸ್ತಸ್ವಸ್ತಿಕಾಯಮಾನಸ್ವಸ್ತಿಕಾದಿನಾನಾಮಣಿಮಯಪ್ರಾಸಾದಂಗಳೊಳಂ, [೨]ವಿವಿಧವೀಥೀಸನಾಥಚತುಷ್ಕಶೃಂಗಾಟಕಪೇಟಕಂಗಳೊಳಂ,[೨], ನೆಱೆದು ವಂದಿವೃಂದಕ್ಕೆ ಚಿಂತಾಮಣಿಭೂಮಿಯುಂ, ಗಾಯಕನಿಕಾಯಕ್ಕೆ ಗಂಧರ್ವ್ವಭೂಮಿಯುಂ, ಕೃತಸುಕೃತಜನಕ್ಕೆ ತಜ್ಜನ್ಮಭೂಮಿಯುಮಿಪ್ಪಂತಿರ್ದ್ದ ನಗರಲಲನೆಯ ಲಪಸಕ್ಕೆ [೩]ಲೀಲಾ[೩]ಲಲಾಮಲಕ್ಷ್ಮಿಯಂ ತಾಳೆ,

ಧೃತದೇವೇಂದ್ರವಿಮಾನರುಂದ್ರಮಹಿಮಂ ಶ್ರೀಸಪ್ತಕಕ್ಷಾಸಮ-
ನ್ವಿತಮಾಲೋಲದುಕೂಲಕೇತನಕುಲಂ ಮಾಣಿಕ್ಯಹರ್ಮ್ಯಾವಲೀ-|
ವೃತಮುದ್ಯೋತಿತಸಪ್ತಭೂಮಿಕಮನೇಕೋದಗ್ರಕೂಟಂ ವಿರಾ-
ಜಿತಘಂಟಂ ಕಲಧೌತತುಂಗಕಲಶಂ ಚೆಲ್ವಾಯ್ತು ರಾಜಾಲಯಂ ||೧೦೭||

ವ|| ಅಂತು ಸಮೆದ ಪುರವರಕ್ಕರಾತಿನಿಕರಕ್ಕಯೋಧ್ಯಮಪ್ಪುದಱಿಂದಯೋಧ್ಯೆಯುಮನೇಕನಿಕೇತನಸಮನ್ವಿತಮಪ್ಪುದಱಿಂ ಸಾಕೇತಮುಂ ವಿನೀತಜನಾಕೀರ್ಣ್ಣಮಪ್ಪುದಱಿಂ ವಿನೀತೆಯುಂ ಭವಿಷ್ಯತ್ಕೌಶಲವಿಷಯಸಹಚರ್ಯ್ಯದಿಂ ಸುಕೌಶಲೆಯುಮೆಂಬ ಪೆಸರ್ಗ್ಗಳನಿಟ್ಟು ನಾಭಿರಾಜಂಗೆ ರಾಜ್ಯಾಭಿಷೇಕಂಗೆಯ್ದು ಮರುದೇವಿಮಹಾದೇವಿವೆರಸು [೪]ಸಾಮ್ರಾಜ್ಯ[೪]ಪಟ್ಟಮಂ ಕಟ್ಟಿ ಸಕಲಜನಮುಮನಾಜ್ಞಾಕರಣವಿಧಾನದೊಳ್ ನಿಯೋಜಿಸಿ ದಿವಿಜಕುಜಜನಿತವಸನಪ್ರಸವವಿಲೇಪನಾಭರಣಂಗಳಿಂ ಪೂಜಿಸಿ ಭಗವದಮರಲೋಕಾವತರಣವಿನಿಹಿತಾಂತಃಕರಣನಾಗಿರ್ಪ್ಪನ್ನೆಗಂ,

ಸುರರಾಜಂ ತಾನೆ ರಾಜ್ಯಾಭಿಷವಣವಿಧಿಯಂ ಮಾಡಿದಂ ಸ್ವರ್ಗ್ಗದಿಂದಂ
ಪುರುದೇವಂ ಬಂದಪಂ ನಂದನನೆನಗೆನಿಸಲ್ಕಾನೆ ಸಂಸಾರಸೌಖ್ಯಾ|
ಕರನಾಗಿರ್ದ್ದಪ್ಪೆನೆಂಬುತ್ಸವದೊಳೆ ಸುಖದಿಂದಿರ್ದ್ದನೊಪ್ಪಿರ್ದ್ದಯೋಧ್ಯಾ-
ಪುರದೊಳ್ ಶ್ರೀನಾಭಿರಾಜಂ ಸುಕವಿಜನಮನೋಮಾನಸೋತ್ತಂಸಹಂಸಂ ||೧೦೮||

---

೧–೧ (ಅ,ಬ) ಪ್ರತಿಗಳಲ್ಲಿಲ್ಲ. ೨–೨ (ಚ) ವಿವಿಧವಿಧಿಸನಾಥಚತುಶ್ಶೃಂಗಾಧಿಕವೇದಿಕೆಗಳೊಳಂ. ೩–೩ (ಚ) ಕೇಳೀಲೀಲಾ. ೪–೪ (ಅ,ಬ) ಪ್ರತಿಗಳಲ್ಲಿಲ್ಲ.

ವ|| ಆಪ್ರಸ್ತಾವದೊಳ್,

ಲಯಮಂ ಕರ್ಮ್ಮತಮಸ್ತಮಕ್ಕೆ ಜಯಮಂ ಧರ್ಮ್ಮಕ್ಕೆ ಪೀನಂ ಪರಾ
ಜಯಮಂ ದೋಷಗಣಕ್ಕೆ ಲಕ್ಕೆತೆಱದಿಂ ಮುಂ ಮಾಡಿ ಸರ್ವ್ವಾರ್ತ್ಥಸಿ-|
ದ್ಧಿಯನೀಯಲ್ಕೆ ವಿನೇಯಸಂತತಿಗಭಿಪ್ರಾಯಾರ್ತ್ಥಸರ್ವ್ವಾರ್ತ್ಥಸಿ-
ದ್ಧಿಯಿನುದ್ಭೂತತಮಂ ಬರಲ್ಕೆ ಬಗೆದಂ ಸಂಸಾರಸಾರೋದಯಂ ||೧೦೯||

ಗ|| ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ-
ಚಂದ್ರವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣ್ಣಸೂಕ್ತಿ-
ಕಲ್ಲೋಲಮಾಲಾಕೀರ್ಣ್ಣಕವಿತಾಗುಣಾರ್ಣ್ಣವ-
ಪ್ರಣೀತಮಪ್ಪಾದಿಪುರಾಣದೊಳ್-
ನಾಭಿರಾಜರಾಜ್ಯಲಾಭವರ್ಣ್ಣನಂ
ಷಷ್ಠಾಶ್ವಾಸಂ
ಸಂಪೂರ್ಣ್ಣಂ.

# ಸಪ್ತಮಾಶ್ವಾಸಂ

ಶ್ರೀನಿಳಯಮಿದುವೆ ನಾಭಿ-
ಸ್ವಾಸಮೆನಲ್ ನೆಱೆದಯೋಧ್ಯೆಗವತರಿಸಲ್ ತ್ರಿ-|
ಜ್ಞಾನಧರಂ ಬಗೆದಂ ಭ-
ವ್ಯಾನಂದಕರಂ ಸರಸ್ವತೀಮಣಿಹಾರಂ ||೧||

ವ|| ಅನ್ನೆಗಮಿತ್ತಲ್,

ಯುಗಮಂ ನಿರ್ವ್ವಿಸತಪ್ಪಿನಂ ಕೃತಯುಗಂ ಮಾಡಲ್ ಸುರೇಂದ್ರಾಳಿಗಾ-
ವಗಮುತ್ಸಾಹಮನುಂಟುಮಾಡಲೆಡೆಗೊಟ್ಟೀಧರ್ಮ್ಮಮಂ ನೀಂ ಜಲ-
ಕ್ಕಗೆ ಮಾಡಲ್ ಬಗೆದಪ್ಪುದೆಂದು ನಯದಿಂ ಸಾಕೇತಮುತ್ಕೇತುಬಾ-
ಹುಗಳಿಂದಂ ಕರೆವಂತದೇನೆಸೆದುದೋ ಸರ್ವ್ವಾರ್ಥಸಿದ್ಧೀಶನಂ ||೨||

ವ|| ಅನ್ನೆಗಮಮರಪತಿ ಪರಮನ ಚರಮಗರ್ಬ್ಭಾವತರಣಮನವಧಿ-
ಯಿಂದಮಱೆದಱುದಿಂಗಳುಂಟೆನೆ ಮುನ್ನಮೆ,

ಸುರಿವುದು ತಡೆಯದಯೋಧ್ಯಾ-
ಪುರದೊಳ್ ನೀನಿಂದೆ ತೊಡಗಿ ವಸುಧಾರೆಯನಾ-
ದರದಿನೆನೆ ಸಹಜಭಕ್ತಿಯ
ಭರದಿಂ ಸುರಪತಿಯ ಬೆಸದಿನೊಸೆದಂ ಧನದಂ ||೩||

ವ|| ಮತ್ತಂ ಕುಲಶಿಖರಿಶೇಖರಾಯಮಾಣಪದ್ಮಾದಿಸರೋವರನಿವಾಸಿ-
ನಿಯರಪ್ಪ ಶ್ರೀಹ್ರೀಧೃತಿಕೀರ್ತ್ತಿಬುದ್ಧಿಲಕ್ಷ್ಮಿಗಳೆಂಬಱುವರುಮನಾತ್ಮೀಯಗುಣ-
ಗಣಮಣಿವಿಭೂಷಣಂಗಳಿಂ ಜಿನಜನನಿಯನಲಂಕರಿಸಲುಮನಾದ್ಯನಿಧನಜಿನನಿಲ-
ಯರುಚಿರರುಚಕಾಚಲದ ಪೂರ್ವ್ವದಿಗ್ಭಾಗದ ವೈಡೂರ್ಯ್ಯಕಾಂಚನಕನಕಾರಿಷ್ಟ-
ದಿಕ್ಸ್ವಸ್ತಿಕನಂದನಾಂಜನಮೂಲಕಂಗಳೆಂಬೆಂಟುಂ ಕೂಟಂಗಳೊಳ್ ರಮಿಯಿ-
ಸುವ ವಿಜಯೆ-ವೈಜಯಂತೆ-ಜಯಂತೆ-ಅಪರಾಜಿತೆ-ನಂದೆ-ನಂದೋತ್ತರೆ-
ಆನಂದೆ-ನಂದಿವರ್ಧನೆಯೆಂಬೆಣ್ಬರುಂ ದಿಗ್ವನಿತೆಯರಂ ಪರಮ೧ಜಿನಜನ್ಮೋ೧ತ್ಸ-
ವದೊಳ್ ಶೃಂಗಾರಂಬೆರಸು ಭೃಂಗಾರುಧಾರಿಗಳಾಗಲುಂ; ೨ತತ್ಕ್ಷಿತೀಲದ೨
ಪ್ರಾಗ್ದಿಗ್ದೇಶದವೋಘ-ಸುಪ್ರಬುದ್ಧ-ರುಂದ್ರ-ವಿಮಳ-ರುಚಕ-ರುಚಕೋತ್ತರ-
ಚಂದ್ರ-ಸುಪ್ರತಿಷ್ಠಮೆಂಬ ಕೂಟಾಷ್ಟಕಂಗಳೊಳ್ ರಮಿಯಿಸುವ ಸುಪ್ರತಿಷ್ಠಿತೆ-
ಸುಪ್ರಣಿಧಿ-ಸುಪ್ರಬುದ್ಧೆ-ಯಶೋಧರೆ-ಲಕ್ಷ್ಮೀಮತಿ—ಕೀರ್ತ್ತಿಮತಿ-ವಸುಂಧರೆ—
ಚಿತ್ರೆಯೆಂಬೆಣ್ಬರುಂ ದಿಗಂಗನೆಯರಂ ನಾಭಿರಾಜಾಂಗನೆಗೆ ಮಣಿದರ್ಪ್ಪಣಮಂ—
ಪಿಡಿಯಲುಂ; ತನ್ಮಹೀಧರಾಪರುಣಾಶಾವಿಶೇಷಕಮಾಗಿರ್ದ್ದ ಲೋಹಿತಾಕ್ಷ-ಜಗ-
ತ್ಕುಸುಮ—ಪದ್ಮ—ನಳಿನ—ಕುಮುದ—ಸೌಮನಸ—ಯಶೋಭದ್ರ—ಸರ್ವ್ವ-

---

೧-೧ (ಚ) ಜಿನೋ. ೨-೨ (ಚ) ತತ್ಕುಳದರಿಷ್ಟ.

ತೋಭಪ್ರಂಗಳೆಂಬ ದ್ವಿಗುಣಚತುಃಕೂಟಂಗಳೊಳಂ ಸಂಚರಿಸುವಿಳಾದೇವಿ—ಸುರಾದೇವಿ—ಪೃಥ್ವಿ—ಪದ್ಮಾವತಿ—ಕಾಂಚನೆ—ನವಮಿಕೆ-ಸೀತೆ-ಭದ್ರೆಯೆಂಬೆಣ್ಬರುಮಾಶಾವಘೂವರರನಾದಿಪುರುಷಾಂಬಿಕೆಗೆ ಗಾಯಕೀನಾಯಕಿಯರಾಗಿ ವಿಚಿತ್ರಾತಪತ್ರಂಗಳಂ ಪಿಡಿಯಲುಂ; ತದ್ಗಿರೀಂದ್ರೋತ್ತರ [೧]ಕಕುಬ್ದೇಶದ[೧] ಸ್ಫಟಿಕಾಂಜನ—ಕಾಂಚನ–ರಜತ[೨]ಕುಂಡಲ[೨]-ರುಚಿರ—ರುಚಕ-ಸುದರ್ಶನಂಗಳೆಂಬೆಂಟುಂ ಕೂಟಂಗಳೊಳಿಪ್ಪ [೩]ಲಂಬೂಷೆ[೩]–[೪]ಮಿತ್ರಕೇಶಿ[೪]–ಪುಂಡರೀಕಿಣಿ—ವಾರುಣ್ಯಾದರ್ಶೆ-ಶ್ರೀ-ಹ್ರೀ-ಧೃತಿಯೆಂಬೆಣ್ಬರುಂ ದಿಕ್ಕನ್ಯೆಯರಂ ಮರುದೇವಿಮಹಾದೇವಿಗೆ ಚಾಮರಮನಿಕ್ಕಲುಂ; ಮತ್ತಮಾಪರ್ವತದ ಪೂರ್ವದಿಗ್ಭಾಗದೊಳ್ ನೆಲಸಿದ ವಿಮಲ—ನಿತ್ಯಾವಲೋಕ—ಸ್ವಯಂಪ್ರಭ—ನಿತ್ಯೋದ್ಯೋತಂಗಳೆಂಬ ನಾಲ್ಕುಕೂಟಂಗಳರಸಿಯರಪ್ಪ ಚಿತ್ರೆ—ಕನಕಚಿತ್ರೆ—ತ್ರಿಶಿರೆ—ಸೂತ್ರಾಮಣಿಯೆಂಬ ನಾಲ್ವರುಂ ವಿದ್ಯುತ್ಕುಮಾರಿಯರನುದ್ಯದ್ವಿ[೫]ದ್ಯುದ್ವಿಲಾಸದಿನಾ[೫]ವಿಲಾಸರತ್ನಾಕರೆಯಿರ್ದಲ್ಲಿ ಕಣ್ಗೆ ಸೊಗಯಿಸಿ ತಳವಳಿಸಿ ಮಣಿಪ್ರದೀಪಂಗಳಂ ಬೆಳಗಲುಂ; ತದವನೀಧರವಿದಿಙ್ನಿಲಯಂಗಳಪ್ಪ ವೈಡೂರ್ಯ—ರುಚಕ-ಮಣಿಪ್ರಭ—ರುಚಕೋತ್ತರ[೬]ಂಗಳೆಂಬ ವಿಕಟಕೂಟಾಧೀಶೆಯರಪ್ಪ ರುಚಕೆ—ರುಚಕಾಸ್ಯೆ—ರುಚಕಾಂತೆ–ರುಚಕಪ್ರಭೆಯೆಂಬೀನಾಲ್ವರುಂ [೭]ದಿಕ್ಕುಮಾರಿಕಾಮಹತ್ತರಿಕೆಯರುಮಂ ಮಹತ್ತರಿಯರಾಗಲುಂ; [೭]ಮತ್ತಮಾನಗದ ನೆಗೆದ ರತ್ನಕೂಟ-ರತ್ನಪ್ರಭ-ಸರ್ವರತ್ನ—ರತ್ನೋಚ್ಚಯಂಗಳೆಂಬ ಕೃತಕದ್ವಿ[೮]ಕೃತಕವಿಕಟಕೂಟ[೮]ಂಗಳೊಳ್ ಕೊಂಡಾಟದಿಂದಿಪ್ಪ ವಿಜಯೆ—ವೈಜಯಂತೆ—ಜಯಂತೆ—ಅಪರಾಜಿತೆಯೆಂಬ ವಿದ್ಯುತ್ಕುಮಾರೀಪುರಂಧ್ರಿಯರಂ ತೀರ್ಥಕರಕುಮಾರಜಾತಕರ್ಮ್ಮಕರಣಗರ್ಭಶೋಧನಾದಿಗಳ್ಗೆ ವನಿತಾಗೂಢವ್ಯಾಪಾರದೊಳ್ ನೆಗಟಲುಂ [೯]ಮತ್ತಮನ್ಯನಗ[೯]ನಿವಾಸಿಗಳಪ್ಪ ಮಾಳಿಕೆ-ಮಾಳಿನಿ-ಕನಕದೇವಿ-ಕನಕಚಿತ್ರೆ-ಪುಷ್ಪಚೂಲಿಕೆ—[೧೦]ಮಾಳಾವತಿ[೧೦]-ಸುರದೇವಿ-ತ್ರಿಶಿರೆ ಮೊದಲಾಗಿ ಪೆಱರುಮಮರ[೧೧]ಕಾಂತೆಯರನಾಮರುದೇವಿಗನೇಕವಿನೋದಂಗಳಂ ಸಲಿಸಲುಮಿಂತೆನಿತಾನುಂ[೧೧] ತೆಱದ ಬೆಸಂಗಳಂ ಧರ್ಮ್ಮಾನುರಾಗದಿಂ ಸೌಧರ್ಮ್ಮೇಂದ್ರಂ ಬೆಸಸುವುದುಮಾಕೆಗಳ್ ಬಂದು,

---

೧–೧ (ಚ) ಕಕುದ್ದೇಶದ. ೨–೨ (ಚ) ಕುಂಡಳ. ೩–೩ (ಚ) ಚಂದ್ರಪ್ರಭಪುರಾಣದಲ್ಲಿ 'ಅಂಬುದೆ 'ಯೆಂದಿದೆ; (೧೧–೧೨೨ವ.) ಅನಂತನಾಥಪುರಾಣದಲ್ಲಿ 'ಆಲಂಬಾಸೆ' ಯೆಂದಿದೆ (೪–೭೯ ವ.) ೪–೪ (ಚ) ಚಿತ್ರರೇಖೆ. ೫–೫ (ಚ) ದ್ವಿಳಾಸಮಣಿದರ್ಪ್ಪಣಮನಾ. ೬ (ಅ,ಬ) ಮಂ. ೭–೭ (ಅ) ದಿಕ್ಕುಮಾರಿಕೆಯರಂ; (ಚ) ದಿಕ್ಕುಮಾರಿಕಾಮಹತ್ತರಿಕೆಯರುಮಂ. ೮–೮ (ಅ) ಕೃತವಿದಿಕ್ಕೂಟ; (ಬ) ಕೃತಕದ್ವಿಕೃತದ್ವಿಷಕೂಟ. ೯–೯ (ಅ) ಮತ್ತಂ ವಕ್ಷಾರೆಷ್ವಾಕಾರಕುಂಡಳಾದ್ಯನ್ಯನಗ. ೧೦–೧೦ (ಚ) ಮಾಳತಿ; ಚ. ಪ್ರ.ಪು. ದಲ್ಲಿ 'ಮಾಳಾವತಿ' ಎಂದಿದೆ (೧೧-೧೨೨ವ) ೧೧–೧೧ (ಬ) ಕಾಂತೆಯರನಿಂತಾರ (ಚ) ಕಾಂತೆಯರನಿಂತೆನಿತಾನುಂ.

ಪಱೆವ ಮನಂ ಬೆರಸೆಱಗಿದ
ಪದದೊಳದೇಂ ಚೆಲ್ವುವಡೆದುವೋ ಜಿನಜನನೀ- ।
ಪದಪಲ್ಲವತಳದೊಳ್ ಸುರ-
ಸುದತೀಚಯದಲಕವಲ್ಲರೀಕುಸುಮಂಗಳ್ ॥೪॥

ವ॥ ಅಂತು ಸುರಸುದತೀಸಂದೋಹಮುಮರಕಾಮಿನೀಮಹತ್ತರಿಕಾನಿಯ- ಮಿತಾತ್ಮೀಯನಿಯೋಗದಿಂ ಜಿನಜನನಿಯ ಮನಮನಱಿದೋಲಗಿಸುವಲ್ಲಿ,

ತುಡುಗೆಯ ಮಣಿದೀಧಿತಿಗಳ
ಪೊಡರ್ಪು ಮೇಗೊಗೆವ ಕೊಡೆವೊಲೆಸೆದಪುವೆಂಬೀ ।
[1]ನುಡಿ ನೆಗೞ್ಗೆ[1] ಪಂಚರತ್ನದ
ಕೊಡೆಯುಂ ಪಿಡಿದಮರಿಜನದ ಮನದಡಿವಿಡಿಗಳ್ ॥೫॥

ಮೃದುಕರತಲವದನದ ಚೆ-
ಲ್ವೊದವಿರೆ ಮಣಿವಲಯಕಲರವಂ ಸೊಗಯಿಸೆ ಚೆ- ।
ಲ್ವಿದಿರ್ಗೊಳೆ ಬೀಸುವ ಚಮರೀ-
ಜದಿನೊರ್ವಳ್ ಹಂಸೆ [2]ಪಾಯ್ವ[2] ಲತೆಯನೆ ಪೋಲ್ತಳ್ ॥೬॥

ಈಕೆಯ ಮುಖೇಂದು ಬಿಂಬದಿ-
ನೀಕನಕಸರೋಜಮೆಂತುಮಲರ್ದತ್ತೆಂದೀ- ।
ಲೋಕಂ ಪೊಗೞ್ವುದು ಕನಕಾ-
ಬ್ಜಾಕಾರದೆ ಡವಕೆವಿಡಿದ ಸುರಸೌಂದರಿಯುಂ ॥೭॥

ಅರುಣ[3]ಸರಸೀರುಹಂ[3] ಮೃದು
ಕರತಲವಿನ್ಯಾಸಮಮರೆ ಜಿನ[4]ಜನನಿಯರೊಳ್
ಗುರುಳಂ[4] ಸಮಱುವ ಕನ್ಯಕೆ
ಕರಮೆಸೆದಳ್ ತಳಿರೊಳಳಿಗಳಂ ಮುಚ್ಚುವವೋಲ್ ॥೮॥

ತಾಮರೆಗಂ ಚಂದ್ರಂಗಂ
ತಾಮಸಮಂ ಕಳೆದು ಕಾಣ್ಕೆಮಾಡ್ಪಂತೆವೊಲಾ
ತಾಮರಸನಿಭಾಸ್ಯೆಗೆ ಸುರ-
ಕಾಮಿನಿಕಟ್ಟಿದಿರೊಳೆಸೆಯೆ ಕನ್ನಡಿವಿಡಿದಳ್ ॥೯॥

೧-೧ (ಚ) ನುಡಿಗಳ್ಗೆ. ೨-೨ (ಚ) ಪಾಯ್ವ. ೩-೩ (ಅ) ಸರಸೀರುಹಪಳ. ೪-೪ (ಅ) ಜನನಿಯ ನಿಜಗುರುಳಂ.

[೧]ಚಿನ್ನಮೆ[೧] ಕುರುಳ ನೆಟಿಲ್ಗಳ್
ತನ್ನೊಳಿ ತಳ್ತೊಯ್ದು ನೆಗಟ್ದ ಕಱಿಯನೆ ಪೋಲ್ತುಂ ।
[೨]ನುನ್ನಂ[೨] ಸೊಗಯಿಸುತಿರೆ ಸಿರಿ-
ಗನ್ನಡಿ ಕನ್ನಡಿಪುದಾದುದಿಂದು ಶ್ರೀಯುಂ ॥೧೦॥

ಅಡಿಯೂಡಲ್ಕಲತಗೆಯುಂ
ತುಡಲ್ಕೆ ತುಡುಗೆಯನುಡಲ್ಕೆ ದಿವ್ಯಾಂಬರಮುಂ ।
ಮುಡಿಯಲ್ ಪೂಮಾಲೆಯನೋ-
ಗಡಿಸದೆ ಕುಡುವಮರಿ ಕಲ್ಪಲತೆಯನೆ ಪೋಲ್ತಳ್ ॥೧೧॥

ತಲಡೊಳ್ ತಂಬುಲದೆಲೆಗಳ[೩]
ಪೊಳೆಪಮರ್ದಿರೆ ದೇವಕನ್ಯೆ ಮುತ್ತೊರ್ಪ್ಪಳ್ ಕೋ- ।
ಮಲಲತೆಯ ನಿಮಿರ್ದ ಕುಡಿಯೊಳ್
ಗಿಳಿ ಪಾಯ್ವಂತೆನಿಸಿ ಸತಿಗೆ ತಂಬುಲಮಿತ್ತಳ್ ॥೧೨॥

[೪]ಭೀಷಣ[೪]ರಮಣೀಯತೆ ಸುರ-
ಯೋಷಿನ್ನಿಕರಕ್ಕೆ ಕಿತ್ತ ಬಾಳಿಂ ಭೂಷಾ- ।
ವೇಷದಿನಮರ್ದತ್ತೆನೆ ಕಲ-
ಭಾಷಿಣಿಗಮರಿಯರೆ ಬಳಸಿ ಮೆಯ್ಗಾಪಾದರ್ ॥೧೩॥

ಅತಿಲಲಿತ ತರ್ಜ್ಜನೀತ-
ರ್ಜ್ಜಿತ ಪರಿಜನೆಯರ್ ವಿಚಿತ್ರವೇತ್ರಲತಾಲೋ- ।
[೫]ಭಿತಕರ[೫]ಕಮಳೆಯರಂತಃ-
ಪ್ರತಿಹಾರಿಯರಾದರಮರಕಾಂತೆಯರರೆಬರ್ ॥೧೪॥

ಕಳಕಳಿಪಮರಿಯರಂ ಕ-
ಣ್ಣೊಳೆ ಬಗ್ಗಿಸುವಲ್ಲಿ ಕಾಮ[೬]ಕಾಮ್ಮುರ್ಕಕರಸಂ[೬]- ।
ಚಲನಮನೆ ಪೋಲ್ತು ಕರಮೆರ್ದೆ-
ಗೊಳಿಸಿದುದಾಕೆಗಳ ವಿಭ್ರಮಭ್ರೂಭಂಗಂ ॥೧೫॥

೧-೧ (ಆ, ಬ) ಚಿನ್ನಮೆ. ೨-೨ (ಆ, ಬ) ಮುನ್ನಂ. ೩ (ಜ) ಳ್. ೪-೪ (ಅ) ಭೂಷಣ. ೫-೫ (ಜ) ಭಿತತಳ. ೬-೬ (ಅ) ಕಾಮ್ಮುರ್ಕಕಜಯು.

ಗಮಕಂ ಪ್ರಯೋಗಮಾರ್ಗೋ-
ಗಮಲಂಕಾರಂ ಪ್ರಾಗರ್ ನಯಂ ಮಿಱುಗು ಪ್ರೌಢ- ।
ಬ್ದಮರೆ ಕೊಳೆ ಪಾಡುವಮರಿ ವ-
ಲಪುರ್ದಂ ಮುಕ್ಕುಳಿಸಿಯುಗುಳ್ವ ತೆಱನಂ ಪೋಲ್ತಳ್ ॥೧೬॥

ಜೇನ ಮಱಿಕೆ ಕೊಂಡುದಮುನ್ನಿನ
ಸೋನೆಯ ಸುರಿವತ್ತು ರಸದ ತೊಱೆ ಪರಿವತ್ತೆಂ- ।
ಬೀಣಾಡಿಯನೆ ನುಡಿಯಿಸಿದ-
ತ್ತಾನಾಕಸ್ತ್ರೀಯ ಗೇಯಮಾನ್ಯಾಯಿಕೆಯೊಳ್ ॥೧೭॥

ಕರಣಾಂಗಹಾರವ್ಯಾಪದ-
೧ಪರಿಕ್ರಮಂ೧ಗಳ ಬೆಡಂಗುಗಳ್ ಜತಿಯೊಳಕಂ- ।
ಕರಿಸಿದುವೆಂಬಿನಮಾಡುವ
ಸುರನರ್ತಕಿ ಜಿನನ ಜನನಿಯಂ ಮೆಚ್ಚಿಸಿದಳ್ ॥೧೮॥

ವದನರಸಂ ೨ಪದನರಸಂ
ಪ್ರೊದಬ್ದುದೆನಿಸುವಿನಮಮರಿ ನರ್ತಿಸೆ ಜಿಲ್ಹಂ ।
ಪುದಿದುಜಚಲ್ಲಿಯೊಳೆಸೆದುದು
ಕದುರೋಜಸರೋಜಮುಕುಲಯುಗಸಂಚಲನಂ ॥೧೯॥

ಇದಱ ದನಿ ಮುದವಮಲಿಕಲ-
ನ್ಮೃದುಸಿನದಮೊಳಂ ಮನೋಜಕಾಮ್ಯುಕಗುಣನಾ- ।
ದದೊಳಂ ನೆಱಸುವುದೆನೆ ಸುರ-
ಸುದತಿ ಪೆಱಳ್ ಮಿಱಿದು ಬೀಣೆಯಂ ಬಾಜಿಸಿದಳ್ ॥೨೦॥

ತಳೆದ ಕಡುಗೆಂಪು ಪುದಿದ
ಪ್ಪೊಳಸಿರೆ ಸುರಯುವತಿ ಮಧುರತಂತ್ರೀನಾದಂ ।
ಕೂಳೆ ಬೀಣೆಯ ದಂಡಿಗೆಯುಂ
ತಳಿತ್ತಿರ್ದೆಂಬೊಂದು ಶಂಕೆಯಂ ಪುಟ್ಟಿಸಿದಳ್ ॥೨೧॥

ವ॥ ಮತ್ತಮಾಕೆಗಳ ವದನೇಂದುಬಿಂಬಂಗಳ ಬೆಳಗುಗಳೊಳ್ ಗಗನಮುಂ ಡಲನೆಲ್ಲಮಿಂದುಮಂಡಲಮಯಮುಂ, ನಿಕಾಮಕೋಮಳಪದಪಲ್ಲವವಿನ್ಯಾ-

೧-೧ (ಅ,ಬ) ಪರಿಭ್ರಮಂ, ೨-೨ (ಅ, ಬ) ನಿನದಂ,

ಸಂಗಳೊಳೆ ಮಣಿ[೧]ಕುಟ್ಟಿಮಮೆಲ್ಲಂ[೧] ಪಲ್ಲವಮಯಮುಮನರ್ಘ್ಯಾಭರಣ-ಕಿರಣಜಾಲಂಗಳೊಳೆ ನರೇಂದ್ರಭವನಮೆಲ್ಲಮಿಂದ್ರಚಾಪಮಯಮುಂ, ವಿಲೋಲ-ಲೋಚನಮಯೂಖಲೇಖಾಸಂತಾನದೊಳೆ ದೆಸೆಗಳೆಲ್ಲಂ ನೀಲೋತ್ಪಲ-ಮಯಮುಮಂಗಪ್ರಭಾಪ್ರವಾಹದೊಳೆ ದಿವಸಮೆಲ್ಲಂ ಲಾವಣ್ಯಮಯಮುಮಾಗಿ ನಾಭಿರಾಜನ ಭವನಮೆಲ್ಲಮಿಂತು ಮದನಾಮೃತಮಯಮುಂ ಶೃಂಗಾರರಸ-ಮಯಮುಂ ಸೌಕುಮಾರ್ಯ್ಯಮಯಮು[೨]ಮನುರಾಗಮಯಮುಮಾಶ್ಚರ್ಯ್ಯ-ಮಯ[೨]ಮುಮಾಗಿ ತೋಱೆ, ಸುರಮಹತ್ತರಿಕೆಯರಮರಗಣಿಕೆಯರಂ ಪೆಸರ್ವೆ-ಸರೊಳೆ ಕರೆದು, ನಿಪುಣಿಕೆಯಂ ಜಿನಜನನಿಯ ಸೆಜ್ಜೆಯನುಜ್ಜ್ವಲಂ ಮಾಡಲುಂ, ಚಂದ್ರಿಕೆಯಂ ಚಂದ್ರಕಾಂತದ ಕರಗಮಂ ತೀವಲುಮಮೃತಮತಿಯನಮೃತಾ-ಹಾರದ ಬೋನಮನೆತ್ತಲುಂ, [೩]ಲವಲವಿಕೆಯಂ[೩] ಪರಿಯಣಮಂ ಬಿತ್ತರಿಸಲುಂ, ಪದ್ಮಿಕೆಯನಗಲಂ ತಂದು ಮುಂದಿರಿಸಲುಂ, [೪]ಮನೋಹರಿಯಂ[೪] [೫]ಪಡಿಸಣಮಂ ನೋಡಲುಂ,[೫] ಮಾಳತಿಕೆಯಂ ಬಡ್ಡಿಸಲುಮುತ್ಪಳಿಕೆಯಂ ಕೈಘಟ್ಟಿನೀಡಲುಂ, ಮಾದಾರಿಕೆಯಂ ಮಂದಾರಮಾಲೆಯನೆತ್ತಲುಂ, ವಿಲಾಸವತಿಯಂ ಪಸದನಂ-ಗೊಳಿಸಲುಂ, ಲವಂಗಿಕೆಯಂ ಲವಂಗಪಲ್ಲವರಸದೊಳೆ ವಿಲಾಸಾವಾಸಭವನಮ-ನುತ್ತಳಿಸಲುಂ, ಪ್ರಭಾವತಿಯನಿಂದ್ರನೀಲಮಣಿಭವನದೊಳ್ ಮಣಿಪ್ರದೀಪಮಂ ಬೆಳಗಲುಂ, ಚಿತ್ರಲೇಖೆಯಂ ಮಣಿಸ್ತಂಭಸಾಲಭಂಜಿಕಾಸ್ತಂಭಂಗಳ್ ಕುಂಕು-ಮರಸಪತ್ರಲೇಖೆಗಳಂ ವಿರಚಿಸಲುಂ; ಮಯೂರಿಕೆಯಂ ಧಾರಾಗೃಹಕ್ಕೆ ಗೃಹ-ಮಯೂರಂಗಳಂ ನಡೆಯಿಸಲುಂ, ಚೂತಲತಿಕೆಯಂ ಕನಕಪಂಜರಾಂತರ್ಗ್ಗ-ತಕೋಕಿಲಕ್ಕೆ ಚೂತಲತಿಕಾಂಕುರಂಗಳಂ ನೀಡಲುಂ ಮೃಣಾಲಿಕೆಯಂ ಭವನ-ಕಲಹಂಸೆಗೆ ಬಾಲಮೃಣಾಲನಾಳಂಗಳಂ ನೀಡಲುಮಿಂತು ಪೆಱವುಮಿಸುವೆ-ಸಂಗಳನವರವರ್ಗೆ ತಕ್ಕುವಂ ತಕ್ಕಂದದಿಂ ಪೇೞ್ದಾಗಳ್,

[೬]ವಸುಧೆಯನೇನಿವಳ್ದ[೬]ರರುಣಾಬ್ಜದಲಂಗಳೊಳಚ್ಚಿಯಿಂ ಪಮ-
ರ್ಚ್ಚಿಸಿದರೊ ಪೇೞಿಮೆಂಬಿನೆಗಮುಣ್ಮುವ ಪಾದತಲಂಗಳೊಂದು ಕೆಂ- |
ಪೆಸೆವಿನಮುತ್ತಲಿತ್ತಲೆಡೆಯಾಡುವ[೭] ದಂದುಗದಾಗಳೇಂ[೭] ಪೊದ-
ಱ್ದೆಸೆದುದೊ ಚಾರುದೇವಗಣಿಕಾಮಣಿನೂಪುರಮಂಜುಸಿಂಜಿತಂ ||೨೨||

೧–೧ (ಅ) ಕುಟ್ಟಿಮಭೂಮಿಯೆಲ್ಲಂ. ೨–೨ (ಚ) ಪ್ರತಿಯಲ್ಲಿಲ್ಲ. ೩–೩ (ಚ) ಲವ-ಲವಿಕೆ; (ಚಂ. ಪ್ರ. ಪು. ೧೧–೧೪೫ನ) ನೋಡಿರಿ. ೪-೪ (ಅ) ನಗಲೊತ್ತಿಸಲುಂ. ೫-೫ (ಅ) ಪಡಿಸವಣಂಗಳೆಯಲುಂ. ೬–೬ ವಸುಧೆಯನೆಯ್ದಿ ನಳ್ದಿರ; (ಬ) ವಸುಧೆಯನೀನೆನಿಳ್ದರ. ೭–೭ (ಅ) ದಂದುಗದಿಂದದೇಂ; (ಬ) ದಂದುಗಮಾಗಳೇಂ

ಮನಮೊಲ್ದಿಂಪ್ರನಿವಾಸಸಂಭವಶುಚಿದ್ರವ್ಯಂಗಳಿಂ ಗರ್ಭಶೋ-
ಧನಮಂ ದೇವಿಯರಿರ್ದ್ದು ಮಾಡೆ ಪೆಱತಿ[೧]ನ್ನೇನೆಂಬುದಾ ಕಾಂತೆಗಂ- |
ದು ನಯಂ ಬೇಱಿ ಬೆಡಂಗು ಬೇಱಿ ಪೊಳೆವಂಗಚ್ಛಾಯೆಯುಂ ಬೇಱಿ ತೊ-
ಟ್ಟನೆ ಮೆಯ್ಪೋಱಿ ವಿಶುದ್ಧಮಪ್ಪ ಪಳಿಕಿಂ ಪೆಣ್ಮಾಡಿದಂತೊಪ್ಪಿದಳ್ ||೨೩||

ವ|| ಮತ್ತಮಮರಾಧೀಶಶಾಸನದೊಳ್ ನಾಭಿರಾಜರಾಜಮಂದಿರಾಂಗಣ-
ದೊಳ್,

ಧನದಂ ಕಾಂಚನಪಂಚರತ್ನಮಯಮಂ ರೈವೃಷ್ಟಿಯಂ ಮಾಡುವ-
ಲ್ಲಿ ನಭೋಭಾಗದಿನಿಂದ್ರಚಾಪಮನಿತುಂ ಭೂಭಾಗದೊಳ್ ಬಂದು ತೊ- |
ಟ್ಟನೆ ಜೇರೂಱಿದುವೋ ಕೆಪಲ್ತುವೊ ಚಲದ್ವಿದ್ಯುಲ್ಲತಾದೀಪ್ತಿಯಿಂ-
ದಿನಮೇಂ ನಾಡೆ ಬೆಡಂಗನಾಳ್ದುದೊ [೨]ವಿಯದ್ದಿಗ್ಭೂರಿ[೨] ಭೂಮಂಡಲಂ ||೨೪||

ಕೂಡಿತ್ತುದ್ದಾಮರತ್ನಾಂಶುಗಳೊಳೆ ಧರಣೀಭಾಗಮಾಗಳ್ ಬೆಡಂಗಂ
ಮಾಡಿತ್ತಂದೊಂದು ಮಂದಾರದ ಸರಿ ವಿರುವದ್ಭೃಂಗ[೩]ಸಂಗೀತಿ[೩] ಚೆಲ್ವಂ |
ನೀಡಿತ್ತಾರುಂದ್ರದೇವಾನಕದೊಡನೆ ಜಯೋದ್ಘೋಷಣಂ ಮಂದಮಂದಂ
ತೀಡಿತ್ತಾಲೋಲಗಂಗಾಲಲಿತಲಹರಿಕಾಸಾರಸಾರಂ ಸಮೀರಂ ||೨೫||

ವ|| ಅಂತು ಧನದಂ ಸಾರ್ದ್ಧಕೋಟಿತ್ರಯಪ್ರಮಿತ ಪಂಚರತ್ನವೃಷ್ಟಿಯಂ
ಪ್ರತಿದಿನಂ ಸುರಿಯೆ,

ಧರೆ ರತ್ನಗರ್ಭೆಯಾದುದು
ಸುರರೆಲ್ಲಂ ಹರ್ಷಗರ್ಭರಾದರ್ [೪]ಪೊಗಳಲ್ |
ಪಿರಿದೆನೆ[೪] ಹಿರಣ್ಯಗರ್ಭನ
ನಿರುಪಮಗರ್ಭಾವತರಣಮಂಗಳವಿಧಿಯೊಳ್ ||೨೬||

ವ|| [೫]ಮತ್ತೊಂದು[೫] ದಿವಸಮಾಮರುದೇವಿಮಹಾದೇವಿ ಚತುರ್ಥಸ್ನಾ-
ನದೊಳ್ ಕಲ್ಪದ್ರುಮದುಕೂಲವಸನೆಯುಮಾರ್ಜ್ಜಿತದಶನಮಯೂಖಜಲಪ್ರ-
ಕ್ಷಾಲಿತದಶನವಸನೆಯುಂ ಸರ್ವಾಂಗೀಣಮೌಕ್ತಿಕಾಭರಣಕಿರಣಾಕೀರ್ಣ್ಣಸುವ-
ರ್ಣ್ಣದುರ್ಲ್ಲಕ್ಷಹರಿಚಂದನಾಂಗರಾಗೆಯುಂ ಝುಂಕಾರಾನುಮಿತಕುಂತಲಕುಲ-
ಕಾಂತಿಮಧುಕರನಿಕರನಿಭೃತನಿಲಯ[೬] ಮನೋಹರಸನ್ಮಲ್ಲಿಕಾ[೬][೭]ದಾಮ[೭]ಪರಾಗೆ-
ಯುಮಾಗಿ,

೧ (ಚ) ದಿ. ೨-೨ (ಚ) ವಿಯದ್ದಿಗ್ಭೂಮಿ. ೩-೩ (ಅ,ಬ) ಸಂಸಂಗಿ. ೪-೪ (ಚ) ಪಿರಿದ | ಚ್ಚರಿಯೆನೆ. ೫-೫ (ಅ) ಮತ್ತಮೊಂದು. ೬-೬ (ಅ) ಮನೋಲ್ಲಸಿತಸನ್ಮಲಿಕಾ; (ಬ) ನಿಪೀಯಮಾನೋಲ್ಲಸರಿನ್ಮಲ್ಲಿಕಾ. ೭-೭ (ಅ) ಮಾಲದಾತೆಯು.

ಪೊಳೆವಮೃತಾಂಶುಕಂಬಡದಧಿದೇವತೆ ದುಗ್ಧಪಯೋಧಿಯಿಂದಮೀ-
ಗಳೆ ಪೊಱಮಟ್ಟು ಬಂದ ಕಮಲಾಸನೆ ನಾಭಿನರೇಂದ್ರನೆಯ್ದೆ ಸಂ- |
ಗಳಿಸಿದ ಕೀರ್ತಿ ಮೂರ್ತಿಮತಿ ತದ್ವದನಾಬ್ಜವಿಲಾಸವಾಸದೊಳ್
ತಳರದೆ ನಿಂದ ವಾಗ್ವನಿತೆಯೆಂಬಭಿಶಂಕೆಯನುಂಟುಮಾಡಿದಳ್ ||೨೭||

ವ|| ಅಂತು ಸೊಬಗ್ಗಿಂಪಂದನೇಕಮಸೃಣಭಿತ್ತಿನಿಲಿಖಿತೋಪವನಲತಾಭವ ನಮನೋಭವಕೇಳೀಲಂಪಟನಿಲಿಂಪದಂಪತಿ ವಿದ್ಯಾಧರಮಿಥುನಮನ್ಮಥೋದ್ದೀಪನಮೊಳಾತ್ಮೀಯದೇಹಪ್ರಭಾಪ್ರವಾಹ[೧]ಬಹುಲಿತ[೧]ಮಣಿದೀಪ್ತಿಪ್ರಸರದೊಳತುಚ್ಛಮಳಯಜಚ್ಛಟಾಸಿಕ್ತಮರಕತಮಣಿಕುಟ್ಟಿಮಪ್ರಕೀರ್ಣಮಧುಕರಕುಲಶಬಲಮಲ್ಲಿಕಾಮುಕುಲದೊಳತಿಬಹಳಕಾಲಾಗರುಧೂಪಧೂಮಜಾಲೋದ್ಗಾರಿಹರಿನೀಲಗವಾಕ್ಷಜಾಲದೊಳವಿರಲಮುಕ್ತಾದಾಮನಿಕಾಮಕಮನೀಯಸಿತವಿತಾನದೊಳಮೃತಕಿರಣಮಣಿಪೀಠಿಕಾಧಿಷ್ಠಿತಪರ್ಯ್ಯಂಕದೊಳ್,

|| ಲಲಿತ ರಗಳೆ ||

ಶ್ರೀಗೆ ಕುಲಸದನ[೨]ಮೆನೆ ತೊಳಪ[೨] ಮಣಿ[೩]ಭವನ[೩]ದೊಳ್ |
ರಾಗರಸ[೪]ಮೊದವೆ[೪] ಸರಸಿರುಹಸಮವದನದೊಳ್ ||
ಪೊಳೆವ[೫]ಪಚ್ಚಡದೊಳೆ[೫] ಸೊಗಯಿಸುವ ಮೃದು[೬]ತಲ್ಪದೊಳ್[೬] |
ಲಲಿತ ಗಂಗಾನದೀ ಲಹರಿಕಾತಲ್ಪದೊಳ್ ||
ದೇವವನಿತೆಯರೆ[೭]ಪರಿವಿಡಿಯೊಳ[೭]ಡಿಗುಟ್ಟೆಯುಂ |
ದೇವಗಣಿಕೆಯರೆ ಕೊಳೆ ಪಾಡೆ ದನಿ ಮುಟ್ಟೆಯುಂ ||
ದೇವಿ ಮರುದೇವಿ ವಿಶದೀಕೃತಾಶಾಂತದೊಳ್ |
ಭಾವಿ ಜಿನಜನನಿ ಸತಿ ಪವಡಿಸಿ ನಿಶಾಂತದೊಳ್ ||
ಚಂಡಗಜಗಮನೆ ಪರಿಖಂಡಿತಾಘಾಳಿಯುಂ |
ಕಂಡಳೀರೆಂಟುಮೊಗ್ಗಸಿನೆಸೆವೋಳಿಯುಂ ||
ಕರಟತಟಗಲಿತಮದರುಚಿರ ಮುಖತೇಜನಂ |
ಶರದಮಲ ಜಲದನಿಭಧವಲ ಗಜರಾಜನಂ ||
ಹಿಮಶಿಖರಿಶಿಖರಸಮವಿಗ್ರಹಸನಾಥನಂ |
ಕುಮುದದಲಧವಲರುಚಿರುಚಿರವೃಷನಾಥನಂ ||

೧-೧ (ಚ) ಲಲಿತ. ೨-೨ (ಆ) ಮೆನೆ ಬೆಳಪ; (ಬ) ಮೆನಿಪುಚಿತ. ೩-೩ (ಅ,ಬ) ಸದನ ೪-೪ (ಆ) ಮೊಸರೆ. ೫-೫ (ಆ) ಪಚ್ಚಡದೆ. ೬-೬ (ಅ) ಕಲ್ಪದೊಳ್. ೭-೭ (ಆ) ಪರಿಪಡಿಯೊಳಡಿ; (ಬ) ಪಡಿವಡಿಯಿನಡಿ.

ಬಾಲಹಿಮಕಿರಣದಂಷ್ಟ್ರಾಸನಜ್ಯೋತಿಯಂ |
ಲೋಲಲಾಂಗೂಲ ಮಪಸಿಂಧುರಾರಾತಿಯಂ ||

ಕರಿಕರೋದ್ಧೃತಪಯಃ ಪೂರ್ಣಸ್ವರ್ಣಘಟವಲಯಮುಮಂ |
ದರದಲಿತಕರಕಲಿತಸರಸಿರುಹನಿಲಯೆಯುಮಂ ||
ಪ್ರಕಟ೧ಮಧು೧ಮಧುರರಸನಿಪತದಲಿಮಾಲೆಯುಂ |
ವಿಕಚನವಮಾಲಿಕಾಕುಸುಮನವಮಾಲೆಯುಂ ||

ಕುಮುದವನವನಧಿವನ೨ವಿಶದಹಿ೨ಮಕಿರಣನಂ |
ವಿಮಲತರಗಗನತಲತಿಲಕಹಿಮಕಿರಣನಂ ||
ವಿದಿತಕರನಿಕರದಲಿತಾಬ್ಜಿನೀಷಂಡನಂ |
ಉದಯಗಿರಿಶಿಖರಗತತರುಣಮಾರ್ತಂಡನಂ ||

ಲಲಿತವಿದ್ಯುಲ್ಲತಾರುಚಿರ ೩ನಿಜ ಲೀಲೆಯುಂ೩
೪ಮಿಳಿರ್ದ೪ ಜಲದೊಳಗೆ ಪೊಳೆವೆರಡುವೆಳೆವಾಳೆಯುಂ ||
೫ದಲಿತ೫ಸರಸಿಜರಜೋರಂಜಿತಾಚ್ಛಾಂಭಮುಂ |
ಜಲಜದಲನಯನಯುಗೆಪ್ರೇ೬ಣರ್ದ ಮಣಿಕುಂಭಮುಂ ||

ಚಲಿತಜಲವಿಹಗರವರಮ್ಯದಿಗ್ವಲಯಮುಮಂ |
ಜಲಜಕುಲ೭ನಿಭೃತ೭ಜಲಪದ್ಮಿನೀ ನಿಲಯಮುಮಂ ||
ಶರದಮಲಗಗನತಲವಿಭವ ಸಂಕಾಶಿಯುಂ |
ಕರಿಮಕರಕರದಲಿತವೀಚಿವಾರಾಶಿಯುಂ ||

ಸೌಂದರಾನೇಕಮಣಿರುಚಿಜಲಸ್ಯಂದಿಯುಂ |
ಮಂದರೋತ್ತುಂಗ೮ಕಂಠೀರವಾಸಂದಿಯುಂ೮ ||
ವ್ಯಾಲಸುರಸೌಂದರೀಜನಿತಬಹುಮಾನಮುಂ |
ಸ್ಫಾಲಮಣಿಖಚಿತಸುರಪರಿವೃಢವಿಮಾನಮುಂ ||

ಫಣಿಫಣಾಸ್ಫುರಿತಮಣಿದೀಪಿಕಾವ್ಯೂಹಮುಂ |
ಕ್ವಣಿತಮಣಿಕಿಂಕಿಣೀನಿನದಫಣಿಗೇಹಮುಂ ||
ವಿರಚಿತೋದ್ದಾಮಸುರಪತಿಧನುಬ್ರಾತಮುಂ |
ಸುರುಚಿರಾಂಶೂಲ್ಲಸದ್ರತ್ನಸಂಘಾತಮುಂ ||

೧-೧ (ಚ) ಸ್ಫುಡು. ೨-೨ (ಅ) ವಿಸರಕರ; (ಚ) ವಿಸರತುರ. ೩-೩ (ಚ) ರುಚಿ-ಮಾಳಿಯುಂ. ೪-೪ (ಚ) ಮಿಳಿರ್ವ. ೫-೫ (ಚ) ಕಳಿತ. ೬ (ಬ) ನೊ. ೭-೭ (ಅ, ಬ) ಖಚಿತ. ೮-೮ (ಬ) ಕಂಠೀರವಸ್ಯಂದಿಯುಂ.

ಧೃತಧಗದ್ಧಗಿತರವನಿರ್ಮಲಶಿಖಾಲಿಯುಂ ।
ಸತತಗತಿಪಥಮನಡರ್ವುಜ್ಜ್ವಲಜ್ವಾಲೆಯುಂ ॥
ರಜತಗಿರಿರುಂದ್ರನಂ ಜಿತಶರಚ್ಚಂದ್ರನಂ ।
ನಿಜವದನವನಜಮಂ ಪುಗುವ ವೃಷಭೇಂದ್ರನಂ ॥

* ನೋಡಿಗಜಗಮನೆ ಕನಸೆಂದು ಬಗೆವನ್ನೆಗಂ ।
ತೀಡೆ ಕಿವಿಗುಚಿತಮಂಗಲನಿನದಮನ್ನೆಗಂ ॥
ನಿಜಮುಖಾಂಬುಜಮುಮಂಬುಜಮುಮೊಡನಲರ್ವಿನಂ ।
ನಿಜದ ಚೆಲ್ವಮರೆ ನಿಡುಪುರ್ವುಗಳ್ ನಿಮಿರ್ವಿನಂ ॥

ತಱತಱಾಗಿರ್ದ್ದ ಕುಂಕುಮದ ನಿಜವದನಮಂ ।
ತಿಱಿದ ಕಣ್ಗಳೊಳೆ ಧವಳಿಸಿದ ನಿಜವದನಮಂ ॥
ಚಲಿತಧಮ್ಮಿಲ್ಲದೊಳ್ ತೊಡರ್ದ ಪೂಮಾಲೆಯುಂ ।
ಲಲಿತ[1]ಮುಖ[1]ಸೌರಭಕ್ಕೆಱಗುವಲಿಮಾಲೆಯುಂ ॥

ಬಗೆಗೊಳಿಸಿ ತಳರ್ದ್ದ ಗಜಗಮನೆ ಸುರ[2]ನಾರಿಯರ್[2] ।
ಮುಗಿದ ಕೈವೆರಸು ಬರೆ ಜನಮನೋ[3]ಹಾರಿಯರ್[3] ॥
ಬಂದು ಜಗದಧಿಪನಂ ಸೋಂಕಿ ಪುಳ್ಕಿರ್ಪುದುಂ ।
[4]ಬಂದ ಬರವವನಿಪತಿ[4]ಗೊಸಗೆಯಂ ತರ್ಪುದುಂ ॥

ಕುಂದದಳಧವಳದಶನಾಂಶುಗಳ್ ಪೊಳೆವಿನಂ ।
[5]ಸಂದ[5]ಚನಸುಗಳನವ[6]ನೊಸೆದು ಸತಿ[6]ಬಗೆವಿನಂ ॥
ಕ್ರಮದಿನಱಿಪುವುದುಮವನಱಿದು ಧರಣೀಶ್ವರಂ ।
ನಿಮಗೆ ಮಗನುಚಿತಧವಳಾತಪತ್ರೇಶ್ವರಂ ॥

ದಿನದಿನವತರಿಸನಪರಿಮಿತಪುಣ್ಯೋದಯಂ ।
ದಿವಿಜಪತಿ[7]ಕೃತಮಹಾಶ್ಚರ್ಯ[7]ಮಹಿಮೋದಯಂ ॥
ದುರಿತಬಲತಿಮಿರದಲಚಲನಕರ[8]ಖರ[8]ಕರಂ ।
[9]ಲಲಿತಬುಧ[9]ಕುವಲಯಾನಂದ[10]ಕರ[10]ಹಿಮಕರಂ ॥

ತಡೆಯದೆನೆ ವನಜಮುಖಿ ಪಿರಿದುಮನುರಾಗದಿಂ ।
ಅಡಿಗಡಿಗೆ [11]ಸೊಗಯಿಸಿದಳೊಗೆದ[11]ಮೊಗರಾಗದಿಂ ॥

---

೧-೧ (ಅ) ಸುರ. ೨-೨ (ಅ) ನಾರಿಯುಂ. ೩-೩ (ಅ) ಹಾರಿಯುಂ. ೪-೪ (ಅ) ಬಂದಳವಳವನಿಪತಿ. ೫-೫ (ಅ) ಕಂಡ. ೬-೬ (ಅ) ನೋಳ್ಪಬಗೆ. ೭-೭ (ಅ) ಸಮಮಹೈಶ್ವರ್ಯ. ೮-೮ (ಅ) ದಿನ. ೯-೯ (ಅ) ಲಲಿತಕರ. ೧೦-೧೦ (ಅ) ಮತ. ೧೧-೧೧ (ಅ) ಸೊಗಯಿಸಿದಳಾಗ.

---

* ಇಲ್ಲಿಂದ ಮುಂದೆ ೨೮ನೆಯ ಪದ್ಯದ ವರೆಗೆ ನುಡಿಗಳು (ಬ) ಪ್ರತಿಯಲ್ಲಿಲ್ಲ.

ನೆಗೞ್ದ ಕವಿತಾಗುಣಾರ್ಣ್ಣವನ ವರ್ಣ್ಣಿಸುವುದಂ ।
[೧]ಪೊಗೞ್ದು ಬಗೆದೋದುವ[೧]ರ್ ಮನದೊಳಾಟಿಸುವುದಂ ॥
ಪಡೆವರ್ ಷೋಡಶಸ್ವಪ್ನದ ಫಲಂಗಳಂ ।
[೨]ಪಡೆಯಲ[೨]ಣಮಾಗದ ಸುಖಂಗಳಂ ಮಂಗಳಂ ॥೨೭॥

ಕಂಡುಪ್ಪವಡಿಸಿ ಮಜ್ಜನ-
ಮಂಡನವಿಧಿಯಂ ಲತಾಂಗಿ ನಿರ್ವ್ವರ್ತ್ತಿಸಿ ಭೂ-।
ಮಂಡಲಪತಿಗಱಿಪಿದೊಡವೀ-
ಗೊಂಡದಱ ಫಲಂಗಳನಿತುಮಂ ಮನು ತಿಳಿದಂ ॥ ೨೮ ॥

ನಿಮಗೆ ತನೂಜಂ ದಿವದಿಂ-
ದವೋಘಮವತರಿಸಿದಪ್ಪನಖಿಲವಿನೇಯ-।
ಪ್ರಮದಕರಂ ದಿವಿಜೇಂದ್ರ-
ಪ್ರಮೋದಕರನೆನೆ ಗುಣಾಕರಂ ತೀರ್ಥಕರಂ ॥೨೯॥

ಎಂಬುದುಮಧೀಶವಚನಕ-
ದಂಬಕಮೆಂಬೊಂದು ತೆಂಕಣೆಲರೊಳ್ ನನೆವೋ-।
ಯ್ತೆಂಬಿನಮಾಕೆಯ ತನುಲತೆ
ತುಂಬಿದುದತಿಬಹಳ[೩]ಪುಳಕವಿಪುಲಶ್ರೀಯಿಂ[೩] ॥ ॥೩೦॥

ವ॥ ಅನ್ನೆಗಂ ಪೂರ್ವೋಕ್ತಸರ್ವಾರ್ಥಸಿದ್ಧೀಶ್ವರನಾಭುವನಾಂಬಿಕೆಯ ಮುಖಾಂಬುಜಾತಮಂ ಪೊಕ್ಕು ಗರ್ಭಸರೋವರಾಂಬುವಿನೊಳ್ ಚಂದ್ರಬಿಂಬದಂತೆ ಸಂಕ್ರಮಿಸಿದಾಗಳಾಗರ್ಭಸ್ಥಿತಾರ್ಭಕನ ವದನಚಂದ್ರನಿರ್ಗ್ಗತ[೪]ತಾಚ್ಛ[೪]ಚಂದ್ರಿಕೆಯೊಳೊದವಿದಂತಾಮಹಾದೇವಿಯ ಮುಖೇಂದುಮಣಿದರ್ಪ್ಪಣಲಾವಣ್ಯರಸವಿಸರಮನೊದವಿಸೆ ವಿಕಚಧವಲ[೫]ಕಮಲದಲ[೫]ದೀರ್ಘವಿಲೋಚನಂಗಳಾಲಾವಣ್ಯರಸ[೬]ಪ್ರವಾಹಕ್ಕಾ[೬]ಯತ[೭]ಪ್ರಣಾಳಂಗಳಂ[೭]ಪೋಲ್ತು ಗರ್ಭಂ ಬಳೆಯೆ ಬಳೆಯೆ,

ಉಜ್ಜ್ವಲ

ಬಸಿಱ ತ್ರಿವಳಿಪತ್ತೆ ಮೊಗಂ ಬೆಳ್ಪೇಱಿದುದೇ ಕುಚಚೂಚುಕಂ
ಮಸುಳ್ದವೇ ತ್ರಿವಲೀಮಚಿಯುಂ [೮]ಮೋಣ್ಕಂದಿತೆ[೮] ಮುನ್ನಿನ ಚೆಲ್ವನ-।

೧-೧ (ಅ) ಪೊಂಗೆ ಬಗೆದೋದುವ; ೨-೨ (ಅ) ತಡೆಯಲಣ. ೩-೩ (ಅ) ವಿಪುಳಪುಳಕೋತ್ಕರದಿಂ. ೪-೪ (ಚ) ತಾಚ್ಛಜಳ. ೫-೫ (ಅ) ಕಮಲವಾಲಾ. ೬-೬ (ಅ) ಪ್ರಸರಕ್ಕಾ. ೭-೭ (ಚ) ಪ್ರಯಾಣಂಗಳಂ ಪೋಲ್ತು; (ಬ) ಪ್ರಣಾಳಂಗಳಂ ಪೋಲೆ. ೮-೮ (ಅ,ಬ) ಮೋಣ್ಕಂದಿದ್ದುವೇ.

ಪ್ಪಸಿಯುಬಾಸೆಗೆ ಕರ್ಪೂರಸದತ್ತೀ ಚೋದ್ಯಮಿದೆಂದು [೧]ಮರುಳ್ದು[೧] ಬ-
ಣ್ಣಿಸಿದರಿಂದ್ರನ ಕಾಂತೆಯರಂತರ್ವ್ವತ್ನಿಯನಾಸ್ಯಪಪತ್ನಿಯಂ ॥ ೩೧ ॥

ಜ್ಞಾನಮಯಂ ತೇಜೋನಿಧಿ
ತಾನಿರ್ದ್ದಂ ತಾಯ ಗರ್ಬ್ಭದೊಳ್ ಪೀಡೆಯನಂ-।
ತೇನಂ ಮಾಡಿದನಿಲ್ಲ ಕೃ-
ಶಾನುವ ನೆಲೆಯಳುರದಂತೆವೋಲ್ ಕನ್ನಡಿಯಂ ॥೩೨॥

*ವ॥ ಗರ್ಬ್ಭಾವತರಣಂ ಆಷಾಢಬಹುಲಬಿದಿಗೆಯುತ್ತರಾಷಾಢಾನಕ್ಷತ್ರದ ಬೆಳಗಪ್ಪ ಜಾವದೊಳ್ ಗರ್ಬ್ಭಕ್ಕವತರಿಸಲೊಡಂ ದೇವೇಂದ್ರಂ ಚತುರ್ನ್ನಿಕಾಯಾಮರರ್ ವೆರಸಿ ಪ್ರಥಮಕಲ್ಯಾಣಮಂ ನಿರ್ವ್ವರ್ತ್ತಿಸಿದಂ.

ಪಳಿಕಿನ ಕೊಡದೊಳ್ ಸೊಡರ್ಗುಡಿ
ಬೆಳಗುವವೊಲ್ ಶುದ್ಧಗರ್ಬ್ಭಗೃಹದೊಳ್ ತೇಜೋ-।
ನಿಲಯಂ ಬೆಳಗಿದನಱವಿನ
ಬೆಳಗಿನ ಪೊಳೆ ಪೊಳೆತು[೨]ಬೆಳೆವು[೨]ದೊಂದಚ್ಚರಿಯೇ ॥೩೩॥

ಸುರತಾರಂಭವಿಭೂತಿಯೊಂದು ತಣಿಪಂ ಚಿತ್ತಕ್ಕೆ ಮಾಡಲ್ ಮುಖಾಂ-
ಬುರುಹಾಮೋದಮೆ ಸಾಲ್ಗುಮೆಂದು ಮನದೊಳ್[೩]ತಾಳ್ದಿರ್ದ್ದ[೩]ನೊಂದುಟ್ಕಱಂ।
ಮರುದೇವೀವದನಾಂಬುಜಾತರಸಮಂ ಪೀರ್ದ್ದಂ ನೃಪಂ ತುಂಬಿ ಕೇ-
ಸರಮಂ ಮುಟ್ಟದೆ ಬಂದು ಪದ್ಮಿನಿಯ ಪದ್ಮಾಮೋದಮಂ ಪೀರ್ವ್ವವೊಲ್ ॥೩೪॥

ವ॥ ಅಂತು ನಿಜಮನೋನಯನಕಾಂತಕಾಂತಾವದನಸರಸಸರಸಿಜಸೌರಭಮನಾಸ್ವಾದಿಸಿ,

ಕಿಡಿಸಲ್ ಪಂಕಜದುರ್ಕ್ಕನೇಂ ನೆಱೆಯದೋ ನೇತ್ರೋತ್ಪಲಾನಂದಮಂ
ಪಡೆಯಲ್ ಸಾಲದೊ ಮನ್ಮಥಂಗೆ ಜಯಮಂ ಮೇಣೀಯದೋ ಸಾಲದೇಂ।
ಗಡಮೀಕಾಂತೆಯ ವಕ್ತ್ರಚಂದ್ರನೆಲೆ ತಾನೇನೆಂದು ಚಂದ್ರಂ ನಭ-
ಕ್ಕಡರ್ವ್ವಂ ಗೆಲ್ಲದೆ ತನ್ನೊಳುಳ್ಳಮೃತಮಂ ಬಿಂಬಾಧರಸ್ವಾಮೃತಂ ॥೩೫॥

ವ॥ ಅಂತು ನಾಭಿರಾಜನನುನಯಪ್ರಚುರವಚನರಚನೆಗಳಿನಂತಃಕರಣಾನುರಾಗಮಂ ಮಾಡೆಯುಮಮರಮನೋ[೪]ರಮೆಯರ್ ಮನಮನಱದು[೪]

೧–೧ (ಚ) ಮಱಲ್ದು. ೨–೨ (ಚ) ಬಳೆವು. ೩–೩ (ಅ,ಬ) ತಳ್ತಿರ್ದ್ದ. ೪–೪ (ಚ) ರಮೆಯರುಂ ಮನಮುಱಿದು.

* ಈ ಗದ್ಯ (ಅ,ಬ) ಪ್ರತಿಗಳಲ್ಲಿಲ್ಲ.

ನಿಜಮನೋರಥಂಗಳಂ ಸಲಿಸೆಯುಮನುಕ್ರಮದೊಳ್ ಪರಿಪೂರ್ಣ್ಣಪ್ರಸವಸಮ-ಯದೊಳ್,

ಬರೆ ಚೈತ್ರಂ ಕೃಷ್ಣಪಕ್ಷಂ ದೊರೆಕೊಳೆ ನವಮೀವಾಸರಂ ಪ್ರೊರ್ದ್ದೆ ಲೋಕೋ-
ತ್ತರಮಾಗಿರ್ದ್ದುತ್ತರಾಷಾಢದೊಳತಿಶುಭದಂ ಬ್ರಹ್ಮಯೋಗಂ ಪಸಂಗೊಂ-|
ಡಿರೆ ಭಾಸ್ವನ್ನಾಭಿರಾಜಾಂಗನೆ ವಿಶದಯಶೋಭಾಗಿಯುಂ ಭವ್ಯಪದ್ಮಾ-
ಕರಬೋಧಾಧಾಯಿಯುಂ ತಿಗ್ಮಕರನುದಯಮೊಳ್ ಪುತ್ರನಂ ಪೆತ್ತಳಾಗಳ್ ||೩೬||

ವ|| ಆ ತ್ರಿಲೋಕತಿಲಕನ ಜನ್ಮೋತ್ಸವದೊಳೇಕಸಮಯಸಮವತೀರ್ಣ್ಣ-ಸರ್ವರ್ತ್ತುಕನಂದನವಿಕಸದಶೋಕವಿಕಚಮಲ್ಲಿಕಾಬದ್ಧಕುಟ್ಮಲಾಡಂಬರ[೧]ಕದಂ-ಬಸಾ[೧]ನಂದಾರವಿಂದವಿಕಸಿತಸಿಂಧುವಾರಪ್ರಬುದ್ಧ[೨]ಲೋಧ್ರಂಗಳಿಂ[೨] ರಾಗಮಂ [೩]ಬೀಱುವಂತೆ ಮುಗುಳ್ ನಗೆಯುಂ ತೋಱುವಂತೆ[೩] ಪುಳಕಮನೊಳಕೊಂಡಂತೆ ನಗೆಗಣ್ಗಳ ಪೊಳೆಪಂ [೪]ಕೆದಱುವಂತೆ[೪] ಚಿನ್ನಪೂಗಳಂ ಮೆಱೆವಂತೆ [೫]ಚಂದ್ರ-ಕಬಲದಿಂ ತೊಡೆವಂತೆ[೫] ಮಹೀಕಾಂತೆ ಸೊಗಯಿಸೆ, ನಿಜಪರಿರಕ್ಷಣಕ್ಷಮಕ್ಷಮಾ-ವಲ್ಲಭಲಾಭಪ್ರಮುದಿತಮೇದಿನೀಹೃದಯದಂತೆ ಜಲಮುಪಗತಕಲುಷಮಾಗೆ ಕರ್ಮ್ಮಭೂತಳೋಪಸರ್ಗ್ಗವಿಧ್ವಂಸನನಿಮಿತ್ತಮಾಗಿ ನೀರಾಜನಂಗೆಯ್ವಂತೆ ತದ್ಧರಾನಲಂ ದಕ್ಷಿಣಾವರ್ತ್ತಮಾಗಿ ಪಜ್ವಳಿಸೆ, ಗಗನಗಂಗಾಶೀಕರನಿಕರಂಗ-ಳಿಂದಮಾನಂದನಯನ[೬]ಜಲಲವಂಗಳಂ[೬] ಸೂಸುವಂತೆ ದಿವ್ಯಾನಿಲಂ ತೀಡೆ, ಶರದ್ವಿಧುವಿಶದತದೀಯಯಶಃಪ್ರಸರಕ್ಕವಕಾಶಂಗುಡುವಂತೆ ಜಲಧರಪಟಲ-ನಿರೋಧರಹಿತಮಾಕಾಶಮತಿಪ್ರಕಾಶಿತಾಶಾಂತಮಾಗೆ,

ಪುರುಪರಮೇಶ್ವರನಿಳೆಗವ-
ತರಿಸಿದನಿಂದರಸುವಡೆದೆವೆಂಬಂತೆ[೭]ವೊಲೀ[೭]-|
ಪರಮಾನಂದಪರಂಪರೆ
ದೊರೆಕೊಂಡತ್ತಿಂತು ಪಂಚಭೂತಂಗಳೊಳಂ ||೩೭||

ವ|| ಆಗಳುತ್ತುಂಗ ಪ್ರಾಸಾದಕೂಟಕೋಟಿಗಳ ಮೇಲೆ ಪುರಶ್ರೀವಿಲಾ-ಸಿನಿಯ ರಾಗದ[೮]ಪಾಂಗುಡಿಗಳೆ ನಿಮಿರ್ವಂತೆ[೮] ಮಿಳಿರ್ವ ನವಾಮ್ರಕಮ್ರಕಿಸ-

೧-೧ (ಅ) ಕದಂಬರಸಾ. ೨-೨ (ಆ,ಬ) ಲೋಧ್ರಂಗಳಿಂದಂ; (ಕ) ಲೋಕಹೃದಯದಂತೆ ಮಾರ್ದವಂಗಳಿಂ, ೩-೩ (ಚ) ಮುಗುಳ್ನಗೆ ನಗುವಂತೆ. ೪-೪ (ಚ) ಕೆದಱಿದಂತೆ. ೫-೫ (ಚ) ಚಂದ್ರಕಬಳಮಂ ತೊಡೆವಂತೆ- ೬-೬ (ಚ) ಜಲಂಗಳಂ. ೭-೭ (ಚ) ವಲಂ. ೮-೮ (ಚ) ದಾಂಗುಡಿಮಿಳಿರ್ವಂತೆ.

ಲಯರಕ್ತಾಂಶುಕಧ್ವಜಂಗಳುಮಾಕೆಯ ಶೃಂಗಾರಮೆ ಪಲ್ಲವಿಸಿದಂತೆ ಮಹಾ-
ದ್ವಾರತೋರಣಸ್ತಂಭಂಗಳೊಳಗೆಸೆವಭಿನವೋಲ್ಲಸತ್ಪಲ್ಲವಸಂಘಾನಿತಸೌಂದರ—
ಪಂಚಸಮಾಲೆಗಳುಮಾಕೆಯ ವಿಲಾಸಹಾಸಮೆ ಪೊಱಪೊಣ್ಮಿದಂತೆ ಬೀದಿಬೀದಿ-
ಗಳೊಳೆಡೆಗಿಱಿ[೧]ದಿ[೧]ರೆ ಕೆದಱಿದ ಕುಸುಮರಜಂಗಳುಮಾಕೆಯ ನಿರ್ಭರಾನಂದ-
ಸಾಂದ್ರಲಾವಣ್ಯಾದ್ರವಮೆ ದೆಸೆದೆಸೆಗೆ ಪಸರಿಸಿದಂತೆ [೨]ಕುಂಕುಮ[೨]ಪಂಕಚ್ಛಟಾ-
[೩]ಚ್ಛಾದನದೊಳೆ[೩] ಸೊಗಯಿಸುವ ಗೃಹಾಂಗಣಂಗಳುಮಾಕೆಯ ಪರಿವಾರ—
ವಾರಾಂಗನಾಗಣದಂತೆ ಯೌವನಮಧುಮದಮುದಿತ[೪]ಮಾರ್ದಂಗಿಕ[೪]ವಾಂಶಿಕ-
ಪ್ರಹನ್ಯಮಾನ[೫]ವಾದ್ಯ[೫] ಮೃದಂಗವಂಶನಿನದಲಯಜೃಂಭದಸುಂದರನಟತ್ಸುಂದರೀ
ಸಂದೋಹಮುಮದ್ಭೂತಪೂರ್ವ್ವರಮಣೀಯಮುಮಾಗೆ,

ವಿತತೋದ್ಯತ್ಪಟವಾಸವಾಸಿತದಿಶಾಕಾಂತಾಗಣಂ ನಿರ್ಭರೋ-
ತ್ಥಿತಪಿಷ್ಟಾತಕಪಿಂಜರೀಕೃತವಿಯಚ್ಚಕ್ರಂ ಧ್ವನತ್ತೂರ್ಯ್ಯ ಸಂ-|
ತತಿನಾದಪ್ರತಿಪೂರಿತಾಖಿಲಕುಲಕ್ಷೋಣೀಧ್ರಕುಂಜಂ ಜಗ-
ತ್ಕೃತಿಜೋದ್ಯಾವಹಮಾಗೆ ಪೆಂಪು[೬]ವಡೆದತ್ತಂತಾತ್ಮಜನ್ಮೋ[೬]ತ್ಸವಂ ||೩೮||

ವ|| ಆ ಪ್ರಮೋದಪ್ರಸ್ತಾವದೊಳ್,

ತ್ರಿದಶಾನೀಕಾಸನಕಂಗಳ್ ಮೊಳಗಿದುವು ಕರಾಸ್ಫಾಲನಂ ದೇವರಿಂದಾ-
ಗದೆಯುಂ[೭] ಕಲ್ಪದ್ರುಮಂಗಳ್ ಪೊಸತಲರ್ದಲರಂ ತಾಮೆ ಸಾಲ್ವನ್ನೆಗಂ ಸೂ-
ಸಿದುವೇಕಾಯ್ತ್ತೋ[೮]ತಿರೀಟ[೮]ಕ್ಕೆ ಪನತಿಯೆನೆ ದೇವೋತ್ತಮಾಂಗಂಗಳುಂ ಬಾ-
ಗಿದುವಾತ್ರೈಲೋಕ್ಯನಾಥೋದಯಮನಱಿಪುವಂತೀತ್ರಿಲೋಕಕ್ಕಮಾಗಳ್ ||೩೯||

ಭವನವನಜ್ಯೋತಿಃಕ-
ಲ್ಪವಾಸದೊಳ್ ಕ್ರಮದೆ ಶಂಖಭೇರೀಕಂಠೀ-|
ರವಘಂಟಾಧ್ವನಿಗಳ್ ನೆಗ-
ೞ್ದುವು ಘೋಂಕೆನೆ ಸಕಲವಿಷ್ಟಪಾಶ್ಚರ್ಯಂಗಳ್ ||೪೦||

ತ್ರಿದಶಾಸನಂಗಳಲ್ಲಾ-
ಡಿದುವು ಜಗದ್ಗುರುಗೆ ಬೇಗಮುಚ್ಛ್ವಾಸನದಿಂ-|
ದಿದಿರೇೞಿಮೆಂದು ಪೇೞ್ವವೊ-
ಲದೇಂ ಕರಂ ತೀರ್ಥಕರರ ಪುಣ್ಯಂ ಪಿರಿದೋ ||೪೧||

೧-೧ (ಚ) ಡು. ೨-೨ (ಚ) ಕುಂಕುಮಚ್ಛದ. ೩-೩ (ಅ,ಬ) ಚೆಸ್ಫೋಟನದೊಳೆ. ೪-೪ (ಚ) ಮಾರ್ದಳಿಕ. ೫-೫ (ಅ) ವಾದ್ಯಮಾನ. ೬-೬ (ಅ) ವಡೆದತ್ತಾತ್ಮೀಯಜನ್ಮೋ; (ಬ) ವಡೆದತ್ತಂದಾತ್ಮಜಾತೋ. ೭ (ಚ) ಮುಂ. ೮-೮ (ಚ) ಕಿರೀಟ.

ವಾಸವನಾಸನಕಂಪದಿ-
ನಾಸಮುಮುಮೊಳವಧಿಯುಂ ಪ್ರಯೋಗಿಸಿ ಬೋಧಾ-|
[೧]ವಾಸಾಶಯ[೧]ನುದಯಮುಮನಱಿ-
[೨]ದಾಸನದಿಂದಿೞಿದು[೨] ಮೊಱು ಸೂೞ್ ಪೊಡೆವಟ್ಟಂ ||೪೨||

ವ|| ಅಂತು ಪೊಡೆವಟ್ಟು ಜನ್ಮಾಭಿಷೇ[೩]ಕೋತ್ಸವೋದ್ಯುಕ್ತ[೩]ಚಿತ್ತನಾದಾಗಳ್, ಚತುರ್ನ್ನಿಕಾಯಾಮರೇಂದ್ರಸಮುದಯಮುಂಭೋಧಿವೇಲಾವಿಲಾಸದಿಂ ಸಾಮಾನಿಕ[೪]ತ್ರಯಸ್ತ್ರಿಂಶತ್ಪಾ[೪]ರಿಷದಾತ್ಮರಕ್ಷಲೋಕಪಾಲಾಭಿಯೋಗ್ಯ[೫]*ಕಿಲ್ಬಿಷ[೫]ರೊಡನೆ ಗಜತುರಗ[೬]ರಥವೃಷಭ[೬]ಗಂಧರ್ವ್ವನ[೭]†ರ್ತ್ತಕೀಪದಾತ್ಯನೀಕಂ[೭]† ಬೆರಸು ಬಂದು ಮುಂದೆ ನಿಲ್ವುದುಂ,

ನೆಗೞ್ದಾ ದೇವೇಂದ್ರರೆಲ್ಲಂ ಬೞಸಿ ಬರೆ ಮದಶ್ರೀಯುತೈರಾವತಸ್ಕಂ-
ಧಗತಂ ನಾನಾತಪತ್ರಸ್ಥಗಿತದಶದಿಶಾಮಂಡಲಂ ದೇವತೂರ್ಯ್ಯಾ-|
ನುಗದೇವೀಗೀತಜೈನಸ್ತವ[೮]ಸಮುಪಹಿ[೮]ತಾತ್ಮೀಯಚಿತ್ತಂ ವಿಲಾಸಂ
ಮಿಗೆ ಸೌಧರ್ಮ್ಮೇಂದ್ರನಂ[೯]ದಾಶಚಿ[೯]ವೆರಸು ಮಹೋತ್ಸಾಹದಿಂ ಬಂದನಾಗಳ್ ||೪೩||

ವ|| ಅಂತು ಗಗನತಳದಿನವನೀತಲಕ್ಕವತರಿಸಿ ವಿವಿಧಮಣಿನಿಕೇತನಾಗ್ರಾವಲಗ್ನಕೇತುಮಾಲಾವಿಲಸಿತಸಾಕೇತಮಂ ಬಳಸಿ "ನಾಕಿ"ನಿಕಾಯಮಿರೆ ಸೌಧರ್ಮ್ಮೇಂದ್ರಪ್ರಮುಖಚತುರ್ನ್ನಿಕಾಯಾಮರೇಂದ್ರವೃಂದಂ ನಾಭಿರಾಜರಾಜಗೇಹಾಂಗಣದೊಳ್ ಸಂದಣಿಸಿ ಬಂದಿರೆ ಶುಚಿಶಚಿಮಹಾದೇವಿ ತಿರೋಹಿತ ಶರೀರೆಯಾಗಿ,

ಮರುದೇವಿವಿಲಸತ್ಪ್ರಸೂತಿಗೃಹಮಂ ರತ್ನಪ್ರಭಾಭಾರಭಾ-
ಸುರಮಂ ಪೊಕ್ಕು ತದಂಗನಾಂಕತಲದೊಳ್ ಬಾಲಾರ್ಕ್ಕನಂ ಪೋಲ್ತು ಭಾ-|
ಸುರತೇಜೋಧಿಕನಪ್ಪ ಬಾಲನನೊಱಲ್ದಿಟ್ಟೆತ್ತ ನೋಡುತ್ತಮಿ-
ರ್ಪ್ಪರುಮಂ ಮೂಮೆ ಸುರೇಂದ್ರಕಾಂತೆ ಬಲಗೊಂಡುದ್ಯನ್ಮನಃ ಪ್ರೀತಿಯಿಂ||೪೪||

ಎಱಗಿ ಜಗತ್ತ್ರಯಗುರುಗೆರ್ದೆ-
ಯೆಱಕದೆ ಪೊಗೞ್ದಖಿಲಭುವನಜನನಿಯನಾಗಳ್-|
ಮಱಿಯಿಸಿ ಮಾಯಾನಿಪ್ರಿಯಿ-
ಸಱಿ ಮಾಯಾಶಿಶುವನಿರಿಸಿ ಮುಂದಂಬಿಕೆಯಾ ||೪೫||

೧-೧ (ಚ) ವಾಸಪ್ರಿಯ. ೨-೨ (ಚ) ಡಾಸನದಿಂಡೆೞ್ದು. ೩-೩ (ಚ) ಕೋದ್ಯುಕ್ತ. ೪-೪ (ಚ) ತ್ರಾಯತ್ರಿಂಶತ್ಪಾ; (ಬ) ತ್ರಾಯಸ್ತ್ರಿಂಶತ್ಪಾ. ೫-೫ (ಬ) ಕಿಲ್ಬಿಷ್ಟಿತ. ೬-೬ (ಚ) ರಥಪದಾತಿವೃಷಭ. ೭-೭ (ಚ) ನರ್ತಕೀ ಪರಿಹಾಸಿಕಂ. ೮-೮ (ಅ) ಸಮುಪಗ; (ಬ) ಸಮುಂ. ೯-೯ (ಚ) ದೇವ.

* ಚಂ. ಪ್ರ. ಪು. ೧೨-೪೨ ವ. ದಲ್ಲಿ 'ಕಿಲ್ಬಿಷಿಕ' ಎಂದಿದೆ. †-† ಚಂ. ಪ್ರ. ಪು ೧೨-೪೨ ವ. ದಲ್ಲಿ 'ನರ್ತಕೀಪ್ರಭೇದಸಪ್ತಾನೀಕಸಮೇತನುಮಾಗಿ;' ಪ್ರ. ಪು ೧೩-೧೬

ಪಡೆಯಲ್ತ್ಯಾಗದ ನಿಧಿಯಂ
ಬಡವಂ ಪಡೆದಂತೆ ಕಮಲದಲಕರತಲದಿಂ|
ಪಿಡಿದೆತ್ತಿ[1]ಕೊಂಡ[1] ಸಂತಸ-
ದೊಡಮೆಯನಾಂ ಪೊಗೞಲಱಿಯೆನಿಂದ್ರಾಂಗನೆಯಾ ||೪೬||

ಅಲರ್ದಲರ್ಗಣ್ಗಳ ನೋಟದೆ
ಸುಲಲಿತತನು ಶಿಶುವ ಮೆಯ್ಯ ತೀಟದೆ ತನಗ-|
ಗ್ಗಲಿಸಿದಲಂಪಂ ಕುಡೆ ಪೊಸ-
ತಲರ್ದಂಕುರಿಸಿರ್ದ್ದ ಕಲ್ಪಲತೆಯನೆ ಪೋಲ್ತಳ್ ||೪೭||

ಮಂಗಲಮನೆ ಪಾಡುತ್ತುಂ
ಮಂಗಲಧಾರಿಣಿಯರಾಗಿ ಮುಂದಂ ನಡೆವಾ-|
ಶಾಂಗನೆಯರಿಂದೆ ದಿವಿಜೇಂ-
ದ್ರಾಂಗನೆ ಕರಮೆಸೆದು ಹಂಸ[2]ಗತಿಯೊಳ್[2]ಬಂದಳ್ ||೪೮||

ವ|| ಅಂತು ಬಂದು ಜಗತ್ತ್ರಿತಯಪತಿಯಂ ತ್ರಿದಶಪತಿಯ ನೀಡಿದ ಕೇ[3]-ಯೂರರತ್ನರಶ್ಮಿ[3]ರಂಜಿತಭುಜಯುಗಲಕ್ಕೆ ನೀಡಿದಾಗಳ್ ದಿವಿಜಕುಜಜನಿತಸು-ಗಂಧದ್ರವ್ಯ[4]ದ್ರವಸ್ಥಾಸಕಾಂಕಮಂ[4] ನಿಜಾಂಕಮನೇಱಿಸಿಕೊಂಡು,

ತ್ರಿಜಗನ್ನಾಥನ ಮಜ್ಜನಕ್ಕೆ ಮಣಿಪೀಠಾಕಾರದಂತಾಗಿ ವಿ-
ಶ್ವಜಗತ್ಪೂಜಿತಮಾಗಿ ಪೆಂಪುವಡೆದಾಹೇಮಾಚಳೇಂದ್ರಕ್ಕೆ ಕ-|
ಲ್ಪಜರಂ ಪೋಗಲೆ ಸನ್ನೆಗೆಯ್ಯೆ ಭಗವಜ್ಜನ್ಮಾಭಿಷೇಕೋತ್ಸವ-
ಧ್ವಜಮಂ ಪೋಲ್ತುದು ರತ್ನರಂಜಿತಭುಜಾದಂಡಂ ಸುರಾಧೀಶನಾ ||೪೯||

ವ|| ಆಗಳ್ ಸೌಧರ್ಮ್ಮೇಂದ್ರನೇಱಿದೈರಾವತಗಜೇಂದ್ರಕ್ಕೆ ನಿಜಗ[5]ಜೇಂ-ದ್ರಂಗಳಂ[5] ಪಕ್ಕುಮಾಡಿ,

ಹಿಮಕರಬಿಂಬನಿಭಚ್ಛ-
ತ್ರಮನೀಶಾನೇಂದ್ರನೆತ್ತಿದಂ ತತ್ಕರವಿ-|
ಭ್ರಮದಿಂ ಪದೆಪೊದವೆ ಸನ-
ತ್ಕುಮಾರಮಾಹೇಂದ್ರರಿಕ್ಕಿದರ್ ಚಾಮರಮಂ ||೫೦||

೧–೧ (ಅ,ಬ) ಕೊಂಡು. ೨–೨ (ಚ) ಗತಿಯೊಳ್. ೩–೩ (ಚ) ಕೇಯೂರರಶ್ಮಿ ೪–೪ (ಬ) ಪ್ರವಸ್ಥಾಸಕಾಂಶುಕವಂ. ೫–೫ (ಅ,ಬ) ಗಜೇಂದ್ರವಂ.

[೧]ಲಟಹ[೧]ಯುತಂಗಳ್ ದುಗ್ಧ-
ಚ್ಛಟೋಜ್ಜ್ವಲಂಗಳ್ ತದಮರ ಚಮರರುಹಂಗಳ್।
ಸ್ಫುಟಹಸಿತಮುಕ್ತಿಲಕ್ಷ್ಮೀ-
ಕಟಾಕ್ಷವಿಕ್ಷೇಪರುಚಿಯನೇಂ ತಾಳ್ದಿದುವೋ ॥೫೧॥

ವ॥ ಆಗಳ್,

ಎಱಗುವ ಮಕುಟಂಗಳ್ ಜೋದ್ಯಮೆಂಪತ್ತ್ರಮಿತ್ತ್ರಂ
ನಿಱಿಪ ಕರಯುಗಂಗಳ್ ಪ್ರೊಯ್ವ ದೇವಾನಕಂಗಳ್।
ಮಱುಕದಮರಕಾಂತಾನರ್ತ್ತನಂಗಳ್ ಬೆಡಂಗಂ
ಮೆಱೆಯೆ ದಿವಿಜವೃಂದಂ ತಂದುದಂದೊಂದು ಚೆಲ್ವಂ ॥೫೨॥

ವ॥ ಆ ಪ್ರಸ್ತಾವದೊಳ್,

ನೆಗೞ್ದೈರಾವತದಂತಿಗಾದುದು ಮೊಗಂ ಮೂವತ್ತಿರಟ್ ನೋೞ್ಪೊಡಾ-
ಮೊಗಮೊಂದೊಂದಱೊಳೆಂಟು ಕೊಡವಱೊಳಂತೊಂದೊಂದಱೊಳ್ಪೂಗೊಳಂ।
ನೆಗೞ್ದಿ[೨]ಂದೊಂದೆಸೆದಿರ್ಕ್ಕುಮಾ ಕೊಳಗಳಂತೊಂದೊಂದಱೊಳ್ ಚಿತ್ರಪ-
ತ್ರಗಣಂ ಪದ್ಮಿನಿ ನಾಡೆ [೩]ಚೆಲ್ವನೊಳಕೊಂಡೊಂದೊಂದೆ[೩] ಕಣ್ಗೊಪ್ಪುಗುಂ ॥೫೩॥

ಪೊಸಪೂವಬ್ಜಿನಿಯೊಂದಱೊಳ್ ಸೊಗಯಿಕುಂ ಮೂವತ್ತಿರಳ್ ಪೂವಿನೊಳ್
ಪೊಸಗಂಪಂ ಪುದಿಮೊಪ್ಪಿ ತೋಱುವೆಸಳ್ಗಳ್ ಮೂವತ್ತಿರಟ್ ಚೆಲ್ವನ-।
ಪ್ಪಿಸಳೋರೊಂದಱ ಮೇಲೆ ಲೀಲೆ ಮಿಗೆ ಮೂವತ್ತಿರ್ವ್ವರೋರಂತೆ ನ-
ರ್ತ್ತಿಸೆ ದೇವಾಂಗನೆಯರ್ ಬೆಡಂಗನೊಳಕೊಂಡತ್ತಿಂಪ್ರದುಂಪ್ರದ್ವಿಪಂ ॥೫೪॥

ಪದಸಕ್ಕೆಪ್ಪ ತಳಕ್ಕೆ ನೀಳ್ದ ಸಗೆಗಣ್ಗಂ ತಾಂ ಗಡಂ ತನ್ನ ನೀ-
ಳ್ದ ದಳಂಗಳ್ ಗಡ ಪ್ರೋಲ್ಪೆಯೆಂಬ ಸೆಣಸಿಂ ಮಿಕ್ಕೇವದಿಂದಿಕ್ಕಿ ಮೆ-
ಟ್ಟಿದರೀಕಾಂತೆಯರೀಸರೋರುಹದಲವ್ರಾತಂಗಳಂ ತಪ್ಪದೆಂ-
ಬುವನೆಂಬನ್ನೆಗಮೇಂ ಬೆಡಂಗೆಸೆದುದೋ ದೇವಾಂಗನಾನರ್ತ್ತನಂ ॥೫೫॥

॥ ಮಾಲಿನಿ ॥

ನವಕಮಲದಲಂಗಳ್ ಭೀಕರಂ [೪]ಬಲ್ಪುಮಾಗಿ[೪]-
ಪ್ಪರ್ವೆ ತಲಕೆ ತಲಂಗಳ್ ನೋಯವೇ ಮೆಟ್ಟಿದಂದೆಂ-

೧-೧ (ಬ) ಲಟನ. ೨-೨ (ಅ) ದೊಂದಮುದ್ದಿರ್ಕ್ಕು. ೩-೩ (ಅ) ಚೆಲ್ವನೊಳ ಕೊಂಡೋರಂತೆ; (ಬ) ಚೆಲ್ವುವಡೆಸಂತೋರೊಂಬೆ. ೪-೪ (ಅ) ಪರ್ಪ್ಪರಾಗಿ.

ದವಱಿಸಳಸವರ್ದ್ಧಿರ್ ಪೊಕ್ಕಿದರ್ ಮೆಟ್ಟಿರೆಂಬಂ-
ತಮಯುವಡೊಳ್ ಲೀಲಾನೃತ್ಯದಿಂ ಕಣ್ಗೆವಂದರ್ ||೫೬||

ನಡೆನೋಡಲ್ ರೂಪು ಕೇಳಲ್ ನುಡಿ ಪುರದ ಜನಕ್ಕಾಯ್ತು ಮುನ್ನಂತೆ ಮೇಗ-
ಣ್ಣ ಡರ್ದಾಗಳ್ ಮೆಯ್ಯ ಕಾಣಲ್ ಕಳಕಳಮಿನಿಸಂ ೧ಕೇಳಲಾಯ್ತತ್ತಮಿತ್ತಂ೧ |
ನಡೆಗೊಂಡಾಗಳ್ ತನುವ್ಯಕ್ತಿಯುನಱಿಯಲಣಂ ೨ಬಾರದಾಯ್ತೆಂಬಿನಂ೨ ಕಾ-
ಣ್ಬೆಡೆಗಂ ಗೆಂಟಾದುದೆಂಬಂತಿರೆ ಗಗನತಲೋದ್ಗಾಮಿಯಾಯ್ತಿಂದ್ರಸೈನ್ಯಂ ||೫೭||

ವ|| ಆಗಳ್ ಮೇರುಗಿರೀಂದ್ರಂಬರಮಿಂದ್ರನೀಲಶಿಲಾತಲಮಣಿಮಯಸೋ-
ಪಾನಪಙ್ತಿತ್ರಯರೂಪದಿನಂಬರಮೆ ಜಿನರಾಜಭಕ್ತಿಯಿಂ ಪರಿಣಮಿಸಿದಂತೆ
ಸೊಗಯಿಸಿರ್ದ ೩ಸೋಪಾನಮಾರ್ಗ೩ಂಗಳೊಳ್ ನಿಜಸ್ತಂಬೇರಮ೪ಘಂಟಾ೪
ಘೋಷಂ ಬೆರಸಿಂಬಾಗಿ ಪೋಗೆಪೋಗೆ,

ಕಡುಗೆಂಪೇಱುತ್ತು ನಾನಾಭರಣಕಿರಣದಿಂದಾಗಳಾಕಾಶದೊಂದೊಂ-
ದೆಡೆ ಬೆಳ್ಪೇಱುತ್ತು ಚಂಚಚ್ಚಮರರುಹಸಹಸ್ರಂಗಳಿಂ ವ್ಯೋಮದೊಂದೊಂ- |
ದೆಡೆ ಕರ್ಪೇಱುತ್ತು ದೇವದ್ವಿರದದ ಘಟೆಯಿಂದಂ ನಭೋಭಾಗದೊಂದೊಂ-
ದೆಡೆಯೆಂಬಂತಾಗೆ ೫ಚೆಲ್ವಾವೆಡೆಗ೫ ಮಸೆವಿನಂ ರಮ್ಯಮಾಯ್ತಿಂದ್ರಸೈನ್ಯಂ ||೫೮||

|| ಪೃಥ್ವಿ ||

ಅದೊಂದೆಡೆ ಸುರಾನಕಪ್ರಕಟಘೋಷದಿಂ ಚೆಲ್ವಮೆ-
ತ್ತದೊಂದೆಡೆ ಸುರಾಂಗನಾಮಧುರ೬ಗೀತದಿಂ೬ದೊಳ್ಪಮೆ- |
ತ್ತದೊಂದೆಡೆ ಸುರೇಂದ್ರಸೌಂದರಿಯರಾಟದಿಂ ಗಾಡಿಮೆ-
ತ್ತದೇಂ ಗಗನಮಂಡಲಂ ನೆಱೆಯೆ ಶೋಭೆಯಂ ಪೆತ್ತುದೋ ||೫೯||

ನಾಕಿನಿಕಾಯಂ ಜ್ಯೋತಿ-
ರ್ಲ್ಲೋಕಮನವಯವದಿನುಱೆಯೆ ೭ಪೋಗಿ೭ ಬಱಿಕ್ಕಾ- |
ಲೋಕಿಪುದಾಯ್ತುದನುತ್ಪಲ-
ಕೋಕನದಾಕರಮೆ ಗೆತ್ತು ವಿಸ್ಮಯದಿಂದಂ ||೬೦||

ವ|| ಅಂತು ಪೋಗಿ ಮಂದರಾಚಲಮನೈದಿದಾಗಳ್,

೧-೧ (ಚ) ಕೇಳಲಾಯ್ತಂತುಮತ್ತಂ. ೨-೨ (ಚ) ಬಾರದಾಯ್ತತ್ತಣಿಂ. ೩-೩ (ಚ) ಸೋಪಾನಪಙ್ತಿಮಾರ್ಗಂ. ೪-೪ (ಅ,ಬ) ಘಟಾ. (ಚ) ೫-೫ (ಚ) ಚೆಲ್ವಾವೆಡೆಯು. ೬-೬ (ಚ) ಗೀತಿಯಿಂ ೭-೭ (ಚ) ಪೋಗೆ.

ಇದಿರಂ ಬರ್ಪ್ಪಂತುಟಾಯ್ತುಜ್ಜ್ವಲಿಸುವ ಮರಕತೋರ್ವ್ವೀಪ್ರತಿಘ್ನಾನದಿಂ ರಾ-
ಗದಿನಟ್ಕಿತ್ತರ್ಗ್ಗಡುಮಂತಾಯ್ತು ನಿಲವಶಜಲಜ್ವಾಲಿಶಾಖಾಲಿಯಿಂ ಬಂ-
ದಿದಿಗೋರ್ಳ್ಪಂತಾಯ್ತು ಕಲ್ಪಕ್ಷಿತಿರುಹಬಹುಪುಷ್ಪಾರ್ಘ್ಯದಿಂ ವೆಂಬಿನಂ ಜೆ-
ಲ್ಪಿದಿ[೧]ಗೊಂಡತ್ತಿಂದ್ರ[೧]ಶೈಲಕ್ಕತಿಶಯಮಹಿಮಂ [೨]ಬಂದೊಡಂಪಾದಿ[೨] ದೇವಂ ||೬೧||

ಕಂಬುಲತಾಮಲಲಿತಲವ-
ಣಾಂಬುಧಿ ಪರಿಧಾನಮಾಗೆ ಚೆಲ್ವಂ ಪಡೆದೀ-
ಜಂಬೂದ್ವೀಪಪ್ರಭುಗಿದು-
ಪ್ರೊಂಬಿಸದೊಳೆ ಸಮೆದ ಮಕುಟಮಪ್ಪಂತಿರ್ಕ್ಕುಂ ||೬೨||

ಎಳಸಿ ಸುರಸಮಿತಿ ಪೆಲ್ವಂ-
ಗಳ ಪೆಸೆಯನೆ ಬಿಸುಟು ರಮಿಯಿಸುತ್ತುಮದರ್ಕ್ಕಿಂ
ತಳರದುದಱಿಂದೀ ಸುರನಗ-
ಗೊಳಕೊಂಡುದು ತಾನೆ ನಾಕಲೋಕಶ್ರೀಯಂ ||೬೩||

ಸಾಸಿರಯೋಜನಮುಮದರ್ಗ್ಗ ಸು-
ರಾಸುರಸಂಸೇವ್ಯಮಾಗಿ ತೊಂಭತ್ತೊಂಬೈ-
ಸಾಸಿರಯೋಜನಮುಂ ನೆಗೆ-
ದೀ ಸುರಗಿರಿ ಪೆಂಪಸೆಗ್ಗಂ ಪುದುಂಗೊಳಿಸುಮೋ ||೬೪||

ಜಿನಸವನಮಂಗಳಕ್ಕಾ-
ನೆ ನೋಂತೆನೆಂಬಂತೆ [೩]ಶಿಖರಿ ನಿಜ[೩]ಶಿಖರದ ಪೆಂ-
ಪನೆ ಮಿಱಿದು [೪]ಪ್ರೊಸತೆ ಮಾಡಿಮ[೪]-
ಜಿನಗಂ ವಿಸ್ಮಯಮನದಱಿಂ ನೀನಗಮೀಗಳ್ ||೬೫||

ಜಿನನಿಲಯಂಗಳ್ ನಾಲ್ಕುಂ
ಬನದೊಳಮುವು ನಾಲ್ಕು ನಾಲ್ಕು ನೆಲಸಿರೆ ಗಿರೀ -
ಷನಮುಂ ಪ್ರಸಿದ್ಧಮುಂ ಸುರ-
ವಿಸುಕಮುಮಾಯ್ತಿದಱ ಪೊರೆಗೆ ಗಿರಿಗಳುಮೊಳವೇ ||೬೬||

ವ|| ಎಂದು ಮಂದರಮಹೀಧರದ ಮಹಿಮೆಯು[೫]ನಮರೇಂದ್ರನಮರಸಮಿ-
ತಿಗೆಲ್ಲಂ ಪೇಲ್ದು ಪೊಗಟುತ್ತುಮುದಂ[೫] ತ್ರಿಃಪ್ರದಕ್ಷಿಣಂಗೆಯ್ದು,

೧-೧ (ಚ) ಗೊಂಡಂತಿಂದ್ರ. ೨-೨ (ಅ) ಬಂದೊಡಂತಾದಿ. ೩-೩ (ಅ) ಶಿಖರ ಭುಜ. ೪-೪ (ಅ) ಪೊಸತಂ ಮಾಡುವು. ೫-೫ (ಅ, ಬ) ನಮರಸಮಿತಿಗಮರೇಂದ್ರಂ ಪೊಗಳುತ್ತಮುದಂ.

[1]ತೆರಳ್ದು[1] ಸುರಭೂರುಹಪ್ರಸವಧೂಲಿಯಂ ಪೊಕ್ಕಳಂ
[2]ಸುರುಳ್ದು[2] ಸರಸೀಸರೋರುಹದಲಂಗಳಂ ಬಂದು ಮಂ-
ದರೋಪವನಸಂಭವಂ ನಯದಿನಾಡಿಸಿತ್ತಾಗಳ-
ಪ್ಸರಃಪ್ರಕರದೊಳ್ ಗುರುಳ್ಗಳನದೊಂದು ಮಂದಾನಿಲಂ ||೬೭||

ಸುರಗಿರಿಯಂ ಸುರನಿಕರಂ
ತರತರದಡರ್ವ್ವಾಗಳಮರಗಣಿಕೆಯರ ಮನಂ ।
ವಿರುವದಲಿ ನಿಕರದೊಡನೊಡ-
ನಿರದೆಱಗಿದುವಮರತರುಲತಾಂತಾವಳಿಯೊಳ್ ||೬೮||

[3]ಸರಿಗೆಗಿವು[3] ಲಂಬಣಕ್ಕಿವು
ಬರಗಲೆಗಿವು ಮುಗುಳ್ಗಳಿವು ಮೇಖಲೆಗಿವು ನೂ- ।
ಪುರರ[4] ಚನೆಗಿವೆಂದವನಾ[4]
ಪರದಿಂದಂ ಕೊಯ್ದರಾಯ್ದು ದಿವಿಜಾಂಗನೆಯರ್ ||೬೯||

ಪೊಸಗಂಪುಗೊಂಡು ಮುಪಱಿರೊಳ್-
ಪಸದನಮಂ ನೆಱೆಯೆ ತಮಗೆ ಮಾಡಿಯುಮಂತುಂ ।
ಪೊಸಪೂವಿನ ಪೊಸನುಡುಗೆಯು
ಪಸವೋಡಿದುದಿಲ್ಲ ದಿವಿಜವನಿತೆಯರ್ಗಾಗಳ್ ||೭೦||

ಅಮರೇಶ್ವರನಿಂ ಶಚಿಯಿಂ
ನಮಗಿದನಾಘ್ರಾತ [5]ಪೂತಮೆನಿಸಿ[5] ಪರೀತ- ।
[6]ಭ್ರಮರಮವತಂಸ[6]ವಾಮುದು
ನಮೇರುಮಂದಾರಪಾರಿಜಾತಸ್ತಬಕಂ ||೭೧||

ಘನಸಾರಸರಲಚಂದನ-
ವನಮೃದುಪಲ್ಲವಮನಗ್ರಹಸ್ತದೆ ಕೊಂಡೊ- ।
ಯ್ಯನೆ ಬೀಸೆ ಚೆಲ್ವುವಡೆದುದು
ಜಿನಂಗೆ ಚಾಮರಮನಿಕ್ಕುವಂಶಮರಗಜಂ ||೭೨||

೧-೧ (ಅ,ಬ) ತೆರಳ್ದಿ. ೨-೨ (ಅ,ಬ) ಸುರುಳ್ದಿ ೩-೩ (ಚ) ಸುರಗಿಗಿವು. ೪-೪ (ಚ) ರಚನೆಗಿಂತಿವೆಂದಾ. ೫-೫ (ಅ) ಪೂರ್ವ್ವಮನಿಸಿ. ೬-೬ (ಚ) ಭ್ರಮರಾವತಂಸ.

ಇಡಿದಿರೆ ಪೂತಮರದ್ರುಮ-
ದಿಡುವುಗಳೊಳ್ ಬದ್ದವಣದ ಪುಡಿವೊಲ್ ಬೆನ್ನೊಳ್।
ಬಿಡದಲುಗೆ ಕುಸುಮ[೧]ಕುಲ[೧]ರಜ
ಮಡದರ್ಗದು ಸುರಗಿರಿಯನಿಂದ್ರರುಂದ್ರಗಜೇಂದ್ರಂ ॥೭೩॥

ವ॥ ಅಂತು ಬಂದು ಪಾಂಡುಕವನದ ಪೂರ್ವೋತ್ತರ[೨]ದಿಶಾಮುಖನಿವಾಸಿ[೨]ಯಾಗಿ ಶತಯೋಜನವಿಷ್ಕಂಭದೊಳಂ ಪಂಚಶದ್ಯೋಜನವಿಸ್ತಾರದೊಳಮಷ್ಟಯೋಜನೋತ್ಸೇಧದೊಳಮಷ್ಟಮೀಚಂದ್ರಾಕೃತಿಯೊಳಮಷ್ಟಮಂಗಳಪರಿವೇಷ್ಟನದೊಳಂ ನೆಲಸಿದ,

ಕ್ಷೀರೋದವಾರಿಧಾರಾ-
ಪೂರದ ಬೆಳ್ಪಿಂಗೆ ಸೆಣಸುವಂತಭಿನವನೀ-।
[೩]ಹಾರದ ಪೂರದ ಬೆಳ್ಪನೆ[೩]
ಬಾರಿಸಿ ಪಾಂಡುಕಶಿಲಾತಲಂ ಸೊಗಯಿಸುಗುಂ ॥೭೪॥

ಕಡೆಯೊಳ್ ತಗುಳ್ದ ರತ್ನದ
ಬೆಡಂಗುವೆತ್ತೆಸೆವ ದೀಪ್ತಿವಲಯದ ಚೆಲ್ವಂ
ಪಡೆದು ಸಲೆ ದೇವಚಾಪದ
ನಡುವಣ ಲಲಿತಾರ್ದ್ಧಚಂದ್ರನಿಪ್ಪಂತಿರ್ಕ್ಕುಂ ॥೭೫॥

ತನ್ಮಧ್ಯಭಾಗದಲ್ಲಿ ಕ-
ನನ್ಮಣಿಮಯಸಿಂಹಪೀಠವೆರಡುಂ ಕೆಲದೊಳ್ ।
ಜನ್ಮಾಭಿಷೇಕಕಾರ್ಯ್ಯದೊ-
ಳುನ್ಮನರಪ್ಪಿಂದ್ರರೆರಡುಮಾಸನಮಿರ್ಕ್ಕುಂ ॥೭೬॥

ವ॥ ಅಲ್ಲಿ ದೇವರಾಜನನೇಕಮಣಿಖಚಿತವಿಚಿತ್ರಸ್ತಂಭಸಂಭೃತಮು-[೪]ಮುತ್ತುಂಗವಸ್ತ್ರಾಂಗಕುಜಸಮುದ್ಭೂತವಸ[೪]ನವಿನಿರ್ಮ್ಮಿತವಿತಾನವಿರಾಜಿತಮುಂ ತಾರಾತರಲಮುಕ್ತಾಫಲ[೫]ಲಂಬ[೫]ಲಂಬೂಷಭೂಷಿತಮುಮವಲಂಬಿತಸುರಭಿಕುಸುಮದಾಮಾಕೀರ್ಣ್ಣಮುಂ, ಚತುರ್ನ್ನಿಕಾಯಾಮರೇಂದ್ರವೃಂದಸಂಕೀರ್ಣ್ಣಮುಮಪ್ಪ ಶ್ರೀಮಂಟಪಮಂ ವಿರಚಿಸಿ *ಮೃಗರಾಜವಿಷ್ಟರದೊಳ್ ಬಾಲಕನಂ ಪೂರ್ವಾಭಿಮುಖ[೬]ನಿವಿಷ್ಟಂ ಮಾಡಿ,[೬]

೧-೧ (ಅ) ದಳ. ೨-೨ (ಅ,ಬ) ಆಶಾನಿವಾಸಿ. ೩-೩ (ಚ) ಹಾರದ ಬೆಳ್ಪನೆ ಬಾರಿಸಿ. ೪-೪ (ಅ) ಮಾಲ್ಯಾಂಗವಸ್ತ್ರಾಂಗಕುಜಸಮುದ್ಭೂತ ಮಾಲ್ಯವಸನ; (ಬ) ಮತ್ತ್ಯಂಗವಸ್ತ್ರಾಂಗಕುಜಸಮುದ್ಭೂತವಸನ. ೫-೫ (-,ಬ) ಪ್ರತಿಗಳಲ್ಲಿಲ್ಲ. ೬-೬ (ಚ) ನಿನಿಷ್ಟನಂ ಮಾಡುವುದುಂ.

* ಆ ಸಿಂಹವಿಷ್ಟರದೊಳ್ ತ್ರಿವಿಷ್ಟಪಾಧೀಶನಂ ಪೂರ್ವಾಭಿಮುಖನಿವಿಷ್ಟಂ ಮಾಡೆ.— ಚಂ. ಪ್ರ. ಪು. ೧೨-೧೧೧ವ. ಅನಂತನಾಥ ಪು. ೫-೫೩ ವ.

ತನು ಕಿಱುವಾದೊಡಮುದ್ಯ-
ತ್ತನುಪ್ರಭಾಪ್ರಸರಮೆಸೆಮ ಪಸರಿಸಿ ಸಿಂಹಾ-
ಸನಮಂ ಪುದಿದಿರೆ ದೇವಂ
ಕನಕಕನಚ್ಛಿಖರಿಶಿಖರಶೇಖರನಾದಂ ॥೭೭॥

ವ॥ ಆಗಳಾಸೌಧರ್ಮ್ಮೇಂದ್ರನುಮೀಶಾನೇಂದ್ರನುಂ ಸಿಂಹಾಸನದೆರಡುಂ ಕೆಲದೊಳಂ ದಕ್ಷಿಣೋತ್ತರಭಾಗದೊಳಿದಿರಾಗಿರ್ದ್ದ ಮಣಿಮಯಭದ್ರಾಸನಂಗಳೊಳ್ ಕುಳ್ಳಿರ್ದ್ದು ದಿಕ್ಪಾಲರುಮನವರವರ ೧ದಿಗ್ಭಾಗಂಗಳೊಳ್೧ ನಿಜಪರಿವಾರವಾಹನಾಂಗನಾಯುಧಸಮೇತಮಿರಿಸಿ ಶೇಷಾಶೇಷದೇವನಿ೨ಕಾಯಮನುಚಿತ೨ಸ್ಥಾನದೊಳ್ ನಿಱಿಸಿ ಜನ್ಮಾಭಿಷವಣಪರಿಣತಾಂತಃಕರಣನಾದಾಗಳ್,

ಸುರಕರನಿರ್ಭ್ಭರಹತಿಯಿಂ
ಸುರದುಂದುಭಿನಿನದಮುಮರವನಿತಾವದನಾಂ-।
ಬುರುಹದಿನೊರ್ಮ್ಮೆಯೆ ಮಂಗಲ-
ಪರಂಪರಾಗೀತನಿನದಮೊಪವಿತ್ತಿತ್ತಂ ॥೭೮॥

ದುರಿತಘನತಿಮಿರಮೆತ್ತಂ
ತೆರಳ್ದು ಜಿನಸವನಮಂಗಲಕ್ಕಗಿದಾಗಳ್ ।
ಪರೆವಂತಾದುದು ಕಾಲಾ-
ಗರುಧೂಪಲಾಮಧೂಮಮಾತ್ತವ್ಯೋಮಂ ॥೭೯॥

ಕಲಮಧವಲಾಕ್ಷತಂಗಳ
ಪೊಳೆವಲರ್ಗಳ ಚಂದನದ್ರವೋನ್ಮಿಶ್ರ ಜಲಂ-।
ಗಳ ಪೊಳೆಪಿನೊಳೆಸೆದು ವಿಯ-
ತ್ತಲಂ ಬರಂ ನೆಗೆದುದಿಂದ್ರನರ್ಘ್ಯೋದ್ಧರಣಂ ॥೮೦॥

ವ॥ ಅಲ್ಲಿಂ ಬಱಿಯಮಶೋಕಪಲ್ಲವೋಲ್ಲಸಿತಚಂದನಚರ್ಚ್ಚಿತಮಾಲತೀಮಾಲಾವೇಷ್ಟಿತಮಣಿದರ್ಪ್ಪಣ೩ಪ್ರಶೋಭಿತ೩ವಿಮಲಾರ್ಣ್ಣವಪಯಃಪೂರ್ಣ್ಣಕಲಧೌತಕಲಶಂಗಳಂ ಕಲಶೋದ್ಧಾರಮಂತ್ರಪೂರ್ವ್ವಕಂ ೪ಪ್ರಣವಪ್ರಸ್ತಾವನಾ೪ ಪುರಸ್ಸರಂ ಮಾಡಿ ಪ್ರಥಮಕಲ್ಪೇಶ್ವರನುಮೀಶಾನೇಂದ್ರನು೫ಮೆತ್ತಿಕೊಳೆ೫

೧–೧ (ಚ) ದಿಗ್ಭಾಗದೊಳೆ ನಿಜ. ೨–೨ (ಅ) ನಿಕಾಯಮುಮನುಚಿತ; (ಬ) ನಿಕಾಯನೆಲ್ಲಮನುಚಿತ ೩–೩ (ಅ) ಪ್ರಸಾಧಿತ; (ಚ) ಪ್ರಸಾರಿತ. ೪–೪ (ಬ) ಪ್ರಣಯಪ್ರಸ್ತಾವನಾ. (ಚ) ಪ್ರಣತಿಪ್ರಸ್ತಾವನ. ೫–೫ (ಅ) ಮೆತ್ತಿಕೊಂಡಾಗಳು; (ಚ) ಮೆತ್ತಿಕೊಂಡು.

ಇತರೇಂದ್ರರ್ ಪರಿಚಾರಕ[೧]ಪ್ರಭುತಿಯಿಂ[೧] ಮುಂದಾಡೆ ದೇವಾಂಗನಾ-
ಸ್ಮಿತದೇವಾಧಿಪಕಾಂತೆ ಕನ್ನಡಿ ಸೊಡರ್ ಪೂಮಾಲೆ ಭೃಂಗಾರಮು-
ಕ್ಷತಮೆಂಬುಜ್ಜ್ವಲಮಂಗಳೋಪಕರಣದ್ರವ್ಯಂಗಳಂ ನೀಡೆ ಸಂ-
ತತಮೇನೆಂದು ಜಿನಾರ್ಭಕಂಗೆಸೆದುದೋ ಜನ್ಮಾಭಿಷೇಕೋತ್ಸವಂ ||೮೧||

ಕ್ಷೀರಾಬ್ಧಿಯ ನೀರಲ್ಲದೆ
ಧೀರನ ಮಜ್ಜನಕೆ ಪೆಱವು ನೀರ್ ತಗವೆಂದಾ-
ವಾರಾಶಿವರಂ ಸುರಜನ-
ದಾರಿ ಮನೋಹಾರಿ ನೀಳ್ಕು ವೆರಡುಂ [೨]ಕೆಲದೊಳ್[೨] ||೮೨||

ವ|| ಅಂತು ಸೌಧರ್ಮೇಂದ್ರನುಮೀಶಾನೇಂದ್ರನುಮೆರಡುಂ ದೆಸೆಯೊಳ್-
ಮರನಿಕುರುಂಬಮೋಳಿವಟ್ಟಷ್ಟಯೋಜನಗಂಭೀರೈಕಯೋಜನಮುಖವಿಸ್ತಾರಶಾತ-
ಕುಂಭಕುಂಭಂಗಳಂ ಕೊಂಡು,

ಅಯ್ದನೆಯ ಜಲಧಿವರವಿ ರ
ಪೆಯ್ದುವ ಮೊಗೆವಂತೆ ಮೊಗೆದುಮೋರೊರ್ವರ ಕೈ-
ಗೆಯ್ದಿಸುವ ಬೇಗಮಂ ಮನ-
ಮೆಯ್ದುದಿಲ್ಲಮರಚರಿತಮೇನಚ್ಚರಿಯೋ ||೮೩||

ಕಲಧೌತಘಟಂ ಮುಕ್ತಾ-
ಫಲಾಂಚಿತಗ್ರೀವಮೆಸೆದುಕೊಂಡುದು ತಾರಾ-
ವಳಿಪರಿವೃತನವಸಂಧ್ಯಾ-
ಜಲದದ ಗಾಡಿಯನನೇಕಸುರಕರತಲದೊಳ್ ||೮೪||

ಪೊಸಸಂಜೆಮುಗಿಲ ತುಱುಗಲ್
ಮುಸುಕಿದುದು ಪಯಃಪಯೋಧಿಯೆಲ್ಲಮನೆಂಬಂ-
ತಸದಳಮೆಸೆದುದು ಮೊಗೆವು-
ದ್ದಿಸದೊಳೆ ತಳತಳಿಸಿ ಪೊನ್ನ ಪೊಸಕಳಸಂಗಳ್ ||೮೫||

ವ|| ಅಂತು ದೇವರ್ ದೇವನೊಳಾವಗಮೊದವ ತಂತಮ್ಮಾಸರದಿಂ ಮೊತ್ತೆ-
ಗಟ್ಟಿ ದುಗ್ಧವಾರಿಪೂರಿತಕನಕಕಲಶಂಗಳಂ ತಂದು ಗೊಂದಣಿಸಿ ಸಂದಣಿಸಿ ನೀಡ-
ದಾಗಳ್,

೧-೧ (ಜ) ಪ್ರಭೃತಿಯಿಂ. ೨-೨ (ಬ) ದೆಸೆಯೊಳೂ.

ಸುರ[೧]ಸಂದೋಹದ[೧] ತೀವಿತಂದ ಘಟಸಂಘಾತಂಗಳಾನಲ್ಕಿರ-
ಚ್ಕರದಿಂ ಬಾರದೆ ಮಾಣೆ ನಿರ್ಮ್ಮಿಸಿದ ದೋರ್ದ್ದಂಡಂಗಳೊಳ್ ಭೂಷಣೋ- ।
ತ್ಕರಮಿಂಬಾಗಿರೆ ಭೂಷಣಾಂಗತರುವಂ ಕುಂಭಂಗಳಾತೋಳ್ಗಳೊಳ್
ಕರಮಿಂಬಾಗಿರೆ ಭಾಜನಾಂಗತರುವಂ ಪೋಲ್ತಂ ಸುರಾಧೀಶ್ವರಂ ॥೮೬॥

ವ॥ ಅಂತು ನಿಜಭುಜಸಹಸ್ರೋದ್ಧೃತಕನಕಕುಂಭಮುಖವಿಗಲಿತಕ್ಷೀ-
ರವಾರಿಧಾರೆಯಂ ಜಯಜಯನಿನದಪೂರ್ವ್ವಕಂ ಜಿನಸವನಪ್ರಥಮಪ್ರಾರಂಭ-
ದೊಳ್ [೨]ಸೌಧರ್ಮ್ಮೇಂದ್ರಂ ಸುರಿದಾಗಳ್[೨],

ಆ ದುಗ್ಧಧಾರೆ ಕರಮಿಂ-
ಬಾದುದು ಜಿನಮಸ್ತಕಾಗ್ರದೊಳ್ ಗಂಗಾಕೂ- ।
ಟೋದಗ್ರಶಿಖರದೊಳ್ ಜಿ-
ಲ್ಲಾದಮೆ ಮಿಗೆ ಸುರಿವ ಗಗನಗಂಗಾನದಿವೊಲ್ ॥೮೭॥

ಆಗಳ್ ಕಲ್ಪೇಶ್ವರರನು-
ರಾಗದಿನೊಡನೊಡನೆ ಸುರಿಯೆ ಪಾಲ್ಗಡಲೊಂದುಂ- ।
ಟಾಗದೆ ಮೇರುವ ತುದಿಯೊಳ-
ಮೀಗಳೆನಲ್ ನೆಱೆದುದಾಪಯಃಪ್ಲವದೆಸಕಂ ॥೮೮॥

ಸುರಜಲದಂಗಳ್ ದುಗ್ಧಾಂ-
ಬುರಾಶಿಯೊಳ್ ಪೀಱಿ ಬಂದ ನೀರ್ಗಳನೆತ್ತಂ ।
ಸುರಿದುವು ಜಿನಾರ್ಭಕಾಚಲ-
ಶಿರದೊಳ್ ಜಲದಂಗಳಂತು ನಗದೊಳ್ ಸುರಿಗುಂ ॥೮೯॥

ಜಲನಿಧಿ ತೊಱೆಗಳನನಿತುಮ-
ನೊಳಕೊಳ್ವವೊಲಿನಿಸು[೩]ತಳರದಾಧ್ಚೈರ್ಯ್ಯ[೩]ಮಹಾ- ।
ಜಲನಿಧಿ ಪಯಃಪ್ಲವಂಗಳ-
ನೊಳಕೊಂಡಂ ಸುರರ [೪]ಮಿಸಿಸುವವಸರದಾಗಳ್[೪] ॥೯೦॥

ಬಾಲಂ ಬಾಲ[೫]ಮೃಣಾಲದಂತಸುನೆಱಿಂ[೫] ದುಗ್ಧಪ್ಲವಂ ಸ್ಥೂಲಕ-
ಲ್ಲೋಲಾಸ್ಫಾಲಿತಹೇಮಶೈಲಮಿದನಿನ್ನೇವಣ್ಣಿಪಂ ಶಕ್ರನೆಂ- ।

೧-೧ (ಅ,ಬ) ಸಂಘಾತದ. ೨-೨ (ಬ) ಸೌಧರ್ಮೇಂದ್ರನಿಕ್ಕಿದಾಗಳ್; (ಚ) ಸೌಧರ್ಮೇಂದ್ರನೀಶಾನೇಂದ್ರನುಂ ಮಿಸಿಸಿದಾಗಳ್. ೩-೩ (ಚ) ತರಳವಾಶ್ಚರ್ಯ. ೪-೪ (ಬ) ಮಿಸಿಸುವೊಂದವಸರದೊಳು. ೫-೫ (ಅ,ಬ) ಮೃಣಾಲದಂತಸುನೆಱಿಂ.

ಬಾಳೋಚಂ ಬೆರಸಿರ್ಪ್ಪ ದೇವಗಣಮುಂ ನಂಬಿಪ್ಪುದಾಯ್ತಾಗಳಾ-
ಲೀಲೋಚ್ಛ್ವಾಸಮೆ ತೂಳ್ದೆ ದೇವರೊಡನಾನಾನಾವಿಮಾನಂಗಳಂ ॥೯೧॥

ಪಸರಿಸಿದ ಪಯಃಪೂರದ
ಪೊಸವೆಳ್ಪು ನಿಜಾಂಗರುಚಿಯು ಪೊಚಿಪೊಚಿಗೆ ಪೊಸ-।
ಟ್ದಿಸೆದಿರೆ ಬೆಳ್ಮುಗಿಲಿಂದಂ
ಮುಸುಕಿದ ಬಾಲಾರ್ಕಬಿಂಬಮಿರ್ಪ್ಪಂತಿರ್ದ್ದಂ ॥೯೨॥

೧ಉರದೊಳ್ ಹಾರಂಗಳನೊಳ್
ಗುಮುಳ್ಗಳೊಳ್ ಚಿನ್ನ೧ಪೂಗಳಂ ಪೋಲ್ತು ಮನೋ-।
ಹರಮಾಮವಮರಕಾಂತೆಯ-
ರುರದೊಳ್ ಕುರುಳೊಳ್ ತಗುಳ್ದ ದುಗ್ಧಲವಂಗಳ್ ॥೯೩॥

ಆಕಾಶಕ್ಕುಚ್ಚಳಿಸುವ-
ನೇಕಪಯಶ್ಶೀಕರಂಗಳಿಂದಂ ಜ್ಯೋತಿರ್।
ಲೋಕಮಿದೊಂದುಂಟೆಂಬ ವಿ-
ವೇಕಮ೨ನೊಡರಿಸಿದುದಮರ೨ಸಮಿತಿಯ ಮನದೊಳ್ ॥೯೪॥

೩ಕೆಲದೊಳ್ ತಗುಳ್ದು೩ ಸೂಸುವ
ಜಲಲವಮಂಜರಿಗಳುಂಟುಮಾಡಿದುವು ದಿಶಾ-
ಲಲನೆಯರ ವಕ್ತ್ರಮಂಡನ-
ವಿಲಾಸದೊಳ್ ನೆಗಟ್ದ ಕರ್ಣ್ಣಪೂರಶ್ರೀಯಂ ॥೯೫॥

ಜಿನನಾಥಸ್ನಪನಾಂಬು ತಜ್ಜಿನತನುಶ್ರೀಸಂಗದಿಂ ತಾನೆ ಪಾ-
ವನಮಾಯ್ತೇ ತನಗಿರ್ಕ್ಕೆಯಾದ ಕಡಲಂ ಕುಂಭಂಗಳಂ ೪ಪ್ರೊತ್ತ೪ದೇ-।
ವನಿಕಾಯಂಗಳನಿಂಪುಱಂ ಸುರವಧೂವೃಂದಂಗಳಂ ಕೋರುನಂ-
ದನಭೂಪ್ರಾಂತಮುಮಂ ಪವಿತ್ರಮೆನಿಸಿತ್ತಾನೀರ್ಗ್ಗದಾಶ್ಚರ್ಯ್ಯಮೇ ॥೯೬॥

ತ್ರಿದಶೇಂದ್ರಪ್ರಮುಖಾಮರರ್ ಕಲಕಲಪ್ರಧ್ವಾನದಿಂ ಶಾತಕುಂ-
ಭದ ಕುಂಭಂಗಳ ನೀರನೊರ್ಪ್ಪವರೆ ಭೋರ್ಭೋರೆಂದು ಪೊಯ್ವಾಗಳ-।
ತ್ತ ದಿಗಂತಂ ದಿವಿಜೇಂದ್ರದುಂದುಭಿನಿನಾದೋನ್ಮಿಶ್ರಮೇನುಣ್ಮೆ ಪ್ರೋ-
ಣ್ಮಿದುದೋ ಮಂದರ೫ಕಂದರೋತ್ಥಿತ೫ಪಯಃಕಲ್ಲೋಲಕೋಲಾಹಲಂ ॥೯೭॥

೧-೧ (ಅ) ಉರದೊಳ್ ಹಾರಂಗಳೆನಲ್ಕುರುಳ್ಗಳ್ಚಿಂನ; (ಬ) ಉರದೊಳು ಹಾರಂಗಳಮುಳ್ಗುರುಳೊಳ್ ಚಿಂನ. ೨-೨ (ಅ,ಬ) ನೊದವಿಸಿದುದಮರ. ೩-೩ (ಚ) ಕೆಲದೊಳ್ ತೆರಳ್ದು. ೪-೪ (ಚ) ಪೊಕ್ಕ. ೫-೫ (ಅ) ಕಂದರೋದ್ಧೃತ; (ಬ) ಕಂದರದ್ರುತ.

ವ॥ ಅಂತು ತಜ್ಜಿನೇಂದ್ರಸವನಸಮಯದೊಳಮರೇಂದ್ರಕರತಲೋದ್ಧೃತಕಾರ್ತ್ತಸ್ವರ[೧]ವಿಶಾಲ[೧]ಕಲಶಮುಖವಿಗಲಿತಸ್ಥೂಲದುಗ್ಧವಾರಿಧಾರಾಸಹಸ್ರಂಗಳೊಂದೊಂದಱೊಳ್ ಕೂಡಿ ಮಂದರಾಚಲಮರಕತಶಿಲಾತಲಮಂ ಸೋಂಕಿದಲ್ಲಿ ಪಸುರ್ಪ್ಪೆಸೆದುಂ, ಪದ್ಮರಾಗಗ್ರಾವಂಗಳೊಳ್ ಕೆಂಪೆಸೆದುಮಿಂದ್ರನೀಲೋಪಲಂಗಳೊಳ್ ಕರ್ಪ್ಪೆಸೆದುಂ, ಚಂದ್ರಕಾಂತಶಿಲಾತಲಮೊಳೇಕವರ್ಣ್ಣಮಾಗಿಯುಂ, ವನಷಂಡಂಗಳೊಳ್ ತುಱುಂಬಿಯುಂ ಸರೋಜಷಂಡಂಗಳೊಳ್ ತುಂಬಿಯುಂ, ಪರಿವ ತತ್ಪ್ರವಾಹಂ ಜ್ಯೋತಿರ್ಲ್ಲೋಕಮನೆಯ್ದೆವಂದಾಗಳ್,

ಬೆಳಗುವ ತಾರಕಾನಿಕರಮಾಕಡಲೊಳ್ ನಸುತೇಂಕುದೇಂಕಿ ಬೊ-
ಬ್ಬುಳಿಕೆಗಳಂತೆ ತೋಱುದುವು ತೀವ್ರಕರಂ ಕರಮೆಯ್ದೆ ಕಾಯ್ದು ಪ-।
ಜ್ವಳಿಸುವ ಲೋಹಪಿಂಡಮನೆ ಭೋಂಕನೆ ನೀರೊಳಗದ್ದಿದಂತೆವೋಲ್
ಪೊಳೆಪುಡಿದಿರ್ದ್ದನೆಂದೊಡಱಿಯೆಂ ಪೊಗೞಲ್ ಜಿನಮಜ್ಜನಾಂಬುವಂ ॥೯೮॥

ಜಿನಸವನಾಂಬುವಿನೊಳ್ ಭೋಂ-।
ಕನೆ ಚಂದ್ರಂ ತೇಂಕಿ [೨]ವೃಷ್ಟಹಂಸ[೨]ನನಿನಿಸಂ।
ನೆನೆಯಿಸಿ ಕೊಳದೊಳಗಣ ಸಿತ-
ವನರುಹಲಕ್ಷ್ಮಿಯುಮನಿನಿಸು ತನಗೊಳಕೊಂಡಂ ॥೯೯॥

ಕಲಧೌತೋಜ್ಜ್ವಲಕುಂಭನಿರ್ಗ್ಗತಪಯಃಪೂರಂ ಪೊಡೆಟ್ಟೆಯ್ದೆ ವೇ-
ಖಲೆಗಳ್ ನಾಲ್ಕುಮನೀನಗಂ ಸುರನಗಂ ಮುನ್ನೀಗಳೆಂತೋ ಹಿಮಾ-।
ಚಲಮಾಯ್ತೆಂಬಿನಮುರ್ವ್ವಿ ಪರ್ವ್ವಿ ಪರಿದತ್ತಾಶಾಂತರಕ್ಕಂ ವಿಯ-
ದ್ವಲಯಕ್ಕಂ ಕನಕಾದ್ರಿಕಂದರತಟಚ್ಛಾಚ್ಛೋಚ್ಛಲಚ್ಛೀಕರಂ ॥೧೦೦॥

ನರಲೋಕಂಬರಮುಣ್ಮಿ ಪೊಣ್ಮಿದ ಪಯಃಪೂರಂಗಳಿಂ ಮಹೀ-
ಧರಕಾಂತಾರನದೀನದಪ್ರಕರಮುಂ ವಿಶ್ವಾವನೀಭಾಗಮುಂ ।
ನರನಾರೀಜನಮುಂ ಪವಿತ್ರತರಮಾಯ್ತೆಂದಂದೆ ಕೇಳ್ವಂಗೆ ಬಿ-
ತ್ತರಿಪಂಗಾದಮಳುಂಬಮಲ್ತೆ ಭಗವಜ್ಜನ್ಮಾಭಿಷೇಕೋತ್ಸವಂ ॥೧೦೧॥

ವ॥ ತದನಂತರಮೆ ಸುರೇಂದ್ರಸಮಿತಿ ಸುರತರುಪ್ರಸೂನಕರ್ಪ್ಪೂರಪಾಂಸುಗೋಶೀರ್ಷಚಂದನದ್ರವಪರಿಮಲಸುಗಂಧಿಜಲಸಂಭೃತಹಾಟಕಘಟಿತಘಟಕೋಟಿಗಳನೆತ್ತಿಕೊಂಡು ಸುರಿದಾಗಳ್,

೧-೧ (ಚ) ವಿಳಾಸ. ೨-೨ (ಚ) ಹಂಸವೃಷ್ಟ.

ಪರಗಂಧದ್ರವ್ಯಸಂದೋಹಮೆ ಜಿನತನುಗಂಧಕ್ಕೆ [1]ಸೋಲ್ತಾದ[1] ಲಜ್ಜಾ-ಭರದಿಂ ನೀರಾಗಿ[2]ತಾನುರ್ಕ್ಕಿದುದೆನಿಸಿ[2] ನಗೇಂದ್ರೋಪಕಂಠಂಗಳೊಳ್ ನಿ-ರ್ಝರಮಂ ಮಾಡುತ್ತುಮುದ್ಯಲ್ಲವನಿವಹದೆ ದೇವೇಂದ್ರಲೋಕಕ್ಕೆ ಮುತ್ಯಾ-ದರಮಂ ಮಾಡುತ್ತುಮೇನಾಱಿಸಿದುದೊ ದಿವಿಜವ್ರಾತಮಂ ಗಂಧತೋಯಂ ||೧೦೨||

ಮಜ್ಜನಪೀಠಂ ಸುರಗಿರಿ
ಮಜ್ಜನಜಲಮಮೃತಜಲಧಿಜಲಮಮರೇಂದ್ರಂ।
ಮಜ್ಜನಮಳ್ಳನುಮೆನೆ ಜಿನ-
ಮಜ್ಜನಮಹಿಮೆಯ ಬೆಡಂಗನೇವಣ್ಣಿಪುದೊ ||೧೦೩||

ಎನಿತಾನುಂ ಪಱಿಗಳ್ ಘನ-
ನಿನದಮನನುಕರಿಸೆ ಮನದೊಳೊದವಿದಲಂಪಿಂ।
ಜಿನಸವನಗಂಧತೋಯದಿ-
ನನಿಮಿಷಲೋಚನರ್ಗ್ಗಮಾದುದವಭೃಥಸವನಂ ||೧೦೪||

ಜಲಗಂಧಾಕ್ಷತೆ ಪುಷ್ಪಾ-
ವಲಿಚರುದೀಪಪ್ರದೀಪಧೂಪಫಲಂಗಳ್।
ಕುಲಿಶಾಯುಧನರ್ಚ್ಚಿಸೆ [3]ತಳ
ತಳತೊಳಗಿದು[3] ವೆಳಸಿ ಬಳಸಿ ಜಿನನಡಿದಳಿರೊಳ್ ||೧೦೫||

ವ|| ಅಂತರ್ಚ್ಚಿಸಿ,

ಜಯ ಗುಣಮಣಿರತ್ನಾಕರ
ಜಯ ಭುವನತ್ರಯಲಲಾಮ ಜಯ ಮನಸಿಜಮ-
ರ್ಜ್ಜಯ ಜಯ ವಿನೇಯಬಾಂಧವ
ಜಯ ಮಂದರಶಿಖರಿಶಿಖರರತ್ನೋತ್ತಂಸಾ ||೧೦೬||

ವ|| ಎಂದಿಂತು ಪರಿಸಮಾಪ್ತಸವನಾರ್ಚ್ಚನಸ್ತವನಸಮಯಾನಂತರಮಿಂ-ದ್ರಾಣಿ ಭಗವದಂಗಸಂಗತಜಲಕಣಂಗಳಂ ದೇವಾಂಗವಸ್ತ್ರಂಗಳೊಳೊತ್ತಿ ಕಳೆದು ಸಹಜಸುರಭಿಗಂಧಬಂಧುರಪರಮೌದಾರಿಕವಪುವಂ ನಿಜಪ್ರಮೋದಪ್ರಬೋಧಿ-ತನಿಜದಿವ್ಯಪರಿಮಳಾಮೋದಿತದಿಗಂಗನಾಮುಖಂಗಳಪ್ಪ ಸುಗಂಧದ್ರವ್ಯಂಗಳಿಂ

---

೧-೧ (ಅ) ಸೋಲ್ತಾಗ. ೨-೨ (ಅ) ತಾನೊಕ್ಕುದಿದೆನಿಸಿ; (ಬ) ತಾನೊರ್ಕ್ಕಿಪುದೆನಿಸಿ. ೩-೩ (ಚ) ತೊಳತೊಳತೊಳಗಿದು.

ಪೂಸಿಯಿಕ್ಷ್ವಾಕುಕುಲತಿಲಕಂಗೆ ತಿಲಕಮನಿಟ್ಟು ಮುಕ್ತಿಸಾಮ್ರಾಜ್ಯಕಂಠಿಕಾ-
ರ್ಹಂಗೆ ಮಣಿಮಯಕಂಠಿಕೆಯಂ ಕಟ್ಟಿ ವಿಜಯಶ್ರೀನಿವಾಸ[1]ಬಾಹುಬಾಹುಯುಗ್ಮ
ಲಕ್ಷ್ಮಿ[1]ಕೇಯೂರಹಾರಾಂಗದಕಟಕಾಲಂಕಾರಂ ಮಾಡಿ ಸಿಂಹವಿಷ್ಟರಾರೋಹ-
ಣೋಚಿತಕಟಿತಟಂಗೆ ಕಟಿತಟದೊಳ್ [2]ಮಣಿ[2]ಕಿಂಕಿಣೀದಾಮಮಂ ತಗುಳ್ಚಿ-
ಸುರಾಸುರೇಂದ್ರವೃಂದವಂದಿತಪಾದಂಗೆ ಮೃದುಪದಂಗಳೊಳ್ ಕಲರವರಣಿತ-
ಮಣಿನೂಪುರಂಗಳಂ ತುಡಿಸಿ ದಿವಿಜೇಂದ್ರೋತ್ಸಂಗಸಂಗತಂ ಮಾಡಿದಾಗಳ್,

ಪರಮನ ನಿರತಿಶಯಾಂಗ-
ಸ್ವರೂಪಮಂ ನೆಱೆಯೆ ನೋಡಲಾವೆಡೆಗಂ ತ-।
ನ್ನೆರಡುಂ ಕಣ್ಗಳ್ ನೆಱೆಯವೆ
ಸುರೇಂದ್ರನುಂ ಗಡ ಸಹಸ್ರಲೋಚನನಾದಂ ॥೧೦೭॥

ವ॥ ಅಂತು ನಿರ್ವರ್ತಿತಜನ್ಮಾಭಿಷೇಕನನೇಕದುಂದುಭಿಧ್ವನಿಬಧಿರಿತಸಕಲ-
ದಿಙ್ಮಂಡಲನಾಖಂಡಲನಮರಸಮಿತಿವೆರಸಯೋಧ್ಯಾಪುರಕ್ಕಭಿಮುಖನಾದಾ—
ಗಳ್,

ಪರಮಜಿನಸವನಜಲನಿ-
ರ್ಝರಮುಂ ಸುರಬಲಪಯೋಧಿಕಲಕಲಮುಂ ಮಾ-।
ಣ್ದಿರೆ ನೋಡೆ ಬೆಳ್ಪನಿರ್ದ್ದುದು
ಸುರಶೈಲಮದೊಂದು ಮದುವೆಗಳಿಪಿದ ಮನೆವೋಲ್ ॥೧೦೮॥

ವ॥ ಆಗಳ್ ಕಲ್ಪಾಮರೇಂದ್ರಪ್ರಬಲಬಲಸಮಿತಿ ಗಗನತಳದಿಂದಮುಂದಂ-
ಬಡೆದು ವಿನೀತಾಪುರಕ್ಕವತರಿಸಿ,

ಗಗನಾಭೋಗದೊಳೊಪ್ಪಿ ಬರ್ಪ್ಪ ಪಲವುಂ ಯಾನಂಗಳಂ ತೋರ್ಪ್ಪ ವೇ-
ದಿಕೆಗಳ್ಗೆತ್ತು ವಿಲೋಲಕೇತುತತಿಯಂ ಮಿಂಗೆತ್ತು ಮಾದ್ಯದ್ಗಜಾ।
ಳಿಗಳಂ ನಾವೆಯೆ ಗೆತ್ತು ದೇಹರುಚಿಯಂ ರತ್ನಾಂಶುಗೆತ್ತಿಂದ್ರನೆ-
ನೆಗಂಳ ವಾರ್ಧಿಯೆ ಗೆತ್ತು ನೋಡಿದುದು ಬಂದತ್ತಂ ಪುರಸ್ತ್ರೀಜನಂ ॥೧೦೯॥

ವ॥ ಅಂತವತರಿಸಿ ಚಂಚಚ್ಚೀನಾಂಶುಕಮಣಿದರ್ಪ್ಪಣಾನೇಕ[3]ಪ್ರಸೂನ[3]
ಪಲ್ಲವೋಲ್ಲಸಿತವಿವಿಧಮಂಡನಮಾಲಾಲಂಕೃತರಾಜಮಾರ್ಗ್ಗದಿಂದಂ ಪರಿಮಿ-
ತಾಮರೇಂದ್ರಸಮಾಜಂ ಬೆರಸು ರಾಜಭವನಮಂ ಪೊಕ್ಕು,

೧-೧ (ಅ) ಬಾಹುಗೆ ಬಾಹುಯಬುಗಲಕ್ಷ್ಮಿ; (ಬ) ಬಾಹುಗೆ ಬಾಹುಯುಗದೊಳಂ. ೨-೨ (ಚ) ಮಾಣಿಕ್ಯಮಣಿ. ೩-೩ (ಅ,ಬ) ಪ್ರಸವ.

ಕಲಧೌತೋಜ್ಜ್ವಲಕೂಟಕೋಟಿಘಟಿತಶ್ರೀಗೇಹದಿಂ ಮುಂದೆ ಮಂ-
ಗಲಕಾರ್ಯೋಚಿತಮಾಗೆ ಮುನ್ನಮೆ ಸುರಾನೀಕಂ ಜನಂಗಳ್ ಮನಂ।
ಗೊಳೆ ಮಾಡಿಟ್ಟ ವಿಚಿತ್ರಮಂಟಪದ ಸಿಂಹಾಸಂದಿಯೊಳ್ಬಾಲನಂ
ಕುಲಿಶಾಸ್ತ್ರಂ ಪಿರಿದುಂ ವಿಭೂತಿವೆರಸಿಟ್ಟೀಂ ಸಂತಸಂಬಟ್ಟನೋ ॥೧೧೦॥

ವ॥ ಆಗಳ್ ಸುತಮುಖನಿರೀಕ್ಷಣ[೧]ಸಮಯಸಮುಪಜನಿತ[೧]ಪುಲಕಕಲಿಕಾ-
ಕಲಿತಕಲ್ಪವೃಕ್ಷನಪ್ಪ ನಾಭಿರಾಜಮಹೀಜನುಮಿಂದ್ರಾಣೀವದನಚಂದ್ರಚಂದ್ರಿಕಾ-
ವಿಘಟಿತ[೨]ನಿಕೃತ[೨]ನಿದ್ರಾಮುದ್ರಿತನಯನನೀಲೋತ್ಪಲೆಯಪ್ಪ ಜಗದ್ಗುರುಜನ-
ನಿಯುಂ ಬಂದು ನಿಜತನೂಜವದನವನಜಮನಟ್ಟಿತ್ತರ್ ನೋಡಿ,

ಆ ದೊರೆಯ ವಿಭವದೊಳ್ ಪುದ-
ವಾಘರದಿಂ ದಿವಿಜಸಮಿತಿಯುಂ ತಮ್ಮ ಮಗಂ-।
ಗಾದ ಮಹಿಮೆಗೆ [೩]ಮುಸಂಗೊಳ-
ಲಾದು[೩]ತ್ಸವಮರಿದು ಪೊಗೞಲಾದಂಪತಿಯಾ ॥೧೧೧॥

ವ॥ ಆಗಳ್

ದೊರೆನಿಮಗಿಲ್ಲ ಭೂಭುವನದೊಳ್ ಪೆಱರಿರ್ಪರೆ ನೋಂತಿರೀ ಜಗ-
ದ್ಗುರುಗೆ ಪಿತೃದ್ವಯಂಗಳೆನಿಸಲ್ [೪]ನೆಱೆದೊರ್ ಪೆಱರಾರೊ[೪] ನೀವೆ[೫]ಪೂ-।
ಜ್ಯರಿರೆಮಗೆಂದು[೫] ದಿವ್ಯವಸನಪ್ರಸವಾಭರಣಂಗಳಿಂದಮಾ-
ದರಮುಮರ್ಪುಮಂತು ತದ್ದ್ವಯಗಳಮಂ ಪರಿ[೬]ಪೂಜಿಸಿದೊಂ[೬] ಸುರೇಶ್ವರಂ ॥೧೧೨॥

ವ॥ ಅಂತು ಪೂಜಿಸಿ ಜನ್ಮಾಭಿಷೇಕ[೭]ವ್ಯತಿಕರ[೭]ಮನವರ್ಗೆ ಮಹೋತ್ಸಾ-
ಹಕರಮಾಗೆ ಸವಿಸ್ತರಮಱಿಪಿ ಜಾತಕರ್ಮೋತ್ಸವದೊಳ್ ಪರಿಜನಮುಂ ಪುರ-
ಜನಮುಂ ಮೊಸಗೆಸುರುಳ್ಗೊಂಡು ನಿರ್ಭರಕ್ರೀಡಾರಸಪರವಶರಾದಾಗಳ್,

ನೆಲೆಮಾಡಂಗಳೊಳೋಳಿವಟ್ಟ ಗುಡಿಗಳ್ ಗಂಧಾಂಬುವಿಂದಾದ ಪೂ-
ವಲಿಯಿಂ ಚೆಲ್ವೆಸೆದಿರ್ದ್ದ ಬೀದಿಗಳನೇಕಾತೋದ್ಯನಾದಂಗಳೊಳ್।
ನಲಿಯುತ್ತುಂ ಕುಣಿಯುತ್ತುಮಿರ್ಪ್ಪ ಗಣಿಕಾಸಂದೋಹದಿಂ ಚೆಲ್ವನ-
ಗ್ಗಲಿಸುತ್ತಿರ್ತ್ತುವು ತತ್ಪುರಕ್ಕೆ ಸುರರಾಜಾವಾಸಸಾಮ್ರಾಜ್ಯಮಂ ॥೧೧೩॥

೧-೧ (ಅ,ಬ) ಸಮಯಮುದ್ಭುಸಮಯಸಮುಪಜನಿತ. ೨-೨ (ಇ) ನಿಷ್ಕೃತ. ೩-೩ (ಅ,ಬ) ಮಸಂಗಳೊಳಾದು. ೪-೪ (ಅ) ನೆಱದಿರ್ಪೆಱರಾರೊ; (ಚ) ಮೆಱೆವರ್ ಪೆಱರಾರೊ. ೫-೫ (ಬ) ಪೂಜ್ಯರು ನಿಮಗೆಂದು. ೬-೬ (ಅ,ಚ) ಪೂಜಿಸಿದಂ. ೭-೭ (ಇII) ಪ್ರಕಾರ.

ಪುರಜನಮುಬ್ಬೆಯಿಂ ಮುಡಿವ ಕೂಡೆ ತುಱುಂಬುವ ಕಿಂಕಿರಾತಕೀ-
ಖರ[೧]ರಜದಿಂದಮಾದ[೧]ಪಟವಾಸದ ಧೂಳಿಯ ಪರ್ವಿ ನಿಂದಮಾ-|
ಭರಣದ ಮಾಣಿಕಂಗಳ ಪೊದಳ್ದ ರುಣಾಂಶುಗಳಿಂದಮಂದು ಪಿಂ-
ಜರಿತಪಿಶಂಗಿತಾರುಣಿತದಿಙ್ಮುಖಮಾದುದು ತನ್ಮಹೋತ್ಸವಂ ||೧೧೪||

ನೂತನಮಣಿಭೂಷಣಬಾ-
ಲಾತಪಸಿತಮಣಿಮರೀಚಿಚಂದ್ರಾತಪಪಿ-|
ಷ್ಟಾತಕಪರಾಗ[೨]ಪಿಂಜರಿ[೨]-
ತಾತಪಮಯಮಾದುದಾ ಧರಾಧಿಪಭವನಂ ||೧೧೫||

ವ|| ಅಂತು ಪುರಮುಮಂತಃಪುರಮುಮಾದಿಪುರಷಜನ್ಮೋತ್ಸವಸುಧಾಂಬುರಾಶಿಯೊಳ್ ಕೂಡಿ ಮೂಡಿ ಮುೞ್ಕಾಡುವುದಂ ನೋಡಿ ತಾನುಮಾನಂದನಾಟಕಮನಾಡಲ್ ಬಗೆದು ಕೃತಾನುಕರಣಮೆ ನಾಟಕಮಪ್ಪುದಱಿಂ ಭಗವಜ್ಜನ್ಮಾಭಿಷೇಕಸಂಬಂಧಿಯಾಗೆ ತನ್ನ ಪೊಸತೆ ಸಮೆದ [*ಸಮವಕಾರ]ರೂಪಕಮುಮಂ ದಶಾವತಾರ[೩]ರೂಪಕ[೩]ಗರ್ಭಸಂದರ್ಭಂಗಳಪ್ಪ ಶೇಷಾಶೇಷರೂಪಕಂಗಳುಮಂ ಸುರಾಸುರಸಭೆಗಂ ನಾಭಿರಾಜಾದಿಮನುಜಸಭೆಗಂ ಮೆಱೆಯಲೆಂದು [೪]ಶುದ್ಧಚಿತ್ರಮೆಂಬ[೪] ಪೂರ್ವರಂಗಪ್ರಸಂಗದೊಳ್ ಜರ್ಜರಪೂಜಾಮಂಗಲ[೫]ಪದೋಚ್ಚಾರಣ[೫]ಪುಷ್ಪಾಂಜಲಿವಿಕ್ಷೇಪಣಾದಿನಾಂದೀವಿಧಿಯಂ ನಿರ್ವರ್ತಿಸಿ[೬]ದೃಶ್ಯಶ್ರವ್ಯದೃಢಮಾತ್ರಾದಿ[೬]ಪ್ರಯೋಗಂಗಳೊಳಂ ನಾನಾವಿಧವಾದ್ಯಂಗಳೊಳಮಾಂಗಿಕಾಭಿನಯಂಗಳೊಳಮೆಸೆಯೆ ಮಘವನಘವಿಘಾತಾರ್ಥಮುದ್ಧತಾಭಿನಯಪ್ರಾಯಮುಮಾರಭಟೀವೃತ್ತಿಯುಕ್ತಮುಮಪ್ಪ ತಾಂಡವಮನಾಡಲುದ್ಯೋಗಂಗೆಯ್ದು ಮಂಗಲಾಲಂಕಾರಲಂಕೃತನಾಗಿ ನಾಟ್ಯ[೭]ವೇದಾವತಾರಮನೆ[೭] ಪೋಲ್ತು ರಂಗಂಬೊಕ್ಕು,

ಲೋಕಾಕಾರಮನಭಿನಯಿ-
ಪಾಕಾರಂ ನೆಗೞೆ ನಿಂದು ವೈಶಾಖಸ್ಥಾ-|
ನಾಕಾರದೊಳ್ ಮರುದ್ಧ್ರುತ-
ನಾಕುಲಿಶಾಯುಧನದೊಂದು ಚೆಲ್ವಂ ಪಡೆದಂ ||೧೧೬||

---

೧-೧ (ಚ) ರಜನಿಂದೆ ಚಾರು. ೨-೨ (ಅ) ದಿಂ ಜನಿ. ೩-೩ (ಚ) ರೂಪ. ೪-೪ (ಬ) ಶುದ್ಧಪವಿತ್ರಮೆಂಬ; (ಚ) ಶುದ್ಧವಿಚಿತ್ರಮೆಂಬ. (ಕ) ಪಟಹೋಚ್ಚಾರಣ. ೬-೬ (ಅ) ದೃಶ್ಯದ್ರವ್ಯ; (ಬ) ದೃಶ್ಯದ್ರವ್ಯದೃಢಸೂತ್ರಾದಿ. ೭-೭ (ಚ) ವಿದಾಚಾರ್ಯನಂ.

---

*ಇದು (ಅ,ಬ,ಚ) ಪ್ರತಿಗಳಲ್ಲಿ ಸಮವತಾರವೆಂದಿದೆ. ಚಂ. ಪ್ರ. ಪು. ೧೨---೧೭೪ರ. ದಲ್ಲಿ " ವೀರರಸೋಪೇತಮುಮಪ್ಪ ಸಮವಕಾರರೂಪಕಮುಮಂ " ಎಂದಿದೆ.

ಸೂಸಿದ ಪುಷ್ಪಾಂಜಲಿಯುನೆ
ಬಾಸಣಿಸಿದ ಮದಪದಳಿಕುಳಂಗಳ ಚೆಲ್ವಂ।
ಪಾಸಿಸಿದುವು ವಾಸವನ ವಿ
ಲಾಸಂಬೆರಸಡರೆ ತೊಡರೆ ಬಳಸುವ ಕಣ್ಗಳ್ ॥೧೧೭॥

ರಸಭಾವಾಲಸನಯನ-
ಪ್ರಸರಂಗಳ ಪೊಳೆವ ಪೊಳೆಪುಗಳ್ ಬಳ್ಳಿಳ ಸಿ-।
ಳ್ಪಿಸೆದುವು ರಂಗದೊಳೆತ್ತಂ
ಪೊಸಯಿಸುತುಂ ಯವನಿಕಾವಿಲಾಸಮನಾಗಳ್ ॥೧೧೮॥

ಪದವಿನ್ಯಾಸದ ತುಱುಗಲ್
ಪೊದಱೆ ಲಯಂಬೆರಸು ರಂಗಮಂ ಬಳಸಿದನಾ-।
ತ್ರಿದಶಾಧಿನಾಥನಳೆವವೊ-
ಲುದನ್ವದಾವೇಷ್ಟಿತಾಖಿಲಾವನಿತಲಮಂ ॥೧೧೯॥

ವ॥ ಆಗಳ್ ನಾಕಲೋಕವಾದ್ಯಂಗಳೊಳನೇಕಭೇದಂಗಳಪ್ಪುಪವಾದಕ-ಪರಿವಾದಕವಾದ್ಯಂಗಳೊಳ್ ಕಿನ್ನರೀಜನಮಧುರಗೀತಾನು[೧]ಗೀತಂಗಳನು[೧]ಕ್ರಮದೊಳೆ ನೆಗೞೆ,

ಕರಣಂ ರೇಚಕಮಂಗಹಾರಮಿನಿತೆಂದೋದುತ್ತು[೨]ಮಿಪ್ಪೋಱದದ-
ತ್ತ್ರಿಕಲೀ[೨]ನಾಟ್ಯರಸಂ ಸಮಸ್ತಸುರವೃಂದಾಧೀಶನಿಂದಂ ಪೊಸಲ್।
ಪರಿದತ್ತೆಂಬಿನಮಾಡುವಲ್ಲಿ ಮಕುಟವ್ಯಾಲಗ್ನರತ್ನಪ್ರಭಾ-
ಪರಿವೇಷಂ ಲಲಿತೇಂದ್ರಚಾಪರುಚಿಯಂ ಮಾಡಿತ್ತು ದಿಕ್ಚಕ್ರದೊಳ್ ॥೧೨೦॥

ಕುಲಶೈಲಂಗಳ್ ಪದಾಘಾತದೊಳಲುಗುವಿನಂ ತಾರಕಾಸಂಕುಲಂ ತೋ-
ಳ್ಗಳದೊಂದಳ್ಳಿಱನೊಳ್ ಪೂವಲಿವೊಲುದಿರ್ಪಿನಂ ವಾರ್ಧಿಗಳ್ ರೇಚಕೋತ್ಥಾ।
ನಿಲತೀವ್ರಾಘಾತದಿಂದುಚ್ಛಳಿಪಿನೆಮಖಿಲಾಶಾಂತರಂ ದೇವತೂರ್ಯ್ಯಾ-
ವಳಿ[೩]ಗೀತ[೩]ಧ್ವಾನದಿಂದಂ ಪುದುವಿನ[೪]ಮೆಸೆದತ್ತಿಂದ್ರ[೪]ನಾನಂದನೃತ್ಯಂ ॥೧೨೧॥

ಎಳೆಯೊಳ್ ತೋಱದ ರೂಪನಾಗಳೆ ನಭೋಭಾಗಾಗ್ರದೊಳ್ ತೋರ್ಪನಾ
ಗಳೆ ಗೆಂಟಾಗಳೆ ಸಾರೆಯಾಗಿ ಪೊಳೆಪಂ ಸೂಕ್ಷ್ಮಾಂಗನಾಗಿರ್ಪನಾ-।

೧-೧ (ಚ) ಗತಂಗಳನು. ೨-೨ (ಇ) ಮಿಪ್ಪೋಱದನತ್ತ್ರಿಕಲೀ; (ಬ) ಮಿಪ್ಪೋಱದನ-ತ್ತಿರುಳಂ. ೩-೩ (ಅ,ಬ) ಗಾನ. ೪-೪ (ಇ) ಮೊಗೆದತ್ತಿಂದ್ರ.

ಗಳ್ ದಿಗ್ ವ್ಯಾಪಕನಪ್ಪನಿಂತು ಪಲವುಂ [೧]ಚೋದ್ಯಂಗಳಂ[೧] ವಿಕ್ರಿಯಾ-
ಬಳದಿಂದಾಡಿ ಮಹೇಂದ್ರಜಾಲಿಗನುಮಂ ಪೋಲ್ತಂ ಸುರಾಧೀಶ್ವರಂ ||೧೨೨||

ವ|| ಅಂತು ತನ್ನ[೨]ತಾಂಡವಾರಂಭ[೨]ದೊಳ್ ವಿಗಳಿದ ರಾಗದಿಂ ನಿರ್ಮಿಸಿದ ಭುಜಶಾಖಾಸಹಸ್ರಂಗಳೊಳ್ ಪಾಂಗುಡಿವಿಟ್ಟಸಂಗಜಂಗಮಲತೆಗಳನನುಕರಿಸಿ ದೇವಗಣಿಕೆಯರಾಡುವಾಗಳ್

ರಸಭಾವಾಭಿನಯಂಗಳಂ ಭುಜಲತಾಭ್ರೂಚಾಪನೇತ್ರೋತ್ಪಲ-
ಪ್ರಸರಂಗಳ್ ಪಸರಂಗೆಯುತ್ತಿರೆ ಲಸನ್ನೇತ್ರಂಗಳಂ ಕೂಡೆ ಒಂ-|
ಚಿಸುತುಂ ಮೆಟ್ಟುವ ಮೆಟ್ಟಿನೊಳ್ಪು ಜನತಾನೇತ್ರಂಗಳಂ ನಾಡೆ ಚೆ-
ಲ್ವೆಸೆದತ್ತಿಂದ್ರನ ನೀಳ್ದ ತೋಳ್ಜುಗಲೊಳ್ ದೇವಾಂಗನಾನರ್ತನಂ ||೧೨೩||

ಆನಂದಂಬೆರಸಂಕವಚ್ಚರಸಿಯರ್ ದೇವೇಂದ್ರನೈರಾವತಾ-
ಲಾನಸ್ತಂಭಸಮಂಗಳಪ್ಪ ಭುಜಸಂದೋಹಂಗಳೊಳ್ ವೀರಕಾಂ-|
ತಾನೀಕಕ್ಕೆಣೆಯಾಗಿ ಕೂಡೆ ಕುಣಿದರ್ ಮತ್ತಂ ಕೆಲರ್ ನೋಡಿ ಸೂ-
ಚೀನಾಟ್ಯಂಗಳನಾಡಿದರ್ ಖರನಖಪ್ರಾಂತಂಗಳೊಳ್ ಶಕ್ರನಾ ||೧೨೪||

ತ್ರಿದಶಗಣಾಧಿನಾಯಕನ ಪರ್ವಿದ ತೋಳ್ಜುಗಲ್ಗಳೊಳ್ ಪಳಂ-
ಚದೆ ಗಗನಂಬರಂ ನೆಗೆದು [೩]ಸೂಸದೆ[೩] ಬಾಹುಪರಿಭ್ರಮಂಗಳೊಳ್|
ಬೆದಱದೆ ಶಕ್ರನೃತ್ಯದೊಳೊಡಂಬಡೆ ನರ್ತಿಸುವಲ್ಲಿ[೪] ಜತ್ತವ-
ಟ್ಟದ[೪] ಮಣಿಯಂತದೇಂ ಪದುಳವಾದುದೊ ದಿವ್ಯವಧೂಕದಂಬಕಂ ||೧೨೫||

ಯುವಸಂಘಾತಮದೊಂದು ತೋಳ್ಜುಗಲೊಳ್ ಮತ್ತೊಂದು ತೋಳೋಳಿಯೊಳ್
ಯುವತೀವ್ರಾತಮನೇಕಭೇದರಸಭಾವಂಗಳ್ ಪೊದಳ್ದುಣ್ಮೆ ಪ್ರೌ-|
ಣ್ಯಾವಿನಂ ನರ್ತಿಸೆ ಸೂತ್ರಧಾರವಿಧಿಯಿಂ ಸುತ್ರಾಮನಂದಿಂತು ತಾಂ-
ಡವಲಾಸ್ಯಂಗಳ ಚೆಲ್ವನೊರ್ಮೆಯೆ ತದೀಯಾಸ್ಥಾನದೊಳ್ ತೋಱಿದಂ ||೧೨೬||

ವ|| ಅಂತು[೫]ದೇವೇಂದ್ರಕರ[೫]ಸರೋಜಾಕರದೊಳ್ ಸಮುತ್ಫುಲ್ಲಮುಖಪದ್ಮಂಗಳಿಂ ಪದ್ಮಿನಿಗಳೆನಿಸಿ ಸುರೇಂದ್ರತಾರಹಾರಮುಕ್ತಾಫಲಪ್ರತಿಬಿಂಬಿತತನುಗಳಿಂ ವಿದ್ಯಾದೇವತೆಗಳೆನಿಸಿ ದಿವಿಜಸೌಂದರಿಯರ್ ಗೊಂದಣಂ ಮಾಡುವಲ್ಲಿ ಕಡೆಗಣ್ಣೊಳ್ ತುಳುಂಕಿಯುಂ ಕದಪಿನೊಳ್ ಪೊಂಪುಳಿ[೬]ಯೋಗಿಯುಂ[೬]

೧-೧ (ಚ) ಚೋದ್ಯಂಗಳಿಂ. ೨-೨ (ಅ) ತಾಂಡವಾಡಂಬರ. ೩-೩ (ಹ) ಸೂಸುವ. ೪-೪ (ಅ,ಬ) ಜತ್ತಲಟ್ಟದ. ೫-೫ (ಅ,ಬ) ದೇವೇಂದ್ರ. ೬-೬ (ಚ) ಯಾಗಿಯುಂ.

ಭ್ರೂವಿಭ್ರಮದೊಳ್ ಪೊಸಲ್ವರಿದುಮರುಣಾಧರದೊಳ್ ಕೊಳಂಗೊಂಡುಂ ದರಹಸಿತದೊಳ್ ಬೆಳ್ಪಂಗೆಡೆದುಮಂಗ[೧]ರಾಗದೊಳ್ ರಾಗಂ[೧]ಬಡೆದುಂ ಸಿರೀಷ- ದಾಮ[೨]ಕೋಮಲ[೨]ಭುಜಲತೆಗಳೊಳ್ ಪಸರಿಸಿಯುಂ ಘನಸ್ತನಂಗಳೊಳೆಡ- ಪಿಯುಂ ಗಂಭೀರನಾಭಿಯೊಳ್ ಸುಟಿಗೊಂಡುಂ ನಿತಂಬದೊಳ್ ತುಱುಂ- ಬಿಯುಂ ಮೃದು[೩]ಪದದೊಳಾಸ್ಪದಂ ಬಡೆದುಮಾ[೩]ಕೆಗಳಂಗೋಪಾಂಗದೊ- ಳಿಂತು ನಾಟ್ಯರಸಮೆ ತೀವಿ*[೪]ತುಳುಂಕು[೪]ಗುಟ್ಟೆ ದಿವಿಜ[೫]ಸಾಮಾನಿಕಜನಕ್ಕಂ[೫] ನಾಭಿರಾಜಾದಿಮನುಜಸಭೆಗಮತ್ಯಾಶ್ಚರ್ಯಮಂ [೬]ಮಾಡಿದಾಗಳ್[೬],

ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತ್ತಕಂ
ಸುರರಾಜಂ ಸಭೆ ದೇವಮರ್ತ್ಯಸಭೆ ಸಂಪ್ರಾರಾಧ್ಯನೀಶಂ ಜಗ-|
ದ್ಗುರು ತನ್ನೃತ್ಯಫಲಂ ತ್ರಿವರ್ಗ್ಗವಿಭವಂ ತಾನೆಂದೊಡೇಮಾತೋ ಸಾ-
ಸಿರಮುಂ ನಾಲಗೆಯುಳ್ಳನಾಸಕಿಯುಮಿನ್ನೇನೆಂಬನಂ [೭]ಬಣ್ಣಿಸಂ[೭] ||೧೨೭||

ವ|| ಅಂತು ಪುರಂದರನಾನಂದನೃತ್ಯಾವಸಾನದೊಳ್ ಪರಮೇಶ್ವರಂ ಧರ್ಮ್ಮಾಮೃತವರ್ಷದಿಂ ಭವ್ಯಸಸ್ಯಸಮೃದ್ಧಿಯಂ ಮಾಡುವುದಱಿಂ ವೃಷ- ಮೆಂಬುದು ಧರ್ಮ್ಮಮದಱಿಂದೊಪ್ಪುವುದಱಿಂದಂ ಸ್ವರ್ಗ್ಗಾವತರಣಸಮಯ- ದೊಳ್ ನಿಜಜನನೀವದನವನಜಮಂ ಸ್ವಪ್ನದೊಳ್ ಧವಳವೃಷಭಾಕಾರದಿಂ ಪೊಕ್ಕುದಱಿಂದಂ ವೃಷಭಸ್ವಾಮಿಯೆಂದು ಪೆಸರನಿಟ್ಟು ಮಜ್ಜನಮಂಡನವಸ್ತ್ರ- ಕ್ರಿಯೆಗಳ್ಗೆ ದೇವಿಯರನೇ ದಾದಿಯರ್ ಮಾಡಿ ಸಮವಯೋ[೮]ನುರೂಪವೇಷದ ಸುರಕುಮಾರಕರನೊಡನಾಡಿಗಳ್ ಮಾಡಿ ದೇವಸಮಾಜಂ ಬೆರಸು,

ಕ್ರಮದಿಂ ಜನ್ಮಾಭಿಷೇಕೋತ್ಸವಮನಮರಶೈಲಾಗ್ರದೊಳ್ ಮಾಡಿ ಲೋಕೋ-
ತ್ತಮನಂ ಕೊಂಡೊಯ್ದಯೋಧ್ಯಾಪುರದೊಳೊಸಗೆಯಂ ಮಾಡಿ ಜನ್ಮೋತ್ಸವ ಪ್ರ-|
ಕ್ರಮದಿಂದಾನಂದನೃತ್ಯ ಪ್ರಮದಮನಧಿಕಂ ಮಾಡಿ ತನ್ನಿಂದ್ರಲೋಕ-
ಕ್ಕಮರೇಂದ್ರಂ ಪೋದನಾಗಳ್ ಸುಕವಿಜನಮನೋಮಾನಸೋತ್ತಂಸಹಂಸಂ ||೧೨೮||

೧-೧ (ಚ) ರಾಗದೊಳ್ ರಂಗಂ. ೨-೨ (ಚ) ಕೋಮಲೆಯರ. ೩-೩ (ಚ) ಪದ- ದೊಳಂದಂ ಬಡೆಮಂ ಆ. ೪-೪ (ಅ) ತಳ್ಪುಂಕಂ; (ಬ) ತಳಂಕು. ೫-೫ (ಅ) ಸಮಾಜಕ್ಕಂ. ೬-೬ (ಅ) ಮಾಡಿಸುಮ; (ಬ) ಮಾಡುಱುಮಂ. ೭-೭ (ಬ) ಬಣ್ಣಿಪೊಂ. ೮ (ಚ) ಯಾ.

* ಅನಂತನಾಥಪುರಾಣ. ೫-೯೯ ರಲ್ಲಿ 'ತಳ್ಪುಂಕಗುಟ್ಟಿತ್ತು' ಎಂದಿದೆ.

ವ|| ಅನ್ನೆಗಮಿತ್ತಲ್,

ಕಿವಿಗಿಂಪಂ [1]ತೊದಳೊಳ್[1] ಪೊದಟ್ಟ ನುಡಿಗಳ್ ಕಣ್ಗಿಟ್ಟಿಕೆಯಿಂ ರಾಗದಾ-
ಡುವ ಕೂಸಾಟದ ಚೆಲ್ವುಗಳ್ ಕುಡೆ ಪಿತೃದ್ವಂದ್ವಕ್ಕೆ ನಿಚ್ಚಂ[2] ಸಮು-।
ದ್ಭವನಂ[2]ಬಂಧುಜನಕ್ಕೆ ಮುಗ್ಧಮುಖಚಂದ್ರಾಲೋಕಮಾಲೋಕನೋ-
ತ್ಸವಮಂ ಪೆರ್ಚಿಸೆ [3]ಬಾಲ[3]ನಿಂತೊದವಿದಂ ಸಂಸಾರಸಾರೋದಯಂ ||೧೨೯||

ಗ|| ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ-
ಚಂದ್ರವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣ್ಣಸೂಕ್ತಿ-
ಕಲ್ಲೋಲಮಾಲಾಕೀರ್ಣ್ಣಕವಿತಾಗುಣಾರ್ಣ್ಣವ-
ಪ್ರಣೀತಮಪ್ಪಾದಿಪುರಾಣದೊಳ್
ಮಹೇಂದ್ರನಾನಂದನೃತ್ಯಂ
ಸಪ್ತಮಾಶ್ವಾಸಂ
ಸಂಪೂರ್ಣಂ

೧-೧ (ಅ,ಬ) ಕೊದಳೊಳ್. ೨-೨ (ಚ) ಮನೂದ್ಭವನುಂ. ೩-೩ (ಚ) ಜಾಣ.

# ಅಷ್ಟಮಾಶ್ವಾಸಂ

ಶ್ರೀಪತಿ ಸುರಚಾರಕರೊಡ-
ನಾಪ್ರೊತ್ತುಂ ನೆಱೆದು ರತ್ನಧೂಳೀಪಟಲ-।
ವ್ಯಾಪಿತತನು ಮೃದುಮುಗ್ಧಾ-
ಲಾಪಂ ಬಳೆದಂ ಸರಸ್ವತೀಮಣಿಹಾರಂ ॥೧॥

ಕನಕಮಣಿಕಿಂಕಿಣೀಮೃದು-
ನಿನದಂ ಕಟಿತಟದೊಳೆಸೆಯೆ ದಾದಿಯರೊಡನಂ-।
ದಿನಿಸಂ ನಡೆಯಿಸೆ ಲಲಿತೇಂ-
ದ್ರನೀಲಮಣಿಭೂಮಿಯೊಳ್ ತಳರ್ನಡೆ ನಡೆದಂ ॥೨॥

ಸರಸಿಜದಿಂ ಮಕರಂದ-
ಸ್ಫುರಿತಂ ಪುದಿಮೊದವಿದಪ್ಪುದೆಂಬಿನಮುದ್ಯತ್।
ಪರಿಮಲಮುಖಸರಸಿಜದೊಳ್
ದರಹಸಿತಂ ನೆಗೞ್ವಿನಂ ತೊದಳ್ನುಡಿ ನುಡಿದಂ ॥೩॥

ವ॥ ಅಂತು [೧]ಬಾಲ್ಯ[೧]ಕಾಲಮಂ ಬಾಲಕೇಳೀಲೀಲೆಯಿಂ ಕಳಿಪಿ ಕುಮಾರಕಾಲದೊಳ್ ಸುಕುಮಾರಪರಿವೃತಂ [೨]ಸಹೋತ್ಪನ್ನ[೨]ಮತಿಶ್ರುತಾವಧಿಬೋಧನಪ್ಪುದಱಿಂ ವಿಶ್ವವಿದ್ಯೇಶ್ವರನುಮ[೩]ವಗತಾ[೩]ನೇಕಲೋಕ[೪]ವ್ಯಾಪಾರನುಂ[೪] ಜನ್ಮಾಂತರಾಭ್ಯಸ್ತಕಲಾಕುಶಲನುಂ ಪ್ರತ್ಯಕ್ಷೀಕೃತಸಕಲವಾಙ್ಮಯನಪ್ಪುದಱಿಂದಂ [೫]ಛಂದೋವಿಚಿತ್ರ್ಯಲಂಕಾರ[೫]ಪದ[೬]ವಿವಾದ[೬]ಕಾವ್ಯಗೀತನೃತ್ಯಾತೋದ್ಯಾದಿ [೭]ಚತುಷ್ಷಷ್ಟಿ[೭]ಕಳೆಗಳೊಳಂ ಶುಕಶಿಖಂಡಿಹಂಸಸಾರಸಕ್ರೌಂಚಚಕೋರಕಲಭಮಲ್ಲಾದ್ಯನೇಕಾಕಾರವಿಕೃತಾಮರಕುಮಾರ [೮]ಪರಿಗತ[೮]ನಟನಮೃದುಕೂಜಿತ[೯]ರಸಿತದರಹಸಿತ[೯] [೧೦]ಕ್ರೇಂಕಾರಾ[೧೦]ರೋಹಣಾಯೋಧನಾದಿನಾನಾವಿನೋದಂಗಳೊಳಮಮರಾಧಿಪ[೧೧]ಪ್ರಹಿತ[೧೧]ಸುರತರುಪ್ರಸೂನಗ್ರಥಿತಸುರಭಿಮಾಲ್ಯದುಕೂಲಾಂಬರವಿಚಿತ್ರಭೂಷಣಸುರಭಿವಿಲೇಪನಪ್ರಮುಖಭೋಗೋಪಭೋಗಂಗಳೊಳಂ ಪ್ರತಿದಿನಪ್ರವರ್ದ್ಧಮಾನತನುವಯೋವಿಭವನನುಕ್ರಮದೊಳ್ ಬಳೆಯೆವಳೆಯೆ,

---

೧–೧ (ಅ,ಬ) ಬಾಲ. ೨–೨ (ಚ) ಮಹೋತ್ಪನ್ನ. ೩–೩ (ಚ) ಪಗತಾ. ೪–೪ (ಚ) ವ್ಯಾಪಾರಕನುಂ. ೫–೫ (ಬ) ಛಂದೋಲಂಕಾರ; (ಚ) ಛಂದೋವಿದ್ಯಾಲಂಕಾರ. ೬–೬ (ಚ) ವಿಚಾರ. ೭–೭ (ಚ) ಗೋಷ್ಠಿ. ೮–೮ (ಅ) ಪರಿಪತನ. ೯-೯ (ಅ) ರಸಿಕರಸಿತರಚಿತ. ೧೦–೧೦ (ಅ) ಕ್ರೌಂಕಾರಾ. ೧೧–೧೧ (ಚ) ಪ್ರಹಿತಪ್ರತಿದಿನಪ್ರವರ್ಧಮಾನ.

ಕರಿಕಲಭಂ ಮದದ್ವಿರದಲಕ್ಷ್ಮಿಯೊಳೊಂದಿದ ಪೋಲ್ ಕಿಶೋರಕೇ-|
ಸರಿಮೃಗರಾಜಲೀಲೆಯೊಳಳಂಕರಿಸಿರ್ದ್ದವೊಲೆಯ್ದೆ ಮುಗ್ಧಸೌಂ-|
ದರಸುರಭೂರುಹಂ ಕುಸುಮಶೋಭೆಯೊಳಗ್ಗಲಿಸಿರ್ದ್ದ ಪೋಲ್ ಮನೋ-|
ಹರಮೆನಿಸಿತ್ತು ಯೌವನವನೋದಯಮಿಂದ್ರನರೇಂದ್ರವಂದ್ಯನಾ ||೪||

ವ|| [೧]ಅಂತು ನಿಸ್ಸ್ವೇದನಿರ್ಮ್ಮಲಕ್ಷೀರಗೌರಕ್ಷತಜಸಮಚತುರಸ್ರಸಂಸ್ಥಾನವಜ್ರವೃಷಭನಾರಾಚಸಂಹನನನುಂ, ಸುರೂಪಸುರಭಿಸ್ವಸ್ತಿಕನಂದ್ಯಾವರ್ತ್ತಾದ್ಯಷ್ಟೋತ್ತರಶತಲಕ್ಷಣಲಕ್ಷಿತತಿಲಮಸೂರಿಕಾಪ್ರಭೃತಿನವಶತವ್ಯಂಜನರಂಜಿತತಪ್ತತಪನೀಯನಿಕಾಶವರ್ಣ್ಣಸಂಪೂರ್ಣ್ಣಶರೀರನುಮಪಾರವೀರ್ಯ್ಯನುಂ, ಶಸ್ತ್ರಪಾಷಾಣಾತಪವರ್ಷವಿಷಾಗ್ನಿಕಾಷ್ಠಕಂಟಕತ್ರಿದೋಷಸಂಭವಾಮಯಜರಾದಿಬಾಧಾವಿದೂರನುಂ, ಮೃದುಮಧುರಗಂಭೀರೋದಾರಪ್ರಿಯಹಿತವಚನನುಂ, ಚತುರುತ್ತರಾಶೀತಿಪೂರ್ವ್ವಲಕ್ಷೋಪಲಕ್ಷಿತಾನಪವರ್ತ್ಯಾಯುಷ್ಯನುಮಾಗಿ[೧],

ಪರಮೌದಾರಿಕದಿವ್ಯಮೂರ್ತ್ತಿ ವಸನಾಲಂಕಾರಮಂದಾರಶೇ-
ಖರರಮ್ಯಂ ಧೃತಯೌವನಂ ಮರುಳಿಸಲ್ ತಾನಾರ್ತ್ತಮತ್ಯಂತಸೌಂ-
ದರಕಾಂತಾಜನಮಂ [೨]ಮರುಳ್ದು[೨]ದಣಿವಿಲ್ಲಂತಾಕೆಗಳ್ಗೇನಿದ-
ಚ್ಚರಿಯೋ ಚಿತ್ರದ ರೂಪೆ ರೂಪವಿಭವಂ ಮುಕ್ತ್ಯಂಗನಾಕಾಂತನಾ ||೫||

ಅನಿವಿರಿದೊಂದು ಯೌವನಮದಕ್ಕಿಡೆಯಾಗಿಯು[೩]ಮಂದು ರಾಗ[೩]ಸಂ-
ಜನನಮನೆಯ್ದೆ[೪] ತಾಳ್ದಿದವಿನಶ್ವರಕೀರ್ತ್ತಿ[೪]ಯೊಳಂ ಸರಸ್ವತೀ-|
ವನಿತೆಯೊಳಂ ವಿಚಾರಿಸೆ ತಟಿದ್ದ್ಯುತಿ[೫]ಚಂಚಲೆ[೫]ಯೆಂಬುದೊಂದು ಭಾ-
ವನೆಯೊಳೆ ರಾಜ್ಯಲಕ್ಷ್ಮಿಯೊಳನಾದರನಾಯ್ತು ಮನಂ ಜಿನಾತ್ಮನಾ ||೬||

ವ|| ಅಂತು ಪರಮಾತಿಶಯರೂಪರಸಗಂಧಸ್ಪರ್ಶಗುಣವತ್ಪರಮಾಣು[೬]ಪರಿನಿರ್ಮ್ಮಿತ[೬]ಮೂರ್ತ್ತಿಯಪ್ಪ ಪರಮನ ಪರಿಪೂರ್ಣ್ಣಯೌವನಶ್ರೀಯಂ ನಾಭಿರಾಜಂ ನೋಡಿ,

ವನಿತಾಚಿತ್ತವಿಕಾರಕಾರಿ ನೆಱೆದತ್ತೀಗಳ್ ಕುಮಾರಂಗೆ ಯೌ-
ವನಮೀತಂಗೆ ವಿವಾಹಮಂಗಳಮನಾಂ ಮಾಡಲ್ಕೆವೇಳ್ಕುಂ ತಪೋ-|
ವನಮಂ ಗಂಧಗಜಂ ವನಂಬುಗುವ ಪೋಲ್ ಪೊಕ್ಕಾಗಳೀಗೆಯ್ವುದೀ-
ತನ ಚಿತ್ತಕ್ಕಮನಂಗರಾಗರಸಮಂ ಮಾೞ್ಪಂದಮಿನ್ನಾವುದೋ ||೭||

ಕುಲರೂಪವಿಭವಯೌವನ-
ವಿಲಾಸವತಿ ಪೇೞಾ ಮಾವಳಿನ್ನೀತನನಾ-|

೧-೧ (ಚ) ಪ್ರತಿಯಲ್ಲಿಲ್ಲ. ೨-೨ (ಚ) ಮಗುಳ್ದು. ೩-೩ (ಬ) ಮಂತರಂಗ. ೪-೪ (ಅ) ತಾಳ್ದಿದುದನಶ್ವರಕೀರ್ತ್ತಿ; (ಬ) ತಾಳ್ದಿದನಶ್ವರಕೀರ್ತ್ತಿ. ೫-೫ (ಅ,ಬ) ಸಂಚಲೆ. ೬-೬ (ಬ) ಪರಿನಿರ್ವೃತ; (ಚ) ಪರಿವೃತ.

[೧]ಕ್ಷ್ಮೆಳೊ ಚಿತ್ತ[೧]ಸರೋವರದೊಳ್
ಕಳಹಂಸೆವೊಲಗಲದಕ್ಕಱಿಂ ರಮಿಯಿಸುವಳ್ ॥೮॥

ವ॥ ಎಂದು ತನ್ನ ಮನದೊಳ್ ಬಗೆದು ಸಕಲವಿಷ್ಟಪಪ್ರಣೂತನನಿ-ತನನಂ[೨]ತದೊಳನಂತರಾಯು[೨]ಪರಮಾನಂದಸಮಯದೊಳ್ ಮುಕ್ತಿಸಾಮ್ರಾಜ್ಯ-ದೊಳತಿಪ್ರಾಜ್ಯಸಂಜನಿತಸ್ಪೃಹನನ[೩]ಪಾರಪಾರಾವಾರಕುಲ್ಯಾಪರೀಕ್ಷೇಪ[೩]ಪರಿ-ಮಿತದೊಳ್ ನಿರಂತರಂ ತಂತ್ರಾವಾಪಚಿಂತಾಂತರಾಯಪ್ರಾಯಸುಖಲವದೊಳೀ-ಮಹೀತಲರಾಜ್ಯದೊಳ್ ನಿಱಿಸುವುದುಂ ಮದುವೆನಿಱಿಸುವುದುಮೆ ನಗಕಕ್ಷ್ಯಾಸ-ಸ್ಥಾನಮಾದುದೆಮ್ನ ಬಗೆದ ಬಗೆಯನೊಡಂಬಡುಗುಮೊಡಂಬಡನೆಂಬ ಸಂಭ್ರ-ಮದೊಳಾಸ್ಥಾನಮಂಡಪಮಂಡನೀಭೂತಮಣಿಮಯಾಸನಪ್ರಾಚ್ಯಾಚಲಶಿಖಂ-ಡರತ್ನಮಾಗಿರ್ದ್ದ ಕುಮಾರನಂ ಸಾರೆವಂದು ಯಥೋಚಿತಹೇಮಾಸನದೊಳ್ ಕುಳ್ಳಿರ್ದ್ದ ನಾಭಿರಾಜಂ,

ಉದಯಾಚಲಕ್ಕೆ ಪೆಸರಿನ-
ನುದಯದಿನಾದಂತಿರೆಮಗೆ ಗುರುಗಂ ಗುರುವೆಂ-।
[೪]ಬೊದವಿದ[೪]ಪೆಂಪಿದು [೫]ನಿನ್ನೊಂ-
ದುದಯದಿನಾಯ್ತ್ತಮರಮೌಳಿ[೫]ಲಾಲಿತಚರಣಾ ॥೯॥

ತುಂಗಭವದ್ಬೋಧದ ಬೆಳ-
ಗಿಂಗೊಳಗಪ್ಪನಿತನೆಮ್ಮ ಬಗೆ ಪುಗದು ತಮಂ।
ಪಿಂಗೆ ದಿನಪತಿಯ ಬೆಳಪ ನ-
ಭೋಂಗಣಮಂ ಜ್ಯೋತಿರಿಂಗಣಂ ಬೆಳಗುಗುಮೇ ॥೧೦॥

ವ॥ ಅದೊಡಂ,

ಇದು ದಲವಸ್ತುವೆನ್ನದೆ ಮದುಕ್ತಿಯನೊಯ್ಯನೆ ಕೇಳ್ದು ದಿವ್ಯಚಿ-
ತ್ರದೊಳವಧಾರಿಸೆಂತೆನೆ ಜಗದ್ಗುರು ಲೋಕಹಿತಾರ್ಥದಿಂದೆ[೬] ಸ-।
ಲ್ವುದು[೬] ದಲಿಮಿಂತಿದಂ ಬಗೆದು ಪುತ್ರಕಲತ್ರಪರಿಗ್ರಹಕ್ಕೆ ಮಾ-
ಣದೆ ಬಗೆದಪ್ಪುದೊಳ್ಳಿದನೆಂದೊಡೆ ಸೃಷ್ಟಿಯೆ ಕೆಟ್ಟು ಪೋಗದೇ ॥೧೧॥

ಮನುಮಾರ್ಗ್ಗನಿಪುಣನೆನಿಸಿದ
ನಿನಗಾಮೀರಾಜಮಾರ್ಗ್ಗಮಂ ತೋಱಿದೆ ಜಗ-।
ಜ್ಜನಕೆ ನಗೆಯಲ್ತೆ ಕಲಭಂ
ವನಪಥಮಂ ಯೂಥಪತಿಗೆ ತೋರ್ಪ್ಪಂತಕ್ಕುಂ ॥೧೨॥

---

೧-೧ (ಅ) ಕುಳ ಚಿತ್ತ; (ಬ) ವಳ ಚಿತ್ತ. ೨-೨ (ಬ) ತರದೊಳನಂತರಾಯು; (ಜ) ತರಾಯುಮಾನ. ೩-೩ (ಅ) ವಾರಪಾರಕುಲ್ಯಾಪರಿಕ್ಷೇಪ, (ಜ) ವರತಕಲ್ಯಾಣ. ೪-೪ (ಜ) ದೊಪವಿವ. ೫-೫ (ಅ,ಬ) ನಿನ್ನುದಯದಿನಾದುದು ದಿವಿಜಮೌಳಿ ೬-೬ (ಅ,ಬ) ಸಲ್ವುದೆ.

ಶಾಂತಾತ್ಮ ಮದುವೆನಿಲ್ ನೀ-
[೧]ನಿಂತೆನ್ನ[೧] ಗೃಹಸ್ಥಧರ್ಮದಿಂದಂ ನೀನೆಂ-|
[೨]ತಂತೆ[೨] ಸಲೆ[೩]ನೆಗಟ್ಟಿ[೩] ಜಗತೀ-
ಸಂತತಿ ನಿಲೆ [೪]ನಿನಗೆ[೪] ಧರ್ಮ್ಮಸಂತತಿ ನಿಲ್ಕುಂ ||೧೩||

ಸುತನೆಂಬ ಮೋಳದಿಂ ನಿನ-
ಗತರ್ಕ್ಯಬೋಧಂಗೆ ಯುಕ್ತಿಯಂ ತೋಱಿ ಜಗ-|
ನ್ನುತ ನೋಡ ನನ್ನಿಯಾಮದು
ಸುತಂಗೆ ಕಥೆವೇೞ್ದರೆಂಬ ನಾೞ್ನುಡಿ[೫]ಜಗದೊಳ್[೫] ||೧೪||

ಎನೆ ದೇವನ ದರಹಸಿತಾ-
ನನದೊಳೆ ತನಗಿಂಬುಕೆಯ್ದ ಬಗೆಯಂ ಪದಿನಾ-|
ಲ್ಕನೆಯ ಮನು ಜಲಕನಱಿದಂ-
ದನಿತುಂ ಭುವನಮುಮನಾಗಳಾಳ್ದಂತೊಸೆದಂ ||೧೫||

ವ|| ಅಂತು ತನ್ನುಪರೋಧದೊಳಂ ಪ್ರಜಾನುಗ್ರಹಬುದ್ಧಿಯೊಳಂ ಪ್ರೋಗಲಾಱದೊಡಂಬಟ್ಟಾದಿಪುರುಷನೊಡಂಬಡನಱಿದು ನಿಶ್ಶಂಕನಾಗಿ ದಿವಿಜೇಂದ್ರನನುಮತದೊಳ್ ಕಚ್ಛಮಹಾಕಚ್ಛರ ತಂಗಿಯರಪ್ಪ[೬]ಯಶಸ್ವತಿಯುಂ ಸುನಂದೆಯುಮೆಂಬ[೬] ಕನ್ಯಾ[೭]ರತ್ನಯುಗಳಮಂ[೭] ಮಹೋತ್ಸಾಹದಿಂದ[೮] ಮೆರೆದು[೮] ದೇವೇಂದ್ರ[೯]ಶಿಲ್ಪಿಗಳ್[೯] ಸಮೆಯಿಸಿದ ಪಂಚರತ್ನಮಯವಿವಾಹಮಂಟಪದೊಳೆಡೆಯಱಿದುನಿಱಿಸಿದ ಕನಕರಜತಮಯಾನೇಕಭಂಗಿಭೃಂಗಾರಂಗಳುಮವಱೊಳ್ ಸಂಗತಂಗಳಾಗಿ ಮಣಿವಿತಾನನಾನಾಮಯೂಖಂಗಳೊಳ್ ಸೆಣಸಿ ಬೆಳಗುವ ಮಣಿಮುಕುರಂಗಳುಮವಕ್ಕೆ [೧೦]ಪಾಂಗಾಗಿ[೧೦] ಪಚ್ಚೆಯ ಪಸಲೆಯು ಪಸುರನಸಕಳಿಪ ನಿಮಿರ್ದ [೧೧]ನೆಲೆ[೧೧]ವಡಲಗೆಯ ಜಾಗಂಗಳುಮವನೆ ಸಂಗಡಂಗೊಂಡಿರ್ದ [೧೨]ಸತ್ತ್ರಿ[೧೨]ಸಂಗಡಂಗಳುಮವಱ ಕೆಲದೊಳನೇಕನಾಕಲೋಕೋದ್ಯಾನಪಲ್ಲವೋಲ್ಲಾಸಿತಂಗಳುಂ ಪದ್ಮಾದಿಸರೋವರಮಂಗಲಜಲ[೧೩]ವಿಲಸಿತಂಗಳುಮಾಗಿ[೧೩] ಸರ್ವ್ವಧಾನ್ಯದ ವಿವಾಹ[೧೪]ವೇದಿಕೆಯ[೧೪] ನಾಲ್ಕುಂ ದೆಸೆಯುಮನಲಂಕರಿಸಿರ್ದ ಪೂರ್ಣ್ಣಕಲಶಂಗಳುಮ[೧೫]ವನಲಂಕರಿಸಿದ[೧೫] ವಧೂವರರ ರಾಗಾಂಕುರಂಗಳಿಪ್ಪಂತಿರ್ದ ರತ್ನಪ್ರದೀಪಂಗಳುಮೆಸೆಯೆ ಬಳಸಿದ ಜೆಂಬೊನ್ನ ಪಾಂಗಾಯ

೧-೧ (ಇ,ಬ) ನೆಂತೆಂನ. ೨-೨ (ಚ) ತಂತೆ. ೩-೩ (ಅ,ಬ) ನೆಗಟ್ದು. ೪-೪ (ಚ) ನಿಸ್ಸ. ೫-೫ (ಇ,ಬ) ಯೆನ್ನೊಳು. ೬-೬ (ಚ) ಯಶಸ್ವತಿಮಹಾದೇವಿಯುಂ ಸುನಂದಾಮಹಾದೇವಿಯುಮೆಂಬ. ೭-೭ (ಚ) ರತ್ನಂಗಳಂ. ೮-೮ (ಚ) ಮೆರಡುದೆಸೆಯೊಳಿರ್ದ. ೯-೯ (ಅ) ಶಿಲ್ಪಿಗಳಿಂ; (ಚ) ಶಿಲ್ಪಿಗಳ್. ೧೦-೧೦ (ಚ) ತಾಂಗಾಗಿ. ೧೧-೧೧ (ಇ,ಬ) ನೆಲ. ೧೨-೧೨ (ಬ) ಪತ್ತಿ. ೧೩-೧೩ (ಅ) ವಿಲಾಸಿಗಳುಮಾಗಿ. ೧೪-೧೪ (ಚ) ವೇದಿಕೆಯ ಮೇಲೆ. ೧೫-೧೫ (ಚ) ವನಳಂಕಾರಿಸಿ.

ಗೊಂಚಲ್ಗಳ ಪೊಂಪಳಿರ ತೊಂಗಲ್ಗಳ ಸುತ್ತುಂ[೧]ಗೊಂಡ ಸರಿಗೆಯುಂ[೧] ಮುತ್ತಿನ [೨]ಜುಂಬುಕಂಗಳ[೨] ನಡುವೆ,

ಕಡೆಯಿಕ್ಕಿದ ಬಿಡುಮುತ್ತಿನ
ಪೊಡರ್ಪುಣ್ಮುವ ಬೆಳಗು ಪೊಳೆವ ಮುಗುಳದ ಪಸೆಯೊಳ್।
ತೊಡರ್ದಿರೆ ಪೆಱತಲ್ತಿದೆ ಪಾಲ್-
ಗಡಲೆನಿಸಿದುದಾವಿವಾಹವೇದಿವಿಲಾಸಂ ॥೧೬॥

ಭೃಂಗಾರಹೇಮಚಾಮರ-
ಮಂಗಲ[೩]ದರ್ಪಣಮಣಿ[೩]ಪ್ರದೀಪಂಗಳ ಜಾ-।
ಗಂಗಳ ದೇವಾಂಗ-ವಿತಾ-
ನಂಗಳ ತುಱುಗಲ್ ಬೆಡಂಗು[೪]ವೆತ್ತಿತ್ತವಱೊಳ್[೪] ॥೧೭॥

ರಂಜಿಸೆ ಚರಣಾಲಕ್ತಕ
ರಂಜನೆ ಮಣಿಕುಟ್ಟಿಮಂಗಳಂ ಸುರಗಣಿಕಾ-।
ಗುಂಜನ್ಮಣಿರಶನಾಮಣಿ-
ಮಂಜೀರಕಮಂಜುಸಿಂಜಿತಂ ರಂಜಿಸುಗುಂ ॥೧೮॥

ಪರಿಪೂರ್ಣೋತ್ಸವಮುತ್ಸವ-
ಮುರಜಧ್ವನಿಯಿಂದಮಾವಧೂವರರಂ ಪ್ರೋ-।
ಬರವೇೞ್ಪೆಂಬಂತಿರ್ದುದು
ಸುರವಾರಸ್ತ್ರೀವಿಲಾಸಪರಿಣಯನಗೃಹಂ ॥೧೯॥

ಸುರಸಂಗೀತಕಮತ್ತಮೊಂದು ದೆಸೆಯೊಳ್ ಮತ್ತೊಂದು ದಿಗ್ಭಾಗದೊಳ್
ನರಸಂಗೀತಕಮೊಂದು ಮೆಯ್ಯೊಳಮರರ್ ಮತ್ತೊಂದು ಮೆಯ್ಯೊಳ್ ನರರ್-
ನೆರೆದಿಂಬಾಗಿರೆ ದೇವಮಾನವಸಭಾಸಂದೋಹದಿಂ ನಾಡೆಯುಂ
ಪೆರಭಾಗಂಬಡೆದೇಂ [೫]ಬೆಡಂಗಿಡಿದುದೋ[೫] ತನ್ನಾಭಿರಾಜಾಲಯಂ ॥೨೦॥

ನರಾಮರವಧೂಜನಂ [೬]ಬೆರಸಿ[೬] ರಾಗದಿಂ ಪಾಡೆ ನೋ-
ೞ್ಪರಲ್ಲಿ ಪಿರಿದೊಂದು ಸಂದೆಯಮದೆ ನೋಡೆ ಪೋಗಿಂತಿವಳ್।
ನರಾಂಗನೆಯಿವಳ್ ಸುರಾಂಗನೆ ದಲೆಂಬಿನಂ ಮಾಡುಗುಂ
ಕರಂ ಮನದೊಳಲ್ಲಿ ಮರ್ತ್ಯರಮಣೀಶ್ರಮಾಂಭಃಕಣಂ ॥೨೧॥

೧-೧ (ಅ) ಗೊಂಡಿರ್ದ ಸರಿಗೆಯು. ೨-೨ (ಬ) ಲಂಬಣಂಗಳ; (ಚ) ಬುಂಭುಕಂಗಳ. ೩-೩ (ಚ) ಮಣಿದರ್ಪಣ. ೪-೪ (ಚ) ವಡೆದತ್ತದಱೊಳ್. ೫-೫ (ಅII) ಬೆಡಂಗೆಸೆದುದೊ. ೬-೬ (ಅ,ಬ) ಬೆರಸು.

ಇದು ಜನ್ಮಸ್ನಪನಕ್ಕೆ ನೂರ್ಮಡಿ ಮಿಗಿಲ್ ಕಲ್ಯಾಣಮೆಂದಱ್ಕಱಿಂ
ತ್ರಿದಶೇಂದ್ರಂ ತ್ರಿದಶಾಪ್ಸರಃಪರಿವೃತಂ ಬಂದಾ ವಿವಾಹಕ್ಕೆ ತ-।
ಕ್ಕುದನಱ್ಕೆತ್ತರ್ಗೆ ನಿರಂತರಂ ಸಮಱಿದಂ ಪೆಣ್ದಂಡಮಿಂದ್ರಾಣಿಯಿಂ-
ದುದನೆಂಬೆಂವೆಡೆಮಾತುತಿಪ್ಪುರ್ದೆನೆ ಪತ್ತೀನೆಂದವಂ ಬಣ್ಣಿಪೆಂ ॥೨೨॥

—। [೧]ಅಂತಸಮಱಿದೊಸಗೆ[೧]ಯೊಳಮರರಾಜನುಂ ಸನಾಭಿಗಳ್ ವೆರಸು-ನಾಭಿರಾಜನುಂ ಬಂದು ವಿಲಾಸವತಿಯೆನಿಸಿದ ಯಶಸ್ವತಿಯೊಳಂ ಮನೋನಯನಾನಂದೆಯೆನಿಸಿದ ಸುನಂದೆಯೊಳಮೊಂದೇ ಪಸೆಯೊಳ್ ಪಾಣಿಗ್ರಹಣಂಗೆಯಿಸಿದಾಗಳ್,

ಅತನುಶ್ರೀಕಾಮಿನೀದರ್ಪಣಮೆನಿಸುವ ತದ್ವಕ್ತ್ರಶೀತಾಂಶು ನೇತ್ರಾ-
ಸಿತನೀರೇಜಾತಯುಗ್ಮಸ್ಮೃತಸಲಿಲಸಂಸೇಕಮಂ ಮಾಡೆ ಪಲ್ಪ।
ಪ್ರತತೀ[೨]ಸಂಸಕ್ತ[೨]ಕಲ್ಪಕ್ಷಿತಿರುಹಮೆನೆ ಪ್ರೋಲ್ಲಿದ್ಧನಾಕಾಂತೆಯರ್ ತ-
ತ್ಪ್ರತಿರಾಗಂ ಪೆರ್ಚ್ಚೆ ತನ್ನಿಕ್ಕೆಲದೊಳಮಿರೆ ತನ್ನಾಭಿರಾಜಾಗ್ರಪುತ್ರಂ ॥೨೩॥

॥ ಅಂತಾಜಗತ್ಪವಿತ್ರಚರಿತ್ರಕ್ಷತ್ರನಂದನೆಯರೊಳಾನಾಭಿರಾಜನಂದನನಾನಿಜಕುಲತಿಲಕೆಯರೊಳಾಮನುಕುಲತಿಲಕನಾಮಧುಕರನಿಕರಕಾಂತಕುಂತಲಾಲಂಕೃತಾರ್ಧೇಂದುಸೌಂದರಲಲಾಟೆಯರೊಳಾಕುಟಿಲಕುಂತಲಮಂಡಿತವಿಪುಲಲಲಾಟನಾವಿಕಚನೀಚಕೋತ್ಪಲಲೋಚನೆಯರೊಳಾವಿಮುಕುಲಕಮಲದಲ[೩]ವಿಲೋಲ[೩]ಲೋಚನನಾಚಂಪಕಕಲಿಕಾವಿಲಾಸನಾಸಿಕಾವಂಶೆಯರೊಳಾಲಾವಣ್ಯಾಂಭಃಪ್ಲವಪ್ರಣಾಲಾಯಮಾನೋತ್ತುಂಗನಾಸಾವಂಶನಾಮದನಮಂಗಲಮುಕುರಾನುಕಾರಿಕಪೋಲತಳೆಯರೊಳಾಕಲ್ಯಾಣಕಾರ್ತಸ್ವರಾದರ್ಶಸದೃಶಕಪೋಲತಲನಾಮಣಿಮಯಕುಂಡಲಮರೀಚಿಮಂಜರೀಮನೋಹರಕರ್ಣೆಯರೊಳಾಪರಾರ್ಧ್ಯರತ್ನಕರ್ಣಪೂರಮಯೂಖಪ್ರವಾಹಸಂದೋಹಾಲಂಕೃತಕರ್ಣನಾಪರಿಸ್ಫುರ[೪]ನ್ಮಯೂಖದಶನೆ[೪]ಯರೊಳಾರಾಜದ್ವಜ್ರೋಜ್ಜ್ವಲದ್ದಶನನಾಪ್ರವಾಲಪಾಟಲಾಧರೆಯರೊಳಾನವಾಮ್ರದ್ರುಮಪಲ್ಲವಾಧರನಾರೇಖಾತ್ರಯಬಂಧುರಕಂಧರೆಯರೊಳಾಕಂಬುಕುಬ್ಜಕಮನೀಯಕಂಧರನಾರಾಜಹಂಸೋನ್ನತಾಂಸೆಯರೊಳಾಕನಕಶಿಖರಿಶಿಖರೋನ್ನತಾಂಸನಾಶಿರೀಷಕುಸುಮದಾಮ—

೧-೧ (ಅ) ಅಂತನಿವಿರಿದೊಸಗೆ. ೨-೨ (ಜ) ಸಂಯುಕ್ತ. ೩-೩ (ಅ) ವಿಶಾಲ. ೪-೪ (ಎ) ನ್ಮಯೂಖಶಿಖರದಶನೆ.

ಸುಕುಮಾರಬಾಹುಲತೆಯರೊಳಾಪರಿಘಪರಿವೃತ್ತದೀರ್ಘಬಾಹುಯುಗಳನಾ—ಬಾಹುಮೂಲಪರ್ಯಂತವಿಶ್ರಾಂತಕುಚಮಂಡಲೆಯರೊಳಾಲಕ್ಷ್ಮೀಲೀಲಾವಿ-ಹಾರಾಚಲರುಚಿರವಕ್ಷಸ್ಥಳನಾಕಾಮುಕಾರ್ಮುಕಯಷ್ಟಿಮುಷ್ಟಿಸಮಾಯತ—ಮಧ್ಯೆಯರೊಳಾರಾಜಕಂಠೀರವಮಧ್ಯನಾ ಮದನಚಕ್ರವರ್ತಿಕ್ರೀಡಾಚಲೋನ್ನ-ತ[೧]ಜಘನೆಯ[೧]ರೊಳಾಮಹೇಂದ್ರವಿರಚಿತ[೨]ಸಿಂಹಾಸನೋಚಿತ[೨]ಜಘನನಾಕನ—ಕಕದಲೀಸ್ತಂಭವಿಭ್ರಮಜಂಘಾಯುಗಳೆಯರೊಳಾಭುವನ[೩]ಭವನತೋರಣ[೩]-ಸ್ತಂಭರಮಣೀಯಜಂಘಾಯುಗಳನಾ ನಖಮಣಿಗಣಮರೀಚಿಕುಸುಮೋಲ್ಲಸಿತ-ಪದಪಲ್ಲವೆಯರೊಳಾಪುರಂದರಚೂಡಾರತ್ನಪ್ರತಿಬಿಂಬಚುಂಬಿತನಖೋಲ್ಲಸಿತಪ-ದಪಲ್ಲವನಾ ಲಾವಣ್ಯಜಲಧಿವೇಳೆಯರೊಳಾಲಾವಣ್ಯಾರ್ಣವಕಲ್ಲೋಲನಾ ಮ—ನೋಜರಾಜ[೪]ಚಿತ್ರ[೪]ಪತಾಕೆಯರೊಳಾಮನಸಿಜವಿಜಯಕೇತನವಂಶಂ ನೆರೆದಿರೆ,

ಸಮಲಾವಣ್ಯಪ್ರಸರದ
ಸಮವಿಭವದ ಸಮವಿಲಾಸದಗ್ಗಳಿಕೆಯೊಳಾರ್।
ಸಮನಿಪರ್ಗೆನೆ ಸಮರಸದೊಳ್
ಸಮಸಂವರ್ತ್ತಪರ್ಗೆ ಸಮಸಮಾಯೋಗಸುಖಂ ||೨೪||

ವ|| ಅಂತಾಗರ್ಭೇಶ್ವರಿಯರಾಪುರುಪರಮೇಶ್ವರನ ಮನಸರೋವರ—ದೊಳ್ ತಮ್ಮ ಪಾದಪದ್ಮಂಗಳಂ ನೆಲೆಗೊಳಿಸಿಯುಮಾ ಮನಸಜ[೫]ಮಾಲಿಕಾ-ದಾಮ[೫]ಕೋಮಲೆಯರಾತ್ರಿಲೋಕತಿಲಕನ ಮನೋಮದೇಭಮಂ ತಮ್ಮ ರಂಭಾಸ್ತಂಭಾಯಮಾನೋರುಸ್ತಂಭಂಗಳೊಳಾಳಿಸಿಯುಮಾಜಿತಾಮರಕಾಮಿ-ನಿಯರಾಮಹಾನುಭಾವನ ಮನೋಮದಕಲಹಂಸನಂ [೬]ತಮ್ಮ ಘನಜಘನ[೬]—ವಿಪುಲಪುಲಿನತಲದೊಳಾಳಿಸಿಯುಮಾಮದಾಲಸಗಮನೆಯರಾಜಗತ್ಪತಿಯ—ಮನೋಯಾನಪಾತ್ರಮಂ ತಮ್ಮ ತಲೋದರಜಲಧಿನಾಭಿಗಂಭೀರಾವರ್ತ್ತದೊಳ್ [೭]ಸುಟಿಗೊಳಿಸಿಯು[೭]ಮಾತನೂದರಿಯರಾನಾಭೇಯನ ಮನಸ್ಸರಸ್ತಟಮಂ ತಮ್ಮ ವಳಿತ್ರಯತರಂಗಂಗಳಿಂದಮಳ್ಳಿಱಿಸಿಯುಮಾಕುಸುಮಸುಕುಮಾರತನು-ಗಳಾಭುವನಭವನಮೂಲ[೮]ಸ್ತಂಭತನೂಜನ[೮] ಮನೋಮಂಗಲಗೇಹಮಂ ತಮ್ಮ

---

೧–೧ (ತ) ಘನಜಘನೆಯ. ೨–೨ (ಚ) ಸಿಂಹಾಸನಾರೋಹಣೋಚಿತ. ೩–೩ (ಚ) ಭರಣೋತ್ತರಣ. ೪–೪ (ಅ,ಬ) ಚೈತ್ರ. ೫–೫ (ಚ) ಮಾಳಿಕೋದ್ಧಾಮ. ೬–೬ (ಚ) ತಮ್ಮ ಜಘನ. ೭–೭ (ಅ,ಬ) ಳ್ನಿಬಿಗೊಳಿಸಿಯು. ೮–೮ (ಅ,ಬ) ಸ್ತಂಭನ ನೂತನ.

ನಿತುಮಂ ಪುರುಪರಮೇಶ್ವರನವಧಾರಿಸಿ, ತತ್ಸ್ವಪ್ನಫಲಂಗಳನಿಂತೆಂದು ಬೆಸಸಿದಂ:

ಪರಿಪೂರ್ಣೇಂದುವಿನನ್ವಯಾಭ್ಯುದಿತಕಂ ತಿಗ್ಮಾಂಶುವಿಂ ತೀವ್ರಭಾ-
ಸುರತೇಜಂ ಸುರಶೈಲದಿಂ ಸಕಲಭೂಭೃನ್ಮುಖ್ಯನಂಭೋಧಿಯಿಂ |
ಪರಮಾಗಾಧಗುಣಂ ಸರೋರುಹ[1]ವಿಲಾಸಾವಾಸೆಯಿಂ[1] ಭೂಪಭೂ-
ವರನಪ್ಪೀಕ್ಷಣೆ ಕಲ್ಪವೃಕ್ಷದಿನಿಲಾಲೋಕೈಕಕಲ್ಪದ್ರುಮಂ ||೨೭||

ನಿನಗೆ ಭರತಾವನೀತಲ-
ಮೆಸಿತನಿತುಮನಾಳ್ವನೊರ್ವನಾವಪ್ಪಂ ನಂ-|
ದನನಾತನನುಜರಘಕುಲ-
ವನದಹನರ್ ಪಲರುಮಪ್ಪರ[2]ಪ್ರತಿಮಲ್ಲರ್[2] ||೨೮||

ವ|| ಎಂದು ಬೆಸಸಿದಾಗಳ್,

ಪುಳಕಂ ಪುದಿದಿರೆ ರಾಗಂ
ಪೊಳೆಪಂ ತನುರುಚಿಗೆ [3]ಮಾಡೆ ತಂಬೆಲರಲೆಪಿಂ[3] |
ಕಳಿಕೆಯೊಳೆ ತುಱುಗಿ ತಳಿರೊಳೆ
[4]ತಳತಳಸಿದದೊಂದಶೋಕಲತೆಯನೆ ಪೋಲ್ತಳ್[4] ||೨೯||

ವ|| ಅನ್ನೆಗಂ ವ್ಯಾಘ್ರನುಂ ದಿವಾಕರಪ್ರಭಾಕರನುಂ ಮತಿವರಮಂತ್ರಿಯುಮಧೋಗ್ರೈವೇಯಕದಿವಿಜನುಂ ಸುಬಾಹುಮಹೀಪತಿಯುಂ ಸರ್ವಾರ್ಥಸಿದ್ಧಿಯೊಳ್ ಪುಟ್ಟಿದಹಮಿಂದ್ರಂ ಬಂದು ಯಶಸ್ವತಿಮಹಾದೇವಿಯ ಗರ್ಭಾವಾಸಮೊಳ್ ಶುಕ್ತಿಪುಟೋದರವರ್ತಿಯಪ್ಪ ನಿರ್ಮಲೋದಕಬಿಂದುವಿನಂತೆ ಸಂಕ್ರಮಿಸೆ ಗರ್ಭಮಂ ತಾಳ್ದಿ,

ನೆಗಟ್ದ ಹಿರಣ್ಯಗರ್ಭನಮನಃಪ್ರಿಯವಲ್ಲಭೆ ರತ್ನಗರ್ಭಭೂ-
ಮಿಗೆ ಫಲಗರ್ಭವಲ್ಲರಿಗೆ ಬಾಲದಿವಾಕರಗರ್ಭವಾಸವಾ-|
ಶೆಗೆ ಕಲಹಂಸಗರ್ಭಕಲಹಂಸಿಗೆ ಸಿಂಹಕಿಶೋರಗರ್ಭಸಿಂ-
ಹಿಗೆ ದೊರೆಯಾಗಿ ಗರ್ಭನಿಲಯಾರ್ಭಕನುನ್ನತಿಯಂ ನಿಮಿರ್ಚಿದಳ್ ||೩೦||

೧-೧ (ಜ) ವಿಲಾಸಸ್ಥಾನೆಯಿಂ. ೨-೨ (ಅ) ಪ್ರತಿಮಬಳರ್. ೩-೩ (ಜ) ಕೂಡೆ, ತಂಬೆಲರಲೆಪಿಂ. ೪-೪ (ಕ, ಜ) ತಳತಳಿಸಿಪುದೊಂದ.

ಜಗದ ಬಿಡತ್ತಸಮನ್ನಿಧಿಯಿಂ
ಬಗೆದಂತಿರೆ ಕಿಡಿಪ ಚಕ್ರಿ [1]ತನ್ನಿಷ್ಪೇಡೆಯೊಳ್[1]
ನೆಗಳ್ದ ಬಿದಿತಸವಾಸನೆ-
ಕೆ ಗಡಂ ಸ್ವೈರವಿಹಾರಮೆನಿಸೆ ಪ್ರೊಡಬ್ಬಾದ ಮಹ್ವಂ ||೩೧||

ಚತುರಂತಕ್ಷಿತಿಗ್ವೌ-
ಸ್ಥಿತಸಮಗಣಿಮಂಗ ಮುದ್ರಿಸಂತಾಯ್ತು ಮನ-
ಸ್ಥಿತಿಯುಂ ಪದನ್ಯಾಸಂ ಕಿ-
ರಿತಪಾಕ್ಷಾರಕಸಮುಕ್ತಪ್ರಸ್ಥಾನಮಣಿಕುಟ್ಟಿಮದೊಳ್ ||೩೨||

ವ|| ಅಂತು ಗನ್ನಾಟಕಿಸ್ಥಂಗಳ್ ತೋಱೆ, ಲೀಲಾಧವನೋಪವನಕೃತಕಗಿರಿಗಳಿರ್ದಂತೆ ವಿಜಯಾರ್ಧಗಿರಿಮಣಿತಟಕೂಟಂಗಳೊಳ್ ವಿಹಾರಿಸಲುಂ, ನಿಜ[2]ಗೃಹೋದ್ಯಾನ[2]ಕ್ರೀಡಾಸರೋವರಂಗಳಿರ್ದಂತೆ [3]ಗಂಗಾಸಿಂಧು[3]ಲವಣಾಬ್ಧಿ[4]ವೇಲಾವನಸರಸೀಸಲಿಲಂಗಳೊಳ್ ಜಲಕ್ರೀಡೆಯಾಡಲುಂ, ವಿಲಾಸಮಂದಿರಪರಿಸರನಂದನಲತಾನಿಕೇತನಂಗಳಿರ್ದಂತೆ ಮಲಯಾಚಲಚಂದನನಂದನಂಗಳೊಳ್ ರಮಿಯಿಸಲುಂ, ಕುಮಾರಭೃತ್ಯಕುಶಲಭಿಷಕ್ಪರಿಷತ್ಸಂಪಾದಿತಕಲ್ಯಾಣಾಮೃತಾಹಾರಂಗಳಿರ್ದಂತೆ ಷಟ್ಖಂಡಕ್ಷೇತ್ರಪ್ರವೃತ್ತಿಕೆಯುನೆ ಸವಿನೋಡಲುಂ, ಸೇನಾಭಿಜ್ಞನಾರಾಂಗನಾಶೃಂಗಾರಸುಧಾಸಿಕ್ತಸೂಕ್ತಿಗಳಿರ್ದಂತೆ ನಿಸ್ಸಹಾಯಸಾಹಸೋತ್ತೀರ್ಣಮಹಾಹವಾರ್ಣವಪ್ರವೀರಪ್ರಾರಬ್ಧಾರಭಟೀಸಮುದ್ಭಟಕಥೆಗಳನೆ ಕೇಳಲುಂ, ಪ್ರಮದಮಧುರವಿದಗ್ಧಮುಗ್ಧಪರಿಹಾಸಮನೋ[5]ಹರಾಲಾಪವಿಶಾರದಶುಕ[5]ಶಾಸಾರಿಕೆಗಳಿರ್ದಂತೆ ಪಂಜರಗತಕಂಜರಾರಾತಿ[6]ಕಿಶೋರಗಳನೆ[6] ತರಿಸಿ ನೋಡುತ್ತಿರಲುಂ,

ಕೆಲದೊಳ್ ಶ್ರೀದರ್ಪಣಂ ಬಂದಿರೆಯುಮೊಸೆದು ವಕ್ತ್ರೇಂದುವಂ ಖಡ್ಗದೊಳ್ ನೋ-
ಡಲುಮಾತ್ತೋದ್ಯಪ್ರಗೀತಧ್ವನಿಗಳಿರೆ ಧನುರ್ದಂಡಟಂಕಾರಮಂ ಕೇ-
ಳಲುಮಬ್ಜಸ್ಪರ್ಶಹರ್ಷ ತತ್ಕಾಂತೆಗೆ ನೆಗಟ್ವವು ಗರ್ಭಸ್ಥನುತ್ಸಾಹಮಂ ತೋ-
ಱಲುಮಂ ಸಾಮ್ರಾಜ್ಯಮಂ ಸೂಚಿಸುವವೊಲತಿಜೋದ್ಯಂಗಳೀದೌಹೃದಂಗಳ್ ||೩೩||

೧-೧ (ಅ) ತನ್ನಿಷ್ಪೇಡೆಯೊಳ್. ೨-೨ (ಚ) ಗೃಹೋಪವನ. ೩-೩ (ಚ) ಗಂಗಾಜಲ. ೪ (ಚ) ಕ್ಕೀ. ೫-೫ (ಚ) ಹರಾಳಾಪಶುಕ. ೬-೬ (ಚ) ಕಿಶೋರಕೇಸರಿಗಳನೆ.

ವ॥ ಅಂತು ಚಕ್ರವರ್ತಿಜನ್ಮೋತ್ಸವಸೂಚಕಮಪ್ಪನೇಕದೋಹಳಸಂ-ದೋಹಂ ನೆಗೞೆ ಸುಖಪ್ರಸೂತಿಸಮಯದೊಳ್,

ಮನುಗೋತ್ರಾಂಭೋಧಿಚಂದ್ರಂ ಮನುಕುಲಸರಸೀವಿಭ್ರಮೋತ್ತಂಸಹಂಸಂ
ಮನುವಂಶಪ್ರಾಜ್ಯಶೈಲಪ್ರಮಣಿ ಮನುಸ್ಯಸಾಮ್ರಾಜ್ಯಮಾರ್ಗಾದ್ರಿಸಿಂಹಂ ।
ಮನುಭೂಪಾಲಾನ್ವಯಶ್ರೀಭವನಕಲಶಮೆಂಬಂತು ವಿಖ್ಯಾತಪುಣ್ಯಂ
ಮನುಧಾತ್ರೀಪಾಲಚೂಡಾಮಣಿ ಜನಿಯಿಸಿದಂ ಚಕ್ರವರ್ತಿಪ್ರಧಾನಂ ॥೩೪॥

ವ॥ ಆ ಪ್ರಸ್ತಾವದೊಳ್,

॥ ಮಾಲಿನಿ ॥

ಎಸಗಿಮುದು ಸಮೀರಂ ಶೈತ್ಯಸೌರಭ್ಯಮಾಂದ್ಯಾ
ವಸಥಮೆಸೆದುದಾಶಾಚಕ್ರಮಂಭೋದಮಾರ್ಗಂ ।
ಪೊಸತೆ ತೊಳೆದುದೀಗಳ್ ಪಾಲೊಳೆಂಬಂತುಟಾಯ್ತೀ-
ನೆಸೆಮಸೊಗಯಿಸಿತ್ತೋ ಚಕ್ರಿಜನ್ಮೋತ್ಸವಾಹಂ ॥೩೫॥

ವ॥ ಆಗಳ್ ಸರಭಸಪ್ರಧಾವಿತಪರಿಜನಪದಪಕ್ಷೋಭವಿಚಲಿತಮಹೀತಳ-ಮುಂ ಪ್ರತಿನಿಕೇತನೋತ್ಕ್ಷಿಪಿತವಿಚಿತ್ರಕೇತನಮುಂ, ಮೃಗಮದಜಲಚ್ಛ-ಟಾಸಿಕ್ತಪ್ರಾಂಗಣಮುಂ, ಮಧುಕರನಿಕರಝಂಕಾರಹಾರಿಕುಸುಮೋಪಹಾ-ರಮುಂ, ಮಹೀಪತಿನಿವೇದನಸಂಭ್ರಮಗಮನಸ್ಖಲಿತವೃದ್ಧಕಂಚುಕಿನಿಕರಮು-ಮಂತಃಪುರಪರಿವಾರಜನನಿರ್ದಯಸಂಮರ್ದನಿಪತಿತಕುಬ್ಜವಾಮನವರ್ಷ-ಧರನಿಕರುಂಬಮುಮಾನಾಭಿವಿಲಂಬಮಾನಲಂಬಸ್ತನವಿಸ್ರಸ್ತಾಂತರೀಯೋತ್ತರೀ-ಯವೃದ್ಧಧಾತ್ರೀನರ್ತನನಿರೀಕ್ಷಣಜನತಾಜನಿತಹಾಸನಿವಾಸಮುಂ, ಯುಗಪ-ದುತ್ಥಿತಮಂಗಲಗೀತೋನ್ಮಿಶ್ರಿತಾನೇಕಕಲಮಾನುಗತಲೀಲಾಲಾಸ್ಯಪ್ರಸಕ್ತಕಾ-ಮಿನೀಕಮನೀಯಮುಮಾಗಿ,

ಮನುಜಾಧೀಶಸಮೂಹಸಂಚರಣದಿಂ ಸಾಮಂತಸೀಮಂತಿನೀ-
ಜನಸಮ್ಮರ್ದದಿನುತ್ಸವಧ್ವಜಪಟಪ್ರಸ್ತಾರದಿಂ ರತ್ನವಂ-।
ದನಮಾಲಾಪ್ರಚುರಪ್ರಭಾಪ್ರಸರದಿಂದಾನಂದಭೇರೀಬೃಹ-
ದ್ಧ್ವನಿಯಿಂದಾಲಯಮಾಯ್ತು ಪೊಂಮ ಸಿರಿಮಂ ಚೆಲ್ವಿಂಗೆ ರಾಜಾಲಯಂ ॥೩೬॥

೧-೧ (ಚ) ಸೊಗಯಿಸಿತ್ತಾ. ೨-೨ (ಅII) ಪ್ರವಾದಿತ; (ಬ) ಪ್ರಜಾಳಾಪಿತ; (ಚ) ಪ್ರಚಾರಿತ. ೩-೩ (ಚ) ಪರಿ. ೪-೪ (ಚ) ಸಂಮರ್ದನಪತಿತ. ೫-೫ (ಚ) ಗೀತ ನೃತ್ಯೋನ್ಮಿಶ್ರಿತಾನೇಕ.

ನಡಿಯಿಡುವಂತೆ ನಿರಂತರ-
ಮಡಿಯಿಟ್ಟಂ ಪದ್ಮರಾಗ[1] ಮಣಿಕುಟ್ಟಿಮದೊಳ್[1] ॥೪೧॥

ವ॥ ಅಂತು ನಿಜಾಸ್ವಯಲೀಲಾಲಲಾಮಂಗೆ ಲೋಕಯಾತ್ರಾಪ್ರವರ್ತನನಿಮಿತ್ತಮಾದಿಬ್ರಹ್ಮನನ್ನಪ್ರಾಶನಚೌಲೋಪನಯನಾದಿಕ್ರಿಯೆಗಳನು[2] ಕ್ರಮದಿಂ ತಾನೆ[2] ಮಾಡಿ ಸಹಪಾಂಸು[3] ಕ್ರೀಡಾನೇಕವಿಕ್ರಮ[3] ಕ್ರೀಡಾಸಂದೋಹಾರರಾಜಕುಮಾರಕರ್[4] ಪರೀತನಾಗಿ[4], ಮೃಗಮದಕರ್ದಮ[5] ಸಂಪಾದಿತಮದಲೇಖಾ[5] ಮಂಡಿತಗಂಡಸ್ಥಲನುಂ, ಕುಂಕುಮಪಾಂಸುಪಟಲಸಾಂದ್ರಸಿಂಧೂರಿತಮಸ್ತಕಪಿಂಡನುಂ, ದಕ್ಷಿಣಕರಾಲಂಬಿತನಿಬಿಡನಿವೇಷ್ಟಿತಾಂಶುಕವಿಶಾಲಸ್ಥೂಲವೃತ್ತಹಸ್ತನುಂ, ಮದಾಂಧ[6] ವಿಜಯಸಿಂಧೂರೀ[6] ಕೃತನುಂ, ದಶೈಕಾದಶವರ್ಷದೇಶೀಯನುಮಂತಃಪುರದಾಸೀರಕನನೇಜ[7] ಕಿಂಚಿದಾಕುಂಚಿತಾಗ್ರತರ್ಜನೀನಿಶಿತಾಂಕುಶನಂತಃಪುರಪ್ರಮದವನಪ್ರವಿಷ್ಟನಾಗಿ, ಕೃತಕಗಿರಿಶಿಖರಂಗಳಂ ಗಿರಿದುರ್ಗೋತ್ತುಂಗ[7] ಶೃಂಗಂಗಳೆಂದು[7] ಪಾಯಿಸಿಯುಮತಿನಿಬಿಡಬಾಲಕದಲೀಷಂಡಂಗಳಂ ವನದುರ್ಗಂಗಳೆಂದೆ ಪಡಲ್ವಡಿಸಿಯುಂ, ಶತಸಹಸ್ರ[8] ಮುಖಾವಹಜಾನುದಘ್ನ[8] ದೀರ್ಘಿಕಾಂಭಃಕುಲ್ಯಾಪ್ರವಾಹಂಗಳಂ ಜಲದುರ್ಗಂಗಳೆಂದೆ ಸೂಂಕಿ ಕಡಡಿಯುಂ, ಲೀಲಾಕಮಲಾಕರಾನೀಕರಕ್ತಕಮಲಂಗಳನಾಸ್ಯಾಸುಶೋಣಿತಶೋಣರಿಪುನೃಪಶಿರಂಗಳೆಂದೆ ತುಳಿಯಿಸಿಯುಮುದ್ದಂಡಪುಂಡರೀಕಂಗಳಂ ಶ್ವೇತಾತಪತ್ರಂಗಳೆಂದೇ ಮಾಡಿ ಪಿಡಿಯಿಸಿಯುಮುಭ್ಗ[9] ನಪ್ರೋದ್ಧೃತಧೌತಶಂಖಶಶಾಂಕ[9] ವಿಶದಜಲಾರ್ದ್ರಜಲಕುಸುಮಂಗಳಂ ಸಾನ್ವರ್ಣಭಾವೋಚಿತದ್ವಾತ್ರಿಂಶಚ್ಚಾರುಚಾಮರಂಗಳಂ ಮಾಡಿ [10]ಬೀಸಿಸಿಯುಂ[10] ಸಮುಲ್ಲಸದಶೋಕಪಲ್ಲವಂಗಳನನೇಕವಿಜಯ[11] ವೈಜಯಂತಿಗಳ್ಮಾಡಿಕೊಂಡೆತ್ತಿಸಿಯುಂ[11], ವಂದಿಬಾಲಕವೃಂದಜಯಜಯಾನಂದಕೋಲಾಹಲಮೆಸೆಯೆ ಲತಾಗೃಹಮೆಂಬರಾಜಗೃಹಕ್ಕೆ ಬಂದು,

ವಿವಿಧಕಲಿಂಗ[12] ವಂಗಖಚಗೂರ್ಜರ[12] ಮಾಲವಚೋಲಪಾಂಡ್ಯಪ-
ಲ್ಲವನೃಪಮಂಡಲಂಗಳೊಳಿವಂಗಿವು ಜೀವಿತಮೆಂದು ಕೊಟ್ಟು ಪೊ-
ಣ್ಮುವ ನಿಜವಿಕ್ರಮೈಕರಸಮಂ ಶಿಶುಭಾವದೊಳಂ ನಿರಂತರಂ
ಭುವನಜನಕ್ಕೆ ಸೂಚಿಸಿದನೀತೆರದಿಂ ಪುರುದೇವನಂದನಂ ॥೪೨॥

೧-೧ (ಚ) ರಾಗಕುಟ್ಟಿಮತಳದೊಳ್. ೨-೨ (ಅ) ಕ್ರಮದಿಂ ತಪ್ಪದೆ ತಾನೆ. ೩-೩ (ಅ) ಕ್ರೀಡನಕರವಿಕ್ರಮ; (ಬ) ಕ್ರೀಡಾನೇಕವಿಭ್ರಮ. ೪-೪ (ಚ) ಪರಿವೃತನಾಗಿ. ೫-೫ (ಚ) ಸಂಪಾದಿತಲೇಖಾ. ೬-೬ (ಚ) ವಿಜಯಸಿಂಧುಸಿಂಧೂರೀ. ೭-೭ (ಚ) ಶಿಖರಂಗಳೆಂದು. ೮-೮ (ಅ) ಮುಖವಾಹಜಾನುದಘ್ನ; (ಬ) ಮುಖವಹಜಾನುದಘ್ನ. ೯-೯ (ಅ) ಉದ್ಧೃತಧೌತಪಂಕಶಶಾಂಕ. ೧೦-೧೦ (ಚ) ಪಿಡಿಸಿಯುಂ. ೧೧-೧೧ (ಬ) ವಂಗಖಚಗೂರ್ಜರ; (ಚ) ವಂಗಖಗಘೂರ್ಜರ.

ವ॥ ಅಂತು ನಿಖಿಳಜಗದಾಶ್ಚರ್ಯ್ಯಕಾರ್ಯ್ಯಕರಬಹುಳಬಾಲಕ್ರೀಡಾಚಮತ್ಕಾರಿತನೀರಜಪ್ರಭಂ, ನಿಜೋದಯಾನಂದಿತಜಗಚ್ಚಕ್ರನುಮಾಗಿ, ಯೌವನಪ್ರಾಪ್ತನಾಗೆ,

ತಂದೆಯ ರೂಪೆ ತಂದೆಯ ವಿಲಾಸವೆ ತಂದೆಯ ಚೆಲ್ವೆ ತಂದೆಯೊಂ-
ದಂದಮೆ ತಂದೆಯೊಂದು ಸುಚಿಯೋಜೆಯೆ ತನ್ನೊಳಮರ್ಕ್ಕೆ[1]ಪೆತ್ತಲಾ–[1]
ನಂದನನಂ ಕರಂ ಸೊಗಯಿಸುತ್ತಿರೆ ಶೋಭಿಸಿದಂ ಕುಮಾರನಾ-
ನಂದಿತರೂಪನಂದಿನಿಸಿ ತಂದೆಯೊಳೊಪ್ಪಿನೊಳೊತ್ತಿದಂತೆವೋಲ್ ॥೪೩॥

ವಿಪುಳಯಶಃಪಿಂಡಂ ಪ್ರಾ-
ಜ್ಯಪುಂಜವಾಕ್ಷತ್ರಧಾಮಧಾಮಂ ತಾನಾ-
ನೃಪಸುತನೆಸೆದಿರೆ ಪೆಜತೆಂ-
ದು ಪಾಂಗಿನೊಳ್ ನೆಗೞ್ದ ಭರತನಂ ಬಣ್ಣಿಪರಾರ್ ॥೪೪॥

ವ॥ ಪುತ್ತ್ರಮಾಕುಮಾರನಿಂ ನೇಗ್ಗಿರ್ಜಾಯನಾಗಿ ಮುನ್ನ ಪೇೞ್ದ ಪುರೋಹಿತ[2]ನಾನಂದನುಮಧೋ[2]ಗ್ರೈವೇಯಕಾಹಮಿಂದ್ರನುಂ [3]ಪೀ*ತನು[3]ಮಾಗಿ ಸರ್ವ್ವಾರ್ಥಸಿದ್ಧಿಯೊಳ್ ಪುಟ್ಟಿದಹಮಿಂದ್ರಂ ಬಂದು ವೃಷಭಸೇನನೆಂಬೊಂ ತನಯನಾದೊಂ†; ಶ್ರೇಷ್ಠಿ ಧನಮಿತ್ರನುಮಧೋಗ್ರೈವೇಯಕಾಹಮಿಂದ್ರನುಂ ಮಹಾಪೀತನುಮಾಗಿ ಸರ್ವ್ವಾರ್ಥಸಿದ್ಧಿಯೊಳ್ ಪುಟ್ಟಿದಹಮಿಂದ್ರಂ [4]ಬಂದನಂತವಿಜಯ[4]ನೆಂಬ ತನೂಜನಾದಂ; ಶಾರ್ದೂಲಾರ್ಯ್ಯನುಂ ಚಿತ್ರಾಂಗದೇವನುಂ ವರದತ್ತನೃಪನುಮಚ್ಯುತಸಾಮಾನಿಕನುಂ ವಿಜಯನೃಪನುಮಾಗಿ ಸರ್ವ್ವಾರ್ಥಸಿದ್ಧಿಯೊಳ್ ಪುಟ್ಟಿದಹಮಿಂದ್ರಂ [5]ಬಂದನಂತವೀರ್ಯ್ಯ[5]ನೆಂಬಂ ತನೂಭವನಾದಂ; ವರಾಹಾರ್ಯ್ಯನುಂ ಮಣಿಕುಂಡಲಾಮರನುಂ ವರಸೇನಭೂಮಿಪನುಮಚ್ಯುತಸಾಮಾನಿಕದೇವನುಂ ವೈಜಯಂತಭೂಪನುಮಾಗಿ ಸರ್ವ್ವಾರ್ಥ[6]ಸಿದ್ಧಿಯೊಳಹಮಿಂದ್ರನಾಗಿ ಪುಟ್ಟಿದ ದಿವಿಜೇಂದ್ರಂ[6] ಬಂದಚ್ಯುತನೆಂಬನಾತ್ಮಜನಾದಂ; ವಾನರಾರ್ಯ್ಯನುಂ ಮನೋಹರದಿವಿಜನುಂ ಚಿತ್ರಾಂಗದಾವನಿಪನುಮಚ್ಯುತಸಾಮಾನಿಕಾಮರನುಂ ಜಯಂತ[7]ಮಹೀಪಾಲನುಮಾಗಿ[7] ಸರ್ವ್ವಾರ್ಥಸಿದ್ಧಿಯೊಳ್ ಪುಟ್ಟಿದಹಮಿಂದ್ರಂ ಬಂದು ವೀರನೆಂಬೊನಾತ್ಮಭವನಾದಂ; ನಕುಲಾರ್ಯ್ಯನುಂ

೧-೧ (ಚ) ಪೆತ್ತುದಾ. ೨-೨ (ಚ) ನಾನಂದನುಂ ದಿವಾಕರನುಂ ಅಧೋ. ೩-೩ (ಚ) ಮಹಾಪೀತ. ೪-೪ (ಚ) ಬಂದುಮನಂತವಿಜಯ; (ಕ) ಅನಂತವೀರ್ಯನೆಂಬ. ೫-೫ (ಕ) ಬಂದನಂತವಿಜಯ. ೬-೬ (ಅ) ಸಿದ್ಧಿಯೊಳ್ಪುಟ್ಟಿದಹಮಿಂದ್ರಂ; (ಬ) ಸಿದ್ಧಿಯೊಳ್ಪುಟ್ಟಿದ ದಿವಿಜೇಂದ್ರಂ. ೭-೭ (ಬ) ಮಹೀಶನುಮಾಗಿ.

*ಜಿನಸೇನಾಚಾರ್ಯರ ಆದಿಪುರಾಣದಲ್ಲಿ 'ಪೀತ' ಎಂದಿದೆ. ೧೬-೩ ನೋಡಿರಿ.

†(ಬ) ಪ್ರತಿಯಲ್ಲಿ ಎಲ್ಲ ಕಡೆಗೆ 'ಆದೊಂ' ಎಂಬ ಪ್ರಯೋಗವಿದೆ.

ಮನೋರಥ[೧]ದಿವ್ಯನುಂ[೧]ಶಾಂತಮದನಮಹೀನಾಥನುಮಚ್ಯುತಸಾಮಾನಿಕನು-
ಮಪರಾಜಿತ[೨]ನೃಪನುಮಾಗಿ[೨]ಸರ್ವಾರ್ಥಸಿದ್ಧಿಯೊಳ್ ಪುಟ್ಟಿದಹಮಿಂದ್ರಂ ಬಂದು
*ಸುವೀರನೆಂಬೊಂ ನಂದನನಾದೊನಿಂತು ಭರತಕುಮಾರಂ ಬೆರಸೆಣ್ಬರ್
ಕುಮಾರರಾದಿಯಾಗಿ ನೂರ್ವರ್ ಕುಮಾರರುಮನನಿಬರಿಂ ಕಿಱಿಯಳ್ ಬ್ರಹ್ಮಿ-
ಯೆಂಬ [೩]ಮಗಳುಮಂ[೩] ಪಡೆದು,

ಫಲಲಲಿತಂ ವಿನೂತಕಲಿಕಾಕಲಿತಂ ಕಡುರಯ್ಯಮಾಯ್ತು ಕೋ-
ಮಲಲತೆಯೆಂಬಿನಂ ಚರಮದೇಹಶತಾತ್ಮಜರಿಂದಮಾಮಹೋ-।
ತ್ಪಲಮುಖಿಯಿಂದಮಾಸತಿ ಯಶಸ್ವತಿವಿಶ್ವಮಹೀತಲಂ [೪]ಗುಣಾಂ[೪]-
ಗೊಳೆ ಪಡೆದಳ್ ತದಗ್ರಮಹಿಷೀ[೫]ಪದದೊಳ್ ಪುದಿದೊಂದು[೫]ಪೆರ್ಮೆಯಂ ॥೪೫॥

ವ॥ ಮುನ್ನೆ ಪೇೞ್ದ ವಜ್ರಜಂಘನ ಸೇನಾನಾಯಕನಕಂಪನನುಮಧೋ-
ಗ್ರೈವೇಯಕಾಹಮಿಂದ್ರನುಂ ಮಹಾಬಾಹುಮಹೀಪತಿಯುಮಾಗಿ ಸರ್ವಾರ್ಥ-
ಸಿದ್ಧಿಯೊಳ್ ಪುಟ್ಟಿದಹಮಿಂದ್ರಂ ಬಂದು ಸುನಂದಾಮಹಾದೇವಿಯ[೬]ಗರ್ಬ್ಭ-
ದೊಳವತರಿಸಿ[೬],

ತನುವಳಿರೇಖೆಗಳ್ ಕಿಡೆಯುಮುಯ್ದು[೭] ಬೆಡಂಗಿನದೊಂದು ರೇಖೆಯಂ
ತನಗೆಡೆಮಾಡಿ ಪೊಂಗೆ ನಡು ಬಂದುದಯಂಗೆಯಲಿರ್ದ ಪೂರ್ಣ್ಣಚಂ-।
ದ್ರನನೊಳಕೊಂಡು ಬೆಳ್ಪಿಸೆವ ವಾಸವದಿಗ್ವನಿತಾನನಂಬೊಲಾ-
ನನರುಚಿ ಚೆಲ್ವನೇಂ ನೆಱೆಯೆ ತಾಳ್ದಿದುದೋ [೮]ಬಿಸಕಾಂಡ[೮]ಪಾಂಡುರಂ ॥೪೬॥

ಒದವಿದ ಕರ್ಪ್ಪನೆಯ್ದೆ ಪರಿವೃತ್ತಪಯೋಧರಚೂಚುಕಕ್ಕೆ ಮಾ-
ಡದೆ ವಳಿಭಂಗಮಂ ಕಳಿಯೆ [೯]ತೋರ್ಪ್ಪುಮನಂತೆ[೯] ತನೂದರಕ್ಕೆ ಮಾ-।
ಡದೆ ಕಡುವೆಳ್ಪಮಂ ನಿಮಿರ್ದ ಸುಯ್ಯುಮನಾನನಪಂಕಜಕ್ಕೆ ಮಾ-
ಡದೆ ಬಳೆದೊಂದು ಗರ್ಬ್ಭಮೆ[೧೦]ಮನಂಗೊಳಲಾರ್ತ್ತುದು[೧೦]ಮಂದಯಾನೆಯಾ॥೪೭

ವ॥ ಅಂತು ಗರ್ಬ್ಭಂ ಬಳೆಯೆ,

ದಿಗಿಭನಿಭಂಗಳಪ್ಪ [೧೧]ಸಮದದ್ವಿರದಂಗಳ[೧೧] ಯುದ್ಧಕೇಲಿಯಂ
ಬಗೆಗೊಳೆ ನೋಡಲುಂ ನೆಗೞ್ದ ಮಲ್ಲರುಮಂ ಪಿಡಿಮೊತ್ತಿ ಗೆಲ್ದ ಜೆ-।
ಟ್ಟಿಗರೆನೆ ಸಂದ ಮಲ್ಲರನೆ ಪೋರಿಸಲುಂ ಪಿರಿದೊಂದು ದೋಹಳಂ
ನೆಗೞ್ದುದು ಗರ್ಬ್ಭದರ್ಬ್ಭಕನ ದೋರ್ಬ್ಬಲಗರ್ವ್ವಮನಂದು ಪೇೞ್ವವೋಲ್ ॥೪೮॥

೧-೧ (ಅ) ದಿವಿಜನುಂ. ೨-೨ (ಆII) ಮಹಾನೃಪನುಮಾಗಿ. ೩-೩ (ಚ) ಮಗಳಂ. ೪-೪ (ಬ) ಮನಂ. ೫-೫ (ಚ) ಪದದೊಳ್ ಪಿರಿದೊಂದು. ೬-೬ (ಚ) ಗರ್ಭದೊಳ್ ಬಂದವತರಿಸಿ. ೭ (ಚ) ಟ್ದಿ. ೮-೮ (ಆII) ಬಿಸದಂಡ. ೯-೯ (ಚ) ತೋರ್ಪುವನಂತೆ. ೧೦-೧೦ (ಚ) ಮನಂದರಲಾರ್ತುದು. ೧೧-೧೧ ಸಮರದ್ವಿರದಂಗಳ.

* ಜಿನಸೇನಾಚಾರ್ಯರ ಪೂರ್ವಪುರಾಣದಲ್ಲಿ 'ವರವೀರ' ಎಂದಿದೆ. ೧೬-೩ ನೋಡಿರಿ.

ವ|| ಅಂತು ಗರ್ಭದೋಹಳಂ ನೆಗೞೆ,

ಜನಿಯಿಸಿ ಗರ್ಭಾವತಾರೋತ್ಸವಮುದಿತಸುರಾನೀಕನಾ೧ದೃಷ್ಟ೧ವಿಶ್ವಾ-
ವನಿಯೊಳ್ವ್ಯಾಪಾಬಲೋರ್ಜ್ಜ್ವಲಪಟುತರದೋರ್ವಿಕ್ರಮಂ ದೇವತೂರ್ಯ-|
ಧ್ವನಿಮಿಶ್ರಾತೋದ್ಯನೃತ್ಯಂ ಮನು೨ನೃಪತಿಲಕಂ೨ ಶ್ರೀಯಶಸ್ವತೀಜಯಶ್ರೀ-
ವನಿತಾರ್ಘಂ ಪುಣ್ಯ೩ಪುಂಜೋದಯ೩ನುದಯಿಸಿದಂ ವಂಶಲಕ್ಷ್ಮೀಲಲಾಮಂ ||೪೯

ವ|| ಆ ಬಾಲಕನ ಜನ್ಮೋತ್ಸವದೊಳ್,

ನಾದವಿಲಾಸಿನೀಕಟಿತನರ್ತನಚಂಚಲಕಾಂಚಿದಾಮಸಂ-
ಜಾಲಕಕಿಂಕಿಣೀಕ್ವಣಿತದಿಂ ೪ವಿಲಸತ್೪ ಕುಸುಮೋಪಹಾರವಿ-|
ಸ್ತಾರದಿನಂದವೇಂ ಸೊಗಯಿಸಿತ್ತದೊ ತತ್ಪುರಮುತ್ಪತಾಕಮು-
ತ್ತೋರಣಮುದ್ವಿಲಾಸರಸಮುತ್ಕಟಹಸ್ತನಮುತ್ಸ೫ವಾದನಂ೫ ||೫೦||

ವ|| ಅಂತು ಜನ್ಮೋತ್ಸವಾನಂತರಂ ಮಹಾಬಾಲಕಂಗೆ ಬಾಹುಬಲಿಯೆಂಬ-ನ್ವರ್ಥಾಭಿಧಾನಮನಿಟ್ಟಾತನ ಲಲಿತೋತ್ತಾನಶಯಿತದರಹಸಿತ೬ತರಂಗಿತ೬ಗತಿ-ಸ್ಖಲಿತಮುಗ್ಧಜಲ್ಪಿತಾದಿಬಾಲ್ಯವಿಲಾಸಂಗಳಿಂದಂ ಕರಿಕರೋದ್ಧೂತಧೂಳೀ-ವಿಲಾಸಪಾಂಸುಕೇಲಿಯಿಂದಂ ಮಲ್ಲವೇಷೋದ್ಧತರಾಜದಾರಕನಿಯುದ್ಧದಿಂ-ದಮಾನಂದಿತಹೃದಯನಾಗಿ ೭ನಾಭಿರಾಜಾನಂದ೭ನಂದನನಿರ್ಪನ್ನೆಗಂ ಯೌವ-ನಪ್ರವೇಶಸಮಯದೊಳ್,

ದಲಿತಾಂಭೋಜಾಸ್ಯನಿಂದೀವರದಲನಯನಂ ಪಕ್ವಬಿಂಬಾಧರಂ ಕೋ-
ಮಲವಂಶವ್ಯಾಮನಂಭೋಧರರವನಲಿನೀ೮ಕುಂತಲಂ೮ ವ್ಯೂಢವಕ್ಷ-|
ಸ್ಸ್ಥಲನಾಜಾನುಪ್ರಲಂಬಪ್ರಬಲಭುಜಯುಗಂ ಚಾರುವೃತ್ತೋರುಯುಗ್ಮಂ
ಕುಲಶೈಲೇಂದ್ರೋನ್ನತಂ ಬಾಹುಬಲಿ ಸಕಲಸೌಂದರ್ಯಸಂಪನ್ನನಾದಂ ||೫೧||

ಆಕಮನೀಯವಿಲೋಕನ-
ನಾಕಾಲದ ಕಾಮದೇವನೆಂದೊಡೆ ಕಾಂತಾ-|
ನೀಕದ ಮರುಳ್ತನಂ ಮದ-
ನಾಕುಲತೆಯನುಂತೆ ಪೆರ್ಚ್ಚಿದೊಂದೆಗ್ಗಳ್ತೇ ||೫೨||

೧-೧ (ಬ) ನುದ್ಧೃಷ್ಟ; (ಜ) ದುದ್ವೃತ್ತ. ೨-೨ (ಜ) ನೃಪತಿಕುಲ. ೩-೩ (ಅII) ಪುಂಜೋದಮು. ೪-೪ (ಅII) ವಿಲಸತ್ಕು. ೫-೫ (ಅII) ವಾಕರಂ. ೬-೬ (ಅ) ರಂಗಿತ. ೭-೭ (ಅ) ನಾಭಿರಾಜನಂದನನಾನಂದನಂದನಂ. ೮-೮ (ಬ) ಕುಟ್ಮಲಂ.

ಕನಸಿನೊಳಮಾಕುಮಾರನೆ
[೧]ಮನದೊಳ್ ತಣ್ಮಲೆಯೆ[೧] ಚಿತ್ರಜಂ ಚಿತ್ರಭವಂ।
ಮನಸಿಜನನಂಗನಂಗಜ-
ನೆನೆ ನೆಗೞ್ದುವು ಬಾಹುಬಲಿಗೆ ಪಲವುಂ ಪೆಸರ್ಗಳ್ ॥೫೩॥

ವ॥ ಮುನ್ನಂ ವೃಷಭೇಶ್ವರಂ ವಜ್ರಜಂಘನಾದ ಭವದೊಳಾ ಮಹಾತ್ಮಂಗೆ [೨]ತಂಗೆಯಾದ* ಸುಂದರಿಯೆ[೨] ಕತಿಪಯಭವಪರಿಭ್ರಮಣದಿಂ ಬಂದು ಬಾಹುಬಲಿಕುಮಾರನಿಂ ನೇಗ್ಗಿಱಿಯಳಾಗಿ,

ಸೌಂದರತನುರುಚಿಯೊಳ್ ಸುಂ
ಸೌಂದರಿಯೆನೆ ಸೌಂದರಾಂಗಿ ಸೌಂದರಿಯೆಂಬಳ್ ।
ಸೌಂದರವೃಷಭಮಹೀಭುಜ-
ಸೌಂದರಿಗೆ ಸುನಂದೆಗಂದು ನಂದನೆಯಾದಳ್ ॥೫೪॥

ವ॥ ಅಂತು ಭರತೇಶ್ವರಂ ಬಾಹುಬಲಿಕುಮಾರರ್ ಮೊದಲಾಗೆ ನೂರ್ವರ್ ಕುಮಾರರುಮನಿರ್ವರ್ ಕನ್ಯೆಯರುಮನಾದಿಪುರುಷಂ ನೋಡಿ ಮನದೊಳಾದಕ್ಕಱಿಂ ನಿಜಾನ್ವಯಭೂಷಣತನಯವರ್ಗಕ್ಕೆ ಭೂಷಣವಿಶೇಷಂಗಳಂ ತನಗಮಿಂದ್ರಂಗಂ ಸಕಲಚಕ್ರವರ್ತಿಗಂ ತುಡಲ್ಕೆಯೋಗ್ಯಮಪ್ಪ ಸಾಸಿರದೆಂಟು ತೋರಮುತ್ತಿನ [೩]ಸರದಿಂದ್ರಚ್ಛಂದಂ[೩] ಮೊದಲಾಗೆ [೪]ವಿಜಯಚ್ಛಂದ[೪] ಹಾರದೇವಚ್ಛಂದಾರ್ಧಹಾರರಶ್ಮಿಕಲಾಪಗುಚ್ಛನಕ್ಷತ್ರಮಾಲಾರ್ಧಗುಚ್ಛ[೫] ಮಾಣವಕಾರ್ಧ[೫] ಮಾಣವಕಂಗಳೆಂಬ ಪನ್ನೊಂದು ನಾನಾರತ್ನ ಸುವರ್ಣಪದಕವಿರಚನಾದಿಭೇದದಿಂ ಪ್ರತ್ಯೇಕ[೬] ಶೀರ್ಷಕೋಪ[೬] ಶೀರ್ಷಕಾವ[೭] ಘಾಟಕಪ್ರ† ಕಾಂಡಕತರಲತರಬಂಧೋಪಪದಪಂಚಕಸಮೇತಂಗಳಾಗಿ ಪಂಚಪಂಚಾಶತ್ಪ್ರಮಾಣಂಗಳೊಳಾದ ಹಾರಂಗಳುಮಂ [೮]ಪೆಱವುಂ[೮] ಪ್ರತ್ಯಂಗೋಚಿತಾತ್ಯಂಗಮಣಿಭೂಷಣಂಗಳುಮಂ ಸ್ವಮತಿಪರಿಕಲ್ಪನದಿಂ ಯುಗಾರಂಭದೊಳ್ ಪಡೆದು,

ಇವರ್ಗಿವು ತಕ್ಕುವೆಂದವರ್ಗಮಂ ದಯೆಯಿಂ ದಯೆಗೆಯ್ಯೆ ರಾಗದಿಂ-
ದವರವನೆಲ್ಲಮುಂ ನೆಱೆಯೆ ತೊಟ್ಟು ತದುಜ್ಜ್ವಲರತ್ನದೀಪ್ತಿ ದಿ-।
ಗ್ವಿವರನಭೋವಿಭಾಗಪರಿಪೂರಿತಮಾಗಿರೆ ತಮ್ಮನೊಲ್ದು ನೋ-
ಟ್ಪವರ್ಗಳ ಕಣ್ಗೆ ದೀಪ್ತಿಪರಮಾಣುಗಳಿಂ [೯]ಸಮೆದಂತೆ ತೋಱಿದರ್[೯] ॥೫೫॥

೧-೧ (ಚ) ಮನಮಂ ತಣ್ಮಲೆಯೆ. ೨-೨ (ಅ) ತಂಗಿಯಾದಸುಂದರಿಯೆ. ೩-೩ (ಚ) ಸರದಿಂ ಪ್ರಚ್ಛಂದಂ. ೪-೪ (ಚ) ವಿಜಯಚ್ಛಂದಾರ್ಧ. ೫-೫ (ಚ) ಮಾಣವಕಾರ್ಧ ೬-೬ (ಚ) ಶೀರ್ಷಕಾಶ. ೭ (ಚ) ಮ. ೮-೮ (ಅ) ಪಲವುಂ. ೯-೯ (ಅ) ಸಮೆದಂತಿರೊಪ್ಪಿದರ್.

*ಪೂರ್ವಪುರಾಣ ೧೬-೭ ರಲ್ಲಿ 'ಅನುಂಧರಿ' ಎಂದಿದೆ. †ಪೂರ್ವಪುರಾಣ ೧೬-೪೭ ರಲ್ಲಿಈ ಆಭರಣಗಳು ಹೇಳಲಾಗಿವೆ.

ವ॥ ಪುತ್ರೀದ್ವಯಮನವರತಮುಪರಕುಮಾರಕರಕಿಸಲಯಪಿಧಾಯಮನಾಸಹಾ—ಯುಷ್ಮಾಸುಪ್ರಜನಿತಮಂದಮಾರುತಾಂದೋಳಿತಸೂಕ್ಷ್ಮಕ್ಷೌಮಾಂಬರಪಲ್ಲವನನೇ-ಕವಿಧಜನಾಭಿನ್ನಂದನಸಂಸ್ತೂಯಮಾನಸ್ತ್ರೀವಿನಾಪತರಣಜನ್ಮಾಭಿಷೇಕಪ್ರತಿಬುದ್ಧ-ನಿಜನಿಸರ್ಗನಮಲಿನಾಕರ್ಣನೋದೀರ್ಣವಂಜಸಿತಪದನಸರಸೀರುಹನನತ—ಬನಿಜನಪದಜನಪದಜನಮಕುಟಮಣಿಮರೀಚಿಸ್ಪ್ರುಜಪಿಂಜರಿತೋತ್ತುಂಗಸಿಂಹಾ-ಸನಾಸೀನನಂ ವೃಷಭಸ್ವಾಮಿಯಂ, ಸಕಲಕಲಾಕಲಾಪಮನೋದ್ಯೋತನವೇಳೋತ್ಸುಕಾತಿಶಯಮನು-ದಿನಮುಪಾಸಿಸುತ್ತಿರೆ,

ನ್ಯೂನವಿಷತತ್ತ್ವಾಗ್ರತೆಯಿಂದೋಲಿದಮಲಂಕೃತಿಯುಮನ್ವೃತ್ತಿ ಹಂಸೀರಣನ್ನೂ-
ಪುರಿಯುರ್ ನಾಜಸ್ರಕಾಂಚೀಮಣಿಮಣಿರವರಾದೋಳಿಸಿಯುರ್ ತಾರತಾರಾ-।
ತರಳೋದ್ಯದ್ವಿಪ್ರಮುಕ್ತಾಫಲವಿಲಸದಲಂಕಾರಿಯುರ್ ಬ್ರಾಹ್ಮಿಯುಂ ಸೌಂ-
ದರಿಯುಂ ಮೆಯ್ಯಿಕ್ಕಿ ದೂರಾಂತರದೊಳೆ ಪೊಡೆವಟ್ಟಿಯ್ದೆ ವಂದಿರ್ದರಾಗಳ್ ॥೩೬॥

ತೆಗೆದುತ್ಸಂಗದೊಳಿಟ್ಟೊ-
ಯ್ಯಗೆ ಮೊಗಮಂ ನೋಡಿ ಕರ್ಚಿ ಕದಪಂ ನುಡಿದಂ।
ಜಗದಧಿಪತಿ ನಿಮ್ಮಿರ್ಬ್ಬರ
ನಗಬಿಸ್ರಿ ಮಸ್ಕೊಳಿಪ ವಿನಯವಿಲಸನನಿಲಯಮಂ ॥೩೭॥

ವ॥ ಅದು ಕಾರಣಂ,

ಈವಯಸಮಂನೀಶೀಲಮ-
ನೀವಿನಯಮನೆಯ್ದೆ ವಿದ್ಯೆಯಿಂ ಪುದಿದೊಡೆ ಮ-।
ತ್ತೇವೇಳ್ಪುದೊ ನೀಮೆ ಜಗ-
ತ್ಪಾವನೆಯರಿರಕ್ಕೆ ನಿಮಗಮಗ್ಗಳರೊಳರೇ ॥೩೮॥

ವ॥ ಆದಱಿಂ ನಿಮಗೆ ವಯಸಮೆಂಬುದು ವಿದ್ಯಾಭ್ಯಾಸಯೋಗ್ಯಮೆಂದು ವಿಶಾಲಹೇಮಪಟ್ಟಕದೊಳಾತ್ಮಹೃತ್ ಪದ್ಮನಿಸದ್ಮೆಯಂತೆ ಸರಸ್ವತಿಯಂ ಪೂಜಾಪೂರ್ವ್ವಕಮಧಿವಾಸಿಸಿ ನಿಜತನೂಜೆಯರಿರ್ವ್ವರುಮನೆರಡುಂ ಕೆಲದೊಳಿರಿಸಿ,

೧-೧ (ಜ) ಹಂಸೀಕ್ವಣನ್ನೂ. ೨-೨ (ಬ) ಮಧ್ಯೆಯಂ; (ಜ) ಪದ್ಮೆಯಂ.

ಮುನ್ನಂ ತ್ರಿಲೋಕ[೧]ಗುರು[೧] ಸಿ-
ದ್ಧನ್ನಮಯೆಂದಱಿಪಿ ಮುಖ್ಯಮಂಗಳಪದಮಂ |
ಕನ್ನೆಗೆ ಸಿರಿಯಾಕೆಗೆ ಬಱ-
ಯನ್ನಯದಿಂ ಬರೆದು ತೋಱಿದಂ ಲಿಪಿಗಳುಮಂ ||೫೯||

ವ|| ಅಂತಕಾರಾದಿಹಕಾರಾಂತಸ್ವರವ್ಯಂಜನಭೇದಭಿನ್ನಶುದ್ಧಾಕ್ಷರಂಗಳುಮಂ ಯೋಗವಾಹಚತುಷ್ಕಮುಮಂ ಸಂಯೋಗಾಕ್ಷರಂಗಳುಮಂ ಬ್ರಹ್ಮಿಗೆ ದಕ್ಷಿಣಹಸ್ತದೊಳುಪದೇಶಂಗೆಯ್ದು,

ಸುಂದರಿಗೆ ಗಣಿತಮಂ ದಲಿ-
ತೇಂದೀವರನಯನೆಗೆಡದ ಕಯ್ಯೊಳ್ ಭವ್ಯಾ-|
ನಂದಕರಂ ಸ್ಥಾನಕ್ರಮ-
ದಿಂದಂ ಪುರುದೇವನಱಿಯೆ ತೋಱಿದನಾಗಳ್ ||೬೦||

ವ|| ಮತ್ತಂ[೨]ಸ್ವಯಂಭುವಾ[೨]ಭಿಧಾನಪದವಿದ್ಯಾಚ್ಛಂದೋವಿಚಿತ್ಯಲಂಕಾರಂಗಳೆಂಬ ಮೂಱುಂ ಪೆಸರ್ವಡೆದ ವಾಙ್ಮಯಮುಮಂ, ಸಮಸ್ತಕಲಾಕಲಾಪಮುಮನಾದಿಬ್ರಹ್ಮನುಪದೇಶಂಗೆಯ್ದು ನಿಜಾತ್ಮಜೆಯರಿರ್ವರುಮಂ ವಿದ್ಯಾಪರಿ[೩]ಪೂರ್ಣೆಯರ್ ಮಾಡಿ[೩]ಭರತಂಗೆ ಭರತಮುಮನರ್ಥಶಾಸ್ತ್ರಮುಮಂ, ವೃಷಭಸೇನಂಗೆ ಗೀತವಾದ್ಯಾರ್ಥಸಂಗ್ರಹಮಪ್ಪ ಗಾಂಧರ್ವಶಾಸ್ತ್ರಮುಮನನಂತವಿಜಯಂಗೆ ವಿಚಿತ್ರಚಿತ್ರಕಲೆಯುಮಂ, ವಾಸ್ತುವಿದ್ಯೆಯುಮನುಪದೇಶಂಗೆಯ್ದು, ಬಾಹುಬಲಿಗೆ ಕಾಮತಂತ್ರಸಾಮುದ್ರಿಕಾಯುರ್ವೇದಧನುರ್ವೇದಹಸ್ತ್ಯಶ್ವತಂತ್ರರತ್ನ[೪]ಪರೀಕ್ಷೆಗಳುಮಂ[೪] ಮತ್ತಮಿವು ಮೊದಲಾಗೆ ಪೆಱವುಂ ಲೋಕೋಪಕಾರಿಗಳಪ್ಪ ಶಾಸ್ತ್ರಂಗಳೆನಿತೊಳವನಿತುಮಂ ಮತ್ತಿನ [೫]ತನೂಜರ್ಗೆಲ್ಲ[೫]ಮುಪದೇಶಂಗೆಯ್ದನಿಂತು,

ಉತ್ತಮವಿ ಗುಱಿಯಾದ ತನೂಭವರೆಯ್ದೆ ಚಿತ್ತಮಂ
ಪತ್ತಿಸೆ ಪತ್ತಿದಂಗನೆಯರೊಳ್ ಬೆಸಕೆಯ್ವಸುರೇಂದ್ರ[೬]ರಾಗ[೬]ಸಂ-|
ಪತ್ತು ಮನಂಗೊಳುತ್ತುಮಿರೆ ಲಕ್ಕೆಯ ಲೆಕ್ಕದೊಳೊಂದಿ ಪೂರ್ವಮಿ-
ಪ್ಪತ್ತು ನಿರಂತರಂ [೭]ನಡೆದುದಾ[೭]ವೃಷಭಂಗೆ ಕುಮಾರಕಾಲದೊಳ್ ||೬೧||

೧-೧ (ಅ) ಪತಿ. ೨-೨ (ಬ) ಸ್ವಯಂಭೂತಾ. ೩-೩ (ಚ) ಪೂರ್ಣೆಯರುಮಪ್ಪಂತು ಮಾಡಿ. ೪-೪ (ಅ) ಪರೀಕ್ಷೆಯುಮಂ. ೫-೫ (ಚ) ತನೂಜವರ್ಗಕ್ಕೆಲ್ಲ. ೬-೬ (ಅ,ಬ) ರಾಜ. ೭-೭ (ಬ) ನೆರೆದುದಾ.

ಮಾತೃಕಸಾಧಾರಣಾನೂಪಜಾಂಗಲಭೇದಂಗಳು೧ಮನಂತಪಾಲಿ೧ಪಾಲಿತ—ದುರ್ಗ೨ಪರಿವೃತಾಂತಂಗಳುಂ೨ ಲುಬ್ಧಕಾರಣ್ಯಚರಪುಳಿಂದಶಬರಾದಿಪರಿರಕ್ಷಿ—ತಾಂತರಾಳದೇಶಂಗಳುಮಪ್ಪ ಕಾಶಿಕೌಸಲಕಲಿಂಗವಂಗಕಾಶ್ಮೀರಕರಹಾಟಕ—ರ್ಣ್ಣಾಟಕಚೋಳಕೇರಲಪಾಂಚಾಲಮಾಳವಮಹಾರಾಷ್ಟ್ರಸೌರಾಷ್ಟ್ರವನವಾ—ಸ್ಯಾಂಧ್ರಕಾಂಭೋಜಬಾಹ್ಲಿಕತುರುಷ್ಕ೩ಕೇಕಯ೩ಸೌವೀರಾಭೀರಚೇರಶೂರ—ಸೇನಾಪರಾಂತಿಕವಿದೇಹಸಿಂಧುಗಾಂಧಾರಕುರುಜಾಂಗಣವಿದರ್ಭ೪ವತ್ಸಯವನ—ಚೇದಿಪಲ್ಲವದಶಾರ್ಣ್ಣಾವಂತಿವನಭೇದಿ೪ಕಚ್ಛಮಹಾಕಚ್ಛಮಗಧಾವನಿರಮ್ಯ—ಕಾಶ್ಮೀರಕುರು೫ಸಮುದ್ರಕಾದಿ೫ವಿವಿಧವಿಷಯಂಗಳುಮಂ, ತಜ್ಜನಪದಮಧ್ಯಂಗ—ಳೊಳ್ ಪರಿಖಾವಪ್ರಪ್ರಾಕಾರಗೋಪುರಾಟ್ಟಾಲಕಾಲಂಕೃತಂಗಳಪ್ಪ ರಾಜಧಾನಿ—ಗಳುಮನವಱ ಬಳಸಿಯುಂ ಯಥೋಚಿತಪ್ರದೇಶಂಗಳೊಳೇಕವೃತ್ತಿಪರಿವೃತಂಗ—ಳುಮನತಿಸಮೃದ್ಧಕೃಷೀವಲಕುಲಾಧಿಷ್ಠಿತಂಗಳು೬ಮಭಿರಾಮ೬ಜಲಾಶಯಂಗ—ಳುಮಂ, ೭ಪ್ರಭೂತಯವಸೌಗಂಧಕಂಗ೭ಳುಮಂ ಸಮಸ್ತಸಸ್ಯಸಂಪತ್ಸಂಪ—ನ್ನಸುಕ್ಷೇತ್ರಂಗಳುಮಂ, ಕ್ರೋಶದ್ವಿಕ್ರೋಶ೮ಸೀಮ್ನಿಕ೮ಪಂಚಶತಕುಟುಂಬಿ—ಕುಲಾವಿರ್ಭಾವಿತಾಧಮೋತ್ತಮಭೇದಂಗಳುಮಂ ಸರಿದ್ಗಿರಿದರೀಭೂರುಹಸೇತು—ವನಸೀಮೋಪಲಕ್ಷಿತಂಗಳುಮಪ್ಪ ಮಹಾಗ್ರಾಮಂಗಳುಮಂ, ಪೂರ್ವೋತ್ತ—ರಾಂಭಃಪ್ಲವಂಗಳುಮಂ ಪರಿಖಾವಪ್ರಪ್ರಾಕಾರಗೋಪುರಾಟ್ಟಾಲಪರಿವೃತಂಗ—ಳುಮಂ ನಾನಾಭವನವಿನ್ಯಾಸೋ೯ದ್ಯಾನಜಲಾಶಯಂ೯ಗಳುಮಂ ಪ್ರಧಾನ—ಪುರುಷಾಧ್ಯಾಸಿತಂಗಳಪ್ಪ ಪುರಂಗಳುಮಂ, ಗಿರಿ೧೦ಸರಿತ್ಸಂರುದ್ಧಂಗಳಪ್ಪ೧೦—ಖೇಟಂಗಳುಮಂ, ಉನ್ನೀಧರನಿರುದ್ಧಂಗಳಪ್ಪ ಖರ್ವಡಂಗಳುಮಂ, ಪಂಚಶತಗ್ರಾಮಪರೀತಂಗಳಪ್ಪ ಮಡಂಬಂಗಳುಮಂ, ಸಮುದ್ರೋತ್ತೀರ್ಣ್ಣ—೧೧ನಿವಾಸಂಗ೧೧ಳಪ್ಪ ಪಟ್ಟಣಂಗಳುಮಂ, ನಿಮ್ನಗಾತಟನಿಕಟವರ್ತ್ತಿಗಳಪ್ಪ ೧೨ದ್ರೋ೧೨ಣಾಮುಖಂಗಳುಮಂ, ೧೩ಶಿಲಾ೧೩ವ್ಯೂಢಧಾನ್ಯಸಂಚಯೋಪ—ಭೋಗಿಜನನಿವಾಸಿಗಳಪ್ಪ ಸಂವಾಹಂಗಳುಮಂ, ಘೋಷಾಕರಸಂಗ್ರಹಾಂತರ ಗೋವ್ರಜಂಗಳುಮನವನಾಳ್ವ ತೆಱಗೊಳ್ವ ಬಿಟ್ಟಿಬೆಸಕೆಯ್ಸಿಕೊಳ್ವ ೧೪ಭೋಗಿಪ೧೪ ನಿಯೋಗಂಗಳು೧೫ಮನಿಂತು ಮಾಡಿ೧೫

೧-೧ (ಅII) ಮನಂತಕಾಲ; (ಬ) ಮನಂತಪಾರಿ. ೨-೨ (ಬ) ಪರಿವೃತಂಗಳುಂ. ೩-೩ (ಅ,ಬ) ಕೈಕೇಯ. ೪-೪ (ಚ) ವತ್ಸಾವಂತಿವನಭೇದಿಪಲ್ಲವದಶಾರ್ಣ. ೫-೫ (ಅ) ಸೌಭದ್ರಕಾದಿ; (ಅII) ಸೌಗಂಧಿಕಾದಿ. ೬-೬ (ಚ) ಮಪ್ಪ ಭಿರಾಮ. ೭-೭ (ಬ) ಪ್ರಣೂತರುಶೋಧಕಂಗ; (ಚ) ಪ್ರಭೂತಯುವಸೌಧಕಂಗ. ೮-೮ (ಚ) ಸೀಮಾಭಾಗ ಯೋಜನ. ೯-೯ (ಚ) ದ್ಯಾನಲೀಲಾಜಲಾಶಯಂ. ೧೦-೧೦ (ಅ) ಸನ್ನಿರುದ್ಧಂಗಳಪ್ಪ; (ಬ) ಸುರುದ್ಧಂಗಳಪ್ಪ. ೧೧-೧೧ (ಬ) ನೌನಿವಾಸಂಗಳಪ್ಪ; (ಒ) ನಿವಾಸಿಗಳಪ್ಪ. ೧೨-೧೨ (ಚ) ಮಹಾದ್ರೋ. ೧೩-೧೩ (ಅII) ಶಿರೋ. ೧೪-೧೪ (ಅ) ಭೋಗಿಪರಿ; (ಬ) ಭೋಗಿಪತಿ. ೧೫-೧೫ (ಚ) ಮಂ ಮಾಡಿದಂ, ಇಂತು,

ಸುರಕಾಂತಾನೃತ್ಯಮೆತ್ತಂ ಪಸರಿಸಿರೆ ನಭೋಭಾಗದೊಳ್ ದೇವತೂರ್ಯ್ಯ-
ಸ್ವರಮಾಶಾಚಕ್ರದೊಳ್ ಬಳ್ವಳ ಬಳೆದಿರೆ ನಾನಾವಿಮಾನಂಗಳೊಳ್ ಭಾ-|
ಸುರರತ್ನಜ್ಯೋತಿಗಳ್ ತಳ್ತಳಿಸಿರೆ ಸುರವೃಂದಾನ್ವಿತಂ ಬಂದನಾಗಳ್
ಸುರರಾಜಂ ರಾಜದೈರಾವತ¹ವಿಪುಲ¹ತಲಸ್ಕಂಧದೇಶಾಭಿರಾಮಂ ||೬೭||

ವ|| ಅಂತು ಭುವನತ್ರಯಚೂಡಾಮಣಿಯ ರಾಜ್ಯಾಭಿಷೇಕಮೊಸಗೆಯಂ
ನಾಭಿರಾಜಾದಿರಾಜಸಭೆಗಮಱಿಪಿ ಮಹಾನದ್ಯುಭಯತಟವೃತ್ತಾನ್ವಿರಚಿತ-
ವೇದಿಕಾವಿರಾಜಮಾನದೊಳ್ ಚಂಚತ್ಪಂಚರತ್ನಚೂರ್ಣ್ಣವಿರಚಿತರಂಗವಲ್ಲೀ-
ವಿಲಾಸ²ವಿರಚಿತಸುರ²ಶರಾಸನದೊಳ್ ಪರಸ್ಪರಸ್ಪರ್ದ್ಧಮಾನಪರಿಕ್ಷಿಪ್ತಮಲ್ಲಿಕಾ-
ಮುಕುಲಮುಕ್ತಾಫಲೋಪಶೋಭಿತದೊಳಿಂದ್ರನೀಲಮಣಿಕುಟ್ಟಿಮಸಂಕ್ರಾಂತ-
ಮೌಕ್ತಿಕದಾಮಾಭಿರಾಮದೊಳ್ ಪರಿವಿರಚಿತಚಿತ್ರಾಂಬರವಿತಾನಚ್ಛಾಯಾಚ್ಛು-
ರಿತರಂಗಭೂಮಿಯೊಳ್ ಮಂಗಲೋಪಕರಣಸಮುದ್ಧರಣ³ನಿಯಮಿತಾನೇಕ-
ಕಾಮಿನೀಕರಪಲ್ಲವವಿಧೂಯಮಾನಚಾರುಚಾಮರಮರುದಾಂದೋಲಿತಪ್ರಾಕಾ-
ರಪ್ರಲಂಬಮಾನಮಂದಾರಮಾಲಾವಿಲಾಸದೊಳನ್ಯೋನ್ಯಹಸ್ತಪರಂಪರೋಪ-
ನೀಯಮಾನನಾನಾಸ್ನಾನೋಪಕರಣದೊಳ್³ ನಿಯಮಿತಾನೇಕನಾಕಕಾಮಿನೀ-
ನಿರುದ್ಧಸಂಚಾರಮಾರ್ಗ್ಗದೊಳ್ ಪರ್ಯ್ಯಂಕನಿಹಿತಬಹುಪ್ರಕಾರಭೃಂಗಾರ-
ಮಂಗಲಜಲಸಂಭೃತಶಾ⁴ತಕುಂಭಕುಂಭಮಣಿ⁴ದರ್ಪ್ಪಣಪ್ರಸಾಧಿತದಿಗಂಗನಾ-
ಮುಖದೊಳಮರವಾರವನಿತಾಕರಪಲ್ಲವವಿಧೂಯಮಾನವಿಲಾಸದೊಳ್ ಗಂಧ-
ರ್ವ್ವಸಮಾರಬ್ಧಸಂಗೀತಮೃದುಮೃದಂಗನಾದಪ್ರಮೋದಿತಾಶೇಷ⁵ರಾಜದ್ರಾಜ-
ಕದೊಳ್⁵ಸಂಚರತ್ ಸುರವಿಲಾಸಿನೀ⁶ಸಲಿಲ⁶ಮೃದುಪದವಿನ್ಯಾಸಮಂಜು-
ಗುಂಜನ್ಮಂಜೀರಕಮನೋಹರಝುಂಕಾರಪ್ರವರ್ದ್ಧಮಾನಮದಾಲಿಕುಲಕೋಲಾ-
ಹಲದೊಳ್ ರಾಜಭವನಾಂಗಣಮಧ್ಯಸ್ಥಿತರಾಜ್ಯಾಭಿಷೇಕಮಂಟಪದೊಳ್,

ಮುನ್ನಮೆ ನಿಱಿಸಿದ ಮಣಿಖಚಿ-
ತೋನ್ನತಹರಿಪೀಠದೊಳ್ ಜಗತ್ಪತಿಯಂ ಮಾ-|
ನೋನ್ನತನಂ ಪ್ರಾಙ್ಮುಖದಿಂ-
⁷ಗನ್ನತ⁷ಸುರಮೌಲಿಲಾಲಿತಾಂಘ್ರಿದ್ವಯನಂ ||೬೮||

ವ|| ಇರಿಸಿ ಮಹಾ⁸ಸರಿತ್ಸರಸೀಸರತ್ಸಮುದ್ರ⁸ನಂದೀಶ್ವರದ್ವೀಪ⁹ವಾಸಿಗ⁹-
ಳಿಂದಂ ಬಂದ ತೀರ್ಥೋದಕಂಗಳಿಂದಂ ತೀವಿದ ಕಲಧೌತಕಲಶಂಗಳನಮ-

೧-೧ (ಚ) ವಿಮಳ. ೨-೨ (ಅ,ಚ) ವಿರಾಜಿತಸುನಾಸೀರ. ೩-೩ (ಅ,ಬ) ಪ್ರತಿಗಳಲ್ಲಿ ಮುಂದಿನ 'ವಿಧೂಯಮಾನ' ಪದದ ಮುಂದೆ ಬಂದಿದೆ. ೪-೪ (ಚ) ಶಾಂತಕುಂಭಮಣಿ. ೫-೫ (ಚ) ರಾಜದ್ರಾಜಭವನದೊಳ್. ೬-೬ (ಅ) ಲೀಲಾ; (ಚ) ಲಲಿತ. ೭-೭ (ಚ) ವನ್ನತ. ೮-೮ (ಚ) ಸರಿತ್ಸರಸೀಸಮುದ್ರ. ೯-೯ (ಅ) ವಾಪಿ.

ರತರುಪಲ್ಲವಪ್ರಸೂನಪರಿಸ್ರಗ್ಭ್ರಮುಕುಂಗಕನಮರರಾಜಸಮಾಜ[೧] ನಾಭಿ-
ರಾಜಂ ಬೆರಸೆತ್ತಿಕೊಂಡು,

ಪೆಸೆಗಳ್ ದೇವಾಂಗನಾಮಂಗಲಕಲಕಲದಿಂದಂ ದಿಗಂತಂಬರಂ ಘೂ-
ರ್ಣಿಸೆ ಕ್ಷೀರಾಬ್ಧಿಕ್ಷೀರಂ ರಾಗಂಬೆರಸು ಸುರಿಯೆ ತದ್ವಾರಿಧಾರಾಸಹಸ್ರಂ|
ಪಸರಂಪೆತ್ತತ್ತಿರುತ್ತಿರ್ಪ ಪೃಥಿವಿಯೊಳಿದಿರೆ ಮುಂ ಪ್ರೀತಿ ಜನ್ಮಾಭಿಷೇಕ-
ಕ್ಕೆ ಸಮಂ ಪೇಳೆಂಬಿನಂ ಕಣ್ಗೆಸೆದುದು ಜಗತೀರಾಜರಾಜ್ಯಾಭಿಷೇಕಂ ||೬೯||

ವ|| ತದನಂತರದೊಳ್ ನಾಗಪ್ರಾದಿವ್ಯಂತರಾಮರರ್ ಮಾಡಿದ ೨ಸಾಮಾನ್ಯಾ೨-ಭಿಷೇಕದೊಳಂ ಪೌರರ್ ಮಾಡಿದ ನಳಿನೀಪತ್ರಪುಟಪ್ರಸಾದಿತಸಾರಜಲಪಾದಾಭಿಷೇಕದೊಳಮಭಿಷೇಕವಿಧಿಯಂ ನಿರ್ವರ್ತಿಸಿ ವಿನಯಯಶಸ್ವಿಪ್ರಾಧಿನ್ಯಾಸ-ನೀತನೆನಿಸಿದ ಮಜ್ಜನಪೀಠದೊಳಿರ್ದಭಿಷಿಕ್ತನಾಗಳ್ ೩ಕೆಲಂಬರರುಣ೩ಮಣಿಕುಲ-ಪ್ರಭಾಪಟಲ೪ಪಿಂಜರಂಗಳಾಗಿ೪ ನಿಜರಾಗಪ್ರವಾಹಶಂಕೆಯುಂ ಮಾಡುವ ಜಲಂಗಳಿಂದಂ, ಕೆಲಂಬರಿಂದುಕಾಂತಕಲಶಕಿರಣದ್ವಿಗುಣ೫ಧವಲಂಗಳಾಗಿ ನಿಜ-ದಂತ೫ಕಾಂತಿಬಹಳಪರಿಹಾಸಚ್ಛಾಯಾವಿಭ್ರಮಮಂ ಪುಟ್ಟಿಸುವ ತೋಯಂಗ-ಳಿಂದಂ, ಕೆಲಂಬರಿಂದ್ರನೀಲಕಲಶರುಚಿನಿಚಯನಿಚಿತಂಗಳಾಗಿ ೬ನಿಕ್ಷಿಪ್ತಾ*ಧಿ-ವಾಸನೀಲನಲಿನೀದಲದ್ಯುತಿ೬ಪಟಲವಿಭ್ರಾಂತಿಯಂ ಪಡೆವ ಸಲಿಲಂಗಳಿಂದಂ,

೭ನಿಮಿರ್ದಳ್ಳಾಡುವ೭ಕಾಂತ೮ಕುಂತಳ೮ಕುಲಂ ತುಂಗಸ್ತನಕ್ಷೋಭವಿ-
ಭ್ರಮಮುತ್ತುಂಗಪರಿಪ್ರಮಧ್ಯಮುಚಿತಸ್ವೇದೋದ್ಗಮಂ ಮಜ್ಜನ-|
ಶ್ರಮದೊಳ್ ಗಾಡಿಯನೀಯೆ ಸೌಂದರಿಯರೇಕಚ್ಛತ್ರರಾಜ್ಯಾಭಿಷೇ-
ಕಮಿದೆಂಬಂತಿರೆ ಮಜ್ಜನಂಬುಗಿಸಿದರ್ ಮಸ್ವಸ್ವಯೋತ್ತಂಸನಂ ||೭೦||

ವ|| ಆಗಳ್ ಮಜ್ಜನಾವಸರಮಂಗಲಪಾಠಕರ್ ೯ಮಧುರಗಂಭೀರನಿನದ೯-
ಮನಾಲಿಸುತ್ತುಂ,

ಅಂಭೋಭಾರವಿಜೃಂಭಿತ-
ಕುಂಭಾಂಭೋದಂಗಳಂದದಿಂ ಸುರಿಯೆ ಚತುಃ|
ಕುಂಭಂಗಳ್ ಭೂಭುವನ-
೧೦ಸ್ತಂಭಂ೧೦ ಮಜ್ಜನಮನೆಯ್ದೆ ನಿರ್ವರ್ತಿಸಿದಂ ||೭೧||

೧ (ಅ,ಬ,ಚ) ಮುಂ. ೨-೨ (ಚ) ಧಾರಾ. ೩-೩ (ಅ) ಕೆಲ್ಲರರುಣಮಣಿ. ೪-೪ (ಚ) ಜಟಿಳಪಿಂಜರಂಗಳಾಗಿ. ೫-೫ (ಚ) ಧವಳನಿಜದಂತ. ೬-೬ (ಚ) ನಿಕ್ಷಿಪ್ತಾನಿಳನಳಿನದ್ಯುತಿ. ೭-೭(ಚ) ನಿಮಿರ್ದಲ್ಲಾಡುವ. ೮-೮ (ಬ) ಕುಂಡಲ. ೯-೯ (ಚ) ಮಧುರನಿನದ. ೧೦-೧೦ (ಚ) ಸ್ತಂಭನ.

*ಮಲ್ಲಿನಾಥಪುರಾಣದಲ್ಲಿ ೧೨-೧೧ ರಲ್ಲಿ 'ಮೇಗೊಗೆದಂಶುಪಟಳವೆಂಬ' ಎಂದಿದೆ.

ವ|| ಅಂತು ನಿಷ್ಪನ್ನಮಜ್ಜನನುಂ [೧]ವಿನಿಹಿತ[೧]ನೀರಾಜನನುಮಾಗಿ ಸುರರಾಜಸಮರ್ಪಿತಸಂತಾನಕುಸುಮದಾಮಾಂಬರಭೂಷಣಪ್ರಸಾಧಿತಂ ಪುರುದೇವಂ ಮೃಗೇಂದ್ರವಿಷ್ಟರದೊಳಿರೆ ನಾಭಿರಾಜಂಬೆರಸು ಬಂದು,

|| ಮಾಲಿನೀ ||

ಸಕಲಮಕುಟಬದ್ಧಾಧೀಶನೈ ದೇವ ನೀನುಂ
ಮಕುಟ[೨]ಧರನೆಯಾಗಿ[೨]ರ್ಪೋಟ್ಕಿಮೆಂದಾಗಳಿಂದ್ರಂ
ಮಕುಟದೊಡನಲಂಪಿಂ ಪಟ್ಟಮುಂ ಕಟ್ಟಿ ಲೋಕ-
ಪ್ರಕಟಮೆನೆ ಪೊವಟ್ಟಂ ತ್ರಾದಿದೇವಪ್ರಭಾವಂ ||೭೨

ವ|| ಅಂತನೇಕಮಕುಟಬದ್ಧ[೩]ಮಣಿಮಕುಟಮಣಿಕರ್ಷಣ[೩]ಮಸೃಣಿತಚರಣನವಾಪ್ತಾಧಿರಾಜ್ಯಂ ನಾಭಿರಾಜಸನ್ನಿಧಾನದೊಳಖಿಲಪ್ರಜಾಪಾಲನದೊಳತಿಪ್ರಯತ್ನಪರನಾಗಿ ತನ್ನ ಮುನ್ನ ಪಡೆದ ವರ್ಣತ್ರಯಕ್ಕಂ ಭರತನಿಂದಮಿನ್ನಪ್ಪ ವಿಪ್ರವರ್ಣಕ್ಕಂ ಯಥೋಚಿತವೃತ್ತಿಗಳನಱಪಲೆಂದು,

ವದನಂ ತೋಳ್ ತೊಡೆ ಪಾದಮೆಂಬಿವನಿಮಂ ಶೂಶ್ರೂಷೆಗೆಯ್ಯಲ್ಕೆ ಲಾಭದಲಂಪಿಂ ನಡೆಯಲ್ಕೆ ಕೈದು[೪]ವಿಡಿಯಲ್ಕೋದಲ್ಕ ಜಂ[೪]ಬೇಱೆ ತೋಱದೊಡಾವರ್ಣಚತುಷ್ಕಮುಂ ಕುಮತಿಗಳ್ ತತ್ಸ್ಥಾನದೊಳ್ ಮುನ್ನ ಪುಟ್ಟಿದುವೆಂಬರ್ ಪುಸಿ ನನ್ನಿಯಿಂದಱಯವೇಂ ಲೋಕಂ ಮರುಳ್ಗೊಂಡುದೋ||೭೩

ವ|| ಅಂತು ಭವಿಷ್ಯದ್ವಿಜನ್ಮವರ್ಣಕಧ್ಯಯನಾಧ್ಯಾಪನದಾನಪ್ರತಿಗ್ರಹಯಜನಯಾಜನವಿಶಿಷ್ಟವೃತ್ತಿಯುಮಂ, ಕ್ಷತ್ರಿಯಜಾತಿಗೆ ಸತ್ಯತ್ಯಾಗಪ್ರಜಾಪಾಲನಶರಣಾಗತರಕ್ಷಣಪ್ರಹರಣಕ್ಷಮಾದಿಗುಣಾಚರಣಮುಮಂ, ವಣಿಗ್ವಂಶಕ್ಕೆ ಜಲಸ್ಥಲಯಾತ್ರಾ[೫]ವೃತ್ತಿ*ವಾರ್ತಾ[೫]ಪ್ರವರ್ತನಮುಮಂ, ಶೂದ್ರಾನ್ವಯಕ್ಕೆ [೬]ಬ್ರಾಹ್ಮಣಾದಿ[೬]ವರ್ಣತ್ರಯಕ್ಕಂ ಶೂಶ್ರೂಷಾನ್ಯಕರ್ಮಕರಣೋಪಜೀವನಮುಮಂ ನಿಱಸಿ,

ಈ ಮಾಱ್ಕೆಯೊಳೆಸಗದರಂ
ಹಾಮಾಧಿಕ್ಕಾರದಂಡದಿಂ ದಂಡಿಪುದೆಂ-
ದಾಮನುಕುಲತಿಲಕಂ ಪೇ-
ೞ್ದೀಮಹಿಗಾತ್ಮೀಯಮಹಿಮೆಯುಂ ಪ್ರಕಟಿಸಿದಂ ||೭೪||

೧-೧ (ಕ) ನಿಹಿತ; (ಬ) ವಿಹಿತ. ೨-೨ (ಚ) ಧರನುಮಾಗ. ೩-೩ (ಅ) ಮಣಿಮಕುಟಕಷಣ; (ಬ) ಮಣಿಕಷಣ. ೪-೪ (ಚ) ವಿಡಿಯಲ್ಕೆಂದೆಂದಜಂ. ೫-೫ (ಅ) ವೃತ್ತಿರ್; (ಚ) ಸಂವೃತಸಮರ್ಥ ೬-೬(ಅ) ದ್ವಿಜಾತ್ಯಾದಿ.

*ಪೂರ್ವಪುರಾಣದ ೧೬-೨೪೪ರಲ್ಲಿ 'ವೃತ್ತಿರ್ವಾರ್ತಯಾಯುತ:' ಎಂದಿದೆ.

ವ॥ ಮತ್ತಂ ದಂಡಧರರಿಲ್ಲದಂದು ತಂತಮ್ಮ ವೃತ್ತಿಗಳಂ ಪ್ರಜೆಗಳತಿಕ್ರಮಿಸಿ ೧ನಡೆವರೆಂದುಮತ್ಯಂತದುಷ್ಟ೧ಬಲವದ್ದುರ್ಬಲಗ್ರಸನದಿಂ ದುರ್ಬಲ೨ಜನಮೆಂಬ೨ ಮಾತ್ಸ್ಯನ್ಯಾಯಂ ಪ್ರವರ್ತಿಸುಗುಮೆಂದುಂ, ಯಥೋಚಿತ೩ಧರಣೀಧರರಪ್ಪ೩ಭೂನಾಥಕರನರ್ಪರ ಪದವಿಯೊಳ್ ನಿಱಿಸಲ್ ಬಗೆದು ಮೊದಲೋರ್ವರಭಿಷಿಕ್ತಮಂಡಳಿಕರಂ ಹತಂಗ್ರಜನ್ಮಕುಟುಂಬಪರಿವೃತರಂ ಸೋಮಪ್ರಭಹರಿಯಕಂಪನಕಾಶ್ಯಪರಂ ಬರಿಸಿ ಸಮುಚಿತಪ್ರತಿಪತ್ತಿಗಳೊಳಿರಿಸಿ, ತನಗಾಪ್ತನಪ್ಪ ಸೋಮಪ್ರಭಂಗೆ ಕುರುರಾಜಾಭಿಧಾನಮನಿತ್ತು ಕುರುಕುಲಾಗ್ರಗಣ್ಯನಂ, ಹರಿಗೆ ಹರಿ೪ಕಾಂತನಾಮ೪ಮನಿತ್ತು ಹರಿವಂಶಧ್ವಜನನಕಂಪನಂಗೆ ಶ್ರೀಧರಾಂಕನಾಮಮನಿತ್ತು ನಾಥಾನ್ವಯಪ್ರವರ್ತನನಂ, ಕಾಶ್ಯಪಂಗೆ ಮಘವಾಖ್ಯನಾಮಮನಿತ್ತುಗ್ರವಂಶಲಲಾಮನಂ ಮಾಡಿ, ಕಚ್ಛಮಹಾಕಚ್ಛಪ್ರಮುಖಧರಾಧಿನಾಥರುಮನಧಿರಾಜಪದವಿಯೊಳ್ ನಿಱಿಸಿ,

ಸುತರುಮನವಗ್ರ೫ಹಿವರಭಿಮತ-
ಮತಮೆಂತವರ೫ನಿತ್ತು೬ತಣಿಪಿದಂ೬ಪ್ರಭು ನಿಜಸಂ-।
ತತಿಯುಂ ೭ನಿಱಿಸಿ೭ಸುಹೃತ್ ಸಂ-।
ತತಿಯುಂ ಪೆರ್ಚಿಪುದು ರಾಜ್ಯಫಲಮಿನಿತೆ ವಲಂ ॥೭೩॥

ವ॥ ಅಂತಾದಿದೇವನಿಕ್ಷುರಸಸಂಗ್ರಹಣ೮ಸಮಯಸಮುದ್ಭೂತ೮ನಪ್ಪುದಱಿಂದಂ ಇಕ್ಷ್ವಾಕುಕುಲತಿಲಕನುಂ, ಪ್ರಜಾಜೀವನೋಪಾಯಮನದಿಂ ಮನುವುಂ,† ನಿಜಕುಲೋದ್ಧರಣದಿಂ ಕುಲಧರನುಂ, ತೇಜೋವಾಚಕಮಪ್ಪ ೯ಕಾಶ್ಯಮಂ೯ ಪಾಲಿಸುವದಱಿಂ ಕಾಶ್ಯಪನುಂ, ಕೃತಯುಗಾರಂಭಕ್ಕಾದಿಯಾದುದಱಿಂದಾದಿಬ್ರಹ್ಮನುಮೆಂಬಪೂರ್ವಾಭಿ೧೦ಧಾನಂಗಳನ್ವ೧೦ರ್ಥನಾಮಂಗಳುಂ ಲೋಕ೧೧ಪ್ರಸಿದ್ಧಂಗಳಾಗಿ೧೧ರಲೆಂಬತ್ತಮೂಱುಲಕ್ಕೆ ಪೂರ್ವಂ ರಾಜ್ಯಕಾಲಂ ಸಲೆ,

೧–೧ (ಚ) ನಡೆಗುಮೆಂದುಂ, ಅತ್ಯಂತದುಷ್ಟ. ೨–೨ (ಚ) ಜನಂಗಳೊಳ್ ಮತ್ಸ್ಯನ್ಯಾಯಂ. ೩–೩ (ಅ) ದಂಡಧರರಪ್ಪ. ೪–೪ (ಅ) ಕಾನ್ತಾಭಿಧಾನ; (ಬ) ಕಾಂತನಾಮಾಭಿಧಾನ. ೫–೫ (ಅ) ವಗ್ರಭೀತಮಂತರ್ರ; ನಭೀತಮಂತವ. ೬–೬ (ಚ) ನಿಱಿಸಿದಂ. ೭–೭ (ಚ) ತಣಿಪಿ. ೮–೮ (ಅ) ಸಮಯಾಹೂತಭೂತ; (ಚ) ಸಮಯಾಹೂತಭೂತಳ ೯–೯ (ಬ) ಕಾಶ್ಯಪಪ್ರಕಾಶ್ಯಮಂ; (ಚ) ಕಾಶ್ಯಪನಂ. ಪೂ. ಪು. ೧೬–೨೬೬ ನೋಡಿ. ೧೦–೧೦ (ಚ) ಧಾನಮುಂ ಪ್ರಯೋಗಿಪ್ಪನ್ವ. ೧೧–೧೧ (ಚ) ಪ್ರಸಿದ್ಧಮಾಗಿ.

†(ಚ) ಪ್ರತಿಯಲ್ಲಿ ಇಲ್ಲಿ "ಪ್ರಜಾಜೀವನೋಪಾಯಮನನಾಮನದಱಿಂ ಪ್ರಜಾಪತಿಯುಂ" ಎಂದಿದೆ.

ಪೆಸರ್ಗಳ್ ಕರ್ಣ್ಣಾಟವೃತ್ತಸ್ಯಂದಿಗಳೊದವಿದಪೂರ್ವ್ವಾಭಿಧಾನಂಗಳೋರಂ-
[೧]ತೆಸೆಯು[೧]ತ್ತಿರ್ಪ್ಪನ್ನೆಗಂ ಮಾಡಿದ ಕುರುಹರಿನಾಥೋಗ್ರವಂಶಂಗಳಿಂತೀ—|
ವಸುಧಾಚಕ್ರಕ್ಕೆ[೨]ಸಲ್ವನ್ನೆ[೨]ಗಮೆಸೆದಿರೆ[೩]ವರ್ಣ್ಣಾಶ್ರಮಂ[೩]ಕರ್ಮ್ಮಭೂಮಿ-
ಪ್ರಸರಕ್ಕಿಂತಾದಿಯಾದಂ ಸುಕವಿಜನಮನೋಮಾನಸೋತ್ತಂಸಹಂಸಂ ||೭೬||

ನಾನಾಮಾರ್ಗ್ಯಜನಾಂತರಂಗನಿಹಿತಾನಂದೋದಯಂ ದಿವ್ಯಸಂ-
ತಾನಸ್ರಙ್ಮಣಿಭೂಷಣಾಂಬರಧರಂ ಸ್ವಾಧೀನ[೪]ರಾಜನ್ಯ[೪]ಸಂ-
ತಾನಂ ಪುತ್ರಕಲತ್ರಮಿತ್ರಸಹಿತಂ ಸಾಕೇತಸಿಂಹಾಸನಾ-
ಸೀನಂ ಪಾಲಿಸಿದಂ ಮಹೀವಲಯಮಂ ಸಂಸಾರಸಾರೋದಯಂ ||೭೭||

ಗ|| ಇದು ದೇವೇಂದ್ರಮುನೀಂದ್ರವಂದ್ಯ ಪರಮಜಿನೇಂದ್ರಮುಖ-
ಚಂದ್ರವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣ್ಣಸೂಕ್ತಿ-
ಕಲ್ಲೋಲಮಾಲಾಕೀರ್ಣ್ಣಕವಿತಾಗುಣಾರ್ಣ್ಣವ-
ಪ್ರಣೀತಮಪ್ಪಾದಿಪುರಾಣದೊಳ್
ಕರ್ಮ್ಮಭೂಮಿನಿಯೋಗ-
ನಿರೂಪಣಮಷ್ಟಮಾಶ್ವಾಸಂ
ಸಂಪೂರ್ಣ್ಣಂ

೧-೧ (ಚ) ೧ತೆಸಗು. ೨-೨ (ಅ,ಬ) ಸಾಲ್ವನ್ನೆ. ೩-೩ (ಚ) ವರ್ಣಕ್ರಮಂ.
೪-೪ (ಚ) ಸಂಗತ್ವ.

# ನವಮಾಶ್ವಾಸಂ

ಶ್ರೀಪತಿಪುರುಪರಮೇಶ್ವರ-
ನಾಪೂರ್ಣ್ಣಮನೋರಥಂ ನಮನ್ನೃಪಮುಕುಟಾ-।
ಟೋಪಂ ತ್ರಿಲೋಕ್ಯಾಂತ-
ರ್ವ್ಯಾಪಿತಮಹಿಮಂ ಸರಸ್ವತೀಮಣಿಹಾರಂ ॥೧॥

ಸ್ಫುರಿತಮಣಿಖಚಿತಹರಿವಿ-
ಷ್ಟರದೊಳಲಂಕರಿಸಿ ನೆಱೆವ ರಾಜನ್ಯಕಮಂ।
ದರಹಸಿತಮೃದುವಿಲೋಕನ-
ಪರಿಭಾಷಣದಿಂದಮಾದಮಾದರಿಸುತ್ತುಂ ॥೨॥

ವ॥ ಇರೆ,

ಎಱಡೋಳಿಯೊಳಂ ಮೊದಲೊಳ್-
ಭರತೇಶ್ವರಬಾಹುಬಲಿಗಳಿರೆ ಮತ್ತಿನ ಪು-।
ತ್ರರುಮವರ ಕೆಲದೊಳಿರೆ ಸುರ-
ಶರಾಸನಂ [1]ನೆಗೞ್ದುದವರ[1] ಮಕುಟಪ್ರಭೆಯೊಳ್ ॥೩॥

ಮುಗಮುಗಿಸುವ ನವಮೃಗಮದ-
ದಗುರುವ [2]ಕಪ್ಪುರದ[2] ಕಂಪುಮಂ ಸೂಡಿದ ಬಾ-।
ಸಿಗದ ಪೊಸಗಂಪುಮಂ [3]ನೆಱೆ-
[3]ದುಗಿಬಗಿಮಾಡಿದುವು ಚಮರರುಹಪವನಂಗಳ್ ॥೪॥

ಪಸರಿಸಿದ [4]ತೋರ[4]ಹಾರದ
ಪೊಸವೆಳ್ದಿಂಗಳುಮನಮರ್ದೆ ಪೆರ್ದ್ದುಡುಗೆಗಳೊಳ್।
ಮಿಸುಗುವ ಪೊಸಮಾಣಿಕದೆಳ-
ವಿಸಿಲುಮನೊಡಗಾಣಲಾದುದಾಸ್ಥಾಯಿಕೆಯೊಳ್ ॥೫॥

ಎಡೆಗೋದಿರದಿರಿ[5]ಮುದ್ದಂ[5]*
ನುಡಿಯದಿರಿಂ ನೃಪತಿ ನುಡಿಯೆ ನುಡಿಯಿಂ ನೀಮಿ-।
ಪ್ಪೆಡೆಯೊಳಿರಿಂ ನೀಮಱಿವಿರ್
ಮಿಡುಕಿದೊಡೆನೆ ಚಿತ್ರವೇತ್ರದಂಡಧರರ್ಕ್ಕಳ್ ॥೬॥

೧-೧ (ಅ) ನೆಗೆದುದವರ; (ಬ) ನೆಗಳ್ದದಮರ. ೨-೨ (ಚ) ಮಳಯಜದ ೩-೩ (ಅ) ನೆಗೆದು. ೪-೪ (ಅII) ತಾರ. ೫-೫ (ಅII) ಉಚ್ಚಂ; (ಬ) ಉಂಚಂ.

*ಪಂ. ಭಾ. ೧೪-೨೨ರಲ್ಲಿ 'ಉತ್ಸಂಚಂ' ಎಂದಿದೆ.

ಆ ಸಭೆಯುಮನೇೞಿದ ಸಿಂ-
ಹಾಸನಮುಮನೊಡನೆ ಬೆಳಗೆ ಬೆಳಗಿಂದೆ ಜಗಂ।
ಬಾಸಣಿಸಿದುದೆನೆ ಸಕಲಸು-।
ರಾಸುರಪತಿಯುರದೊಳೆಸೆದುದಿಂದ್ರಚ್ಛಂದಂ ॥೭॥

ಕನಕಗಿರಿಯೆನಿಪ ಸಿಂಹಾ-
ಸನಮುಮನಾಪರಮಚರಮತನು[೧]ರುಚಿಯುಮನೇ-।
ನ[೧]ಸವರತಂ ಪುದಿದುವೊ [೨]ನಿಮಿ-
ರ್ದ[೨]ನೇಕಚಮರೀಜದುಗ್ಧಜಲಲಹರಿಕೆಗಳ್ ॥೮॥

ವ॥ ಮತ್ತಂ ಸಿಂಹಾಸನಾಸನ್ನಸ್ಥಿತಮಣಿಮಯಪೀಠದೊಳ್ ನಾಭಿರಾಜನುಂ, ಕನಕಪೀಠದೊಳ್ ಕಚ್ಛಮಹಾಕಚ್ಛರುಂ, ಸೋಮವಂಶಲಲಾಮಂ ಸೋಮಪ್ರಭನುಂ, ನಾಥವಂಶನಾಯಕನಕಂಪನನುಮುಗ್ರ[೩]ವಂಶಾಗ್ರಗಣ್ಯಂ[೩] ಕಾಶ್ಯಪನುಮಿರೆ, ಮತ್ತಂ ಪೆಱರು[೪]ಮಱೆಯ[೪]ಮಕುಟಬದ್ಧರಾತ್ಮೋಚಿತಪ್ರದೇಶಾಸನಂಗಳೊಳಿ[೫]ರ್ದೋಲಗಿಸುತ್ತಿರ್ಪನ್ನೆಗಮಾ[೫]ದಿದೇವನ ಪರಿನಿಷ್ಕ್ರಮಣಕಲ್ಯಾಣಕಾಲಮತ್ಯಾಸನ್ನಮೆಂಬುದಂ ನಿಜಾವಧಿಬೋಧದಿಂದಮಱಿದು ಸಂಗೀತಪ್ರಸಂಗದಿಂದವೋಲಗಿಸಲೆಂದು,

ಸುರರಾಜಂ ತನ್ನ ಗಂಧೇಭದ ಕೆಲಗೆಲದೊಳ್ ಸಿಂಧುರಾರೂಢರೆತ್ತಂ
ಬರೆ ಗಂಧರ್ವಾಮರರ್ ಮೆಚ್ಚಱಿದು ಮಧುರಗೀತಂಗಳಿಂ ಮೆಚ್ಚಿಸುತ್ತಂ।
ಬರೆ ನಾನಾತೋದ್ಯದಿಂ ನಾದಕದಿವಿಜಗಣಂ ತನ್ನನಾರಾಧಿಸುತ್ತಂ
ಬರೆ [೬]ಮುಂದಿಟ್ಟ[೬]ಪ್ಸರೋ[೭]ವೃಂದಮನ[೭]ಧಿಕಮುದಂ ಬಂದನಾಗಳ್ಸುರೇಂದ್ರಂ॥೯॥

ವ॥ ಬಂದು ಭಗವದಾಸ್ಥಾನಮಂಟಪಮನವನತ[೮]ನಿಜತಿರೀಟ[೮]ರತ್ನಪ್ರದೀಪಂಗಳಿಂದಮರ್ಚಿಸಿ ಸಿಂಹಾಸನೋಪಾಂತಸ್ಥಿತಕನಕಪೀಠದೊಳ್ ಕುಳ್ಳಿರ್ದ್ದು,

ಪರಮನನೋಲಗಿಸಿ ಕೃತಾ-
ರ್ಥರೆಮಪ್ಪೆವಮೋಘಮವಸರಂಗುಡಿಸುವುದೆಂ-।
ದಿರದೆನ್ನನಧಿಕಭಕ್ತಿಯೆ
ತರೆ ಬಂದುದು ದೇವ, ದಿವಿಜಪೇಟಕಮನಿತುಂ ॥೧೦॥

---

೧-೧ (ಬ) ರುಚಿಯುಮನಂದ. ೨-೨ (ಅ) ಮಿಳಿರ್ದ; (ಬ) ಲಿರ್ದ್ದ. ೩-೩ (ಅ) ವಂಶಾಗ್ರಣಿ. ೪-೪ (ಚ) ಮಱಿಕೆಯನಾಯಕರುಂ; ಮಣಿ. ೫-೫ (ಬ) ರ್ದೋಲಗಿಸುತ ಮಿರ್ಪ್ಪನಮಾ; (ಚ) ರ್ದೋಲಗಿಸುತ್ತಿರ್ದನ್ನೆಗಮಂ. ೬-೬ (ಚ) ಮುಂದಿರ್ದ. ೭-೭ (ಚ) ವೃಂದಮುಮ. ೮-೮ (ಚ) ಮಣಿಕಿರೀಟ.

[೧]ಸಮುಸಲ್ಗಿವರ[೧] ಮನೋರಥ-
ಸಮನೀನೃತ್ಯಪ್ರಸಂಗಮಕ್ಕಭವ, ಭವತ್-|
ಕ್ರಮುಕಮಲಸೇವೆಯಿಂದಿ[೨]-
ತು[೨] ಮನಂತಂ ಗೀತವಾದಿತಂ ಫಲಮಸ್ತೀ ||೧೧||

ವ. ಅಂತುಮಲ್ಲದೆ,

ಅಸಮಪ್ರೇಕ್ಷಣಮೀಕ್ಷಕೈಕರಸಮಂ ಪಾರ್ದ್ದಿಪಿರ್ದ್ದರಿರಾಜಪು-
ತ್ರಸಮೂಹಂ ಪರಿಪೂರ್ಣ್ಣಭಾವರಸಮಂ ಸಂಗೀತಮಂ ತೋಱಿ ಮೆ-|
ಚ್ಚಿಸಲೋರಂತೆ [೩]ಸಮಸ್ತದೇವ[೩]ಕುತಪ[೩]ವ್ಯೂಹಂ ತೆರಳ್ದಿರ್ದ್ದುದಿಂ
ಬೆಸಸಿಂ ಭಾರತಿಕಂಗೆ ನಾಟ್ಯಘಟನಪ್ರಸ್ತಾವನಾ[೪]ಟೋಪಮಂ[೪] |೧೨||

ಎಂದಿಂಪುಂ ಬಿನ್ನಪಿಸಲೊ-
ಡಂ ವರಹಸಿತಾನನಾಬ್ಜನಾವುದು ನಿಮಗಾ-|
ನಂದಮದಕ್ಕೆನೆ ಸುತಸುರ-
ವೃಂದಂ ಸಂಗೀತಕಕ್ಕೊಡರ್ಚ್ಚಲ್ವೇಟ್ಟಿಂ ||೧೩||

ಪೇಟ್ಟುದುಮನಂಗನಿರ್ದ್ದಡೆ
ವೇಟ್ಟುವೊಲೊರ್ಮ್ಮೊದಲೆ ಗೀತವಾದಿತರವಮೇ |
ವೇಟ್ಟುದೊ ಸಭೆಯಂ ರಸದೊಳ್
ಪೂಟ್ಟುವೊಲೆಸೆದತ್ತು ದಿವಿಜಪೇಟಕಜನಿತಂ ||೧೪||

ಮದನನ ಬಿಲ್ಲೊಳಮಾತನ
ಸುದತಿಯ ಬೀಣೆಯೊಳಮೆಸೆವ ದನಿಯುಮನಿಱಿಸಿ ||
ತ್ರಿದು ದಲೆನಿಸಿದುದು ಸುರತೂ-
ರ್ಯ್ಯದ ರವದೊಳ್ ಪುದಿದ ಸುರವಧೂಗೀತರವಂ ||೧೫||

ಅಮರ್ದಿನ [೫]ಮಟಿ[೫]ಯೊಡನೆಸೆದವು-
ದಮೃತಾಂಬುದನಿನದಮೆನಿಸಿ [೬]ಸಭೆಯಿನಹೋ ಗೀ-|
ತಮಹೋ ವಾದಿತ[೬]ಮೆನಿಸಿದು-
ದಮರೀಜನ[೭]ಗೀತಮುಮಮರ[೭]ವಾದಿತಮಾಗಳ್ ||೧೬||

೧-೧ (ಜ) ಸಮನಿಸಲಿವರ. ೨-೨ (ಅ) ದುಂತು; (ಬ) ದೆಂತು. ೩-೩ (ಚ) ಕುಪಿತ. ೪-೪ (ಅ) ನಾಳಾಪಮಂ. ೫-೫(ಚ) ಮಟಿಯೊಳಗೆ. ೬-೬ (ಚ) ಸಭೆ ನಿನದಂ ಗೀ| ತಮಹಾವಾದಿತ. ೭-೭ (ಅ) ಮಧುರಗೀತ.

ಅಂಬರಭೂಷಣಮಾಲಾ-
ಡಂಬರದ ಬೆಡಂಗನಮರ[೧]ನರ್ತ್ತಕಿಗಡ[೧]ಮೇ-|
ನೆಂಬುದೊ ಧರಣೀಂದ್ರಂಗಮ-
ಳುಂಬಂ ಪೊಗೞಲ್ಕೆ ರೂಪು ನೀಲಾಂಜನೆಯಂ ||೧೭||

[೨]ಕಲಗೀತಂ[೨] ವಾದ್ಯಂ ನೃ-
ತ್ಯಲೀಲೆ ಪೆಱಗೊಪ್ಪದೀಕೆಗಲ್ಲದೆ ಗಣಿಕಾ-|
ತಿಲಕಮಿವಳ್ ನರ್ತ್ತನರಸ-
ದೊಳೆ ನಿಚ್ಚಂ ಮೆಚ್ಚುಗೊಳ್ವಳಿಂದ್ರನ ಕೈಯೊಳ್ ||೧೮||

ಎನಿಸಿದ ನೀಲಾಂಜನೆ ಕ-
ರ್ಬ್ಬಿನ ಬಿಲ್ಲಿಂ ಮಸೆದ ಮದನನಲರ್ಗಣೆ ಬರ್ದ್ದುಕಿ-|
ತ್ತೆನಿಸುತ್ತ್ರೊಳಪೊಕ್ಕಳ್ ಭೋಂ|
ಕೆನೆ ನಿಖಿಲಜನಾಂತರಂಗಮುಂ ರಂಗಮುಮಂ ||೧೯||

ನಿಲ್ತ್ತುವು ರಸಂಗಳಿಲ್ಲಿ ಪ-
ಡಲ್ತ್ತೆನೆ ಭಂಗಿಯೊಳನಂಗಜಂಗಮಲತೆವೊಲ್-|
ನಿಲ್ತು ಜವನಿಕೆಯ ಮಱೆಯೊಳ್
ಪೋಲ್ತಳವಳ್ ಮುಗಿಲ ಮಱೆಯ ವಿದ್ಯುಲ್ಲತೆಯಂ ||೨೦||

ಓಸರಿಸಿದ ಜವನಿಕೆಯೊಡ-
ನೋಸರಿಸಿದನಿಸಲೆ ಕಂತು ಪುಷ್ಪಾಂಜಲಿಯಂ |
ಸೂಸಿದ ಪದದೊಳೆ ಸಭೆಗಂ
ಸೂಸಿದನೊಡನೊಡನೆ ನನೆಯ ಮೊನೆಯಂಬುಗಳಂ ||೨೧||

ನೆಗೞೆ ನಿಜಪ್ರತಿಬಿಂಬಂ
ನೆಗೞ್ದರಸುಗಳುರದೊಳೆಸೆವ ಹಾರಮಣಿದ್ಯೋ-|
ತಿಗಳೊಳವರೆರ್ದೆಯನಲ್ಲಿಂ
ಪುಗುವುದನನುಕರಿಸಿ ರಂಗದೊಳ್ ಸೊಗಯಿಸಿದಳ್ ||೨೨||

ಅತನು[೩]ರಸೋಪೇತ[೩]ವಿಲಂ-
ಬಿತ[೪]ಮಧ್ಯದ್ರುತ[೪]ಲಯಂಗಳೊಳ್ ಲಕ್ಷಣಸಂ-|
ಯುತತತ್ವಾನುಗತೌಘ-
ಪ್ರತೀತವಾದ್ಯಂಗಳೆಸೆದುವತಿಶುಭದಂಗಳ್ ||೨೩||

---

೧-೧ (ಜ) ನರ್ತಕಿಗಡ. ೨-೨ (ಚ) ಕಳೆಗೀತಂ. ೩-೩ (ಅ) ಶರೋಪೇತ. ೪-೪ (ಜ) ಮಧ್ಯಂ ಧೃತ.

ತಾಳದ ಲಯಮಂ [1]ನಿಱಿ[1] ನೀ-
ಳ್ದಾಳದ ಹಾರದ ಪೊದಳ್ದ ಮುತ್ತೆಂಬವು ಮುಂ-|
ಮೇಳಿಸಿ [2]ಕೈಕೊಂಡುವು[2] ಲುಳಿ-
ತಾಳಕೆ ಕೈಕೊಂಡಳೆಂಬುದೋದಚ್ಚರಿಯೆ ||೩೪||

ರಸಭಾವಾಭಿನಯಂಗಳ್
ಪೊಸವೆ ಪೊಗಿಲ್ ಪೊಸವೆ ಜಲ್ಲಿಗಳ್ ಪೊಸವೆ ನಯಂ|
ಪೊಸವೆ ಕರಣಂಗಳುಂ ನಿ-
ಪ್ಪೊಸವೆನೆ ಪೊಸಯಿಸಿದಳಾಕೆ [3]ನಾಟ್ಯಾಗಮ[3]ಮುಂ ||೩೫||

ಭಾರತಿ-ಸಾತ್ವತಿ-ಕೈಶಿಕಿ-
ಯಾರಭಟಿಯುಮೆಂಬ ವೃತ್ತಿಯೊಳ್ ರಸಮಂ ಸಂ-|
ಚಾರಿಸುವ ಭಾವಮಂ ವಿ-
ಸ್ತಾರಿಸುವ ಬೆಡಂಗು ಬೇಱೆ ನೀಲಾಂಜನೆಯಾ ||೩೬||

ಭಾವದನುಭಾವದೆಸೆವ ವಿ-
ಭಾವದ ಪಸುಗೆಗಳೊಳೊಸರ್ವ ರಸದಭಿನಯಮಂ |
ಭಾವಿಸುಪೊಡಾದಿದೇವನ
ದೇವೇಂದ್ರನ ಬಗೆಗಮಸವಳಂ ನರ್ತ್ತಕಿಯಾ ||೩೭||

ಅಂಗೋಪಾಂಗಂಗಳೊಳೆಸೆ-
ವಾಂಗಿಕಮಂ ಗಾನಪಠ್ಯದೊ[4]ಳ್ವಾಚಿಕ[4]ಮಂ ||
ತುಂಗಕುಚೆ ಮೆಱೆದಳಾದಿವಿ-
ಜಾಂಗನೆಗಾಹಾರ್ಯ್ಯಸಾತ್ವಿಕಂ ನಿಜಮೆ ವಲಂ ||೩೮||

ಭರತಾಗಮದೊಳ್ ಮೂವ-
ತ್ತೆರಡೆನೆ ನೆಗಳ್ದಂಗಹಾರಮುಂ ನೂಱೆಂಟುಂ|
ಕರಣಮುಮಸವಳ ಡವಕೆಯ
ಪರಿಚಾರಿಕೆಯಱಗುಮಾಕೆಗವು ತೊಡರ್ವೆಡೆಯೆ ||೩೯||

ಪುಗುವ ಪೊಱಮಡುವ [5]ತೆಱದೆರ್ದೆ[5]
ವುಗುವಳ್ ಪೊಱಮಡುವ[6]ಳೆನಿಸೆ ಪೊಸತ[6]ಮರ್ದಂ ಮೇ-|

೧-೧ (ಬ) ನಿಜಱಿಸಿ. ೨-೨ (ಕ) ಯೆಱಳಕೊಂಡವು. ೩-೩ (ಅ,ಬ) ನಾಟ್ಯಾಂಗಮು. ೪-೪ (ಬ) ವಾಚಿತ; (ಚ) ವಾಚಕ. ೫-೫ (ಚ) ತೆಱನೆರ್ದೆ. ೬-೬ (ಅ,ಬ) ಳೆನಿಸಿ ಪೋದ.

ಗುಗುಂಟ್ಟಿಪಳೆನಿಸೆ ಮುಗುಳ್ನಗೆ
ನಗೆ[೧]ಮೊಗದೊಳದೇಂ ಬೆಡಂಗವಳ್ಗೊಪ್ಪಿ[೧]ದುದೋ ॥೩೦॥

ಪೆಸರ್ಪಡೆಯದಪುರಶೂರ್ಯ್ಯ-
ಪ್ರಸರಂಗಳ ಜತಿಗೆ ತೊಡರದಿನಿಸೆಳಲದೆ ಬ-।
ಣ್ಣಸರಂ ಗೊಂಡಂತಿರೆ ಬ-
ಣ್ಣಸರಂ ಸೊಗಯಿಸಿದುದೇನವಳ್ ಪರಿಣತೆಯೋ ॥೩೧॥

ಕುಡುಪುಂ ಕಯ್ಯುಂ ಜತಿಯೊಳ್-
ತಡತಡವರೆ ವಾದಕಂಗೆ ಪುರ್ವ್ವಿಂ ಜತಿಯಂ।
ತೊಡರದೆ ನಡೆಯಿಸಿ [೨]ಪುರ್ವ್ವದೆ[೨]
ಕುಡುಪೆನೆ ನರ್ತ್ತಕಿಯೆ ಸಭೆಗೆ ವಾದಕಿಯಾದಳ್ ॥೩೨॥

ಒಂದೊತ್ತಂ ನಡೆಯಿಸುವುದ-
[೩]ದೊಂದೊಂದಜ[೩] ಲಯಕೆ ಲಕ್ಕೆ ತೆಜನಾಡುವುದೇ।
[೪]ನೆಂದೇಂ ಬಣ್ಣಿಸುವುದೊ[೪] ಸುರ-
ಸೌಂದರಿಯ ವಿಲಾಸವಿಭ್ರಮಭ್ರೂಲತೆಯಂ ॥೩೩॥

ಪೊಸವೆಳ್ದಿಂಗಳ್ ದೆಸೆದೆಸೆ-
ಗೆಸೆದುದು ಕುಮುದವನಮಲರ್ದುದೆಂಬಂತಿರದೇ-।
ನೆಸೆದುದೊ ಕಟಾಕ್ಷನಾಲಾ-
ಪ್ರಸರಂ ಭ್ರೂಲಾಸ್ಯಸೌಂದರಂ ನರ್ತ್ತಕಿಯಾ ॥೩೪॥

ಎವೆಯಿಕ್ಕದೆ ನೋಡುವ ನರ-
ರಮರರ ಕಣ್ಗಳೊಳನಂಗರಾಜನ ಬಯ್ತಿ-।
ಟ್ಟವುರ್ದಂ ಕೊಳೆ ತಳಿದುದು ನಾ-
ಭಿಮೂಲಮುಂ ಬಾಹುಮೂಲಮುಂ ಸುರವಧುವಾ ॥೩೫॥

ಅವಯವದಿಂದಮೆ ದೇವಾಂ-
ಗವಸ್ತ್ರದುಳ್ಳುಡೆಯನಾಕೆಯೋಸರಿಸುವ ಸೂ-।

೧-೧ (ಚ) ಮೊಗದ ಬೆಡಂಗವಳ್ಗದೇನೊಪ್ಪಿ. ೨-೨ (ಅ) ಪುರ್ವ್ವಿದೆ; (ಬ) ಪುರ್ವ್ವದ. ೩-೩ (ಚ) ದೊಂದೊತ್ತಿನ. ೪-೪ (ಚ) ನೆಂದಾಂ ಬಣ್ಣಿಸುವೆನೊ.

ಸುಪ ಹಾರಂತೆಪನೆನಪತಿ-
ಳಂನ ಭಂಗಿಗಳಿಂ ಮದನರಾಜರಾಜ್ಯವಿಲಾಸಂ ॥೩೬॥

ಆಡುವ ವಿಲಾಸಮಂ ನಡೆ
ನೋಡುವ ನೋಟಕರನೆತ್ತಮುತ್ತ್ರದ್ವಿರದಂ ।
ಕೋಪಂ ಕಾಣಿಸಿ ಪಿಡಿದೀ-
[೧]ಡಾಡಿಪುದೆಂಬಿ[೧]ನೆಗಮಾಡಿ ರಂಜಿಸಿದಳವಳ್ ॥೩೭॥

ಪಾಟಿಸಿ ಮಾಡಿದ ನೊಕ್ಕಿನದ-
ಳಾಟದ [೨]ಪೊಲಮೆ[೨]ನಿಸಿಸಿ ನೆಗೆಟ್ವ ನೀಲಾಂಜನೆ ತ- ।
ನ್ನಾಟಮನೊಟ್ಟಿಲ್ವ ನೋಡುವ
ನೋಟಕರಂ [೩]ತವಪ[೩] ಮಾಟಿಕೆಯಿಂ ಮೋಹಿಸಿದಳ್ ॥೩೮॥

ಕ[೪]ರಣದ ಚಾರಿಯ ಚಲ್ಲಿಯ
ಪರಿಕ್ರಮಕ್ರಮದ ಭಂಗಿಗಳ್ ನೆಗಟ್ವೆಡೆಯೊಳ್ ।
ಸುರವಂದಿಗಳಿಂ ಹೋ ಹೋ-
ಯಿರೆಯೆನಿಸಿದುದಾಟ[೫]ಮಿಂತು[೫] ನೀಲಾಂಜನೆಯ ॥೩೯॥

ಸುರಗಣಿಕಾನಾಟ್ಯರಸಂ
ಪರಮನ ಚಿತ್ತಮುಮನೆಯ್ದೆ ರಂಜಿಸಿದುದು ವಿ- ।
ಸ್ಫುರಿತಸ್ಫಟಿಕಂ ಶುದ್ಧಂ
ತರಂಗಮೇನನ್ಯರಾಗದಿಂ ರಂಜಿಸದೇ ॥೪೦॥

ಅಮಘು[೬]ರಾಕಾರ[೬] ಲತಾ-
ಕೋಮಳೆ ತನಗಾಗಳಾಯುರಂತಂ ಬರೆ ಸೌ- ।
ದಾಮಿನಿವೊಲ್ ಭೋಂಕನೆ ಸುರ-
ಕಾಮಿನಿ ರಂಗದೊ[೭]ಳದೃಶ್ಯೆ[೭]ಯಪ್ಪುದುಮಾಗಳ್ ॥೪೧॥

ರಸಭಂಗಭಯದಿನಿಂದ್ರಂ
ಪೊಸತೊಂ[೮]ದಾದೊರೆಯ[೮] ಪಾತ್ರಮಂ ತಂದನುಸಂ- ।

---

೧-೧ (ಜ) ಡಾಡುವುದೆಂಬಿ. ೨-೨ ಪೊಲಮೆ. ೩-೩ (ಅ,ಬ) ತಕರ. ೪ (ಚ) ಚ. ೫-೫ (ಬ) ಮಂದು. ೬-೬ (ಜ) ರಾಕಾರ. ೭-೭ (ಅ,ಬ) ಳದೃಶ್ಯಪು. ೮-೮ (ಅ) ದಾದೊರೆತು; (ಬ) ದೋರಂತೆ.

ಧಿಸುವುದುಮದನಣಮುಱಿಯ-
ಲ್ಕೆ ಸುರಾಸುರ[೧]ಸಮಿತಿಗಾಗದಾಯ್ತಾ[೧]ಕ್ಷಣವೊಳ್ ||೪೨||

ಆನೀಲಾಂಜನೆಯಿಂ[೨]ದೆ ಮು-
ನೋನಯನೋದಿತವಿಮೋಹದಿಂದಿರೆ ಸಭೆ ವಿ-|
ದ್ಯಾನಿಳಯನಱಿದವಂ ದೇ-|
ಹಾನಿತ್ಯತೆಗಿಂತು ನಾಡೆ ಚೋದ್ಯಂಬಟ್ಟಂ ||೪೩||

ನಾರೀರೂಪದ ಯಂತ್ರಂ
ಚಾರುತರಂ ನೋಡೆ ನೋಡೆ ಕರಗಿದುದೀಸಂ-|
ಸಾರದನಿತ್ಯತೆ ಮನದೊಳ್
ಬೇರೂಱಿದುದೀಗಳಿಂತಿದಂ ಕಡೆಗಣಿಪೆಂ ||೪೪||

ಕೋಟಿತೆಱದಿಂದಮೆಸೆವೀ
ನಾಟಕಮಂ ತೋಱಿ ಮಾಣ್ದಳಿಲ್ಲಿಳ್ ಬಗೆಯೊಳ್|
ನಾಟುವಿನನುಮರಿ ಸಂಸೃತಿ-
ನಾಟಕಮುಮನೆನಗೆ ನೆಱೆಯೆ ತೋಱಿದಳೀಗಳ್ ||೪೫||

ತನುರೂಪವಿಭವಯೌವನ
ಧನಸೌಭಾಗ್ಯಾಯುರಾದಿಗಳ್ಗೆಣೆ ಕುಡುಮಿಂ-|
ಚಿನ ಪೊಳೆಪು ಮುಗಿಲ ನೆಟಿಲಿಂ-
ದ್ರಸಬಿಲ್ಬೊಬ್ಬುಳಿಕೆಯುರ್ವ್ವ ಪರ್ವ್ವಿದ ಭೋಗಂ ||೪೬||

ನರಕದೊಳಿರ್ದ್ದ[೩]ದುಃಖಾಂ-
ತರಮಂತದು[೩]ಬಗೆವೊಡಾರ್ಗಗುರ್ವ್ವಲ್ತೆ ಭಯಂ-|
ಕರವಲ್ತೇ ತಿರ್ಯ್ಯಗ್ಗತಿ-
ದುರಂತದುಃಖಪ್ರತಾನಮಂ[೪] ಬಗೆವಾಗಳ್ ||೪೭||

ನಾನಾಯೋನಿಗಳೊಳ್ ಸುಱಿ-
ದೇನಾನುಂ ದುಷ್ಕೃತಂ ಸಡಿಲ್ದೊಡೆ[೫]ಪಡೆದುಂ[೫]|
ಮಾನುಷ್ಯಮನತಿದಾರುಣ-
ಮಾನಸಶಾರೀರದುಃಖಪೀಡಿತನಕ್ಕುಂ ||೪೮||

೧-೧ (ಚ) ಸಮಿತಿಗಾದುದಿಲ್ಲಾ. ೨ (ಚ) ಯೆಂ. ೩-೩ (ಚ) ದುಃಖದ ಕರತನ ಮದು ೪ (ಅ) ಮುಂ. ೫-೫ (ಚ) ಪಡೆಗುಂ.

ಚಿಂತಾಶೋಕ ವಿಷಾದ-
ಭ್ರಾಂತಿಸಮುದ್ಭೂತದುಃಖದಿಂ ನರಕದೊಳೋ-।
ರಂತೆ ಪಲಂ [೧]ಮಾನಸವ[೧]ಗತಿ-
[೨]ಸಂತಸಮುಂಟೆಂಬುದುಂಟೆ[೨] ಸಗ್ಗಂಗಳೊಳಂ ॥೪೯॥

ಅಱುದಿಂಗಳಾಯುವುಂಟೆನೆ
ಮಱುಗುವುದುಂ ನಲ್ಲರಲ್ಲಿ ತವಿಮ್ಮಿಂ ಮುನ್ನಂ।
ಪಱಿಪಟ್ಟು ಬರೆ ಕನಲ್ವುದು-
ಮಱಿಪಪೆ ಕಲ್ಪಜರ್ಗೆ ನರಕ[೩]ದುಃಖದ ತೆಱನಂ[೩] ॥೫೦॥

ಕಷ್ಟಂ [೪]ದುಃಖಾನಲ[೪]ಪರಿ-
[೫]ಪ್ಲುಷ್ಟಂ[೫] ಚಿಃ ಗತಿಚತುಷ್ಟಯಂ ಪ್ರಾಣಿಗೆ ಸಂ-।
ತುಷ್ಟತೆಯನೆಯ್ದೆ [೬]ಪಡೆದುಮ[೬]-
ಭೀಷ್ಟಸುಖಪ್ರದಮದೊಂದೆ ಮುಕ್ತಿಸ್ಥಾನಂ ॥೫೧॥

ಎಯ್ದಿದುದಱಿಕೊಳಲವಡದುದು-
ಮೆಯ್ದುದನೆ ಬಯಸುತಿಪ್ಪುದುಂ ಜೀವಕ್ಕೇ-।
ಗೆಯ್ದುಮಿದು ಸಹಜಮನ್ನೆಗ-
ಮೆಯ್ದುಗುಮೆನ್ನೆಗಮುದಾತ್ತಮುಕ್ತಿಶ್ರೀಯಂ ॥೫೨॥

ಎನಿತೊಡಲಂ ತಾಳ್ದಿದುವಿ-
ಲ್ಲೆನಿತೊಡಲಂ ಬಿಸುಟುವಿಲ್ಲ ವಿಷಯಾನಲನಿಂ-।
ದೆನಿತೆನಿತಂ ಮಱುಗಿದುವಿ-
ಲ್ಲನಂತಸಂಸಾರಗಹನದೊಳ್ ಜೀವಂಗಳ್ ॥೫೩॥

ಜನನೀಜನಕಸಹೋದರ
[೭]ವನಿತಾಜನ[೭]ಪುತ್ರಮಿತ್ರಸಂಬಂಧಮದೆಂ-।
ತೆನಿತೆನಿತು ಭವದೊಳಾಯ್ತೊ-
ಲ್ಲೆನಿತನಿತಂ ನೆನೆವುದೆನಿತನವಧರಿಸುವುದೋ ॥೫೪॥

ತನುಗೆ ಪೊಱೆ ತುಡುಗೆ ನವಲೇ-
ಪನಮೆ ಮುಳಂ ಗೀತಮಳ್ಕೆ ನೃತ್ಯಂ ಬಗೆಯ-।
ಲ್ಕೆ ನಗೆ ದಲುನ್ಮ[೮]ತ್ತಕವಿಲ[೮]
ಸನಮಿಂತಿನಿತಱಿಕೊಳನೊಂದಱಿಕೊಳ್ ಪುರುಳುಂಟೇ ॥೫೫॥

---

೧-೧ (ಚ) ಮಾನಸ. ೨-೨ (ಚ) ಸಂತೋಷಮದೆಂಬುದುಂಟೆ. ೩-೩ (ಚ)-ದುಃಖಕ್ರಮಮಂ. ೪-೪ (ಅ, ಬ) ದುಃಖಾಗ್ನಿ. ೫-೫ (ಚ) ಪುಷ್ಟಂ. ೬-೬ (ಅ)-ಪಡೆಗುಮ. ೭-೭ (ಬ, ಚ)-ವನಿತಾಸುತ. ೮-೮(ಚ) ತ್ತವಿಳಾ.

ತ್ರಿವಶಸ್ತ್ರೀಜನದೊಳಮಪ್ಪ-
ತದೊಳಮಣಂ ಪುಟ್ಟಿದುರಿವ ಮದನಾಗ್ನಿಯ ಕೊ-|
ರ್ಬ್ಬಿದರಾಗ್ನಿಯ [೨]ಪೆರ್ಚ್ಚಿಕೆ[೨] ಪು-
ರ್ಟ್ಟಿದಪುದೆ ಲಲನೆಯರೊಳಶನದೊಳ್ ಮಾನವರಾ ||೫೬||

ಎನಿತಾನುಮಂಬುನಿಧಿಗಳ-
ನನೇಕನಾಕಂಗಳಲ್ಲಿ ಕುಡಿದುಂ ಪೋಯ್ತಿ-|
ಲ್ಲೆನಗೆ ನರಭೋಗಮೆಂಬೀ-
ಪನಿಪುಲ್ಲಿಂ ನಕ್ಕೆ ತೃಷ್ಣೆ ಪೇೞ್ ಪೋದಪುದೇ ||೫೭||

ವಿದಿತಂ ಮೂರ್ದ್ಧಾಭಿಷಿಕ್ತರ್ ಪಲಬರರಸುಗಳ್ ಪ್ರಾಜ್ಯಸಾಮ್ರಾಜ್ಯಲಕ್ಷ್ಮೀ-
ಪದಮಂ ಕೈಕೊಂಡು ತಮ್ಮಂ ಮಱೆದು ವಿಷಯಭೋಗಾಸವಾತ್ಯಂತಸೇವಾ-|
ಮದದಿಂದಂ ಧರ್ಮ್ಮಪೋತಚ್ಯುತರನವಧಿಸಂಸಾರವಾರಾಶಿಮಧ್ಯಾ-
ಪ್ತದಸರ್ಪ್ಪಗ್ರಾಸಿಭೀಮಾಂತಕವದನ[೩]ಮಹಾಗರ್ತ್ತ[೩]ದೊಳ್ ಮಗ್ನರಾದರ್ ||೫೮||

ಪನಪಹನಂ ಪನಾಂತರಮನೊರ್ಬ್ಬಳಸಾಗಿರೆ ಮುತ್ತಿ ಸುತ್ತಿ ಸು-|
ತ್ತಿನ ನಡುವಿರ್ದ್ದ ಮಾಮರನನಟ್ಟಿದುದೀಮರನಂ ತಗುಳ್ದುದೆಂ-|
ಬನೊಳೆಣೆಯಾಗೆ ಸತ್ತರನೆ ಸಾಯುವರಂತೆಣಿಸುತ್ತುಮಿರ್ಪ್ಪ ಜಿ-|
ತ್ತನದನಿತಲ್ಲದಾಮರನನಾ[೪]ದವದಗ್ನಿ[೪]ಬರ್ದುಂಕಲೀಗುಮೇ ||೫೯||*

ಬಗೆದೀಡಾಡೆ ದುರಂತದುಃಖತತಿಗಳ್ ಬೆನ್ನಟ್ಟಿ ದುರ್ಮ್ಮೋಹಮ-
ತ್ಸ್ಯಗಣಂಗಳ್ [೫]ಕಡಿದಿಕ್ಕೆ[೫] ಲೋಭಮ[೬]ಕರಾನೀಕಂಗಳಾಟಂದು ನು-|
ಣ್ಣಗೆ ನುಂಗುತ್ತಿರೆ ಮಾರರಾಗಶಿಶುಮಾರಂಗಳ್ ಮಹೋಗ್ರಂಗಳಿ-
ನ್ನೆಗಮೋರಂತೆ ತೊೞಲ್ದೆನಿಂ ತಿರಿಯ[೭]ಲಾಱೆಂ[೭] ಭವಾಂಭೋಧಿಯೊಳ್ ||೬೦||*

ವ|| ಎಂದು ಸಂಸಾರಶರೀರಭೋಗವಿರಕ್ತಾಂತ[೮]ರಂಗಂ[೮] ಮುಕ್ತಿಕಾಂತಾನುರಕ್ತ[೯]ಚಿತ್ತನಾ[೯]ಗಿರ್ಪ್ಪನ್ನೆಗಂ, ಪೂರ್ವ್ವಭವಾಭ್ಯಸ್ತಸಮಸ್ತಾಗಮಾರ್ಥ[೧೦]ರುಮುಪಚಿತ[೧೦]ಶುಭಭಾವನಾಧ್ಯಾಸಿತಾಂತಃ[೧೧]ಕರಣದುಂ[೧೧] ತ್ರಿಭುವನಗುರು—

೨-೨ (ಚ) ಪೆರ್ಚೇರ್ಗಂ. ೩-೩ (ಅ) ಮಹಾವರ್ತ್ತ. ೪-೪ (ಬ) ವನದಗ್ನಿ. ೫-೫ (ಬ) ಳ್ಗಡಿಗಿಕ್ಕೆ. ೬ (ಬ) ನಿ. ೭-೭ (ಬ) ಲಾನಾಱೆಂ. ೮-೮ (ಚ) ರಂಗನುಂ. ೯-೯ (ಚ) ಚಿತ್ತನುಮಾ. ೧೦-೧೦ (ಚ) ರುಂ ಉಚಿತ. ೧೧-೧೧ (ಬ) ಕರಣದುಮಾಗಿ.

* ೫೯, ೬೦ ಈ ಪದ್ಯಗಳು (ಅ) ಪ್ರತಿಯಲ್ಲಿಲ್ಲ.

ಪರಿನಿಷ್ಕ್ರಮಣಕಲ್ಯಾಣ[೧]ಶರದಾಗಮನ[೧]ಪ್ರತೀಕ್ಷಣದಿವ್ಯಹಂಸರುಂ ಬ್ರಹ್ಮಕಲ್ಪಾಂತವಾಸಿಗಳುಮಪ್ಪ ಸಾರಸ್ವತಾದಿತ್ಯವಹ್ನ್ಯರುಣಗರ್ದ್ದತೋಯತುಷಿತಾವ್ಯಾಬಾಧಾರಿಷ್ಟರೆಂಬೆಣ್ಬರುಂ ಲೋಕಾಂತಿಕದೇವರ್ ಬಂದು,

ಸುರಭೂಜಪ್ರಸವಂಗಳಂ ಸುರಿದು ಪಾದಾಂಭೋಜದೊಳ್ ದೇವ ಭೀ-
ಕರಕರ್ಮ್ಮದ್ವಿಷರಂ ಪಡಲ್ವಡಿಸಲುಂ ಭವ್ಯರ್ಕ್ಕಳಂ ಘೋರಸಂ-।
ಸರಣಾಂಭೋನಿಧಿಪಾರಮಂ ಸಲಿಸಲುಂ ಸಾಲ್ಗುಂ ತದುದ್ಯೋಗಮಿ-
ನ್ನಿರವೇಂ ತ್ರಿಭುವನೋಪಕಾರಕರಣವ್ಯಾಪಾರಪಾರಾಯಣಾ ॥೬೧॥

ಪರಮಾರ್ಹಂತ್ಯಮನೆಯ್ದೆಲಿರ್ಪ್ಪುದದಱಿಂ ಮೇಲುಂಟೆ [೨]ಸತ್ವಂ[೨] ಚರಾ-
ಚರಮಂ ನೆಟ್ಟನೆ ಪರ್ವ್ವಲಿದ್ದುದದಱಿಂ ಮೇಲುಂಟೆ ವಿಜ್ಞಾನಮಿಂ-।
ತೆರಡಕ್ಕಂ ನೆಲೆಯಾಗಿಯುಂ ವಸುಮತೀಸಾಮ್ರಾಜ್ಯದೊಳ್ ನೀಂ ನಿರಾ-
ದರನಾ[೩]ಗಿರ್ಪ್ಪುದೆ[೩] ತತ್ಸುಖಾನುಗುಣಮುಂ ಪೇಟ್ಗುಂ ಗುಣಾಂಭೋನಿಧಿ ॥೬೨॥

ವ॥ ಅದು ಕಾರಣದಿಂದಮೀವಸುಂಧರಾರಾಜ್ಯಮೋಹಮೆಂಬ ವಜ್ರಲೋಹಸಿಗಳಮಂ ಪಱಿಯೆ[೪]ಪಾಯ್ವ[೪] ರಾಜಕುಂಜರಂಗೆ ನಿನಗಪವರ್ಗ್ಗಮಾರ್ಗ್ಗಂ ನಿರರ್ಗ್ಗಳಮೆ ವಲಮಾ[೫]ಡೊಡಂ[೫],

ವಿಶದಯಶಧರ್ಮ್ಮಮಷ್ಟಾ-
ದಶ[೬]ಕೋಟ್ಯನುಕೋಟಿ[೬]ಸಾಗರೋಪಮಕಾಲಂ।
ಪ್ರಶಮಿಸಿ ನಿಂದುದದಂ ನೀಂ
ವಿಶದಂಮಾಱ್ಪುದು ಜಗದ್ವಿಶೇಷಕಚರಿತಾ ॥೬೩॥

ವ॥ ಎಂದವರ್ಪ್ರತಿಬೋಧಿಸಿ ಪೋಗಲೊಡಂ ಪರಿನಿಷ್ಕ್ರಮಣಕಲ್ಯಾಣೋತ್ಸವೋತ್ಸು[೭]ಕನಾಗಿ[೭] ಸಕಲಸುರಸಮಾಜಂಬೆರಸಮರರಾಜಂ ಮುಂ ಮಾಡಿದ ಜನ್ಮಾಭಿಷೇಕಕ್ಕಂ ಬಟಿಯಂ ಮಾಡಿದ ರಾಜ್ಯಾಭಿಷೇಕಕ್ಕಮಿದುವೆ ಮಿಗಿಲೆಂಬಂತಾಗೆ ಪಂಚಮಹಾಂಬುಧಿಪವಿತ್ರಜಲಪರಿಪೂರ್ಣ್ಣಸುವರ್ಣ್ಣಕಲಶಂಗಳಿಂದಮಭಿಷೇಕಂಗೆಯ್ದು ತದನಂತರದೊಳ್ ಭರತರಾಜನಂ ಬರಿಸಿ ರಾಜ್ಯಾಭಿಷೇಕಂಗೆಯ್ದು,

ಕರವಾಲಾಂಶುಜಯಾಂಜನಂಗಳೊಳರಿಕ್ಷ್ಮಾಭೃಜ್ಜಯಶ್ರೀವಶೀ-
ಕರಣಂ ಮಾಡಿ ಹಿಮಾದ್ರಿವಾರಿಧಿನಿರುದ್ಧೈಕಾತಪತ್ರಕ್ಷಮಾ-।

೧-೧ (ಜ) ಶಾರದಾಗಮ. ೨-೨ (ಅ) ಸೌಖ್ಯಂ. ೩-೩ (ಅ) ಗಿರ್ಪ್ಪುದೆ. ೪-೪ (ಜ) ಪೊಯ್ವ. ೫-೫ (ಜ) ದೊಡಮೇಂ. ೬-೬ (ಅ,ಬ) ಕೋಟಿಕೋಟಿ. ೭-೭ (ಜ) ಕರಾಗಿರಲಾ.

ಭರಮಂ ಭೂರಿಭುಜಾಗ್ರದೊಳ್ ನಿಱಿಸಿ ಬೋಧಾವಾಪ್ತಿಯಿಂ ಪಂ ಸುಖಾ-
ಕರನಾಗೆಂದು ಫಲಪ್ರದೋಕ್ತಿ ತಳಿದಂ ಶೇಷಾಕ್ಷತೌಘಂಗಳಂ ||೬೩||

ವ|| ಅಂತು ತಳಿದು*

ಭರತಂಗಭಿಷೇಕಪುರ-
ಸ್ಸರಮೂರ್ಜ್ಜಿತರಾಜ್ಯಪದವಿಯುಂ ಕೊಟ್ಟು ನಿಜಾ-|
ದರದಿಂದೆ ಬಾಹುಬಲಿಗಂ
ಪರಮಂ ಯುವರಾಜಪದವಿಯುಂ ದಯೆಗೆಯ್ದಂ ||೬೪||

ವ|| ಅಂತು ದಯೆಗೆಯ್ದು ಯೋಧ್ಯಾಪೌದನಪುರಾಧಿಪತ್ಯದೊಳಿರ್ವ್ವರುಮಂ† ನಿಱಿಸಿ ನಿರ್ಭರಪ್ರಮೋದಪರಂಪರಾಪರೀತದಿವಿಜಮನುಜಸಮಾಜದೊಳ್,

ಭಗವತ್ ಪರಿನಿಷ್ಕ್ರಮಣ-
ಪ್ರಗುಣೀಕೃತಸುರಮೃದಂಗರವವೊಂದೆಡೆಯೊಳ್|
ನೆಗೞ್ದುದು ರಾಜ್ಯಸಮರ್ಪ್ಪಣ-
ಯುಗಪತ್ಪ್ರತಿಹತ¹ಮುಕುಂದ¹ರವವೊಂದೆಡೆಯೊಳ್ ||೬೬||

ನೆಗೞ್ದ ತಪೋರಾಜ್ಯದ ಬಗೆ
ಮಿಗೆ ನಿಂದಂ ವೃಷಭನಾಥನತ್ತೊಂದೆಡೆಯೊಳ್ |
ಜಗತೀರಾಜ್ಯದ ಬಗೆ ಕೈ-
ಮಿಗೆ ನಿಂದಂ ಭರತರಾಜನಿತ್ತೊಂದೆಡೆಯೊಳ್ ||೬೭||

ಸುರಶಿಲ್ಪಿಗಳಿಂ ಶಿಬಿಕಾ-
ವಿರಚನೆ ದೆಸೆಗೆಸೆಯುತಿರ್ದ್ದುದತ್ತೊಂದೆಡೆಯೊಳ್|
ನರಶಿಲ್ಪಿಗಳಿಂ ಮಂಡಪ-
ವಿರಚನೆ ನೆಗೞುತ್ತುಮಿರ್ದ್ದುದಿತ್ತೊಂದೆಡೆಯೊಳ್| ||೬೮||

ಮುಂದಾಡಿದಳಿಂದ್ರನ ²ಸತಿ²
ಬಂದಮರೀಸಹಿತಮೀಶನಿರ್ದ್ದೊಂದೆಡೆಯೊಳ್|
ಬಂದಾಡಿದಳ್ ಸುನಂದೆಯೊ-
ಳೊಂದಿ ಯಶಸ್ವತಿ ಮಹೀಶನಿರ್ದ್ದೊಂದೆಡೆಯೊಳ್ ||೬೯||

---

೧-೧ (ಚ) ಮಮುಂಡ. ೨-೨ (ಅ,ಬ) ಶಚಿ.

---

*(ಅ) ಪ್ರತಿಯಲ್ಲಿಲ್ಲ, †(ಅ) ಪ್ರತಿಯಲ್ಲಿ ಈ ಮುಂದೆ "ಪುತ್ತ್ರನ ತನೂಜವರ್ಗ್ಗಕ್ಕೆಲ್ಲಂ ಯಥಾಯೋಗ್ಯವಾಗಿ ರಾಜ್ಯಪದವಿಯೊಳ್" ಎಂದಿದೆ.

ಸುರವೃಂದಾರಕರಿಂದಂ
[೧]ಪರೀತನಾದಂ ಜಿತಾತ್ಮ[೧]ನತ್ತೊಂದೆಡೆಯೊಳ್।
ನರವೃಂದಾರಕರಿಂದಂ
[೨]ಪರೀತ[೨]ನಾದಂ ಮಹಾತ್ಮನಿತ್ತೊಂದೆಡೆಯೊಳ್ ॥೭೦॥

ಧರೆಯುಂ ಮೆಟ್ಟದೆ ಮೆಟ್ಟುವ
ಸುರಲಲನಾ[೩]ನೃತ್ಯ[೩]ಮತ್ತಲಭವನ ಸಭೆಯೊಳ್।
ಕರಮೆಸೆದುದು ವಾರಸ್ತ್ರೀ
ಪರಿನರ್ತ್ತನಮಿತ್ತಲಧಿಕವಿಭವನ ಸಭೆಯೊಳ್ ॥೭೧॥

ಜನಿತೋತ್ಸವಮುಗಲವ್ಯ-
ಗ್ರನಾಕನರಲೋಕಸಕಲ[೪]ಜನಕಳಕಳದಿಂ[೪]-।
ದೆನಿತಾನುಂ ವಿಭವದಿನಿಂ-
ತು ನಾಡೆಯುಂ [೫]ರಯ್ಯ[೫]ಮಾದುದಾನೃಪಭವನಂ ॥೭೨॥

ವ॥ [೬]ಮತ್ತಮಾ[೬]ವೃಷಭನಾಥನುಱ[೭]ದಪತ್ಯ[೭]ವರ್ಗ್ಗಕ್ಕೆಲ್ಲಮಿಳಾತಳ[೮]ವಿಭವ[೮]ಮಂ ಪಚ್ಚುಗೊಟ್ಟು ಸಮುತ್ತೀರ್ಣ್ಣರಾಜ್ಯಭಾರನುಂ ಪರಿನಿಷ್ಕ್ರಮಣೋದ್ಯುಕ್ತಚಿತ್ತನುಮಾಗಿ ನಾಭಿರಾಜಾದಿ[೯]ನಾಭಿಗಳಂ[೯] ಬೀೞ್ಕೊಂಡು ಮಂಗಲಾಲಂಕರ[೧೦]ಣಾಲಂಕೃತಂ[೧೦] ಸೌಧರ್ಮ್ಮೇಂದ್ರದತ್ತಹಸ್ತಾವಲಂಬನಾರೂಢಶುಭಪರಿಣಾಮಂ ಗುಣಶ್ರೇಣಿಯನೇಱುವುದನಭ್ಯಾಸಂಗೆಯ್ವಂತೆ ಸುದರ್ಶನವೆಂಬ ಶಿಬಿಕೆಯನೇಱುವಾಗಳ್,

ಪರಮೋತ್ಸಾಹದಿನೇೞಡಿವರಂ ಭೂಪಾಲರುಯ್ದರ್ ವಿಯ-।
ಚ್ಚರರತ್ತೇೞಡಿಯಂ ವಿಯದ್ಗಮನದಿಂದಾಂತುಯ್ದರಲ್ಲಿಂ ಸುರಾ-।
ಸುರರಂಭೋದಪಥಕ್ಕಳಂಕರಣಮಾಗುಯ್ದರ್ ಬೞಿಕ್ಕಿಂದ್ರರಾ-
ದರದುಯ್ದರ್ ಕಮನೀಯರತ್ನಶಿಬಿಕಾಸ್ಕಂಧರ್ ಜಗನ್ನಾಥನಂ ॥೭೩॥

ವ॥ ಅಂತು ವೃಷಭೇಶ್ವರನನ[೧೧]ಮರೇಶ್ವರರುಯ್ವುದಂ[೧೧] ಕಂಡು ಪುರಜನಂಗಳ್ ಗುಜುಗುಜು[೧೨]ಗೊಂಡು[೧೨],

ಅರಸನ ಪುಟ್ಟಿದಿಂಬೞಿಯುಮೀದಿವಿಜಾಳಿಗೆ ಮಾಣ್ದುದಿಲ್ಲ ಪೋ-
ಬರವಿವರುಯ್ವರುಂ ಮಗುೞೆ ತರ್ಪ್ಪರುಮಪ್ಪುದಱಿಂದಮಿಲ್ಲಿ ಕೊ-।

೧-೧ (ಬ) ಪರೀತನಾದೊಂ ಜಿತಾತ್ಮ. (ಚ) ಪರಿವೃತನಾದಂ ಚಿದಾತ್ಮ. ೨-೨ (ಚ) ಪರಿವೃತ. ೩-೩ (ಚ) ನೃತ್ತ. ೪-೪ (ಅ) ಕಳಕಳರವದಿಂ. ೫-೫ (ಚ) ರಮ್ಯ. ೬-೬ (ಅ,ಬ) ಮತ್ತಂ. ೭-೭ (ಬ) ದಪುತ್ರ. ೮-೮ (ಚ) ವಿಭಾಗ. ೯-೯ (ಅ) ನಾಭಿಗಳುಮಂ. ೧೦-೧೦ (ಅ) ಕಾರಾಲಂಕೃತನಾಗಿ; (ಬ) ಕೃತನುಂ. ೧೧-೧೧ (ಅ) ಪುರರುಯ್ವುದಂ. ೧೨-೧೨ (ಚ) ಗೊಂಡು ತಂತಮ್ಮೊಳಿಂತೆಂದರ್.

ಕ್ಕರಿಕೆಗೆ ಪೇಱಿಮಾವುದೆಡೆ ದೇವನನಿಲ್ಲಿಗೆ ತರ್ಪ್ಪರೇಕೆ ಮಂ-
ದರಶಿಖರಾಗ್ರದೊಳ್ ಮಿಸಿಸಿ ಮುನ್ನಿವರಿಲ್ಲಿಗೆ ತಂದರಲ್ಲರೇ ॥೭೪॥

ವ॥ ಎಂಬುದುಮಲ್ಲಿಯುಂ ಕೆಲರ್ ವಿವೇಕಿಗಳ್,

ಅರಸನ ಪಂಬಲಂ ಬಿಸುಡಿಮೇಕೆನೆ ಬ[೧]ರ್ಪ್ಪನೆಯುಪ್ಪೊಡೀಧರಾ-
ಭರಮನಶೇಷಮಂ ನಿಜತನೂಭವರ್ಗೀವದೆ ಪಟ್ಟಗೊಟ್ಟು ಜೇಂ[೨]-
ಕರಿಸುವ ದೇವಕೋಟಿಗಳ ❋ಬಿಜ್ಜಗಳೊಳ್ ತೊಡರ್ದೇಕೆ ಪೋಪನೀ-
ದೊರೆಯನನಾಳ್ದನಂ ಪಡೆವುಪಾಯಮದಾವುದೊ ಜನ್ಮಜನ್ಮದೊಳ್ ॥೭೫॥

ವ॥ ಎಂಪು [೩]ತಮ್ಮ ತಮ್ಮ[೩] ಬಗೆಗಳನೆ ಬಗೆದು ನುಡಿಯೆ,

ತನಯರನಿಟ್ಟು ಸಂತತಿಯೊಳಿಂತೆಮಗಂ ಬಗೆವೇಱದೇಕೆ ಪೋ-
ದನೊ ನೃಪನೆಂತು ಸೈರಿಸುವೆವಯ್ಯ ವಿಯೋಗಮನೆಂದು ಸೋರ್ವ್ವ ಕ-
ಣ್ಬನಿಯ ತೆರಳ್ಕೆ [೪]ಗದ್ಗದಿಕೆ[೪]ಗೊಳ್ವ ಸರಂ ಮಿಗೆ ಪೋದರಾತ್ಮನಾ-
ಥನ ಬಱಿಯಂ ಮನಂ ಮಱುಕಮುಯ್ಯೆ ಯಶಸ್ವತಿಯುಂ ಸುನಂದೆಯುಂ॥೭೬॥

ವ॥ ಆಗಳಂತಃ[೫]ಪುರವೃದ್ಧ[೫]ರವರನರಸರೀ[೬]ಗಳೆ ಬಂದಪ್ಪ[೭]ರಂಜದಿರಿ— ಮೆಂದಾಸೆವಾತುಗಳೊಳಾಱಿಸಿ ನುಡಿದೊಡಗೊಂಡು [೮]ರಾಜಮಂದಿರಕ್ಕೆ[೮] ಪುಗುಟ್ಟಿರಿತ್ತ ನಾಭಿರಾಜ—ಭರತೇಶ್ವರ—ಕಚ್ಛ—ಮಹಾಕಚ್ಛ—ಪ್ರಮುಖ- ಪ್ರಧಾನಪಾರ್ಥಿವರುಂ ಮರುದೇವಿಮಹಾದೇವಿಯುಂ ಪರಿನಿಷ್ಕ್ರಮಣಕಲ್ಯಾ- ಣಾವಲೋಕನಕುತೂಹಲದಿಂ ವೃಷಭೇಶ್ವರನೊಡನೆ ಬರೆ, ಸುರಪರಿವೃಢ— ನಯೋಧ್ಯಾಪುರಕ್ಕತಿ† ದೂರಮುಮತ್ಯಾಸನ್ನಮುಮಲ್ಲದ ಸಿದ್ಧಾರ್ಥವನದ ನಡು- ವಣ ನಿರಂತರನಿಚಿತತರುನಿಕರವಿಗಲಿತಪುಷ್ಪೋಪಹಾರಶೋಭಿತದೊಳಿಂದ್ರಾಣೀ- ಹಸ್ತವಿನ್ಯಸ್ತ[೯]ರತ್ನ[೯]ಚೂರ್ಣ್ಣರಂಗವಲ್ಲೀವಿರಾಜಿತದೊಳಮರನಾರಾಂಗನಾರಬ್ಧ— ಮಂಗಲಗೀತಂಗಳೊಳ್ ದೇವಾಂಗವಸ್ತ್ರವಿರಚಿತವಿಚಿತ್ರಮಂಟಪದೊಳ್ ಪರ್ಯ್ಯಂ [ಕ][೧೦]ನಿವೇಶಿತವಿವಿಧಮಂಗಲದ್ರವ್ಯಪರಿಕರಪರಿಪೂರ್ಣ್ಣದೊಳ್ ಪಾಂಡುಕಶಿ- ಲಾತಲವಿಲಾಸೋಪಹಾಸಿಚಂದ್ರಕಾಂತಶಿಲಾತಲದೊಳ್ ಸಿವಿಗೆಯು[೧೧]ನಿಳಿಪಿ[೧೧] ಸುರಾಸುರಸಭೆಯುಂ ಪುರೋತ್ಸಾರಿತರ್ಮಾಡಿ ಜನದ ಕಳಕಳಮಂ ಬಾರಿಸಿ ತನ್ಮ- ಧ್ಯದೊಳ್ಜಗನ್ನಾಥನನಿರಿಸಿ [೧೨]ಪರಿಚಾರಕಭೃತ್ಯಮಂ ದೇವೇಂದ್ರಂ ಮಾಡಲ್[೧೨]

೧ (ಅ) ಪೊರ್. ೨ (ಚ) ಭೋಂ. ೩-೩ (ಅ) ತಂತಂಮ. ೪-೪ (ಅ) ಗದ್ಗರಿಕೆ. ೫-೫ (ಅ) ಪುರಪ್ರಧಾನವೃದ್ಧ. ೬ (ಆ,ಬ) ನೀ. ೭ (ಆ,ಬ) ನ. ೮-೮ (ಚ) ಮಂದಿರಕ್ಕೆ. ೯-೯ (ಚ) ಮರಕತ. ೧೦ (ಆ,ಬ,ಚ) ತ. ೧೧-೧೧ (ಚ) ನಿರಿಸಿ. ೧೨-೧೨ (ಆII) ಭೃತ್ಯ ಮನಮುಷ್ಟಿಸುತ್ತಿರೆ.

❋देवः सुरैः प्रोत्साह्य नीयते ॥ पू. पु १७–१५२ ॥

†नातिदूरे पुरस्यास्य ॥ पु. पू. १७–१८१ ॥

ಶುಭಧ್ಯಾನನಿರತಂ ಸಮಸ್ತವಸ್ತುಗಳೊಳ್ ಸಮತೆಯಂ ಭಾವಿಸಿ ಬಾಹ್ಯಾ-
ಭ್ಯಂತರಪರಿಗ್ರಹಪರಿತ್ಯಾಗೋಽಸ್ತು ಮಿಪಾನಸಂ ತ್ರಿಸಾಕ್ಷಿಕನಾಗಿ ವಸ್ತ್ರಾಭರಣ—
ಮಾಲ್ಯಾದಿಗಳಂ ಮೆಯ್ಯಿಂ ತೊಲಗಿಸಿ, ಪೂರ್ವಾಭಿಮುಖನುಂ ನಿಬಿಡನಿಬದ್ಧ-
ಪರ್ಯಂಕಾಸನನುಮಾಗಿ,

ಮನದ ಪರಿಕ್ಲೇಶದವಿನಂ—
ದು ಸಮಸ್ತಸ್ನೇಹ ಎಂದು ಕರ್ಮ್ಮಂಗಳ ಬೇ-|
ರನೆ ಪಱಿವ ತೆಱದೆ ಕಱಿದಂ
ಮನಸ್ವಿ ಪಱಿದಲಿವಿನೀಲಕೇಶಾವಲಿಯಂ ||೭೭||

ನಾನಾಭೂಷಣವಸ್ತ್ರಾ-
ಸ್ಯಾನಸ್ರಗ್ರುಚಿಸನಾಥನಿಂ ಕಳೆಯಲೊಡಂ|
ತಾನೆಸೆದುದಿಲ್ಲ[2]ವೆಂತುಂ[2]
ಸ್ಥಾನಭ್ರಷ್ಟಂಗೆ ತೇಜಮೆಂಬುದುಮುಂಟೇ ||೭೮||

ಒರೆ ಚೈತ್ರಕೃಷ್ಣಪಕ್ಷಂ
ದೊರೆಕೊಳೆ ನವಮಿಯೊಳಮುತ್ತರಾಷಾಢಂ ದು-|
ರ್ದ್ಧರಜಿನದೀಕ್ಷೆಯನಘಕುಲ-
ಕರಚಂಡಂ ಮೂಱುಜಾವ[3]ದಾಗಳ್ ಕೊಂಡಂ[3] ||೭೯||

ವ|| ಆಗಳ್ ತದುತ್ಪಾಟಿತವಿನೀಲಕುಟಿಲಕುಂತಲಂಗಳನಮರತರುಕುಸು-
ಮಾಮೋದ್ವಾಮಪರಾಗರಂಜಿತಂಗಳನನರ್ಘ್ಯ[4]ರತ್ನ[4]ಪಟಲಿಕೆಯೊಳಾಂತು—
ಕೊಂಡು ಪೋಗಿ,

ಸುರದುಂದುಭಿರವಮೆಸೆದಿರೆ
ಸುರಪತಿ [5]ತಳಿವಾರಿ[5] ಕೆಡೆ ಹರಿನೀಲಮಣಿ-|
ಸ್ಫುರಿತದೆ ತೆರೆಗಳ ಕೆಲದೊಳ್
ಪರಭಾಗಂಬಡೆದುವವು ಪಯೋಂಭೋನಿಧಿಯೊಳ್ ||೮೦||

ವ|| ಅಂತು ದೇವೇಂದ್ರಂ ಪರಿನಿಷ್ಕ್ರಮಣಕಲ್ಯಾಣಮಂ ಮನ್ನಿಸಿ ತನ್
ಮುನೀಂದ್ರಪದಪಯೋಜಂಗಳ್ಗೆಱಗಿ [6]ಪೋದ[6] ತದನಂತರದೊಳ್ ಭರತ[7]ನನ-
ವರತ[7]ಭಕ್ತಿಭರನಿರತಂ ತ್ರಿಲೋಕಗುರುಚರಣಸರಸಿಜಂಗಳನರ್ಚ್ಚಿಸಿ ನಿಜಪರಿ-

೧ (ಜ) ಮ್ಲಾ; (ಬ) ಮಾ. ೨-೨ (ಅ) ದುಂತುಂ. ೩-೩ (ಜ) ದೊಳ್ಕೈಕೊಂಡಂ.
೪-೪ (ಜ) ರತ್ನಮಯ. ೫-೫ (ಜ) ತಳಿದಮರೆ. ೬-೬ (ಜ) ಪೊಡೆವಟ್ಟು ಪೋಗೆ.
೭-೭ (ಜ) ನವನತ.

ಜನಂಬೆರಸು ರಾಜಧಾನಿಗೆ [೧]ಪೋಪನನ್ನೆಗಂ[೧] ಕಚ್ಛಮಹಾಕಚ್ಛರುಂ ಭರತನ ಮಗಂ ಮರೀಚಿಯುಂ [೨]ಮೊದಲಾಗೆ[೨] ನಾಲ್ಸಾಸಿರ್ವರ್ ಮಕುಟಬದ್ಧರಪ್ಪರಸು-ಮಕ್ಕಳ್ ಪೋಗಲೊಲ್ಲದೆ,

ಅರಸನ ನೆಗಟ್ದಂದ[೩]ದೊಳ ನು-
ಚರಂಗೆ ನೆಗಟ್ಲೆವೇಳ್ಕುಮೆಂಬಱಿಯುವ ತ-|
ದ್ಗುರುವಿನ ಮತಮುಂ ಭಕ್ತಿಯ
ಭರದಿಂದಂ ಜಾತರೂಪಮುಂ ಕೈಕೊಂಡರ್ ||೮೧||

ವ|| ಅಂತು ಕೈಕೊಂಡು,

ಒಲವಿಂದೆ ಕೇವಲಂ ದ್ರ-
ವ್ಯಲಿಂಗಿಗಳ್ ತನ್ನನಂದು ಬಳಸಿಯುಮಿರೆ ನಿ-|
ಶ್ಚಲತನು ಬಾಲಕುಜಂಗಳ
ಪಲವಱ ನಡುವಿರ್ದ್ದ ಕಲ್ಪಕುಜಮನೆ ಪೋಲ್ತಂ ||೮೨||

ವ|| ಆಗಳಾತ್ರಿಲೋಕೈಕವಲ್ಲಭಂ,

ಇಂದಿಂಗಱುದಿಂಗಳ್ ನೆಱೆ[೩]-
ದಂದಲ್ಲದೆ ಕಯ್ಯನೆತ್ತೆನೆಂದನಶನದಿಂ|
ನಿಂದಂ ಯೋಗದೊಳತಿನಿ-
ಷ್ಪಂದಂ ಮಂದರನಗಂಬೊಲಚಲಿತಧೈರ್ಯ್ಯಂ ||೮೩||

ಮಡದಿಡೆ ನಾಲ್ಬೆರಲುಂಗುಟ-
ಡೆಡೆ[೪]ಯೊಗ್ಗೆಣಾಗೆ ನಿಲವು ಋ§ಜ್ವಾಗತಮುಂ|
ಗೆಡೆ[೪]ಗೊಳೆ ವಾಚಂಯಮತೆಯೊ-
ಳೊಡಂಬಡಂ ಪಡೆದು ನಿಂದ[೫]ನಾದಿಮುನೀಂದ್ರಂ[೫] ||೮೪||

ನಿಂದ ಶಿಲೆ ತಪನತಪ್ತಮಿ-
ದೆಂದಂಬುಜನಿಲಯೆ ಪದ್ಮವಿಷ್ಟರಮಂ ಕುಂ-|
ದೇಂದುಧವಳಾತಪತ್ರಮ-
[೬]ನಂದ[೬]ಕ್ಷಿತೀಶಂಗೆ ಪಡೆದು ಪದೆಪಂ ಮೆಱೆದಳ್ ||೮೫||

---

೧-೧ (ಚ) ಅನ್ನೆಗಮಿತ್ತ. ೨-೨ (ಚ) ಬೆರಸು. ೩-೩ (ಅ) ದಿನ. ೪-೪ (ಚ) ಯೊಳ್ಗೆಣಾಗೆ ನಿಲ್ವುದಿಚ್ಛಾಗತಮುಂ| ದೆಡೆ. ೫-೫ (ಚ) ನಾದಿಬ್ರಹ್ಮಂ ೬-೬ (ಚ) ನಂದು.

§समनुजागतं स्थानम् ॥ पू. पु. १८-३ ॥

ಪರಮನೊಳಗೊಳಗದೊಂದಂ
ಪರಿಜಪನಂಗೆಯ್ಯೆ[1]ಗೆಯ್ಯೆ[1] ನೆಗಳ್ದ ವ್ಯಕ್ತಾ-|
ಕ್ಷರದಿಂ ನಿಗೂಢತರನಿ-
ಷ್ಟುರರವಗುಂಜದ್ಗುಹಾತಲಕ್ಕೆಣೆಯಾಪಂ ॥೮೬॥

ಸ್ತಿಮಿತೇಕ್ಷಣವಭ್ರೂಭಂ-
ಗಮನಾಪಾಂಗಾವಲೋಕನಂ ಸುಶ್ಲಿಷ್ಟೋ-|
ತ್ತಮಪದಸಜ್ಜ ಪವಾಸನ-
ಮಮಮರ್ನಮ ಯೋಗಪ್ರಯೋಗದೊಳ್ ಮುನಿಪತಿಯಾ ॥೮೭॥

ನೆಗಪ್ಪದ ದೀಕ್ಷಾನಂತರ-
ಮಗಣಿತ[2]ಮಹಿಮೋದಯಂ[2] ಮನಃಪರ್ಯಯಮುಂ-|
ತೊಗೆದ ಚತುರ್ಜ್ಞಾನದೊಳಾ-
ವಗಮಿಸೆಪಂ ಜ್ಞಾನರೂಪನಾದಿಬ್ರಹ್ಮಂ ॥೮೮॥

ವ॥ ಅಂತಾಪರಮೇಶ್ವರಂ ಸಪ್ತರ್ದ್ಧಿಸಂಪನ್ನನಾಗಿ ನಿಶ್ಚಲಯೋಗನಿಯೋಗದಿಂದಮೊಂದೆರಡು ತಿಂಗಳ್ ನಿಲೆ ಕಚ್ಛಮಹಾಕಚ್ಛಮರೀಚ್ಯಾದಿಗಳಾದಿಮುನಿಪತಿಯ ಮೊಗಮಂ ನೋಡಿ ಕಯ್ಯನೆತ್ತಿಕೊಳ್ವುದಂ ಕಾಣದೆ ಕ್ಷುತ್ಪಿಪಾಸಾಶೀತಾತಪಪ್ರಮುಖಪರೀಷಹಂಗಳಂ ಸೈರಿಸಲಾರದೆ ಭಗ್ನೋತ್ಸಾಹರುಂ ದೂರೋತ್ಸಾರಿತಾಭಿಮಾ[3]ನರು[3]ಮಾಗಿ,

ದಿವಸಮನೊಂದು ಮೇಣೆರಡುಮೂಱನೆ ನಿಲ್ವುದು ಮೂಱುತಿಂಗಳಾ-
ಯ್ತವಚಱನಿಂತು ನಿಂದನೊಳನೇ ಶನಿ ನಿಲ್ವವೊಲಿಲ್ಲಿ ಪಾಱಿಗಿ-|
ನ್ನೆವರೆಗಮಿರ್ದ್ದಪನ್ನೆಮಗೆ ನಿತ್ತರಿಸಲ್ [4]ನೆಱವಿಲ್ಲ[4] ತಾಱಲಾ-
ದುವು ತನು ಕೂೞ ನೀರ ದೆಸೆಯಿಲ್ಲದೊಡಲ್ಗಳನೆಂತು ತಾಳ್ದುವಂ ॥೮೯॥

ಮಿಂದುಂಡು ಕುಡಿದು ಮಗುಳ್ದುಂ
ಬಂದಿಪ್ಪೊಡಮಿರ್ಪ್ಪ[5]ನೊಂದು[5]ಮಿಲ್ಲದೆ ಗುಱುಗು-|
ನ್ನೆಂದು ಪಸಿದಿರ್ದ್ದ ಬೆದಬೆದ
ಬೆಂದಿನಿಬರ್ ಕಟ್ಟಿಕೊಳ್ವ ಕೆಣಿಯೇಂ ಪೇೞಿಂ ॥೯೦॥

೧–೧ (ಚ) ಯುಂ. ೨–೨ (ಚ) ಪುಣ್ಯೋದಯಂ. ೩–೩ (ಚ) ನಿಗಳು. ೪–೪ (ಅ) ನೆಱನಿಲ್ಲ. ೫–೫ (ಚ) ಮಿನಿತು.

ಇದು ರಾಜವಿದ್ಯೆಯೊಳಗಾ-
ವುದು ವಿದ್ಯೆಯೊ ಷಡ್ಗುಣಂಗಳೊಳಗಾವ ಗುಣಂ ।
ಪುದಿ[೧]ದೊಳಗಣ[೧]ವೆಯ್ದಾಪಿ-
ಲ್ಲದರಣ್ಯದೊಳಿರ್ಪ್ಪರಾವ ನೀತಿಗಳೊಳಗೋ ॥೯೧॥

ಬರೆ ಬಂದು ನಡೆಯೆ ನಡೆದಿ-
ರ್ದ್ದಿರೆ [೨]ಕುಳ್ಳಿರ್ದ್ದರಂದೊಡುಂಡು[೨] ನಿಂದೊಡೆ ನಿಂದಾ- ।
ಳರಸೆನಿಸಿ ನೆಗಟ್ದ ಬನದೊಳ್
[೩]ಗರಸಂ ನಿಲೆ ನಿಂದವಿನಿತು ದಿವಸಂಬರೆಗಂ ॥೯೨॥

ವ॥ ಇನ್ನೆಮಗೆ ನಿಲಲುಂ ನಿತ್ತರಿಸಲುಂ ಬಾರದು. ಬಸುಟು ಪೋಪೊಡಂ ಭರತನ ದೆಸೆ[೪]ಯೊಳ್[೪]ಸಮಾನಸ್ಥಾ[೫]ನರೆಮಪ್ಪೆವ[೫]ದರಿಂದಮೀ ನಮ್ಮರಸನಿಂದ-ನಾಳೆ ಕಯ್ಯನೆತ್ತಿಕೊಂಡು ಪೋಗಿ ಮಗುಟ್ದು [೬]ರಾಜ್ಯದೊಳ್[೬] ನಿಲ್ವನ್ನೆ[೭]ಗನೀ-[೭]ಬನದ ಕಂದಮೂಲಫಲಂಗಳಂ ತಿಂದು ಮರದಿಂದಮಕರಂದಸಂದರ್ಭಗರ್ಭಸ-ರೋವರಜಲಂಗಳಂ ಕುಡಿದುಂ ನಿತ್ತರಿಸುವಮೆಂದವರೊಳಗೆ ಬಗೆದು ಕೆಲರ್ ಕಾಣ್ಗುವೆಂದು ಪೆಜಗಣಿಂ ಪೆಜಗುಗೆಯ್ದು ಜಗುಳ್ದುಂ ಕೆಲರ್ ಕಂಡೊಡೆ ಕರೆ-ಗುಮೆಂದು ಕೆಲದ ಮರಂಗಳ್[೯]ನೊತ್ತಗೊಂಡುಂ[೯] ಕೆಲಬರೆಮ್ಮನೆಟ್ಟಿ ಪಿಡಿದು-ಕೊಳ್ಗುಮೆಂದು ಮಗುಟ್ದು ನೋಡುತ್ತುಂ ಬೀಟುತ್ತಮೇಟುತ್ತುಮೋಡಿಯುಂ ಪೋಗಿ ಪಣ್ಫಲಂಗಳಂ ಪಱಿಯಲುಂ ಕೊಳದ ತಿಳಿನೀರಂ ಕುಡಿಯಲುಂ ಕಯ್ಯಂ ನೀಡುಪ್ರವಂ[೧೦] ಕಂಡು,

ಈ ರೂಪೆಂಬುದು ಭುವನಜ-
ನಾರಾಧ್ಯಂ ಚಕ್ರಿಜನನಿಷೇವಿತಮಿದಱೊಳ್- ।
ಸಾರದಳಿವೆಂದು ಪೇಳ್ವನೆ
ಬಾರಿಸಿದುವು ಬಿಡದೆ ಜಡಿದು ವನದೇವತೆಗಳ್ ॥೯೩॥

ವ॥ ಆಗಳವ[೧೧]ರಾರೂಪಿನೊಳ್[೧೨]ನೆಗಟಲಂಜಿ ವಲ್ಕಲವಸನರುಂ ಕೌಪೀ-ನಧಾರಿಗಳುಂ ಭಸ್ಮೋದ್ಧೂಲಿತಾಂಗರುಂ ಜಟಾಧರರುಂ ಏಕದಂಡಿತ್ರಿದಂಡಿ-[೧೩]ಗಳಪ್ಪ[೧೩] ಪರಿವ್ರಾಜಕರುಮಾಗಿ, ತಮಗೆ ತಾವೇ ವನಪ್ರವೇಶಮಂ ಮಾಡಿ, ಬಹುಪ್ರಕಾರ[೧೪]ಭೂಜರಾಜಿತಾರಣ್ಯಂಗಳೊಳಿರ್ದ್ದು ವಿವಿಧ[೧೪]ಕಂದಮೂಲಫಲಾ-

೧-೧ (ಜ)ದೊಳದವಿದ. ೨-೨ (ಜ) ಕುಳ್ಳಿರ್ದೊಡೆಟ್ಟಿದ್ದು ಡೆಬ್ಬಿದ್ದು. ೩ (ಅ) ಮ. ೪ (ಅ) ದೆ. ೫-೫ (ಅ) ಯಿನ. ೬-೬ (ಅ) ಸ್ಥಾನರೆಮಪ್ಪ; (ಬ) ಸ್ಥಾನರೆಮಪ್ಪೆವು; (ಜ) ಸ್ಥಾನರಪ್ಪೆವ. ೭-೭ (ಅ) ಮರಸರೊಳ್ನೆ; (ಬ) ಮರಸಿನೊಳ್ನೆ. ೮-೮ (ಅ) ಸ್ನಂ ನಾಮೀ. ೯-೯ (ಅ,ಬ) ನೊಳಕೊಂಡುಂ. ೧೦ (ಜ) ದುಂ. ೧೧ (ಜ) ರ್ಗಳಾ. ೧೨ (ಜ) ಳದಂ ನೆ. ೧೩-೧೩ (ಅII) ಗಳಪ್ಪ ಹಂಸಪರುಮಹಂಸಸ್ನಾತಕಭಗವದಾದಿಗಳಪ್ಪ. ೧೪-೧೪ (ಬ) ರೂಪಧಾರಿಗಳಾಗಿ ರ್ದ್ದು ವಿವಿಧ; (ಜ) ವಿಟಪಿರಾಜಿಗಳೊಳಿರ್ದು ವಿವಿಧ.

ಶಿಗಳುಂ ಸರೋವರನದೀನಿರ್ಝರಾಂಬುಪಾಯಿಗಳುಮಾಗಿ, ಪರಿತ್ಯಕ್ತಾನ್ಯದೇವತಾಬುದ್ಧಿಗಳನೇಕವನಕುಸುಮಂಗಳಿಂ ವೃಷಭೇಶ್ವರನ ಪದಪಯೋಜಂಗಳನರ್ಚಿಸುತ್ತುಮಿರೆ; [೧]ಭರತಸುತಂ[೧]ಮರೀಚಿ ಪರಿಗೃಹೀತಪರಿ[೨]ವ್ರಾಜಕವೇಷನಪಸಿದ್ಧಾಂತಭಾಷಿತಂಗಳಿಂ[೨] ಮಿಥ್ಯಾತ್ವ[೩]ವೃದ್ಧಿಯಂ[೩] ಮಾಡಿ, ನಿಜೋಪನ್ಯಸ್ತಮಪ್ಪ [೪]ಕಾಪಿಲ[೪]ಸಿದ್ಧಾಂತಮುಮಂ ಯೋಗಶಾಸ್ತ್ರಮುಮಂ ತೋಱಿ ಲೋಕಮಂ ಸಮ್ಯಗ್‌ಜ್ಞಾನಪರಾಙ್ಮುಖಂ [೫]ಮಾಡಿದನಿತ್ತಾದಿ[೫]ತೀರ್ಥಕರ್ತ್ತಾರನಮರಗಿರಿಯಂತಚಲಿತನುಂ, ಪಾರಾವಾರದಂತಕಲುಷಿತನುಮನಿಲನಂತೆ ನಿಸ್ಸಂಗನುಮಂಬರದಂತೆ ನಿರ್ಲೇಪನುಮಾಗಿ ನಿಲೆ,

ಅತಿಭಾಸುರಮಪ್ಪ ತನು-
ದ್ಯುತಿ[೬]ದೀಪ್ತಿ[೬] ತಪೋಗ್ನಿಯೊಳ್ ಪೊದಱ್ದಿಸೆದುದು ವಿ-।
ಶ್ರುತಕನಕ[೭]ಮೆನಿತು[೭] ಕಾಯ್ದೊಡ-
ಮತರ್ಕ್ಯದೀಪ್ತಿಪ್ರಕಾಶನಕ್ಕೆಡೆಯಲ್ತೇ ॥೯೪॥

ಪವನಹತಂಗಳ್ ಮುನಿಪುಂ-
ಗವನ ಜಟಾಜಾಲಲತಿಕೆ[೮]ಗಳ್ ಮಿಳಿರ್ದುವನು[೮]।
ಪ್ರವಿಶದ್ಧ್ಯಾನಾನಲದ-
ಗ್ಧವಿಸ್ಫುರಜ್ಜೀವಕನಕಕಾಳಿಕೆಗಳವೋಲ್ ॥೯೫॥

ಪೊಸತಲರ್ದಲರ್ಗಳಿನೊಸೆದ-
ರ್ಚಿಸುವಂತಿರೆ ಮುನಿಯ ಪಾದ[೯]ಪದ್ಮಮವೇಂ[೯] ಕೆ-।
ಣ್ಗೆಸೆದುವೊ ವನಲತೆಗಳ್ ಕುಸು-
ಮಸಂಕುಳಂ ಸುರಿಯೆ ಸೆಳೆವ ಸೆಳೆಗೊಂಬುಗಳಿಂ ॥೯೬॥

ವ॥ ಮತ್ತಮಾಮುನೀಂದ್ರನ ತಪಃಪ್ರಭಾವದೊಳನ್ಯೋನ್ಯ[೧೦]ವೈರಂಗಳಂ[೧೦] ಮಱೆದು,

ಕರಿಗಳ್ ಕೇಸರಿಗಳ್ಗೆ ಪುಷ್ಕರಧೃತಸ್ವಚ್ಛಾಂಬುವಂ ನೀಡೆ ಭೀ-
ಕರಶಾರ್ದೂಲಕುಲಂ ಕುರಂಗಕುಲದೊಳ್ ತಳ್ವೊಯ್ದು ಬಂದಾಡೆ ಕೇ-।

---

೧-೧ (ಅ) ಭರತನ ಮಗಂ. ೨-೨ (ಬ) ವ್ರಾಜಕವೇಶಂ ಕಪಿಲಸಿದ್ಧಾಂತಂಗಳಿಂ. ೩ (ಬ) ವೃತ್ತಿಯಂ. ೪-೪ (ಅ,ಬ) ಕಪಿಲ. ೫-೫ (ಚ) ಮಾಡಿರೆ ಇತ್ತಲಾದಿ. ೬-೬ (ಅ) ತಪ್ತ. ೭-೭ (ಅ) ಮೆಂತು. ೮-೮ (ಚ) ಗಳ್ ನಿಮಿರ್ದುವನು; (ಅ) ಗಳ್ಮಿಳಿರ್ದುವು ತತ್. ೯-೯ (ಚ) ಪದ್ಮದಿನೇಂ. ೧೦-೧೦ (ಅ) ವೈರವೈರಸ್ಯಂಗಳಂ; (ಬ) ವೈರಸ್ಯಂಗಳಂ.

ಸರಿಣೀಸ್ತ್ರೈಸ್ಯಮನನ್ಯಸನ್ಯಗಜಪ್ರೋತಾನೀಕಮುಂಡಾಡೆ ಶಾಂ-
ತರಸಂ ಪ್ರೊಂಪುಟಿವೋಮುದಾಮುನಿಸನಿಂ ತತ್ಕಾಂತಕಾಂತಾರದೊಳ್ ॥೯೭॥

ವ॥ ಆಪ್ರಸ್ತಾವದೊಳ್ ತತ್ತ್ವಪ್ರೋನಿಧಿಯ ಸನ್ನಿಧಿಗೆ ಕಚ್ಛಮಹಾಕಚ್ಛರ-ತನಯರಪ್ಪ ನಮಿವಿನಮಿಗಳಭಿನವಯೌವನಾರಂಭಪ್ರೇರಿತೇಂದ್ರಿಯವಿಷಯ—ಸುಖಾನುಭವಪ್ರೋತ್ಸುಕಮಾನಸರ್ ಕೃಪಾಣವ್ಯಾಟಿಕವ್ಯಗ್ರಪಾಣಿಗಳ್ ಬಂದು ಮುಕ್ತಲತಾಲಿಂಗಿತಲಲಾಟಪಟ್ಟರತಿಸುರಭಿಕುಸುಮಫಲಪವಿತ್ರಜಲಂಗಳಿಂದ-ಮಾದಿಪುರುಷನ ಪದಪಯೋಜಂಗಳನರ್ಚಿಸಿ ಯುಕ್ತಾಯುಕ್ತವಿಚಾ[1]ರದೂರ[1]-ಮತಿಗಳಾಗಿ,

ಕಪಟ [2]ತ್ರಡಿ[2]ಯುಮ್ಮಿ ನೆಲನಂ
ಪಡೆವರ್ ಭವದೀಯ ಪುತ್ರರುಳ್ಳವಿಗಳೊಳ್ ।
ಪಡೆಯದು ಬಂಧುಜನಂ ನಿ-
ಪ್ಪೃಡಿಗಾವೇಂ ಪ್ರೋಷ್ಯವರ್ಗ್ಗದಿಂದಂ ಪ್ರಜೆಗೇ ॥೯೮॥

ಎಮಗಮೆಮಗಪ್ಪ ಭಾಗದ
ಸಮಕಟ್ಟಂ ದೇವ ಕುಡಲಿವೇಟ್ಟಪುದು ನಂಟರ್ ।
ನಿಮಗೆ[3]ನ್ನಿಂ ವಗ್ಗಳಮಾರ್[3]
ಸಮಸ್ತಸುರಮುಕುಟಮಣಿಕಿಣೀಕೃತಚರಣಾ ॥೯೯॥

ವ॥ ಎಂದು ತಮ್ಮ ಭೋಗಕಾಂಕ್ಷೆಯನೆ ಬಗೆದು ಪರಮಯೋಗಿಗೆ ಯೋ-ಗವ್ಯಾಘಾತಮಂ [4]ಮಾಡುವುದಂ[4] ಪ್ರಕಂಪಿತಾಸನನುತ್ಪನ್ನಾವಧಿಬೋಧಂ,

ಧರಣೇಂದ್ರ[5]ಬಾದು ಭೋಂಕನೆ
ಧರಾತಳಂ ಬಿರಿಯೆ ನೆಗೆದು ಬರ್ಪ್ಪಂ[6] ದೂರಾಂ-।
ತರ[6]ದೊಳ್ ಕಂಡಂ[7] ಕಾರ್ತ್ತ-
ಸ್ವರಗಿರಿಯಂ ಪೋಲ್ತು ನಿಂದ ನಿಶ್ಚಲತನುವಂ ॥೧೦೦॥

ಕಂಡಾದಿದೇವನ [7]ತಪೋ[7]ಲಕ್ಷ್ಮಿಗೆ ವಿಸ್ಮಯಾಕ್ಷಿಪ್ತಚಿತ್ತನಾಗಿ ನಿಜಾ-ಕ್ಷೆತಿಸಂಪ್ರೀತಿಯಿಂ ತ್ರಿಃಪ್ರದಕ್ಷಿಣಂಗೆಯ್ದು [8]ಭುವನತ್ರಯ[8]ಗುರುಗೆಱಗಿ ಪೊಡೆ-ವಟ್ಟು, ನಮಿವಿನಮಿಗಳ ಮೊಗಮಂ ನೋಡಿ

೧-೧ (ಅ) ವಿದೂರೆ. ೨-೨ (ಅ,ಬ) ಕಡೆ. ೩-೩ (ಬ) ಗಗ್ಗಳಮೆಂಮಿಂದಾ. ೪-೪ (ಅ) ಮಾಡುವುದಂ; (ಬ) ಮಾಡೆ. ೫ (ಅ) ಪ್ರೊರ್ಗ್ಗಂ. ೬-೬ (ಚ) ದೆಂಳೆ ಕಂಡಂ. ೭-೭ (ಅ) ನಿಶ್ಚಲತಪೋ. ೮-೮ (ಚ) ತ್ರಿಭುವನ.

ಒಳಕೊಂಡ ಶಾಂತರಸದಿಂ
[1]ಬೆಳಪ[1] ತನ್ನೊಳ್[2]ಧನನ[2] ಭೀಷಣಾಕಾರದಿನಿಂ-|
ತಳಪಟ್ಟ ನಿಮ್ಮ ಕೂಟಂ
ಬೆಳಗಿನ ಕೞ್ತಲೆಯ ಕೂಟದಂತಾಗಿರ್ಕ್ಕುಂ ||೧೦೧||

ಕಾರಣವಿಲ್ಲ ಜಗದ್ವ್ಯಾ-
ಪಾರಂ ಪರಮಂಗೆ ನಿಮ್ಮ [3]ಕೀರ್ತ್ತನಮಿದೇಂ[3]|
ದೂರಂ ಯುಕ್ತಾಯುಕ್ತವಿ-
ಚಾರಂ ವಿಷಯಾರ್ಥಿಗೆಂಬುದಂ ಮಾಡುವಿರೇ ||೧೦೨||

ಪರಿವರ್ಜ್ಜಿತಭೋಗನೊಳಿ-
ರ್ವ್ವರುಮೀಗಳ್ ಭೋಗಕಾಂಕ್ಷೆಯಿಂ ಭೋಗಪರಂ-|
ಪರೆಯನಱಸುವುದೆ ವಿಕಸಿತ-
ಸರಸಿಜಮಂ ಸಱಿಯೊಳಱಸುವಂತಾಗಿರ್ಕ್ಕುಂ ||೧೦೩||

ನಿರಪೇಕ್ಷನನೇಕೆರೆವಿರ್-
ಪುರುದೇವನನಿನಿತುಬಯಕೆಯುಳ್ಳೊಡೆ ನಿಮ್ಮಿ-|
ರ್ವ್ವರು[4]ಮಂ ಮರುಳಾಗದೆಯಾ[4]-
ಭರತನನೋಲಗಿಸಿ ಪಡೆಯಿ[5]ಮಭಿಮತಫಲಮಂ[5] ||೧೦೪||

ವ|| ಎಂಬುದುಂ ಧರಣೇಂದ್ರನಿದಿರೊಳವರಂತರ್ನಿಗೂಢಕೋಪಾವಲೇಪ-
ರುಮೀಷದಾರೋಪಿತಭ್ರೂಚಾಪರುಮಾಗಿ,

ಒಳಗಱಿಯದೆ ಪೊಱಗಱಿಯದೆ
ಪಳಾಳಮಂ ನುಡಿವ ನಿಮ್ಮ ನುಡಿಗೆಮಗೀಗಳ್|
[6]ಮುಳಿಯ[6]ಲೆಡೆಯಿಲ್ಲ ಮುದುಗ-
ಣ್ಗಳಾಗಿ ನಿಮ್ಮಂತು ಪಱಿಯೆ ನುಡಿವರುಮೊಳರೇ ||೧೦೫||

ವಿನಯದಿನಾಮೀಭುವನೈ-
ಕನಾಥನಂ [7]ಸಲ್ಗೆ[7]ವೆರಸು ಬೇಡುತ್ತಿರೆ ಬಂ-|
[8]ದನುವಿಸುವ[8] ನಿಮ್ಮ ಮುದುಗ-
ಣ್ತನದೊಳಿದೇನುಂತೆ ಬಟ್ಟೆವೋಪೊಡೆ ಪೋಗಿಂ ||೧೦೬||

೧-೧ (ಬ) ಪೊಳೆಪ. ೨-೨ (ಚ) ಧನರ. ೩-೩ (ಅ) *ಕೀರ್ತ್ತನಮಿಂದೇಂ; (ಅII) ಕಿತ್ತನೆವಮಿದೇಂ. ೪-೪ (ಅ) ಮಂಮುಮರುಳಾಗದೆ; (ಬ) ಮಿಂ ಮರುಳಾಗದೆ. ೫-೫ (ಚ) ಮಭಿವಾಂಛಿತಮಂ. ೬-೬ (ಚ) ನುಡಿಯ. ೭-೭ (ಅ) ಸಲುಗೆ. ೮-೮ (ಅ,ಬ) ಅನಿವಿಸುವ.

*ಕೀಱ್ತನದಲ್ಲಿ 'ಱ'ಕಾರಕ್ಕೆ ರೇಫಾದೇಶವಾಗಿ 'ಕೀರ್ತ್ತನ'ವಾದಂತೆ ತೋರುತ್ತದೆ. 'ಱ' ಕಾರಕ್ಕೆ ರೇಫಾದೇಶ ೧೨ನೆಯ ಶತಮಾನದಿಂದ ರೂಢವಾಗಿದೆ. ಉ ನೆಗೞ್ದ ನೆಗರ್ದ.

[೧]ಕುಡುವಂ ಗುರು ಪಡೆವರ್ ಪೆಱ-
ಱಡೆಯೊಳ್ ನೀಮಾರ್ಗ್ಗವೇಕೆ ಕಿಡೆಸುಡಿವಪಿರಿ-|
ಟ್ಟಿಡೆವೆಗ್ಗಡಿತನದೊೞಿದೇ-
ಪಡೆವಿರ್ ನಿಮಗೆಮ್ಮ ಕಜ್ಜದೊಳ್ ಪೊರೆಯುಂಟೇ ||೧೦೭||

ಸುರಭೂರುಹಮಿರೆ ಪತ್ತಿನ
ಮರನಂ ಜಲರಾಶಿಯಿರೆ [೨]ಕುೞುಂಪೆ[೨]ಯನ[೩]ಱಿವಂ-|
ತೆಱೆವೆಮೆ[೩] ಪುರುಪರಮೇಶ್ವರ-
ನಿರೆ ಭರತನನೆಮ್ಮ ಮಹಿಮೆಗಂತದು ದೊರೆಯೇ ||೧೦೮||

ಚಾವಗೆ ನವ್ರೋದಬಿಂದುವ-
ನಾದರಿಪವೊಲುೞಿದ ಕೆಱೆಯ ತೊಱೆಯುಪಕಮನೇ-|
ನಾದರಿಕುಮೆ ದೇವನ ದಾ-
ನೋದಯಮಂ ಪಾರ್ವ್ವವುೞಿದುದಕ್ಕೆಱಗುವವೇ ||೧೦೯||

ವ|| [೪]ಎಂಬುದುಂ ಧರಣೇಂದ್ರನವರ[೪] ಮಹಾನುಭಾವಮುಮನಾದಿದೇವನೊಳಾದುದೊಂದು ನಿರ್ಭರಭಕ್ತಿಯುಮಂ ಮೆಚ್ಚಿ ನಿಜರೂಪಮಂ ತೋಱಿದಾಗಳ್,

ಮಣಿಮಕುಟದ [೫]ಮೇಗಣ ಫಣಾ[೫]-
ಮಣಿಯುಂ ಮಣಿಕುಂಡಲಾಂಗದಪ್ರಮುಖವಿಭೂ-|
ಷಣಮುಂ ನಿಜಾಂಗರುಚಿಯೊಳ್
ಪೆಣೆದಿರೆ ಫಣಿನಾಯಕಂ ಕರಂ ಸೊಗಯಿಸಿದಂ ||೧೧೦||

ವ|| ಅಂತು ತನ್ನ ದಿವ್ಯರೂಪಮಂ ತೋಱಿ,

ಧರಣೇಂದ್ರನೆನಭವನ ಕಿಂ-
ಕರನೆಂ ನಿಮಗಪ್ಪ ಭಾ[೬]ಗಮಂ ಕುಡಲೆನ್ನಂ|
ಗುರು ಮುನ್ನಂ ಬೆಸಸಿದನಿ-
ನ್ನಿರದೆನ್ನೊಡವನ್ನಿಮೆನ್ನ ಪೇೞ್ದುದ ಗೆಯ್ಯಿಂ ||೧೧೧||

ಎಂಬುದುಮಧಿಪಂ [೭]ವೊಗನೊಗ[೭]-
ದಿಂ ಬೆಸಸಿದೊಡಲ್ಲದೊಲ್ಲೆವೆನೆ ವಿಕ್ರಿಯೆಯಿಂ-

೧ (ಅ) ಪು. ೨-೨ (ಅ) ಕೊಳಂಚೆ. ೩-೩ (ಚ) ನೀರಂ ಎರೆವೆಮ. ೪-೪ (ಅ) ಎಂಬುದುಮವರ; (ಬ) ಎಂದವರ. ೫-೫ (ಚ) ಮೇಗೆ ಫಣಾ. ೬ (ಬ) ರಾ. ೭-೭ (ಚ) ಸಂಮುಖ.

ದಂ ಬೆಸಸುವಂತೆ ಮಾಡಿ ಮು-
ಸಂಬಿಡೆ ಪೊಡೆವಡಿಸಿ ನಮಿಯುಮಂ ವಿನಮಿಯುಮಂ ॥೧೧೩॥

ವ॥ ತಾನುಮಾದಿಭಟ್ಟಾರಕರ ಪದಪಯೋಜಂಗಳ್ಗೆಱಗಿ ನಿಜವಿಮಾನ-ಮನಾಮಾನವರನೇಱಿಸಿಕೊಂಡು ಪೋಗಿ ರಜತಾಚಲಮನೆಯ್ದಿ,

ಇದು ವಿಜಯಾರ್ಧಪರ್ವತಮಿದಾದಿಜಿನೇಂದ್ರನ ಕೀರ್ತಿಯಂತೆ ಶಾ-
ರದ ಜಲದಾಮೃತಾಂಬುಧಿಪಯಃಪ್ಲವಪಾಂಡುರಮುಗ್ರದಾಳಿನಾ-|
ಪದಿಸಿದು ಪಾಡಿ ಪೂತ ನೆಳೆಗೊಂಬುಗಳಾಟದಿನಾಡಿ ಸಿ[೧]ಮ್ಮನಿಂ-
ಬಿದಿಗೋಳಲಿರ್ಪವೋಲ್ ಸೊಗಯಿಸಿರ್ಪುದು ರಮ್ಯ[೨]ಮಿ[೩]ದೊಂದೆ ಧಾತ್ರಿಯೊಳ್[೩]

ಎನಗುಚ್ಚಾಯತಿ ಮೇರುಗುಂಟೆ ಪೆಱತೇನುತ್ಸೇಧಮೊಂದುಂಟೆ[೪] ಗೋ-
ತ್ರನಗಂಗಳ್ ಶಿಖರಂಗಳೊಳ್ ನಿಱಿಸಿ ಸಿಂಧುವ್ರಾತಮಂ ಪೆಂಪಿನಾ-|
[೫]ರ್ಪಿನೊಳಂ[೫] ಬೇಗುವುದಾನವಂ ಚರಣದೊಳ್ ತಾಳ್ದಿರ್ದೆನೆಂದೆಂದು ನೋ-
ಡ[೬] ನಗುತ್ತಿರ್ಪವೊಲಾಯ್ತು ನಿರ್ಝರರವಶ್ರೀಯಿಂದಮೀಪರ್ವತಂ ॥೧೧೪॥

ದೊರೆಗಂ ಪೆಂಪಿಂಗಮಾಟಿಪ್ಪವರ ಮಹಿಮೆಯುಂ ತಾಳ್ದಿದಿರ್ ನೀಮೆ ಗಂಭೀ-
ರರಿರಂತಸ್ಸಾರರಿಂ ನೀಮಿದೆ ಪೆಱರೊಳರೇ ಸಕ್ಕಿ ಮಾಡಲ್ಕೆ ವಿಶ್ವಂ-|
ಭರೆಯೊಳ್ ಸಂದೀಮದೀಯಾಯತಿಯ ದೊರೆಗೆ ನೀಂ ಸಕ್ಕಿಯೆಂಬಂ-
ತಿರೆ ನೀಳ್ಪಿಂ ಪರ್ವಿ ಪೂರ್ವಾಪರಜಲಧಿಗಳಂ ಮುಟ್ಟೆ[೭]ನಿಂದತ್ತ[೭]ಗೇಂದ್ರಂ॥೧೧೫॥

ಇದಱೊಳ್ ಖೇಚರ ಕಿನ್ನರಾಮರಯುಗಂ ನಾನಾವಿನೋದಂಗಳಂ[೮]
ಮದನಾವೇಶಕರಂಗಳಂ ಸಲಿಸುತುಂ ಪ್ರೋತ್ಫುಲ್ಲಜಂಚಲ್ಲತಾ-|
ಸ್ಪದದೊಳ್ ಚೂತಲತಾಲತಾಂತಮಕರಂದಾಮೋದಸಂಸಕ್ತಷ-
ಟ್ಪದದೊಳ್ ತಳ್ತಿರೆ ಕಾಮರಾಗಮಯಮಾಯ್ತೇನೀನಗಂ ರಮ್ಯ[೯]ಮೋ ॥೧೧೬॥

ಮಿಡಿವಂ ಬೀಣೆಯನಿವನಿವ-
ಳೊಡನೆಸೆವಳ್ ಬೆರಲ ಕೊರಲ ಕೂಟಂ ಬೆರಲಂ|
ಮಿಡಿಯಿಸಿದುದೆನಿಸಿ ರಾಗದ
ತೊಡರೊಳ್ ತೊಡರ್ದಿರ್ಪುವಲ್ಲಿ ಕಿನ್ನರಯುಗಲಂ ॥೧೧೭॥

ಶ್ರುತಿಸೌಖ್ಯಾವಹವಲ್ಲಕೀಕ್ವಣಿತದೊಳ್ ಕರ್ಪೂರಪಾಲೀವಿಮಿ-
ಶ್ರಿತತಾಂಬೂಲರಸೋತ್ಕಟಪ್ರಮದದೊಳ್ ನಾನಾರಸಾಸ್ವಾದದೊಳ್ |

೧ (ಚ) ನ. ೨ (ಆII) ಯ್ಯ. ೩-೩ (ಬ) ದೇಂ ಧರಿತ್ರಿಯೊಳು. ೪ (ಚ) ಟೆ. ೫-೫ (ಆ,ಬ) ರ್ವಿನದೊಳ್. ೬ (ಅ) ದು; (ಚ) ಡಿ. ೭-೭ (ಆ,ಬ) ನೀಳ್ದತ್ತ. ೮ (ಚ) ಳಿಂ. ೯ (ಚ) ಮ್ಯ.

ರತರಾಗೋತ್ಸವಮುಂ ಗಜೋತ್ಸವಮುಮಾಕ್ಕೆ ಪ್ರಸ್ನಿಗಂ ಸಿದ್ಧದಂ-
ಪತಿಗಳ್ ಕ್ರೀಡಿಸುತಿ[೧]ರ್ಪ್ಪರಿ[೧]ನಗತಟಶ್ರೀಖಂಡಷಂಡಂಗಳೊಳ್ ॥೧೧೮॥

ಧ್ವನಿಯೆನಿಸಿದಲಂಕಾರ-
ಧ್ವನಿಯೆಸೆವಿನ[೨]ಮೆಸೆವುದಲ್ಲಿ[೨] ಮಧುರವಿಪಂಚೀ-।
ಧ್ವನಿಯೊಡನನೇಕರಾಗ-
ಧ್ವನಿಯೆಸೆ ಸೊಗಯಿಪುದು ಕಿನ್ನರಧ್ವನಿ ನಗದೊಳ್ ॥೧೧೯॥

ಉತ್ತಮವನಮದಕರಿಕ[೩]ಟ-
ಭಿತ್ತಿಗಳಿಂ ಸುರಿವ ಮದದ ಬಂಧುರಗಂಧಂ।
ಕತ್ತುರಿ ಮೃಗಮದದೊಳ್ ಪುದಿ-
ದೆತ್ತಂ ಮಗಮಗಿಸೆ ಕಂಪು ಪೊಂಪುಳಿ[೪]ನಗದೊಳ್[೪] ॥೧೨೦॥

ಪೂರ್ವ್ವಾಪರಜಲನಿಧಿಗ-
ಪರ್ವುವರಂ ನೀಳ್ದು ಶಿಖರನಿಕರಂ ನಭಮಂ।
ಪರ್ವಿರೆ ಸೊಗಯಿಸಿದುದು ಸಕ-
ಲೋರ್ವಿಯೊಳುರ್ವಿಧರಂಗಳಿನ್ನವುಮೊಳವೇ ॥೧೨೧॥

ವ॥ ಇದು ಭರತಮೆಂಬ ವಿಜಯಾರ್ಧದೊಳ್ ನಿಂದುದಱಿಂ ವಿಜಯಾರ್ದ್ಧಮೆಂಬ ಪೆಸರಂ ಪಡೆದುದಿದರ್ಕ್ಕೆ ಪ್ರಥಮಮೇಖಲಾಸ್ಥಿತೋಭಯಶ್ರೇಣಿಗಳೊಳ್ ಕರ್ಮ್ಮಭೂಮಿಯ ನಿಯೋಗಮೆ ನಿಯೋಗಮಲ್ಲಿಯ ಖಚರರುತ್ಕೃಷ್ಟನಿಕೃಷ್ಟಕಾಲಸ್ಥಿತಿಯೊಳಯ್ನೂಱುಬಿಲ್ಲಿಂದಮೇೞುಮೊೞದಿಂದಂ ದೇಹಪ್ರಮಾಣದೊಳ್ [೫]ಕುಂದುವರುಂ ಪೆರ್ಚ್ಚುವರುಮಲ್ಲರ[೫] ವರ್ಗಂ ಪ್ರಜ್ಞಪ್ತಿವಿದ್ಯೆ ಮೊದಲಾಗಿ ಕುಲಜಾತಿಸಾಧಿತವಿದ್ಯೆಗಳ್ ಪಲವುಂ ಬೆಸಕೆಯ್ವುವಲ್ಲಿ ಸಾಧಿತ[೬]ವಿದ್ಯೆಗಳ್[೬] ಸಾಧಿಸುವಾಗಳ್ ಸಿದ್ಧಾಯತನಪ್ರಭೃತಿನವಕೂಟಂಗಳೊಳಂ ದ್ವೀಪಾದಿಸಮುದ್ರತೀರಶುಚಿಪ್ರದೇಶಂಗಳೊಳಮಿರ್ದ್ದು ಸಾಧಿಸುವುದೆಂದವರನಲ್ಲಿಗೆ ವಾಸ್ತವ್ಯರ್ ಮಾಡಿ ದಕ್ಷಿಣೋತ್ತರಶ್ರೇಣಿಗಳೊಳಿರ್ಪ್ಪ ವಿದ್ಯಾಧರಾಧೀಶ್ವರರಂ ಬರಿಸಿ ಗಗನವಲ್ಲಭರಥನೂಪುರಚಕ್ರವಾಳಂಗಳೆಂಬ ರಾಜಧಾನಿಗಳಾಗಿ ನೆಗೞ್ದ ಸೂೞಪತ್ತುಂ ಪೊೞಲ್ಗಳನೊಳಕೊಂಡ ದಕ್ಷಿಣೋತ್ತರಶ್ರೇಣಿಗಳಂ ನಮಿವಿನಮಿ-

೧-೧ (ಅ,ಬ) ರ್ಪ್ಪವೀ. ೨-೨ (ಅ) ಮೆಸೆದುದಿಲ್ಲ; (ಅII) ಮೆಸೆವುವಿಲ್ಲಿ; (ಬ) ಮೆಸೆವುವಲ್ಲಿ. ೩ (ಬ) ತ. ೪-೪ (ಚ) ಪುಗಿಲೊಳ್. ೫-೫ (ಅ,ಬ) ಪೆರ್ಚುವರುಂ ಕುಂದುವರುಮಲ್ಲರ. ೬-೬ (ಅ) ವಿದ್ಯೆಗಳಂ; (ಬ) ವಿದ್ಯೆಗಳ್ಪಲವುಂ.

ಗಳ್ಗೆ ಕೊಟ್ಟು ಗಾಂಧಾರಪನ್ನಗವಿದ್ಯೆ೧ಗಳನ೧ವರ್ಗೆ ವಿಧಿಪೂರ್ವಕ—೨ಮಿತ್ತು೨,

ಇದು ಪ್ರಮದೋದರಾಸನಮಿವರ್ ನಿಮಗೆ೩ಗಾಳ್ವರುಮಿರ್ಪ್ಪರೆನ್ನ೩ ದೇ-
ಟ್ಟು ದನಿಸನಿಂತೆ ನಂಬಿ ಬೆಸಕೆಯ್ವುದು ನೀಮಿವರ್ಗೆಂದು ಖೇಚರಾ-|
ಸ್ಪದಸಕಲಾಧಿಪತ್ಯಮನನಾಕುಳಮಂತವರ್ಗಿತ್ತನಾರ್ಗಮ-
ಭ್ಯುದಯಮನೀಗುಮೆಂಬುದದು ಚೋದ್ಯಮೆ ತತ್ಪರುದೇವಸೇವನಂ ||೧೨೨||

ವ|| ಅಂತು ಧರಣೇಂದ್ರನವರಸಂ ಖಚರೇಂದ್ರಪದವಿಯೊಳ್ ನಿಱಿಸಿ ನಿಜಾಮರಲೋಕಕ್ಕೆ ಪೋದನನ್ನೆಗಮಿತ್ತಲ್,

ಇದು ಜೇಱ್ಕೊ೪ದಿಶೆ೪ಗತ್ಯುದಗ್ರಮಹಿಮಂ ದೇವಾಚಲೇಂದ್ರಂ ಜಗ-
ಕ್ಕಿದು ಜೇಱ್ಕೊಂಡತಿನಿಷ್ಪ್ರಕಂಪಸಲಿಲಂ ಗಂಭೀರಕೂಪಾರಮೆಂ-|
ಬುದನೆಂದಚ್ಚರಿಸೆ ಖೇಚರಾಮರಗಣಂ ನಿಂದಂ ಕೊಕಲ್ ಶಾಶ್ವತಾ-
ಸ್ಪದಮಂ ಯೋಗನಿಯೋಗನಿಶ್ಚಲಮನಂ ಸಂದಾದಿಭಟ್ಟಾರಕಂ ||೧೨೩||

ವ|| ಅಂತು,

ಪದಮಂ ಪೂರ್ಣ್ಣಱುದಿಂಗಳಂ ನೆಱಪಿ ಚರ್ಯ್ಯಾಮಾರ್ಗ್ಗದೊಂದಂದಮಂ|
ಧರೆಯೊಳ್ ಮಾರ್ಗ್ಗವಿಬೋಧನಾರ್ಥಮಱಿಯಲ್ಕೆಂದೆತ್ತಿ ಕಯ್ಯಂ ಸುರೇ-||
ಶ್ವರಶೈಲಂ ತಳರ್ವಂತೆವೋಲ್ ತಳರ್ದನೀರ್ಯ್ಯಾಗೋಚರಂ ಶುದ್ಧಿ ತ-|
ತ್ತಿರೆ ತನ್ನೊಳ್ ಧರೆಯುಂ ಪದಾಂಬುಜರಜಂಗಳ್ ನೀರಜಂ ಮಾಳ್ಪಿನಂ ||೧೨೪||

ವ|| ಅಂತು ತಳರ್ದನುಕ್ರಮದಿಂ ಗ್ರಾಮನಗರಖೇಡಖರ್ವ್ವಡಮಡಂಬಂಗಳೊಳೊಡಂಬಡಿಲ್ಲದೆ ಚರ್ಯ್ಯಾಮಾರ್ಗ್ಗದೊಳ್ ನಡೆವಲ್ಲಿ ಜನ೫ಪದಪುರ೫ಸನಾಭಿ—ಜನಂಗಳ್೬ ಕಂಡರ್ ಕಂಡಲ್ಲಿಯೆ ಮುಸುಱಿಕೊಂಡು,

ಬೆಸನಾವುದೆಮಗೆ ಬೆಸನಂ
೭ಬೆಸಸೆನೆಯೇ೭ ಬಾ೮ಟ್ತಿಯೆಂದು ಮುಂದಿಟ್ಟರ್ ಸ್ರ-
ಗ್ವಸನವಿಲೇಪನಭೂಷಾ-
ಪ್ರಸರಂಗಳನಲ್ಲಿ ಕೆಲಬರತಿಜಡಮತಿಗಳ್ ||೧೨೫||

---

೧-೧ (ಅ) ಗಳುಮನ. ೨-೨ (ಅ,ಬ) ದಿಂದಮಿತ್ತು. ೩-೩ (ಅ,ಬ) ಗಿರ್ವ್ವಾಣರುವರಾಳ್ದರೆಂನ. ೪-೪ (ಬ) ದೆಡೆ. ೫-೫ (ಅ) ಪುರಸ್ಸರಂ; (ಬ) ಪುರಜನ. ೬ (ಬ) ಈ ಮುಂದೆ ೧೨೮ನೆಯ ಪದ್ಯದ ಮೂರನೆಯ ಚರಣದೊಳಗಣ 'ಕೆಲರುರ್ವ್ವೀಶ್ವರರ್' ಎಂದು ಸಾಗುತ್ತದೆ. ೧೨೫, ೧೨೬, ೧೨೭ ಮತ್ತು ೧೨೮ರ ಭಾಗ ಇಷ್ಟು ಬಿಟ್ಟು ಹೋಗಿವೆ. ೭-೭ (ಅ) ಬೆಸಸುವುದೇ. ೮ (ಅ) ತ್ತೆ.

ಸುತ್ತಿದ ಕರಗದ ನೀರುಮ-
ನೆತ್ತಿದ ಜೋನಮುಮನಿದಿರೊಳಿಟ್ಟಿರೆ ಬನ್ನಿಂ।
[೧]ಇತ್ತೇಟ್ಟಿರಿಪೆಂದರ್ ಮುನಿ-[೧]
ಪೊತ್ತಮಸಂ ಮುಗ್ಧಮತಿಗಳೇನಂ [೨]ಮಾಡರ್[೨] ॥೧೨೬॥

ಪಸೆಯುಂ ಪಸುರ್ಪಂಪಡುಮಂ
ಪೊಸಯಿಸಿ ಕನ್ನಿಯರ್ಕೆಸಾಸಕಳ್ಪನಿವೆಸೆಯೊಳ್।
ಪಸರಿಸೆ ತಂಪರ್ ಪಿರಿದೊಂ-
ದೊಸಗೆಯೊಳಿರದರಸ ಮದುವೆನಿಲ್ಲೆಂದಲೆಬರ್ ॥೧೨೭॥

ಸರ್ಪ್ಪಸ್ವಮುಮಂ ಕುಡದಿರೆ-
ಲುರ್ವ್ವೀಪತಿ ಬಂದೊಡಾಗಪೆಂವತಿಭಕ್ತರ್ ।
ಖರ್ವ್ವಟನಿವಾಸಿಗಳ್ ಕೇ-
ರುರ್ವ್ವೀಶರ್ ತೆಗೆವರಾನೆಯುಂ ಕುದುರೆಯುಮಂ ॥೧೨೮॥

ಬಳಗಂ ಬೆರಸಿರೆಬರ್ ಕಾ-
ಲ್ಗಳ ಮೊದಲೊಳುದಶ್ರುಲೋಚನರ್ ಮುಂದುಂಡೀ-।
ಗಳೆ ಬಿಜಯಂಗೆಯ್ಯೆಂದಿವೆ
ಕುಲಾದ್ರಿಧೈರ್ಯ್ಯಂಗೆ ಬರಿಗೆ [೩]ಮಾಣ್ದತ್ತಿನಿಸುಂ[೩] ॥೧೨೯॥

ವ॥ ಅಂತಾಮುನೀಶ್ವರಂಗೆ ನಿಖಿಲಜಗಜ್ಜನಾಶ್ಚರ್ಯ್ಯಚರ್ಯ್ಯಾಪರ್ಯ್ಯಟನ[೪]ದೊಳ್ ಪತ್ತುಮಱು[೪]ದಿಂಗಳ್ ಪೋಗೆ ಸಂವತ್ಸರಂ ನೆಱೆದಂದು ಕುರುಜಾಂಗಣವಿಷಯವಿಶೇಷಕಮಪ್ಪ ಹಸ್ತಿನಾಪುರಮನಾಳ್ವ ಕುರುವಂಶಶಿಖಾಮಣಿಸೋಮಪ್ರಭಂಗೆ ತತ್ ಸ್ವಯಂಪ್ರಭಾಶ್ರೀಮತ್ಯಾರ್ಯ್ಯಾಸ್ವಯಂಪ್ರಭದೇವಕೇಶವಮಹೀಶಾಚ್ಯುತಪ್ರತೀಂದ್ರಂ ಧನದೇವಚರಂ ಸರ್ವಾರ್ಥಸಿದ್ಧಿಯಿಂ ಬಂದು ಪರಮಶ್ರೇಯೋನಿಧಾನಂ ಶ್ರೇಯಾಂಸನೆಂಬೊಂ ಪ್ರಿಯಾನುಜನಾಗಿರ್ದ್ದಾತಂ ಅಂದಿನ ಬೆಳಗಪ್ಪ ಜಾಮದೊಳ್,

ಸುರಶೈಲಂ ಕಲ್ಪವೃಕ್ಷಪ್ರಕರಪರಿವೃತಂ ರಾಜಗೇಹಾಂಗಣಾಲಂ-
ಕರಣಂ ಬಂದಿರ್ದ್ದುದಂ ಕಂಡಮರಗಿರಿನಿಭಂ ಪ್ರಾರ್ಥಿತಾರ್ಥಪ್ರದಂ ಮಾ-।

---

೧-೧ (ಜ) ಇತ್ತೆಱಿಪ್ಪಾಯೆಂದರ್ ಮುನಿ. ೨-೨ (ಅ) ನೆಗೞರ್. ೩-೩ (ಅ) ಮಾಣ್ದತ್ತಿನಿಸಂ; (ಬ) ಮಾಣ್ದಪುದಿನಿಸಂ. ೪-೪ (ಅ) ದೊಳಮತ್ತಮಱು; (ಬ) ದೊಳತ್ತಮತ್ತೆಂದರು.

ಣ್ದಿರದಾದಿಬ್ರಹ್ಮನೇೞ್ಕ ತ್ತರ್ಪನೆ ಕನಸುವೇೞ್ದು ಪೃದೇಂದ್ರಗ್ರಜಂಗಾ-
ದರದಿಂದಂ ಪೇೞ್ವ ಕಾಣ್ಬುತ್ಸವದೊಳೆ ಪರಮಾನಂದಮಂ ತಾಳ್ದಿ ನಿಂದಂ||೧೩೦||

ವ|| ಅನ್ನೆಗಮಾದಿಮುನೀಶ್ವರನುಮಾಪುರಾಂತರಾಳದೊಳ್ ಸಂವೇಗವೈ-
ರಾಗ್ಯಾಭಿವೃದ್ಧ್ಯರ್ಥಮಾಗೆ ಜಗತ್ಕಾಯಸ್ವಭಾವಭಾವನಾಪರಂ ಸಕಲಶರೀ-
ರಿಗುಣಾಧಿಕದುಃಖಾದ್ರಿತಾವಿನೀತರೊಳ್ ಮೈತ್ರಿಪ್ರಮೋದಕಾರುಣ್ಯಮಾಧ್ಯಸ್ಥ-
ವೃತ್ತಿಗಳಂ ಭಾವಿಸುತ್ತುಂ ಯುಗ್ಮಪ್ರಮಾಣಕ್ಷೋಣೀನಿರೀಕ್ಷಣನಿರತನು—
ಮ[೧]ದ್ರುತವಿಲಂಬಿತ[೧]ಗತಿವ್ಯಪೇತನುಮಾಗಿ ನಗರಾರಣ್ಯನಿರ್ವಿಶೇಷನುತ್ತ-
ಮಮಧ್ಯಮಜಘನ್ಯಾಗಾರಂಗಳೊಳ್ ಚಂದ್ರಗತಿಯಿಂ ಸಲುತ್ತುಮಾಲೋಕ-
ಸಂಭ್ರಮೋಪೇತಪುರಜನಾನುಗಮ್ಯಮಾನಂ ಸೋಮಪ್ರಭರಾಜಮಂದಿರಾಭಿ-
ಮುಖನಾಗಿ ಬರ್ಪನ್ನೆಗಂ ದ್ವಾರಪಾಲಕಂ ಸಿದ್ಧಾರ್ಥನೆಂಬೊಂ [೨]ಪರಿತಂದು[೨]
ಭಗವದ್ವೃತ್ತಕ[೩]ಪ್ರಕಾಶ[೩]ವಚ[೪]ರಚನಾಪ್ರಸನ್ನಮುಖ[೪]ಸರಸೀರುಹನಾ—
ಗಿರ್ದ ಸೋಮಪ್ರಭಂಗಂ ಶ್ರೇಯಾಂಸಂಗಮಱಿಪಿದಾಗಳ್,

ಕರಕಲಿತಾರ್ಘ್ಯಪಾದ್ಯನ[೫]ನವದ್ಯಗುಣಂಗೆ ಸಮಸ್ತರಾಜಕಂ
ಬೆರ[೬]ಸಿದಿರೆಳ್ದು[೬] ರಾಜಗೃಹದಿಂ ಪೊಱಮಟ್ಟತಿಭಕ್ತಿಯಿಂ ಪದಾಂ-|
ಬುರುಹಮನೆಯ್ದೆ ವಂದಿಸಿಗೆ ಶೋಭಿಸಿದಂ ಮುನಿಮುಖ್ಯನಾಗಳಿ—
ರ್ವ[೭]ರ ನಡುವಿರ್ದ್ದ ನೀಲನಿಷಧಂಗಳ ಮಧ್ಯದ ಮಂದರಾದ್ರಿವೋಲ್ ||೧೩೧||

ವ|| ಆಗಳಾದಿತೀರ್ಥಕರ್ತ್ತಾರನ ದಿಗಂಬರರೂಪಮಂ [೮]ಕಾಣಲೊಡಂ[೮]
ಶ್ರೀಮತಿಯಾದ ಭವದೊಳ್ ವಜ್ರಜಂಘನುಂ ತಾನುಮಿರ್ದ[೯] ಸರ್ಪಸರೋ-
ವರದೊಳ್ ಚಾರಣಯುಗಳಕ್ಕೆ ವಿಧಿಪೂರ್ವ[೧೦]ಕಮಾಹಾರದಾನಮನಿತ್ತು—
ದನಾ[೧೦]ಗಳಾ[೧೧]ಗಳೆ ಪುಟ್ಟಿದ[೧೧] ಭವಸಂಸ್ಕಾರದಿಂದಂ *ಜಾತಿಸ್ಮರನಾಗಿ* ಸವಿ-
ಸ್ತರಮಱಿದು,

ಈಯಲ್ಬಂದತ್ತು ಕಲ್ಪಾಂಘ್ರಿಪಮಭಿಮತಮಂ ಪೂರ್ವಪುಣ್ಯಾರ್ಜ್ಜಿತಂ ಕೊ-
ಳ್ಳೀಯಲ್ಬಂದತ್ತಿದೊಂದಕ್ಷಯನಿಧಿಯೆನುತುಂ ತನ್ನನೊಲ್ದಾತ್ರಿಲೋಕ-|
ಶ್ರೀಯೆಲ್ಲಂ ಪೊರ್ದ್ದಿದಂತೇನೊಸೆದನೊ ಮನದೊಳ್ ಸೂಕ್ತಿಕರ್ಣಾವತಂಸಂ
ಶ್ರೇಯಾಂಸಂ ಪ್ರೋನ್ನತಾಂಸಂ ಸುಕವಿಜನಮನೋಮಾನಸೋತ್ತಂಸಹಂಸಂ||

---

೧-೧ (ಆ) ಧೃತಾವಿಳಂಬಿತ; (ಬ) ಧೃತವಿಲಂಬಿತ. ೨-೨ (ಬ) ಪರಿದು ಬಂದು. ೩-೩ (ಬ) ಪ್ರಕಾಶ. ೪-೪ (ಬ) ರಚನಪ್ರಸಂನಮುಖವದನ; (ಜ) ರಚನಾಮುಖರಮುಖ. ೫ (ಅ) ರೆ; (ಬ) ತ. ೬-೬ (ಅ) ಸಿದಿರೆಳ್ದು; (ಬ) ಸಿದಿರ್ವಂದು. ೭ (ಅ,ಬ) ರ್ದ್ದ. ೮-೮ (ಅ) ನೋಡಲೊಡಂ. ೯ (ಜ) ರ್ದ. ೧೦-೧೦ (ಆ,ಬ) ಕಮಾಹಾರದಾನಮಂ ಕೊಟ್ಟು ದನಾ; (ಜ) ಕಂ ಮಹಾದಾನಮನಿತ್ತುದನಾ. ೧೧-೧೧ (ಬ) ಗಳ್ಪುಟ್ಟಿದ.

*-* (ಜ) ಪ್ರತಿಯಲ್ಲಿಲ್ಲ.

ವ॥ ಇಂತತಿಪ್ರಮೋದಪ್ರೀಣಿತಾಂತಃಕರಣನಾಗಿ,

ಇದಿರೊಳ್ ಮಂಗಲಗೀತತೂರ್ಯ್ಯನಿನದಂ ಕೈಗಣ್ಮೆ ಮಾಂಗಲ್ಯವೇ-
ಷದ ಕಾಂತಾತತಿಮಂಗಲೋಪಕರಣದ್ರವ್ಯಂಗಳಿಂದೊಪ್ಪೆ ಪೆ-
ರ್ಚ್ಚಿದ ತನ್ನುತ್ತಮಭಕ್ತಿಯಿಂ [1]ನಿಲಿಪುದುಂ[1] ಶ್ರೀಯೋಗೃಹದ್ವಾರದೊಳ್
ನಿಧಿ ನಿಲ್ವಂತಿರೆ ನಿಂದನೂರ್ಜ್ಜಿತಗುಣಂ ಸಂಸಾರಸಾರೋದಯಂ ॥೧೩೩॥

ಗ॥ ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ-
ಚಂದ್ರನಾಚ್ಚಂದ್ರಿಕಾಪ್ರಸರಪ್ರಸಾದೋದೀರ್ಣ್ಣಸೂಕ್ತಿ-
ಕಲ್ಲೋಲಮಾಲಾಕೀರ್ಣ್ಣಕವಿತಾಗುಣಾರ್ಣ್ಣವ-
ಪ್ರಣೀತಮಪ್ಪಾದಿಪುರಾಣದೊಳ್
ಪರಿನಿಷ್ಕ್ರಮಣಕಲ್ಯಾಣ
ವರ್ಣ್ಣನಂ
ನವಮಾಶ್ವಾಸಂ
ಸಂಪೂರ್ಣ್ಣಂ

೬-೧ (ಅ,ಬ) ನಿಱಿಪುದುಂ. (೧೦-೧ ನೋಡಿ).

೧ಲ್ಲಿರ್ದ೧ ತನು ನಿಷ್ಪ್ರಕಂಪನಿರೆ ದಂತಚಯಂ ಸಮನಾಗಿರೆ ತನ್ನೊ೪ಳ್ ಕೊಂ-
ಡಿರೆ ಸಮಾಧಾನಪರಮಯೋಗಿಗೆ ಯೋಗನಿರೋಧಭಾವನಂ ||೧೪||

ವ|| ಅಂತು ಯೋಗಯೋಗ್ಯಬಾಹ್ಯಸಾಮಗ್ರಿಯೊಳ್ ಮುನ್ನಮೆ ನೆಱೆದು ಪರಮಾಗಮದೆ ಮನಮೊಳ್ ನಿಱಿಸಿ ಸಮ್ಯಗ್ಜ್ಞಾನದರ್ಶನಾನಂತವೀರ್ಯ-ಸೂಕ್ಷ್ಮಾಗುರುಲಘುತ್ವಾವಗಾಹನಾವ್ಯಾಬಾಧಂಗಳೆಂಬ ಸಿದ್ಧಪರಮೇಷ್ಠಿಗಳಷ್ಟ-ಗುಣಂಗಳಂ ನೆನೆಯುತ್ತುಮಪ್ಪುನಾವಿದ್ಯಾವಶಾನುಪ್ರೇಕ್ಷಾಭಾವನಾಭಾವಿತಾಂತಃ-ಕರಣನಾಗಿ ಮುನ್ನಮಾಜ್ಞಾವಿಚಯಮಪಾಯವಿಚಯವಿಪಾಕವಿಚಯ—ಸಂಸ್ಥಾನವಿಚಯಮೆಂಬ ನಾಲ್ಕುಂ ಧರ್ಮ್ಯಧ್ಯಾನಮಂ ಧ್ಯಾನಿಸುತ್ತುಂ ಜ್ಞಾನಾದಿಪರಿಣಾಮಂಗಳೊಳ್ ನಿರತಿಚಾರಮೆಯ್ದಿಸುವಿನಯಂ ತಾಳ್ದಿ ೫ತದ-ನಂತರಮೆ೫ಸ್ವಸ್ಥಾನಪ್ರಮತ್ತಗುಣಸ್ಥಾನಂಗಳೊಳ್ *ಅಧಃ೬ಪ್ರವೃತ್ತಪೂರ್ವಾನಿವೃತ್ತಿಕರ—ಣ೬*ಪರಿಣಾಮಂಗಳಿಂದನಂತಾನುಬಂಧಿಕ್ರೋಧಮಾನಮಾಯಾಲೋಭಂಗ—ಳಂ ವಿಸಂಯೋಜಿಸಿ ಮತ್ತಮಂತರ್ಮುಹೂರ್ತಮಂ ವಿಶ್ರಮಿಸಿ ಮಗುಳ್ದುಂ ತ್ರಿವಿಧಕರಣಪರಿಣಾಮಪರಿಣತನಪ್ಪುದಱಿಂ ಮಿಥ್ಯಾತ್ವಸಮ್ಯಙ್ಮಿಥ್ಯಾತ್ವಸ—ಮ್ಯಕ್ತ್ವಪ್ರಕೃತಿಯೆಂಬ ದರ್ಶನಮೋಹನೀಯತ್ರಿಕದ ನಿರ್ಮೂಲನದಿಂ ಕ್ಷಾಯಿ-ಕಸಮ್ಯಗ್ದೃಷ್ಟಿಯಾಗಿ ಬಳಿಯಮಂತರ್ಮುಹೂರ್ತಕಾಲಂ ಪ್ರಮತ್ತಾಪ್ರಮತ್ತ-ಪರಾವರ್ತನಸಹಸ್ರಂಗೆಯ್ದು ಮೋಕ್ಷಪ್ರಾಸಾದಾಧಿರೋಹಣನಿಶ್ರೇಣೀಭೂತ-ಕ್ಷಪಕಶ್ರೇಣಿಪ್ರಾಯೋಗ್ಯಾಧಃಪ್ರವೃತ್ತಕರಣಪರಿಣತನಪೂರ್ವಕರಣಕ್ಷಪಕಂ ಪ್ರ-ಥಮಶುಕ್ಲಧ್ಯಾನಪರಿಣತನಾಗಿಪ್ಪನಾಯುಃಕರ್ಮಮನುೞಿಪಿ ಮತ್ತಿನುೞಿದ ಕರ್ಮಂಗಳಂ ೮ಸ್ಥಿತ್ಯನುಭಾಗಕಾಂಡಕಘಾತಪ್ರದೇಶಗುಣಶ್ರೇಣಿನಿರ್ಜರಾದಿ-ವಿಧಿಯಿನನುಕ್ರಮಂ ಕಿಡಿಸುತ್ತುಂ ಪ್ರತಿಸಮಯಮನಂತಗುಣಶಕ್ತಿ೭ಯಿಂ ಬಳೆವೈಕ-ಪರಿಣಾಮಾನಿವೃತ್ತಿಕರಣಕ್ಷಪಕನಾಗಿ ಪೂರ್ವೋಕ್ತವಿಧಾನದಿನಂತರ್ಮುಹೂ-ರ್ತದಿಂ ನಿದ್ರಾನಿದ್ರಾ-ಪ್ರಚಲಾಪ್ರಚಲಾ-ಸ್ತ್ಯಾನಗೃದ್ಧಿ-ನರಕಗತಿತತ್ಪ್ರಾಯೋ—ಗ್ಯಾನುಪೂರ್ವ್ಯ-ತಿರ್ಯಗ್ಗತಿತತ್ಪ್ರಾಯೋಗ್ಯಾನುಪೂರ್ವ್ಯೈಕೇಂದ್ರಿಯವಿಕಲೇಂದ್ರಿ—ಯಜಾತ್ಯಾತಪೋದ್ಯೋತಸ್ಥಾವರಸಾಧಾರಣಸೂಕ್ಷ್ಮಂಗಳೆಂಬ ಪದಿನಾಱುಂ ಕರ್ಮಪ್ರಕೃತಿಗಳಂ ೯ನಿಶ್ಶೇಷಂ೯ ಕಿಡಿಸಿ ಮತ್ತಮಂತರ್ಮುಹೂರ್ತದಿಂ ವಿಶುದ್ಧಪರಿಣಾಮಾತಿಶಯಪರವಶ೧೦ಂ ೧೧ನಪ್ರತ್ಯಾಖ್ಯಾನಕ್ರೋಧ೧೧ಮಾನಮಾ—

೧-೧ (ಬ)-ಲ್ದಿರೆ. ೨(ಜ)-ಗ. ೩(ಅ)-ವೆಸ್ತ್ರ. ೪(ಜ)-ಕ. ೫-೫(ಅ) ತದನಂತರಸಮಯದೊಳ್. ೬-೬(ಜ)-ಪ್ರವೃತ್ತಿಕರಣ. ೭(ಅ)ವು. ೮(ಜ)-ಸ್ಥ. ೯-೯೧೦(ಜ) ನಿರವಶೇಷಂ. ೧೦(ಬ)-ನಕ್ಷಯ- ೧೧-೧೧(ಅ) ನಪ್ರತ್ಯಾಖ್ಯಾನಕ್ರೋಧ.

*—* ಶಾಂತಿಪುರಾಣದಲ್ಲಿ "ಅಧಃಪ್ರವೃತ್ತ ( ಪೂರ್ವಾನಿವೃತ್ತಿ ) ಕರಣ" ಎಂದಿದೆ. ೧೧-೧೧೦ ವ. ಪು. ೨೮೬. ಪ. ೩.

ಯುಶ್ರೋಣಿಘಕ್ಕೆ ನಿವರ್ತಿಸಿದುದುಂ ಪಾಡಿ ನಿರಸ್ತಾಷ್ಟಾವಿಂಶತಿಮೋಹನೀಯಮೂಲಕರ್ಮಕನಾಗಿ ತದನಂತರಸಮಯದಿನಪಗತರಾಗದ್ವೇಷಭಾವನಾಭಾವಿತಯಥಾಖ್ಯಾತಚಾರಿತ್ರಕ್ಷೀಣಕಷಾಯವೀತರಾಗಚ್ಛದ್ಮಸ್ಥಗುಣಸ್ಥಾನಾನೇಕತ್ವವಿತರ್ಕ್ಕವಿಚಾರಾಭಿಧಾನಧ್ಯಾನಪರಿಣತಪರಿಮಿತಪ್ರದೇಶನಿರ್ಜ್ಜರಾದಿಕ್ರಿಯಾಕಲಾಪಕಲಿತನುಚಿತಕತಿಪಯಸಮಯಂಗಳಿನಾತ್ಮದ್ವಿಚರಮಸಮಯದೊಳ್ ನಿದ್ರಾಪ್ರಚಲೆಗಳಂ ಕಿಡಿಸಿ ಚರಮಸಮಯದೊಳ್ ಮತಿಶ್ರುತಾವಧಿಮನಃಪರ್ಯ್ಯಯಕೇವಲಾವಬೋಧವಿಷಯಜ್ಞಾನಾವರಣಪಂಚಕಮುಮಂ ಚಕ್ಷುರಚಕ್ಷುರವಧಿಕೇವಲದರ್ಶನಾ[೧]ವರಣ[೧]ಚತುಷ್ಕಮುಮಂ ದಾನಲಾಭಭೋಗೋಪಭೋಗವೀರ್ಯ್ಯಾಂತರಾಯ[೨]ಪಂಚಕಮುಮನೊರ್ಮೊದಲೆ[೨] ಕಿಡಿಸಿ ತದನಂತರಸಮಯದೊಳ್,

ಅಳಱು ಕಿಡೆ ಘಾತಿಗಳ್ ದಾ-
ನಲಾಭಭೋಗೋಪಭೋಗವೀರ್ಯ್ಯಂಗಳೊಳೊ-
ಗ್ಗಲಿಸಿದನಂತಚತುಷ್ಟಯ-
ವಿಲಾಸಿ[೩] ಕೈವಲ್ಯಲಕ್ಷ್ಮಿಯಂ ಯತಿ ಪಡೆದಂ ||೧೫||

ಅನತಿಶಯಕೇವಲಜ್ಞಾ-
ನನಿರೀಕ್ಷಿತವಿಶ್ವನಾಥಾದಿಜಿನಂ ಘಾ-|
ಲ್ಗುನಬಹುಳೈಕಾದಶಿಯೊಳ-
ಮನಂತಸುಖನಿಲಯ[೪]ನುತ್ತರಾಷಾಢದೊಳಂ ||೧೬||

ಧ್ಯಾನಮರೀಚಿಯಿಂ ಬಿದಱಿ ಘಾತಿತಮಸ್ತಮನೆಯ್ದೆ ಭವ್ಯಸಂ-
ತಾನಸರೋಜರಾಜಿಗಲರ್ದ್ದಾದರಮಾದಮಳುಂಬಮಾಗೆ ವೈ-|
ಮಾನಿಕಚಕ್ರವಾಕಮೊಲವುಣ್ಮಿರೆ ಚೆಲ್ವೆಸೆದತ್ತು ಕೇವಲ-
ಜ್ಞಾನದಿನೇಶಬಿಂಬದ ಪೊದಳ್ದುದಯಂ ವೃಷಭೋದಯಾದ್ರಿಯೊಳ್ ||೧೭||

ವ|| ಅಪ್ರಸ್ತಾವದೊಳ್,

ಸುರಪುಷ್ಪಾಸಾರದಿಂದಂ ಸುರಗಣಪಟಹಪ್ರಸ್ಫುರದ್ಧ್ವಾನದಿಂದಂ
ಸುರಕಾಂತಾ[೫]ರಾಗ[೫]ದಿಂದಂ ಸುರವಿರಚಿತಮಂದಾನಿಲಾಂದೋಲದಿಂದಂ |
ಸುರವಂದಿಸ್ತೋತ್ರದಿಂದಂ ದೆಸೆಗಗನತಳಂ ತೀವಿ ತಳ್ಳಂಕುಗುಟ್ಟ-
[೬]ತ್ತಿರೆಯುಂ[೬] ಕೈವಲ್ಯಬೋಧೋದಯಮುಸಿಮೆ ಜಗಕ್ಕಾದುದಾಶ್ಚರ್ಯ್ಯಭೂತಂ ||೧೮||

ವ|| ಆಗಳಾದಿದೇವನ ಕೇವಲಜ್ಞಾನಸಂಪೂರ್ಣ್ಣ[೭]ಚಂದ್ರೋದಯೋ[೭]ಜ್ಜೃಂಭಿತಜಗ[೮]ತ್ತ್ರಯಾಂ[೮]ಭೋಧಿವೇಲಾಪ್ರಧ್ವಾನಾನುಕಾರಿಘಂಟಾರವಕಂಠೀರ-

೧-೧(ಅ)-ವರಣಮೆಂಬದರ್ಶನಾವರಣ. ೨-೨ (ಚ)-ಪಂಚಕಮುಮಂ ನಿಮೂರ್ಲಮಪ್ಪಂತೊರ್ಮೊದಲೆ. ೩(ಬ)-ಸ. ೪(ಚ)-ಮು. ೫-೫(ಅII)-ನೃತ್ಯ. ೬-೬(ಅ,ಬ)-ತ್ತಿರವಿಂ. ೭-೭(ಅ)-ಚಂದ್ರಬಿಂಬೋದಯೋ. ೮-೮(ಅ)-ತ್ರಿತಯಾಂ.

ಲೋಕನಯನಂಗಳವರ್ಣ್ಣನಾಯಮಾನಮುಮಪ್ಪ ಭೂಮಿಭಾಗದ ಪರ್ಯ್ಯಂತಪ್ರ-
ದೇಶಮನಲಂಕರಿಸಿ ಚಂಚತ್ಪಂಚರತ್ನಪಾಂಸುಮಯಮಾಗಿ,

ಪಲವುಮಾಕೃತಿಯಿಂ ವಿವರ್ಣ್ಣಂ
ಬಳಸಿದುದು ಸುರೇಂದ್ರಚಾಪಮಂಡಲಮೆನೆ ಬ-।
ಣ್ಣಿಸಿ ಬಳೆದ ಪಂಚರತ್ನದ
ಬೆಳಗಿಂದಂ ಬೆಳ್ಪುವೆತ್ತ ಧೂಳೀಸಾಲಂ ॥೩೩॥

ವ॥ ಆದಱ ನಾಲ್ಕುಂ ದೆಸೆಯೊಳಂ [1]ಮಕರ[1]ತೋರಣಾಲಂಕೃತ-ಜ್ಯೋತಿರ್ಮ್ಮಯಪ್ರಾಕಾರಪರಿಪಾಲಿತಬಹಿರಂತರ್ ಜಗತೀದ್ವಯನಿಹಿತಪ್ರತ್ಯೇ-ಕಾಷ್ಟೋತ್ತರಶತಾಷ್ಟಮಂಗಳನವನಿಧಿಸಮನ್ವಿತಜಾತರೂಪಗೋಪುರಾಭ್ಯಂತರ-ಮಹಾವೀಥೀಮಧ್ಯದೊಳ್ ದ್ವಾದಶಗೋಪುರವಿರಾಜಿತಸಾಲತ್ರಯಪರೀತಕುಂಡ-ದ್ವಯಸಮೇತನಂದನಾದಿಷೋಡಶಸೋಪಾನೋಪಶೋಭಿತಜಗತೀತಲಮಧ್ಯ-ದೊಳನುಕ್ರಮದೊಳೊಂದುಂ ನಾಲ್ಕುಂ ನಾಲ್ಕುಂ ಬಿಲ್ನಿಡಿಯವಾಗಿ ವೈಡೂರ್ಯ್ಯ-ಹೇಮಪಂಚರತ್ನಮಯಂಗಳಪ್ಪ ಮೂಱುಂ ಪೀಠಂಗಳ ಮೇಲೆ ಚತುರಶ್ರಾ-ಧೋಭಾಗಪರಿವೃತ್ತಾಗ್ರಭಾಗಾಧ್ಯಾಸಿತಹಿರಣ್ಮಯಜಿನಬಿಂಬಕದಂ[2]ಬಕಂಗಳುಂ[2] ಪರಿಲಂಬಿತಹೇಮಘಂಟಾಕಿಂಕಿಣೀಚಾಮರಧ್ವಜಂಗಳುಮಾಗಿ[3],

ಮಾನಮನೆಂತುಂ ಮಿಥ್ಯಾ-
ಜ್ಞಾನಿಗಳೆರ್ದೆಯೊಳಗೆ ನಿಲಿಸಲೀಯವೆ ನಾಲ್ಕುಂ ।
ಮಾನಸ್ತಂಭಂಗಳ್ ದಿ-
ಕ್ಸ್ಥಾನಸ್ಥಂಗಳ್ ನಿರಂತರಂ ಸೊಗಯಿಸುಗುಂ ॥೩೪॥

ಮಾನಸ್ತಂಭದಿನಂತಾ-
ಮಾನಸ್ತಂಭಂಬರಂ ಸುಧಾಹರ್ಮ್ಯಮುಮಂ ।
ತಾನಯ್ದಯ್ದು ವಱಿ[4]ಡೆಯೊಳ್
ತಾನೊಂದೊಂದರ್ಹದಾಲಯಂ ಸೊಗಯಿಸುಗುಂ ॥೩೫॥

೧-೧ (ಅ,ಬ) ಮರಕತ. ೨ (ಬ) ಬಂಗಳುಂ. ೪ (ಚ) ಗೆ.

† ಪೂ. ಪು. ೨೨-೯೦.

ವ॥ ೧ಅಂತು೧ ಆ ಹೆಮ್ಮ್ಯಗ್ಬೈತ್ಯಾಲಿಯಮಾವಸಿಯೆಂಬುದದಱ ವಿಸ್ತಾರಮುರ್ಧ್ವ-ಯೋಜನಮರ್ಧ್ಧಂಬೆತ್ತ ಪ್ರೋಪ್ರೋಕ್ತವರ್ಣ್ಣಸೋಪೇತವಿವಿಧಮಣಿಖಚಿತರಜತ—ಮಯಚತುರ್ಗ್ಗೋಪುರದ್ವಾರವಿರಾಜಮಾನವೇದಿಕಾವೃತೋಭಯತಟಘಟಿತಮ-ಣಿಮಯಸೋಪಾನಘಾಸಮಾನಮುಮರ್ಧ್ಧಯೋಜನವಿಸ್ತಾರಮುಮಾಗಿ,

ಬಳಸಿ ಜಲವಿಹಗಜಲಚರ-
ಜಲಜೋತ್ಪಲಕಲಿತಮಮಲಜಲಜಲಕೇಲೀ-।
ವಿಲಸನವಿಹಗ್ಗೃಹೀಚರ-
ನಿಲಿಂಪದಂಪತಿಯೆನಂಬುಖಾತಿಕೆ ರಮ್ಯಂ ॥೭೬॥

ವ। ಅಂತಷ್ಟಂಬೆತ್ತ ವಿಚಿತ್ರರತ್ನರಚಿತಜ್ಯೋತಿಷ್ಕದೌವಾರಿಕಾಷ್ಟಮಂಗಲನ-ವನಿಧಿಸನಾಥಜಗತೀತಲಸಮನ್ವಿತತಾರಮಯಚತುರ್ಗ್ಗೋಪುರಘಾತಿತಹಿರಣ್ಯ—ವೇದಿಕಾವಲಯಿತಮುಮಶೋಕತಿಲಕಿಕಾಪ್ರತಾನನವಮಾಲಿಕಾವಲ್ಲರೀಸಮುಲ್ಲಾ-ಸಮಾನಮಾಲತೀಪ್ರತತಿಪಿತಾನಜಾತವಲ್ಲೀವೇಲ್ಲನನಿಸರ್ಗ್ಗಸಾಂದ್ರಕ್ರೀಡಾಜಲ-ಕೇಲೀನಮಂಥರಮುಮುಮಾಗಿ,

ಭ್ರಮದ್ಭ್ರಮರಸಂಕುಲಂ ಕುರುಳ ಬಂಬಲಂ ಪುಷ್ಪವಿ-
ಭ್ರಮಂ ನಯನಲೀಲೆಯಂ ಕುಡಿಯ ನೀಳ್ಪು ೩ತೋಳ್ಗೊಂಗಲಂ೩-।
ವಮಂ ನೆಱ೨ಯೆ ಭಂಗಿ ಭಂಗಿಯಿನೆ ಪ್ರೋಲ್ಲಿ೪ ದೇವೀವಿಲಾ-
ಸಮಂ ನಿಜವಿಳಾಸದಿಂ ನಗುವುದಲ್ಲಿ ವಲ್ಲೀವನಂ ॥೭೭॥

ಅದಱಗಲವೊಂದುಯೋಜನ-
ಮದಱಿಂದತ್ತಣದು ನಿಷಿಧಗಿರಿನಿಭಮೆನೆದಿ-।
ರ್ಪ್ಪುದು ಬಳಸಿ ಕನಕಶಾಳಂ
ಮೃದುಪವನವಿಲೋಲಕೇತುಮಾಲಾಲಲಿತಂ ॥೭೮॥

ಅದಱ ನಾಲ್ಕುಂ ದೆಸೆಯೊಳಂ ರಜತಮಯಗೋಪುರಚತುಷ್ಟಯಂ ನೆಲಸಿರ್ಪ್ಪುದು,

ಅದು ದೌವಾರಿಕಯಕ್ಷಾ-
ಸ್ಪದಮಂತದಱಿಂದುಕೆಲದೊಳೆರಡೆರಡು ಪ್ರೊಡ-।
ಬಿಡ್ಡದವಿಡ ಸುರಸಂಗೀತಕ-
ಸದನಂಗಳ್ ದೇವನರ್ತಕೀಶುಭದಂಗಳ್ ॥೭೯॥

೧-೧ (ಅ) ಅದು. ೨ (ಅ) ಯೆ. ೩-೩ (ಅ) ತೋಳ್ಗೊಂದಿದಂ; (ಬ) ತೋಳ್ಗಂ-ದಿದಂ. ೪ (ಚ) ಲ್ವ.

ಆ ವಿವಿ ಕೆಲಂಬಿಡಿದೊಂದೊಂ-
ದವಿರಲನವಧೂಪಧೂಮಧೂಸರಿತನಭೋ- |
ವಿವರಂ ವಿವಿಧಮಣಿಪ್ರಕ-
ರವಿರಾಜಿತಧೂಪಧೂಮಘಟಮೆಸೆದಿರ್ಕುಂ ||೩೦||

ನೆಗೆದಗರುಧೂಪಧೂಮದ
ಮುಗಿಲ್ಗಳನುರಿಯುರ ಸುಯ್ಯ ಪರಿಮಳದ ಪೊಸ-
ಟ್ಟೆಗೆ ಸೋಲ್ತು ಸೂಲ್*ಸೂಲೆ
ಮೊಗಸಿ ಮುಸುರೆಡೆಡೆಗಮಲಸದಳಿಗಳ ಬಳಗಂ ||೩೧||

ವ|| ಅಂತು ನಾಲ್ಕುಂ ದೆಸೆಯು ನಾಲ್ಕು ವೀಥಿಗಳೊಳಿರ್ದ್ದ [೧]ನಾಲ್ಕುಂ[೧] ಗೋಪುರಂಗಳಿಂದಂ ಪದಿನಾಱು ನಾಟಕಶಾಲೆಗಳಿಂದಂ ಪದಿನಾಱು ಧೂಪಘಟಂಗಳಿಂದಮೊಪ್ಪಿ ತತ್ಪ್ರಸಕಶಾಲಾಭ್ಯಂತರದೊಳ್ ತ್ರಿಶಾಲತ್ರಿಪೀಠೋಪ[೨]ಸ್ಥಿತಾರ್ಹತ್ ಪ್ರತಿಮೋ[೨]ಪೇತಚೈತ್ಯದ್ರುಮೋ[೩]ಪೇತಾಭಿರಾಮ[೩]ಮಧ್ಯಪ್ರದೇಶಾಶೋಕಸಪ್ತಚ್ಛದಚಂಪಕಚೂತಪಾದಪೋಪಶೋಭಿತಮುಮೇಕಯೋಜನಪ್ರಮಾಣವಿಸ್ತಾರಮುಮಾಗಿ,

ಕುಚಭರಚಲಿತಕೃಶೋದರ-
ಖಚರೀಸಂಚರಣರಣಿತನೂಪುರರಶ[೪]ನಾ- |
ಪ್ರಚುರರವವಹನರುಚಿರ-
ಪ್ರಚುರಂ ಮೃದುಪವನಮುಪವನಂ ಸೊಗಯಿಸುಗುಂ ||೩೨||

ವ|| ಅಲ್ಲಿಂದತ್ತ ವನವನಿತೆಯ ಕನಕಕಾಂಚೀಕಲಾಪಮನನುಕರಿಸಿ ರತ್ನಾಭರಣತೋರಣಘಂಟಾಜಾಲಮುಕ್ತಾಲಂಬನಪುಷ್ಪದಾಮಾಷ್ಟಮಂಗಲನವನಿಧಿಪ್ರಧಾನಂಗಳುಂ ಯಕ್ಷದೌವಾರಿಕಾಧಿಷ್ಠಿತಂಗಳುಮಪ್ಪ ನಾಲ್ಕುಂ ರಜತಗೋಪುರಂಗಳನೊಳಕೊಂಡ ಕಲಧೌತವೇದಿಕಾಭ್ಯಂತರವೀಥ್ಯಂತರಾಳದೊಳ್ ಮಣಿಪೀಠದ ಮೇಗಣ ಸುವರ್ಣ್ನಸ್ತಂಭಾಗ್ರಂಗಳೊಳ್,

ಗಜವೃಷಭಾಂಕುಶಚಕ್ರಾಂ-
ಬುಜಹಂಸಮಯೂರಮತ್ಸ್ಯಫಣಿವೈರಿಮತಂ- |
ಗಜರಿಪುಚಿಹ್ನವಿಶಾಲ-
ಧ್ವಜಂಗಳಿಂ ಧ್ವಜಮಹೀತಳಂ ಸೊಗಯಿಸುಗುಂ ||೩೩||

೧-೧ (ಜ) ನಾಲ್ಕು ನಾಲ್ಕುಂ. ೨-೨ (ಅ) ಸ್ಥಿತಪರಮಾರ್ಹತ್ಪ್ರತಿಮೋ. ೩-೩ (ಅ) ಪಶೋಭಿತ. ೪ (ಅ,ಬ) ಸ.

* ಶಂ. ರಾ. ದಲ್ಲಿ 'ಸೂಟ್ಸೂಟಿರ್ೊಳ್' ಎಂಬ ಪ್ರಯೋಗವಿದೆ. ೭-೧೪೧.

ವ|| ಅಂತು ನಾಲ್ಕುಂ ದೆಸೆಯೊಳ[1]ಮಂಬುಧಿ[1]ವೀಚೀಚಯವಿಲಾಸ—
ಮನಿಱುಸಿ ಮಿಳಿರ್ಪ ನಾಲ್ಸಾಸಿರದ ಮೂನೂಱುಪ್ಪತ್ತು ಮಹಾಧ್ವಜಂಗಳಿಂ-
ದಂ[2]ನಾ*ಲ್ಕುಲಕ್ಕೆಯುಮಱುವತ್ತಱುಸಾಸಿರದಯ್ನೂಱೆ*ಱುವತ್ತು[2] ಪರಿವಾರ-
ಧ್ವಜಂಗಳಿಂದಮೆಸೆವ ಪತಾಕಾವನಿತಳಮೊಂದುಯೋಜನಮಗಲಮಲ್ಲಿಂದತ್ತ ಮ-
ಷ್ಟಮಂಗಲನವನಿಧಿಸಮೇತಂಗಳುಂ ನಾಟ್ಯ[3]ಶಾಲಾಧೂಪಘಟಾ[3]ದ್ವಂದ್ವಾಭಿರಾ-
ಮಂಗಳುಂ ನಾಗಕುಮಾರದ್ವಾರಪಾಲಕವಿರಾಜಿತಂಗಳುಮಪ್ಪ ಬೆಳ್ಳಿಯ ನಾಲ್ಕು
ಗೋಪುರಂಗಳಿಂದಮೊಪ್ಪಿ ವಲಯಾಕೃತಿಯಾಗಿ ಬಳಸಿದ ಮಾನಸೋತ್ತರಪ-
ರ್ವತಮನಿಱುಸುವ[4]ಜ್ಜುರ್ನಮಯ[4]ವಿಶಾಲವಲಯಮದೊಳಗೆ ಪರಭಾಗಂಬಡೆದು
ಚೈತ್ಯವೃಕ್ಷಪರಿಕಲಿತಚತುರ್ದಿ[5]ಗವ[5]ಸ್ಥಿತಸಿದ್ಧಪ್ರತಿಮಾವಭಾಸಿಸಿದ್ಧಾರ್ಥವೃಕ್ಷ-
ಪರಿಭ್ರಾಜಿತಮಪ್ಪ ಮಧ್ಯಪ್ರದೇಶಮುಮೇಕಯೋಜನವಿಷ್ಕಂಭಮುಮಾಗಿ,

ದೇವೋತ್ತರಕುರುಗಳ ನಾ-
ನಾವಿಧಕಲ್ಪಾಂಘ್ರಿಪಂಗಳಿಂದಂ ಪತಿಯಂ |
ತೀವಿ ಒಳಸಿರ್ದ್ದುವೆನೆ ಕ-
ಲ್ಪಾವನಿರುಹಭೂಮಿಭಾಗಮತಿರಮಣೀಯಂ ||೩೪||

ವ|| ಅಲ್ಲಿಂದತ್ತ ಕಾರ್ತಸ್ವರವೇದಿಕಾವಿಭೂಷಣಂಗಳುಂ ನಾಗದೌವಾರಿ-
ಕಾಭಿರಾಮಂಗಳುಮಷ್ಟಮಂಗಲನವನಿಧಿವಿಲಸಿತಂಗಳುಮಪ್ಪ ರಜತಮಯಚ-
ತುರ್ಗೋಪುರಂಗಳೊಳಗೆ ನಾಲ್ಕುಂ ಮಹಾವೀಧಿಮಧ್ಯಂಗಳೊಳ್ ರತ್ನತೋ-
ರಣಶತಾಂತರಿತಂಗಳುಂ[6] ಜಿನೇಂದ್ರರುಂದ್ರಸಿದ್ಧಾಭ್ಯರ್ಚಿತಂಗಳುಂ ಕದಲಿಕಾ-
ತಪತ್ರಚಾಮರಕನಕಘಂಟಾಕಿಂಕಿಣೀಮನೋಹರಂಗಳುಮ[7]ಪ್ಪೊಂಬತ್ತೊಂಬ—
ತ್ತು[7]ತ್ತುಂಗ[8]ಸ್ತೂಪಂಗಳ[8]ಮರ್ದಿರೆ [9]ತದ್ವೀಥ್ಯಂತರಂಗಳೊಳರ್ದ್ಧ[9]ಯೋಜನ-
ವಿಸ್ತಾರಮಾಗಿ,

ಭಾಸುರತೇಜೋಭಾಸಿ ಸು-
ರಾಸುರಗಂಧರ್ವಕಿನ್ನರೋರಗಖಚರಾ- |
ಧ್ಯಾಸಿತವಿಚಿತ್ರರತ್ನ-
ಪ್ರಾಸಾದಪರೀತಭೂತಲಂ ಕಮನೀಯಂ ||೩೫||

೧-೧ (ಅ,ಬ) ಅಬ್ಧಿ. ೨-೨ (ಬ,ಕ) ನಾಲ್ವತ್ತಾರುಲಕ್ಕೆಯುಮರುವತ್ತುಸಾಸಿರದರು ನೂಱು; (ಚ) ನಾಲ್ವತ್ತೊಂಭತ್ತುಲಕ್ಕೆಯುಮಱುವತ್ತೈಸಾಸಿರದ ಮೂನೂಱು. ೩-೩ (ಚ) ಶಾಲಾದುಂದುಭಿ ಧೂಪಘಂಟಾ. ೪-೪ (ಚ) ಜಾತರೂಪಮಯ. ೫-೫ (ಅ) ಗವನಿ. ೬ (ಅ) ಳುಮಪ್ಪ. ೭-೭ (ಬ) ಪ್ಪೊಂಭತ್ತು; (ಚ) ಪ್ಪ ತೊಂಭತ್ತೊಂಭತ್ತು. ೮-೮ (ಚ). ರತ್ನತೋರಣಂಗಳುಮ. ೯-೯ (ಚ) ತದ್ವೇದಿಕಾವಳಯಾಂತರದೊಳರ್ಧ.

* ಚಂ. ಪ್ರ. ಪು. ೧೫-೫೯ ರಲ್ಲಿ ಸರಿಯಾದ ಧ್ವಜಗಳ ಲೆಕ್ಕ ಗುಣಿಸಿ ಹೇಳಲಾಗಿದೆ

ವ|| ಅಲ್ಲಿಂ ಪತ್ತ್ರ ಗದಾದಿಹಸ್ತಕಲ್ಪಜಪ್ರಾಣಿಕಾಧಿಷ್ಠಿತನವನಿಧಿಮಂಗ—ಲಾಲಂಕೃತತೋರಣಪ್ರಸ್ಫುರಿತಗೋಪುರಚತುಷ್ಟಯವಿರಾಜಮಾನಗಗನಸ್ಫಟಿಕಪ್ರಾಕಾರ—ವೇದಿಕಾಚತುಷ್ಟಯೋಪಶೋಭಿತಮುಂ ಜಗತ್ತ್ರಯಶ್ರೀನಿವಾಸಮುಮಾಕಾಶಸ್ಫ-ಟಿಕಮಯಮುಮೇಕಗವ್ಯೂತಿವಿಸ್ತಾರಮುಮಾಗಿ ಶ್ರೀಮಂಟಪಮಿರ್ದುದದಱೊ-ಳಗೆ ಧೂಳೀಶಾಲದಿಂದಂ ಪ್ರಥಮಪೀಠಂಬರಂ ಮಹಾಮಾರ್ಗ್ಗೋರ್ಭಯಭಾಗಂ-ಗಳೊಳ್ ನೀಳ್ದು ನಿರ್ಮ್ಮಲಸ್ಫಟಿಕಮಯಭಿತ್ತಿಗಳೆಂಟುಂ ಬೆರಸು ಪದಿನಾಱುಂ ಭಿತ್ತಿ-ಗಳೊಳ್ ನಾಲ್ಕುಂ ವೀಧಿಗಳುಱಿಯೆ ನೆಗೞ್ದ[೧] ಪನ್ನೆರಡುಂ ಕೋಷ್ಠಂಗ—ಳೊಳ್,

ಮುನಿನಾಥರ್ ಕಲ್ಪಕಾಂತಾಜನತತಿಗಣಿನೀಶ್ರಾವಿಕಾಸಂಕುಲಂ ಭ-
ಕ್ತಿನಮಜ್ಜ್ಯೋತಿಷ್ಕದೇವೀಪ್ರತತಿವನವಧೂವ್ರಾತಮೌತ್ಸುಕ್ಯವದ್ಭಾ-
ವನಭಾಮಾರಾಜಿ ಸದ್ಭಾವನಸುರರುಮಲಮ್ಯಂತರಜ್ಯೋತಿರಿಂದ್ರರ್
ವಿನಮತ್ ಕಲ್ಪಾಮರೇಂದ್ರರ್ ಮನುಜಸಮಿತಿ ಸಿಂಹಾದಿತಿರ್ಯ್ಯಕ್
ಸಮೂಹಂ ||೩೬||

ವ|| ಎಂಬೀದ್ವಾದಶಗಣಂಗಳಿರ್ಪ್ಪ ಮಲ್ಲಿಂದತ್ತ ಸುಕ್ರಮದೊಳೆ ವೈಡೂ—ರ್ಯ್ಯಹೇಮಸರ್ವ್ವರತ್ನಮಯಂಗಳು[೨] ಮಷ್ಟಾ*ಷ್ಟಾರ್ದ್ಧ[೩] ಚತುರ್ದ್ದಂಡೋತ್ಸೇ—ಧಂಗಳುಂ [೪]ಪಂಚಾಶದಧಿಕಸಪ್ತಶತ‡ಧನುರ್ವ್ಯಾಪ್ತಂಗಳು[೪] ಮೇಕ[೫]ಚಾಪೋ—ಚ್ಛ್ರಿತ[೫]ಧರ್ಮ್ಮಚಕ್ರಧರಯಕ್ಷಾಧಿಷ್ಠಿತಂಗಳುಮಪ್ಪ ಮಹಾ[೬]ಧ್ವಜಂಗಳುಮ—ಷ್ಟಾಷ್ಟ[೬]ಮಂಗಲದ್ರವ್ಯಸಂಪನ್ನಂಗಳುಮಪ್ಪ ಪ್ರಥಮದ್ವಿತೀಯತೃತೀಯ[೭]ಪೀ-ಠಂಗಳಿಂದಂ[೭] ಮೇಗೆ ಷಡ್ದಂಡಶತವಿಸ್ತಾರಾಯಾಮದೊಳಂ ನವದಂಡ[೮]ಶತೋ—ತ್ಸೇಧದೊಳಂ[೮] ನೆಱೆದು,

ಸುರಭಿಸುರಕುಸುಮಕಾಲಾ-
†ಗರು[೯]ಧೂಪೋ[೯]ದ್ದಾಮಗಂಧಮಂ ಜಿನತನುಬಂ- |

---

೧ (ಅ,ಬ) ಟ್ಟಿ. ೨ (ಚ) ತ. ೩-೩ (ಚ) -ಮಷ್ಟಚತುಷ್ಟಯ. (ಬ) ಮಷ್ಟಾರ್ದ್ಧ. ೪-೪ (ಅ) ಪಂಚಾಶದಧಿಕಸಪ್ತಶತಸಾರ್ದ್ಧನಾಷ್ಟಶತಸಹಸ್ರಧನುರ್ವ್ಯಾಸಂಗಳು; (ಬ) ಪಂ-ಚಾಶದಧಿಕಸಪ್ತಶತಸಹಸ್ರಧನೂತ್ಸೇಧವ್ಯಾಸಂಗಳು. ೫-೫ (ಚ) ಚಾಪೋತ್ಸೇಧಚಿತ್ರ. ೬-೬ (ಅ) ಧ್ವಜ. ೭-೭ (ಅ) ಪೀಠಂಗಳ. ೮-೮ (ಅ) ಶತೋಚ್ಛ್ರಾಯದೊಳಂ. ೯-೯ (ಅII) -ಧೂಮೋ.

---

* "ಅಷ್ಟಾಷ್ಟಾರ್ಧಂ ಪ್ರೋತ್ತುಂಗತೆಯೆನೆ" ಚಂ. ಪ್ರ. ಪು. ೧೫-೮೬, ಪೂ. ಪು. ೨೨-೩೧೦.

"ಎಂಟುಂ ನಾಲ್ಕುಂ ನಾಲ್ಕು ದಂಡೋಚ್ಛ್ರಿತಂಗಳುಂ" — ಅ. ತೀ. ಪು. ೭-೨೦ ವ (ಪು. ೧೨೭)

‡ ಪೂ. ಪು. ೨೨-೩೦೮; ಚಂ. ಪ್ರ. ಪು. ೧೫-೮೬; ಅ. ತೀ. ಪು. ೭-೨೦ ವ (ಪು. ೧೨೭)

†ಗರುಧೂಪೋದ್ದಾಮಸೌರಭಂ ದೆಸೆದೆಸೆಯುಂ |
ಪರಿವೇಷ್ಟಿಸಿ ಜಿನತನುಬಂ-
ಧುರಗಂಧಂ ಗಂಧಕುಟಿಕರಂ ಸೊಗಯಿಸಿಗುಂ || (ಅII) ||

ಘುರಗಂಧಮೆ ಗೆಲ್ದಿರೆ ನಿ-
ರ್ಭರಗಂಧಂ ಗಂಧಕುಟಿ ಕರಂ ಸೊಗಯಿಸುಗುಂ ॥೩೭॥

ಆಗಂಧಕುಟಿಯ ಮಧ್ಯಮ[1]
ಭಾಗದೊಳೆಸೆವತ್ತು ಮೇರುಶಿಖರೋಪಮಮು- ।
ದ್ರಾಗಮಣಿಕಿರಣಕೃತಪರಿ-
ಭಾಗಂ ಪ್ರಜ್ವಲಿತಸಕಲಗಗನಾಭೋಗಂ ॥ ೩೮ ॥

ಕೇಸರಿಗಣವಿಧೃತಂ ಸಿಂ-
ಹಾಸನಮದರಲ್ಲಿ ನಾಲ್ಕೆರಲ್ ಮುಟ್ಟದೆ ದೇ- ।
ವಾಸುರಮಕುಟಮಣಿದ್ಯುತಿ-
ಭಾಸುರಚರಣಾರವಿಂದನಾದಿಜಿನೇಂದ್ರಂ ॥ ೩೯ ॥

ಇರೆ ಭಾಮಂಡಲದೀಪ್ತಿಯ
ಪರಿಪ್ರಂ ಛತ್ರತ್ರಯಪ್ರಭಾಪರಿಕರಮುಂ ।
ಪರೆ[2]ದು ದಿವಾಕರಹಿಮಕರ-
ಕರ[3]ನಿಕರ[3]ಪ್ರಚುರರುಚಿಗಳಂ ಮಸುಳಿಸುಗುಂ ॥ ೪೦ ॥

ಚಾರುವಿಟಪಾವಲೀವೃತ-
ಕೋರಕಿತಾಂಕುರಿತಪಲ್ಲವಿತ[4]ಮುಕುಲಿತ[4]ವಿ[5]- ।
ಸ್ಫಾರಿತರಮ್ಯಾಶೋ[5]ಕಮ-
ಹೀರುಹಮುಮನಭವನಂಗರುಚಿ ಪುದಿದಿರ್ಕುಂ ॥ ೪೧ ॥

ಸುರಪುಷ್ಪವೃಷ್ಟಿ ಮೊಳಗುವ
ಸುರದುಂದುಭಿ ನಭದೊಳೆಸೆಯೆ ಯಕ್ಷಕುಮಾರರ್ ।
ನೆರೆದಿಕ್ಕೆ ಚತುಷ್ಷಷ್ಟಿಚ-
ಮರರುಹ[6]ದ ಪೊಪಟ್ಟ[6] ಪೊಳೆವು ಪೆಸೆಗೆಸೆದಿರ್ಕುಂ ॥ ೪೨ ॥

ವ॥ ಮತ್ತಂ ಘಾತಿಗಳ ಕೇಡಿನೊಳ್ ಗವ್ಯೂತಿಶತಚತುಷ್ಟಯಸುಭಿಕ್ಷತೆ-
ಮೊದಲಾಗೆ,

ಮಿತನಖಕೇಶಶೋಭಿತತನುತ್ವಮಭುಕ್ತ್ಯುಪಸರ್ಗಭಾವಮು-
ನ್ನಿತಚತುರಾಸನತ್ವಮಖಿಲಾಗಮವಿತ್ತ್ವಮಪಕ್ಷ್ಮ[7]ಕಂಪ[7]ಮಾ- ।
ಯತಗಗನಪ್ರಚಾರಮುಪಜೀವವಧಂ ಪರಿಪೀತದೇಹಬಿಂ-
ಬತೆವೆರಸಿಂತು ಪತ್ತತಿಶಯಂಗಳಿವೇಂ ಜಿನನೊಳ್ ಪೊದಟ್ಟುವೋ॥ ೪೩ ॥

---

೧ (ಆ, ಬ) ವಿ. ೨ (ಆ ii) ನೆ. ೩-೩ (ಅ) ರುಚಿರ. ೪-೪ (ಅ) ಕುಸುಮಿತ ೫-೫(ಆ₁i) ರಮ್ಯಾರಮಮೆನಿಪಶೋಕ. ೬—೬ (ಅ) ದಾ ಪೊಳೆವ, ೭—೭ (ಚ) ತಾ ಸ.

ಪ[೧]ರಿವಸತಿ[೧] ಚೈತ್ಯಕುಜಗೋ-
ಪುರಮಾನಸ್ತಂಭಹರ್ಮ್ಯಸಿದ್ಧಾರ್ಥಕುಜೋ-।
ತ್ಕರಮಂಟಪಕೇಲೀಭೂ-
ಧರತುಂಗಸ್ತೂಪಕೇತನಸ್ತಂಭಂಗಳ್ ॥೪೪॥

ಜಿನತನುವಿಂ ದ್ವಾದಶಗುಣ-
ಮೆನಿಸಿತುಂ ಪ್ರಾಕಾರವೇದಿಕಾನಿಕರಮಧಿ-।
ಕನ ತನುಗೆ ಚತುರ್ಗ್ಗುಣಮಂ-
ತೆನಿಸಿತುಂ ತೋರಣಮುಮುದಱಿನಿನಿಸ[೨]ಭ್ಯಧಿಕಂ[೨] ॥೪೫॥

ವ॥ ಇಂತು ಧನದಂ ಸಮೆದ ಸಮವಸರಣಮಂ ಕ್ರಮಕ್ರಮದೊಳೆ ನೋಡುತ್ತುಂ ಬಂದು ಗಂಧಕುಟಿಯಂ ತ್ರಿಃಪ್ರದಕ್ಷಿಣಂಗೆಯ್ದು ಸರ್ವಾಂಗಪ್ರಣತನಾಗಿ,

[೩]ಇನಿತೆಂದಿನ್ನ[೩]ವಿನೆಂದುಮೀ[೪]ವಿಧದವೆಂದಾರ್ ಬಣ್ಣಿಸಲ್[೪] ಬಲ್ಲರೆಂ-
ಬಿನೆಗಂ ನಿರ್ಭರಭಕ್ತಿ ತಮ್ಮ ಮನದೊಳ್ ಕೈಗಣ್ಮೆ [೫]ಕೈಗೈಯ್ಯೊಳಂ[೫]-
ದ್ರನುಮಿಂದ್ರಾಣಿಯುಮಿಂದ್ರವೃಂದಸಹಿತಂ ದೇವೇಂದ್ರಲೋಕಂಗಳ-
ರ್ಚ್ಚನೆಯಿಂದರ್ಚ್ಚಿಸಿದರ್ ಜಿನೇಂದ್ರಪದಪೀಠೋಪಾಂತಭೂಪ್ರಾಂತಮಂ ॥೪೬॥

ಬೆಳಗೀಕರ್ಪೂರಪಾ[೬]ಳೀಚಯದ ಸೊಡರ್ಗಳಂ ನೀಡು ಮಂದಾರಮಾಲಾ-
ವಳಿಯಂ ಕಟ್ಟಿಯೆದ್ದು ದಿವ್ಯಾಂಬರರಚಿತವಿತಾನಂಗಳಂ ನೇಱು ಮುಕ್ತಾ-
ಫಳಲಂಬೂಷಂಗಳಂ ಬಿತ್ತರಿಸನವರತಂ ರಂಗದೊಳ್ ಪಂಚರತ್ನಂ-
ಗಳನೆಂ[೭]ಬಿಂದ್ರರ್ಕ್ಕಳಂತಃಪುರದ ಕಳಕಳಂ ರಯ್ಯಮಾಯ್ತತ್ರಮಿತ್ತಂ ॥೪೭॥

ವ॥ ಅಂತರ್ಚ್ಚಿಸಿ [೮]ಕರ್ಮ್ಮಾರಿ[೮]ವಿಜಯಾನಂತಚತುಷ್ಟಯಪ್ರಾಪ್ತಿ—ವಾಕ್ ಪೂಜಾಸ್ಥಾಯಿಕಾವಿಹಾರಶರೀರಪ್ರಕೃತಿಗಳೆಂಬೆಂಟುಮತಿಶಯಂಗಳನತಿಶಯಭಕ್ತಿಯಿಂ ಸ್ತುತಿಯಿಸಿ, ನಿಜೋಚಿತಸ್ಥಾನದೊಳ್ ಪುಳ್ಳಿರ್ದ್ದಾದಿತೀರ್ಥಕರರ್ ನೋಲಗಿಸುತ್ತಿರ್ಪನ್ನೆಗಂ, ಪುರಿಮತಾಲಪುರಾಧೀಶ್ವರಂ ಭರತಮಹೀಶನಿಂ ನೇರ್ಗ್ಗಿಱಿಯಂ [೧೦]ವೃಷಭಸೇನಕುಮಾರಂ[೧೦] ನಾನಾವಿಧಾರ್ಚ್ಚನಾಮಂಗಲದ್ರವ್ಯ[೧೧]ಹಸ್ತ[೧೧]ಸಮಸ್ತ[೧೨]ಪರಿಜನಪರಿವೃತನಾಗಿ[೧೨] ಬಂದು [೧೩]ವೃಷಭೇಶ್ವರ[೧೩]ಶ್ರೀಮುಖಮಂ ಕಾಣಲೊಡಮಾಸನ್ನಭವ್ಯತಾ[೧೪]ಪ್ರೇರಿತನಾಗಿ[೧೪],

೧–೧ (ಚ) ಸಮಿತಿ. ೨–೨ (ಚ) ಭ್ಯುದಯಂ ೩–೩ (ಅII,ಬ) ಯಿನಿತೆಂದೆಂನವಿ. ೪–೪ (ಅII,ಬ) ತೆಱದವೆಂದಾರ್ವರ್ಣ್ಣಿಸ. ೫–೫ (ಚ) ಕೈಮ್ಮೆಯೊಳಂ. ೬ (ಅ,ಬ) ರೀ. ೭ (ಚ) ದಿಂ. ೮-೮ (ಬ) ಕರ್ಮ್ಮ. ೯ (ಬ) ನ. ೧೦–೧೦ (ಅ) ವೃಷಭಸೇನಂ. ೧೧–೧೧ (ಅ,ಬ) ಗ್ರಹಸ್ತಂ. ೧೨–೧೨ (ಅ) ಪರಿಜನನಾಗಿ; (ಚ) ಪರಿಜನಪರಿವೃತಂ. ೧೩–೧೩ (ಚ) ವೃಷಭೇಶ್ವರನ. ೧೪–೧೪ (ಅ) ಪ್ರೇರಿತಾಂತರಂಗನಾಗಿ.

ಭಗವ[1]ದರ್ಹತ್ಸ[1]ಮಕ್ಷದೊ-
ಳಗಣ್ಯಪ್ರಭಾವದಿಂದಂ ಕೊಂಡಂ ।
ಭಗವದ್ರೂಪಮನಿಂದ್ರಾ-
ದಿಗಳೆಲ್ಲಂ ಪೊಗೞೆ ಕಾಲಲಬ್ಧಿಯನಾಗಳ್ ॥ ೪೮ ॥

ವ॥ ಅಂತು ದೀಕ್ಷಾಗ್ರಹಣಾನಂತರಸಮಯಸಮುತ್ಪನ್ನಸಪ್ತರ್ದ್ಧಿ-ಜ್ಞಾನಚತುಷ್ಟಯಂ ವೃಷಭಗಣಧರನಾದನನ್ನೆಗಮಿತ್ತ ಭರತರಾಜ-ನಯೋಧ್ಯೆಯೊಳಾಸ್ಥಾನಮಂಟಪದೊಳಿರೆ ತತ್ಪ್ರತೀಹಿತಾಯುಧಾಧ್ಯಕ್ಷಾಂ-ತಃಪುರವೃದ್ಧಕಂಚುಕಿಗಳ್ ಬಂದು ಮಹೀತಲಾಶ್ಲಿಷ್ಟಜಾನುಲಲಾಟಪಟ್ಟರ್ [2]ಪ್ರಣಾಮಪೂರ್ವಕಪುರಸ್ಸರಂ[2] ಶಿರೋವೇಷ್ಟನಪ್ರಲಂಬಚೇಲಾಂಚಲಪಿಹಿತ-ವದನರಾಗಿ,

ಪುರುದೇವಂಗಾದ ಕೈವಲ್ಯದ ಮಹಿಮೆಯನಾಯುಧಾಗಾರದೊಳ್ ಭಾ-
ಸ್ಕರಚಕ್ರೋದ್ಭಾಸಿಚಕ್ರೋದ್ಭವದ ಪಿರಿದುಮಾಶ್ಚರ್ಯ್ಯಮಂ ಶೋಭಿತಾಂತಃ-।
ಪುರದೊಳ್ಮಾದೇವಿಗಾದಾತ್ಮಜನೊಸಗೆಯನಾಮೂವರುಂ ಬಿನ್ನಪಂಗೆ-
ಯ್ದಿರೆ [3]ಜಾತಾನಂದನೀ[3] ಮೂಱೊಸಗೆಗಳೊಳಮಿನ್ನಾವುದಂ ಮುನ್ನ
ಮಾಡಿಪ್ಪೆಂ ॥ ೪೯ ॥

ಧರ್ಮ್ಮಾರ್ತ್ಥಕಾಮಮೆಂಬಿವು
ಧ[4]ರ್ಮ್ಮಾರ್ತ್ಥಿಜನಕ್ಕೆ [5]ನೆಱೆದ ನರ್ಮ್ಮಂತವಱೊಳ್[5]- ।
ಧರ್ಮ್ಮಂ ಪ್ರಧಾನಮರ್ತ್ಥಂ
ಧರ್ಮ್ಮಾಂಘ್ರಿಪಫಲಮದರ್ಕ್ಕೆ ರಸಮದು ಕಾಮಂ ॥ ೫೦ ॥

ಆದಱಿಂದಮಿವಱೊಳರ್ಹ-
ತ್ಪದಪದ್ಮಪ್ರಣತಿಮುಖ್ಯಮೊಸಗೆಯುಮೆಮಗಿ- ।
ನ್ನಿದಱಿಂದಮಿಲ್ಲಿ ಮೇಲಾ-
ವುದೆಂದು [6]ಬಗೆದಧಿಕ[6]ಭಕ್ತಿನಿರತಂ ಭರತಂ ॥ ೫೧ ॥

ಪುರಜನಸಕಲಾಂತಃಪುರ-
ಪರಿಜನಮದಕರಿಕರೇಣುಪರಿವೃತನಂಭೋ- ।
ಧರರವಗಭೀರಭೇರೀ-
ಸ್ವರಪೂರಿತಸಕಲಗಗನದಿಗವನಿಮಧ್ಯಂ ॥ ೫೨ ॥

---

೧-೧ (ಚ) ದರುಹನ. ೨-೨ (ಅ) ಪ್ರಣಮನಪುರಸ್ಸರಂ; (ಬ) ಪ್ರಣಾಮಪುರಸ್ಸರಂ. ೩-೩ (ಅ II) ಚಿತ್ತೋತ್ಸಾಹದಿಂ. ೪ (ಅ) ಶ. ೫-೫ (ಅII) ನೆಱದ ನರ್ಮ್ಮವಱೊಳ್ ಮಿಗಳ್; (ಬ) ನೆರ್ಮ್ಮನೆಂಬಂತವಱೊಳು. ೬-೬ (ಚ) ಬಗೆಬೆದಱಿ.

ವ॥ ಅಂತು ಬಂದು ಗಗನಮಂಡಲಮನಲಂಕರಿಸಿದ [1]ಭಗವದಾ[1]ಸ್ಥಾನ-
[2]ಮಂಟಪಮಂ[2] ಗಂಟಿಜಿಱೊಳೆ ಕಂಡು ಮದಗಜೇಂದ್ರ[3]ದಿಂದಮಿೞಿದು[3] ರಾ-
ಜ[4]ಚಿಹ್ನಂಗಳನಿರಿಸಿ ಧೂಳಿಸಾಲಮಾನಸ್ತಂಭಾಂಭಃಖಾತಿಕಾವಲ್ಲೀವನೋಪವನ-
ಪತಾಕಾವನಿಕಲ್ಪಭೂಜ[5]ಭೂತಲಸ್ತೂಪಪ್ರಾಸಾದಮಾಲಾ[6]ವಿಲಾಸ[6]ಮುಮನ-
ಪಱಿ[7]ಡೆಯುಮದಿಂ ಕನಕಪ್ರಾಕಾರವೇದಿಕಾನೇಕಗೋಪುರದ್ವಾರಪಾಲಕಾಷ್ಟಮಂ-
ಗಳನವನಿಧಿಕೆಯಂಜಣಧೂಪಘಟನಾಟ್ಯಶಾಲಾಜ್ಯೈತ್ಯವೃಕ್ಷಸಿದ್ಧಾರ್ಥಮಹೀರು-
ಹಮಹಾದೋಃಫಿಯುಮಂ ಶ್ರೀಮಂಟಪಶ್ರೀಯುಮ[8]ನತ್ಯಂತ[8]ವಿಸ್ಮಯಸ್ಮೇರ-
ಮುಖನು[9]ಮತಿಶಿರನ್ಯಸ್ತಹಸ್ತ[9]ಪಲ್ಲವನುಂ ಮುಹುರ್ಮುಹುರಾಂದೋಲಿತಮ-
ಸ್ತಕನುಮುಪಂಜನ್[10]ರೋಮಾಂಚಕಂಚುಕಿತನುಮಾಗಿ[10] ನೋಡುತ್ತುಮು-
ತ್ತುಂಗಪ್ರಥಮದ್ವಿತೀಯತೃತೀಯಪೀಠಂಗಳನನೇಕಾರ್ಚನೆಗಳಿಂದರ್ಚಿಸುತ್ತುಂ
ಮೂಱುಸೂಟಬಲಗೊಂಡು ಜಗತ್ತ್ರಯಾಧೀಶ್ವರಶ್ರೀಮುಖಾಭಿಮುಖನಾಗಿ
ನಿಂದು ಸ್ತುತಿಸಿ,

ತ್ರಿದಶೇಂದ್ರಮೌಳಿಮಣಿಕಿರ-
ಣದೀಪ್ತಿಗಳ್ ಪುದಿದು ಪೊಳೆವಲಕ್ತಕರಸದಿಂ ।
ಪುದಿದಂತೊಪ್ಪಿರ್ಪರ್ಹತ್-
ಪದಂಗಳೆಮಗೀಗೆ ತಡೆಯದರ್ಹತ್ ಪದಮಂ ॥೫೩॥

ಭುವನೇಶ್ವರ ನಿಜರೂಪ-
ಸ್ತವವಸ್ತುಸ್ತವಗುಣಸ್ತವಂಗಳನವಱಿಂ ।
ತವರಂ ಬಣ್ಣಿಸಲಮರೇಂ-
ದ್ರವಾಸುಗಿಪ್ರಭುಗಳಾ[11]ರ್ತ್ತರಿಲ್ಲಿನ್ನೆವರೇ ॥೫೪॥

ಅಳತಿಗೆ ತೂಕಕ್ಕೆಣಿಕೆಗ-
ಮೊಳಗಾದುವು ಸಕಳವಸ್ತುಗಳ್ ಭುವನಜನ-।
ಕ್ಕಳಿಯಲ್ ತೂಗಲ್ಕೆಣಿಸ-
ಲ್ಕಳುಂಬಮೆನಿಸಿದುದು ನಿನ್ನ ಗುಣಗಣಮರ್ಹಾ ॥೫೫॥

ತನ್ನಿರ್ದ್ದೆಡೆಯದೆ ಮೇರುವಿ-
ನುನ್ನತಿ ಜಳನಿಧಿಯ ಗುಣ್ಪು ನಭದ ವಿಭುತ್ವಂ ॥

---

೧–೧ (ಜ) ಭವನಾ. ೨–೨(ಅ) ಮಂಡಳಮಂ. ೩–೩(ಜ) ಮನಿೞಿದು. ೪(ಅ) ಜ್ಯ. ೫(ಜ) ರುಹ. ೬–೬(ಜ) ವಿಳಾಸಿತ. ೭(ಅ) ಲ. ೮–೮(ಅ) ನತಿ. ೯–೯(ಅ) ಮತಿರಮಣೀಯಮುಖನ್ಯಸ್ತಹಸ್ತ; (ಅII) ಮುತ್ತುಂಗಮಸ್ತಕನ್ಯಸ್ತಹಸ್ತ; (ಬ) ಮುಖನ್ಯಸ್ತಹಸ್ತ. ೧೦–೧೦ (ಅ,ಬ) ದೆತ್ರೀಮೊಂಚನುಮಾಗಿ. ೧೧ (ಜ) ರಾ.

ನಿನ್ನ ಗುಣೋನ್ನತಿ ಸಕಲಜ-
ಗನ್ನುತ ಭುವನಾಂತರಾಳಮುಂ ಪರ್ವಿರ್ಪಿಂ ||೫೭||
ಅಕುಳನೆನಾಗಿ ಸುಖಾಗವೆ-
ನಾಕುಳಮಹ್ನಿದಿಯನಳಿಸಿ ಕಾರ್ಯಂ ಮಾಡಿಂ
ಲೋಕಮೊಳಂ ನಿನ್ನ ಕೀರ್ತಿಯುತಿ
ಲೋಕಾಗ್ರಮಿ ಸಂತಮನಣಿ ಮಾಡೆನೆಗಿರ್ಪಾ
ಭವನಿಗಂ ಕೊಡಲಂ ಶಕ್ತಿ
ಭವಜಳಧಿಯ ತಡಿಗೆ ಸಾರ್ಚ್ಚ ಭವಗದನಮ-
ವ್ರವಮಂ ಕಿಡಿಸು ಭವಾಂತಕ
೪ಭವನವ್ಯಾಮಾರ್೪ ತವೆಯುವಿನ್ನ ನೀಂ ಭವಮುಕ್ತನಾ ||೫೮||
ಮರಣದ ಜನ್ಮದ ನಿಗಳಂ
ನಿರಾಕುಳಂ ಪತ್ತುವಿಡುವಿನಂ ಜಿನ ನಿನ್ನಂ ।
೫ಸ್ಮರಿಯಿಪ್ಪವಸರೋರಣ್ವಂ೫-
ತವ್ಯತಿಕ್ರಮಣಪಾತ್ರಮಂ ೬ಮಿಜುವವನೇ೬ ||೫೯||
ತಿಳಕಂ ವಸ್ತ್ರಮಿ ಜಡಜನ-
ವೊಳಗಾಯುಮ ಸಕಳಭವ್ಯತಿಳಕಂಗೆ ಜಗ-
ತ್ರಿಳಕ ಭವತ್ಪದಪಂಕಜದ-
ತಿಳಕಂ ತ್ರೈಲೋಕ್ಯವಶ್ಯಮುಕ್ತಮಮಪ್ಪಂ ||೬೦||

ಆಸುರೇಂದ್ರೋನ್ನತಿಪೀಠಚಕ್ರೇಂದ್ರವಿಭವಂ ಭೋಗೀಂದ್ರಭೋಗಂ ಮಹೇಂ-
ದ್ರಮಹೈಶ್ವರ್ಯಮಿವೆಲ್ಲಮಧ್ರುವಮಿವಂ ಬೇಡ್ಪಂತು ಬೇಳ್ಪೆಲ್ಲಿನು-
ತ್ತಮದೀಕ್ಷಾವಿಧಿಯುಂ೮ ಸಮಾಧಿಮರಣಂ ಕರ್ಮಕ್ಷಯಂ ಬೋಧಿಲಾ-
ಭಮಮೋಘಂ ದೊರೆಕೊಳ್ವುದಕ್ಕೆಮಗೆ ಮುಕ್ತಿಶ್ರೀಮನೋವಲ್ಲಭಾ ||೬೧||

ವ|| ಎಂದನೇಕಸ್ತೋತ್ರಪವಿತ್ರೀಕೃತಮುಖಾರವಿಂದನಮರಸಮಾಜವಿಸ್ಮಯಸ್ಮೇರೇಕ್ಷಣೈಕ೯ಲಕ್ಷ್ಯನಾಗಿ೯ ನಿಜೋಚಿತಪ್ರವೇಶಸ್ಥಾನದೊಳ್ ಕುಳ್ಳಿರ್ದ್ದ,

ನೃಸುರಾಸುರಪರಿಷತ್ ಸ-
ಸ್ಯಕುಳಂ ಜಿನವಚೋಮೃತಾಸಾರಮನಂ- ।
ದಸದಳಮೆ ಬಯಸೆ ಭರತಂ
ಬೆಸಗೊಂಡಂ ಜಿನನನಖಿಳವಸ್ತುಸ್ಥಿತಿಯಂ ||೬೨||

೧(ಜ) ದೆ. ೨(ಜ) ಯೆ. ೩(ಅ) ಮ. ೪-೪ (ಅ) ಭವನದಿನೊಯ್ತು. ೫-೫ (ಬ) ಸ್ಮರಿಯಿಪುದಚ್ಚರಿಪುದೋರಣ್ವಂ. ೬-೬ (ಅII,ಬ) ಬಿಸುಡುವನೇ. ೭(ಬ) ಲ್ತೆ. ೮ (ಅ,ಬ) ಯಿಂ. ೯-೯(ಜ) ಲಕ್ಷಲಕ್ಷಣನಾಗಿ.

ವ॥ ಅಂತು ಬೆಸಗೊಳೆ,
ಅಂದಪಗತತಾಳ್ವೋಷ್ಠ-
ಸ್ಪಂದನಸಂಸ್ಪೃಷ್ಟಕರಣವರ್ಣ್ಣಂ ಜಗದಾ- ।
ನಂದಕರಂ ಜಲಧರರವ-
ಸುಂದರಮತಿವಿಶದಮುಘಗಂಭೀರರವಂ ॥೬೩॥

ವ॥ ಎಂದಿಂತು ನೆಗೞ್ದ ಮೊಂದು ದಿವ್ಯಧ್ವನಿಯೊಳಾ ಪರಮಯೋಗೀಂದ್ರ- ನಿಂತೆಂದು ಬೆಸಸಿದಂ ನಿನ್ನ ಬೆಸಗೊಂಡ ತತ್ತ್ವಮುಂ ಹೇಯೋಪಾದೇಯ- ರೂಪದಿಂ ದ್ವಿವಿಧಮಕ್ಕುಮಲ್ಲಿ ಸಂಸಾರಕಾರಣಂಗಳ್ [1]ಹೇಯಂಗಳ್[1], ಮು- ಕ್ತಿಕಾರಣಂಗಳುಪಾದೇಯಂಗಳವಱೊಳ್ ದ್ರವ್ಯಕ್ಷೇತ್ರಕಾಲಭವಭಾವಭೇದದಿಂ ಪಂಚ[2]ವಿಧಂ[2] ಸಂಸಾರಮಲ್ಲಿ ಮಿಥ್ಯಾದರ್ಶನಾವಿರತಿಪ್ರಮಾದಕಷಾಯಯೋ- ಗೋಪಾರ್ಜ್ಜಿತಜ್ಞಾನಾವರಣೀಯಾದಿಕರ್ಮ್ಮಂಗಳ್ ಸಂಸಾರಕಾರಣಂಗಳನಾದಿಬಂ- ಧನ[3]ಬದ್ಧ[3]ದ್ರವ್ಯಭಾವಕರ್ಮ್ಮವಿಗಮದಿನನಂತಜ್ಞಾನಾದಿನಿಜರೂಪಮಂ ಪಡೆ- ವುದು ಮುಕ್ತಿ. ಸಮ್ಯಗ್ದರ್ಶನಜ್ಞಾನಚಾರಿತ್ರಂಗಳವಿಕಳಂಗಳ್ ಮೋಕ್ಷಕಾರಣಂಗ- ಳಲ್ಲಿ ತತ್ತ್ವಾರ್ಥಶ್ರದ್ಧಾನಂ ಸಮ್ಯಗ್ದರ್ಶನವದಾತತ್ತ್ವಮುಂ ಜೀವಾಜೀವಾಸ್ರವಬಂ- ಧಸಂವರನಿರ್ಜ್ಜರಾಮೋಕ್ಷಭೇದದಿಂ ಸಪ್ತವಿಧಂ ಪ್ರಮಾಣನಯನಿಕ್ಷೇಪಾನು- ಯೋಗಸದಾದಿಗಳಿಂ ನಿಶ್ಚಯಿಸಿದ ಸಪ್ತತತ್ತ್ವಂಗಳೊಳಗೆ ಚೇತನಾಲಕ್ಷಣಮ- ಪ್ಪುದು ಜೀವತತ್ತ್ವಮಾಜೀವತತ್ತ್ವಮುಂ ಸಂಸಾರಿ[4]ಮುಕ್ತ[5]ಭೇದದಿಂ ದ್ವಿವಿಧ- ಮಕ್ಕುಂ. ಅಲ್ಲಿ ಮುಕ್ತಜೀವಮೇಕಪ್ರಕಾರಮೇ. ಸಂಸಾರಿಜೀವಂ ತ್ರಸಸ್ಥಾವರ- ವಿಕಲ್ಪದಿಂ ದಿತ್ತೆಱನಕ್ಕುಮಲ್ಲಿಯುಂ ತ್ರಸನಾಮಕರ್ಮ್ಮೋದಯವಶಂಗಳ್. ತ್ರಸ- ಕಾಯಂಗಳ್. ಸ್ಥಾವರನಾಮಕರ್ಮ್ಮಪಾಕಾಧೀನಂಗಳ್ ಸ್ಥಾವರಂಗಳ್. ಸ್ಪ- ರ್ಶನರಸನೇಂದ್ರಿಯೋಪೇತಂಗಳಪ್ಪ ಶಂಖಾದಿದ್ವೀಂದ್ರಿಯಂಗಳುಂ, ಸ್ಪರ್ಶನರ- ಸನಘ್ರಾಣೇಂದ್ರಿಯಸಮನ್ವಿತಂಗಳಪ್ಪ ಪಿಪೀಲಕಾದಿತ್ರೀಂದ್ರಿಯಂಗಳುಂ, ಸ್ಪ- ರ್ಶನರಸನಘ್ರಾಣಚಕ್ಷು[6]ರಿಂದ್ರಿಯಾ[6]ನ್ವಿತಂಗಳಪ್ಪ ಮಧುಕರಾದಿಚತುರಿಂದ್ರಿ- ಯಂಗಳುಂ, ಸ್ಪರ್ಶನರಸನಘ್ರಾಣಚಕ್ಷುಶ್ಶ್ರೋತ್ರೇಂದ್ರಿಯ[7]ಸಮೇತಂ[7]ಗಳಪ್ಪ ಮನುಷ್ಯಾದಿ ಪಂಚೇಂದ್ರಿಯಂಗಳುಮೆಂದಿಂತು ತ್ರಸಜೀವಂಗಳ್ ಚತುರ್ವಿಧ- ಮಕ್ಕುಂ. ಸ್ಪರ್ಶನೇಂದ್ರಿಯಮಾತ್ರಂಗಳ್ ಸ್ಥಾವರಂಗಳೆಂಬುವವು ಪೃಥಿವ್ಯ- ಪ್ತೇಜೋವಾಯುವನಸ್ಪತಿಭೇದದಿಂ ಪಂಚವಿಧಂ ಚೇತನಾರಹಿತಮಜೀವತತ್ತ್ವಂ. ಅದು ಗತಿಸ್ಥಿತ್ಯವಗಾಹಶರೀರಾದಿವರ್ತ್ತನಾಹೇತುಧರ್ಮ್ಮಾಧರ್ಮ್ಮಾಕಾಶಪುದ್ಗಲ- ಕಾಲಭೇದದಿಂ ಪಂಚವಿಧಂ. ಶುಭಾಶುಭ[8]ರೂಪ[8]ಮನೋವಾಕ್ಕಾಯಪರಿ- ಸ್ಪಂದಹೇತುಕಮಾಗಿ ಬರ್ಪ್ಪಕರ್ಮ್ಮದ ಬರವಾಸ್ರವಮೆಂಬುದು ಕರ್ಮ್ಮದ ಜೀವನ

೧-೧(ಅ) ಹೇಯಂಗಳು ೨-೨(ಅ,ಬ) ವಿಧ. ೩-೩(ಜ) ಬಂಧ. ೪(ಜ) ರ. ೫(ಜ) ಕ್ತಿ. ೬-೬(ಜ) ರಿಂದ್ರಿಯಸಮ. ೭-೭(ಜ) ಸಮನ್ವಿತಂ. ೮-೮(ಅ) ರೂಪಭೇದದಿಂ

ಕ್ಷೀರನೀರನ್ಯಾಯಸಂಬಂಧಂ ಬಂಧಮೆಂಬುದು ಶುಭಾಶುಭಪರಿಣಾಮಪ್ರಣಾಳಿಕೆಯಿಂ ಬರ್ಪ ಕರ್ಮಮಂ ಬರಲೀಯದೆ ಗುಪ್ತ್ಯಾದಿಗಳಿಂ ¹ತಗುರ್ವುದಂ¹ ಸಂವರಮೆಂಬುದು. ಯಥಾಕಾಲಾನುಭವನ ತಪೋನಿಮಿತ್ತಮಾಗಿ ಸವಿಪಾಕಾವಿಪಾಕರೂಪದಿಂ ಪೂರ್ವಾರ್ಜಿತಕರ್ಮನಿರ್ಜರಣಂ ನಿರ್ಜರೆಯೆಂಬುದು. ಮೂಲೋತ್ತರಾದಿಭೇದಭಿನ್ನಕರ್ಮಪ್ರಕೃತಿಗಳ ನಿರ್ಮೂಲೋಚ್ಛಿತ್ತಿ ಮೋಕ್ಷಮೆಂಬುದು. ಸಂಶಯವಿಪರ್ಯಯ²ಸಾನಧ್ಯಾನಧ್ಯವಸಾಯ² ಸ್ವಭಾವರಹಿತಮಾಗಿ ಜೀವಾದಿಪದಾರ್ಥಯಾಥಾತ್ಮ್ಯವಗಮಂ ಸಮ್ಯಗ್ಜ್ಞಾನಂ. ಅದು ಮತಿಶ್ರುತಾವಧಿಮನಃಪರ್ಯಯಕೇವಲಜ್ಞಾನಭೇದದಿಂ ಪಂಚವಿಧಂ. ಸಂಸಾರಪರಿತ್ಯಾಗೋದ್ಯುಕ್ತಸಮ್ಯಗ್ಜ್ಞಾನೋಪೇತಭವ್ಯಜೀವನ ಬಾಹ್ಯಾಭ್ಯಂತರಕ್ರಿಯಾನಿವೃತ್ತಿ ಸಮ್ಯಕ್ಚಾರಿತ್ರಮೆಂಬುದದು. ಸಾಮಾಯಿಕಚ್ಛೇದೋಪಸ್ಥಾಪನಾಪರಿಹಾರಶುದ್ಧಿಸೂಕ್ಷ್ಮಸಾಂಪರಾಯಯಥಾಖ್ಯಾತಚಾರಿತ್ರಭೇದದಿಂ ಪಂಚವಿಧಮೆಂದು ಹೇಯೋಪಾದೇಯತತ್ತ್ವಮನರುಹಿ, ಮತ್ತಮವಕಾಶಾಧಾರಭೂತಜಗತ್ತ್ರಯಾಂತಸ್ಥಿತ³ತ್ರೈಕೋಣ³ ಪಂಚಾಶನ್ನರಕ⁴ಪ್ರಸ್ತರ⁴ಭವನವ್ಯಂತರಾವಾಸಾಸಂಖ್ಯಾತದ್ವೀಪಾಬ್ಧಿತ್ರಿಷಷ್ಟಿಸ್ವರ್ಗಪಟಲಂಗಳುಮಂ ವಿಸ್ತರಿಸಿ, ತನ್ನಿವಾಸಿಗಳ ದೇಹಾಯುಃಪ್ರಮಾಣಂಗಳುಮಂ ಸುಖದುಃಖಾದಿಗಳುಮಂ ತೀರ್ಥಕರಚಕ್ರಧರಬಲದೇವವಾಸುದೇವಪ್ರತಿವಾಸುದೇವಕಥಾಸಂಬಂಧಮುಮಂ ನಿರ್ಣಯಮಾಡಿದಾ

⁵ಸುರದನುಜಮನುಜಪರಿ-
ಷ್ಕರ⁵ತಿರ್ಯಗ್ಗಣಮನೆಯ್ದೆ ⁶ತಣಿಪಿದು⁶ ವರ್ಹತ್ |
ಪರಮೇಶ್ವರಗದಿತಮನೋ-
ಹರಧರ್ಮಾಮೃತಮದಿರ್ದೊಡಮೃತಂ ಸವಿಯೇ ||
ವ್ರತಸಮ್ಯಕ್ತ್ವವಿಶುದ್ಧಿಯೊ-
ಳತರ್ಕ್ಯಗುಣನೆಯ್ದೆ ನೆಱೆದು ಭರತೇಶ್ವರನೊ- |
ರ್ಜಿತಪುಣ್ಯನೊಪ್ಪಿದಂ ಶರ-
ದೃತುವಿಕಸತ್ಕಮಳವನಸಲೀಲಶ್ರೀಯಿಂ || ೬೫ ||

ವ|| ತದನಂತರಂ ಕುರುವಂಶ⁷ಚೂಡಾಮಣಿ⁷ ಸೋಮಪ್ರಭನು⁸ ಮಾತನ ತಮ್ಮ⁸ ನಾದಿದಾನ⁹ತೀರ್ಥಪ್ರವರ್ತ್ತಕಂ⁹ ಶ್ರೇಯಾಂಸನುಂ ಭರತೇಶ್ವರಾನುಜನನಂತವೀರ್ಯನುಂ ಭಟ್ಟಾರಕಪಾದಮೂಲದೊಳ್ ದೀಕ್ಷೆಯಂ ಕೈಕೊಂಡು

೧-೧(ಅ) ತಗುರ್ವುದು. ೨-೨(ಅ)ಸಾನಧ್ಯವಸಾಯ; (ಬ)ನಧ್ಯವಯ; (ಜ)ಸಾವಧ್ಯವಸಾಯ. ೩-೩(ಅ) ತ್ರೈಕಾನ್ತ; (ಬ) ತ್ರೈಕೇನ. ೪-೪(ಅ,ಬ) ಪ್ರಸ್ತಾರ. ೫-೫(ಅ) ಸುರದನುಜಖೇಚರ ಮನುಜಪರಖೇಚರ; (ಬ)ಸುರಮನುಜದನುಜಕಿಂನರನರ. ೬-೬(ಜ)ತಿಳಿಪಿದು. ೭-೭(ಜ) ಚೂಡಾಮಣಿಯೆನಿಸಿದ. ೮-೮(ಜ) ಮಾತನನುಜ. ೯-೯(ಜ) ತೀರ್ಥಕರಪ್ರವರ್ತನಂ.

ಗಣಧರರಾದರ್; ಬ್ರಾಹ್ಮಿಯುಂ [೧]ಸೌಂದರಿಯುಂ ಮತ್ತಂ[೧] ನಿರ್ವೇದಿಯರ್ ವಿ-ಷಾದವಿಮುಖಿಯರಾಗಿ ಗುರುಪ್ರಸಾದದಿಂ ದೀಕ್ಷೆಯಂ ಕೈಕೊಂಡು ಗುಣಿನೀ-ಗಣಪ್ರಧಾನೆಯರಾದರ್; ಮತ್ತಂ ಗೃಹೀತೋಪಾಸಕವ್ರತಂ ಶ್ರುತಕೀರ್ತಿ—ಯೆಂಬಂ ಶ್ರಾವಕಾಗ್ರಣಿಯಾದಂ; ಪ್ರಿಯವ್ರತೆಯೆಂಬೊಳಣುವ್ರತಗ್ರಹಣದಿಂ ಶ್ರಾ-ವಿಕಾಪುರಸ್ಸರೆಯಾದಳ್; ಭರತರಾಜಪುತ್ರಂ ಮರೀಚಿಯೊರ್ಬ್ಬನುಱಿಯೆ ಭಗ್ನ-ತಪರಾದ ಕಚ್ಛಮಹಾಕಚ್ಛಾದಿಗಳುಮರ್ಹದ್ರೂ[೨]ಪಧಾರಿಗಳಾದವಱಿ[೨]ೊಳನಂ-ತವೀರ್ಯನಿಕ್ಷೇತ್ರದೋಳನೇಕಕಾಲಂ ಪರಾಮೃಷ್ಟಮಾದ ಮುಕ್ತಿಮಾರ್ಗ್ಗಮಂ [೩]ಮುನ್ನಮಾನೆ[೩]ಸಮುಱುವೆನೆಂಬಂತೆ ಮೋಕ್ಷಲಕ್ಷ್ಮೀವಲ್ಲಭನಾದಂ; ಭರತೇಶ್ವರ-ನುಂ ಬಾಹುಬಲಿಕುಮಾರನುಂ ಜಿನೇಶ್ವರಪಾದಪದ್ಮಂಗಳ್ಗೆಱಗಿ ನಿಜರಾಜಧಾನಿಗಳ್ಗೆ ಪೋಪರಿತ್ತ ಸೌಧರ್ಮೇಂದ್ರನುಂ ಧರ್ಮ್ಮಚಕ್ರವರ್ತ್ತಿತ್ವಕ್ಕೆ ದಿಗ್ವಿಜಯಮೆನಿಸಿದ ಭಗವದ್ವಿಹಾರಮನವಧಿಯಿಂದಮಱಿದನೆ ಪುನರುಕ್ತಂ ಮಾಱ್ಪಂತೆ,

ದೇವ[೪]ವಿನಯೋತ್ಕರಂ[೪] ಸ-
ಸ್ಯಾವಳಿ ಸುಗಿದಗಿದು ಕೂಡೆ ಬಾಡಿರ್ದ್ದುದು ಪಾ- ।
ಪಾವಗ್ರಹದಿಂದದನಖಿ-
ಳಾವನಿತಳ[೫]ಕಂತು ತಳಿಯೆ[೫] ಧರ್ಮ್ಮಾಮೃತಮುಂ[೬] ॥೬೬॥

ಮಿಳಿರೆ ದಯಾಧ್ವಜಮುನ್ನತಿ-
ಗೊಳಗಾಗಿರೆ ಧರ್ಮ್ಮಚಕ್ರಮಾಯತಿಯಂ ಕೈ- ।
ಕೊಳೆ ಭವ್ಯವರೂಥಿನಿ ನಿ-
ರ್ಮ್ಮಳ ನಿನ್ನ ವಿಹಾರಮಾರನೇನೆಱಗಿಸದೋ ॥ ೬೭ ॥

ವ॥ ಎಂದು ದೇವೇಂದ್ರನಾದಿಜಿನೇಂದ್ರಂಗೆ ಬಿನ್ನಪಂಗೆಯ್ಯಲೊಡಮನೇ-ಕಭವ್ಯಕೋಟಿಯ ಪುಣ್ಯಪ್ರೇರಣೆಯಿಂದಂ ಸಮವಸರಣಮಂಡಲಂ ಗಗನಮಂ-ಡಲದೊಳ್ ನಡೆಯೆ ಮರುತ್ಕುಮಾರಸಮ್ಮಾರ್ಜಿತಯೋಜ[೭]ನಾಂತರ[೭]ಮ್ಯಭೂ-ಮಿಭಾಗನುಂ, ಮೇಘಕುಮಾರಸಂಸಕ್ತಪ್ರಶಮಿತರಜಃಪ್ರಸರಧರಣೀತಳನುಂ, ಪರಿಪಕ್ವಗಂಧಶಾಲಿವನವಿರಾಜಮಾನವಸುಧಾಸೂಚಿತಾಗಮನನುಂ, ಪ್ರಸನ್ನದಿ-ಕ್ಕನ್ಯಾನನಸಮುದ್ದಿಷ್ಟಾತ್ಮಸನ್ನಿಧಾನನುಂ, ಧೌತಾಸಿನಿಭನಭೋಮಂಡಲನುಂ, ಜನಿತಜಗಜ್ಜನಾನಂದನುಂ, ಸಮಸ್ತಜನಮೈತ್ರೀಸಮೇತನುಂ, ಸಕಲರ್ತ್ತುಕಕು—ಸುಮಪಲ್ಲವಫಲವಿಲಸಿತತರುನಿರಂತರಿತರತ್ನಮಯದರ್ಪಣಪ್ರತಿಮಾವನೀತ—ಲವಿಲಾಸನುಮನುಕೂಲಶಿಶಿರಸುರಭಿಮಂದಾನಿಲನುಮನ್ಯೋನ್ಯಾಹ್ವಾನನಿರತ—

೧-೧(ಅ) ಸೌಂದರಿಯುಮಾತ್ತ. ೨-೨(ಜ) ಮಂ ಕೈಕೊಂಡರ್; ಅನಂತ. ೩-೩ (ಜ) ಮುನ್ನಮೆ, ೪-೪(ಅ) ವಿನಯೋತ್ಕರ. ೫-೫(ಬ) ಬಂದು ಕರೆಯ. ೬(ಅ$_{ii}$) ದಿಂ. ೭-೭(ಜ) ನಾಂತರಿತರ.

ದಿವಿಜನಿನದಪೂರಿತಸಕಲಗಗನತಲನುಮಾದರ್ಶಾದ್ಯಷ್ಟಮಂಗಲಧ್ವಜಮಾಲಾವಿತಾನಚಿತ್ರಾಂಬರನುಂ, ಸಹಸ್ರದಿನಕರಕರಸ್ಪರ್ಧಿಸಹಸ್ರಾರಧರ್ಮಚಕ್ರರತ್ನಪುರಸ್ಸರನುಮಾ

ಶಕಕಾಶ್ಮೀರಾಂಧ್ರಕರ್ಣಾಟಕಮಗಧಮಾಳವಾವಂತಿಪಾಂಚಾಲಸೌರಾ-
ಷ್ಟ್ರಕಲಿಂಗಾಭೀರಸೌವೀರಕ ಕಾಂಭೋಜಾಂಗಗಾಂಧಾರವಂಗಾ-।
ಸ್ತ್ರೀಕಬಾಹ್ಲೀಕಾದಿದೇಶಂಗಳ ನನೆವಿನೇಯೋತ್ಕರಕ್ಕೆಲ್ಲಮುತ್ಕೃ-
ಷ್ಟವಚಂ ಪಾಡುತ್ತಿರ್ಪ್ಪನ್ನಂ ಸುಕೃತಿಜನಮನೋಮಾನಸೋತ್ತಂಸಹಂಸಂ॥೬೮॥

ವ॥ ಅಂತು ಧರ್ಮಕ್ಷೇತ್ರಂಗಳಂ ವಿಹಾರಿಸಿ ವಿನೇಯಜನಾಶಯಕುಶೇಶಯಂಗಳನಲರ್ಚುತುಂ ಬಂದು,

[1]ಪರಮಾನಂತಚತುಷ್ಟಯೈಕನಿಳಯಂ ಶ್ರೀಮತ್ಸಭಾಮಂಡಳಾಂ-
ತರಸಿಂಹಾಸನಸುಸ್ಥಿತಂ ಗಣವೃತಂ ಚಂಚಚ್ಚತುಷ್ಷಷ್ಟಿಚಾ-
ಮರವಿಭ್ರಾಜಿತನಾನತತ್ರಿಭುವನಂ ಕುಂದೇಂದುದುಗ್ಧಾಬ್ಧಿಪಾಂ-
ಡುರಕೈಲಾಸನಗೇಂದ್ರಮೊಳ್ ನೆಲಸಿದಂ ಸಂಸಾರಸಾರೋದಯಂ ॥ ೬೯ ॥

ಗ॥ ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ-
ಚಂದ್ರವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣ್ಣಸೂಕ್ತಿ-
ಕಲ್ಲೋಲಮಾಲಾಕೀರ್ಣ್ಣಕವಿತಾಗುಣಾರ್ಣ್ಣವ-
ಪ್ರಣೀತಮಪ್ಪಾದಿಪುರಾಣದೊಳ್
ಕೇವಲಜ್ಞಾನೋತ್ಪತ್ತಿ ಪ್ರಕರಣಂ
ದಶಮಾಶ್ವಾಸಂ ಸಂಪೂರ್ಣ್ಣಂ

೧ (ಅ) ಜ್ಞಾ. ೨ (ಅ,ಬ) ತ್ಕೃ. ೩-೩ (ಅ,ಬ) ಪರಮಾನಂದಚತುಷ್ಟ.

# ಏಕಾದಶಮಾಶ್ವಾಸಂ

ಶ್ರೀಪರಿಪೂರ್ಣಂ ಭರತನ-
ಹೀಪಾಳಂ ಚಕ್ರಪೂಜೆಗೆಯ್ದಂ ಸಕಲ-|
ಕ್ಷ್ಮಾಪತಿಮೌರತ್ನಾಂಶು-
ವ್ಯಾಸಿತಚರಣಂ ಸರಸ್ವತೀಮಣಿಹಾರಂ ॥ ೧ ॥

ವ॥ ಅಗಳ್

ಸೆಂಸಾಕಾಶಂ ನಿರಾಮಂಡಲಮೆನಿತನಿತುಂ ಚಕ್ರವರ್ತ್ತಿಪ್ರತಾಪಾ-
ನಲತೀವ್ರಜ್ಯೋತಿಯಿಂ [1]ಪರ್ವ್ವಿಪು[1]ದನಿಮಿಷಿ ಪೇೞ್ದಪ್ಪುದೆಂಬಂತಿರಾರ್ಪ್ಪ-|
ಜ್ವಲಜ್ಜ್ವಾಲಾಕಲಾಪೋದ್ಗಮಮ[2]ನನುಗುಣಂ[2]ಮಾಡುತುಂ ದ್ವಾದಶಾರ್ಕೋ-
ಜ್ವಲತೇಜಶ್ಚಕ್ರರೂಪಂ ಬೆಳಗಿದುದು[3]ದಿವಾಚಕ್ರ[3]ಮಂ ಚಕ್ರರತ್ನಂ ॥ ೨ ॥

ಅದು ದೇವಲೋಕದಂತೊ-
ಪ್ಪಿದುದು ಸಹಸ್ರಾರಸಹಿತಮದು ಚಕ್ರಿಯ ತೇ-|
ಜದ ಜನದವಾರ್ಯ್ಯ[4]ವೀರ್ಯ್ಯದ[4]
ಪೊದಟ್ದ ಭುಜವೀರ್ಯ್ಯದೊಂದು ರೂಪನೆ ಪೋಲ್ಕುಂ ॥ ೩ ॥

ವ॥ ಆಸುದರ್ಶನಮೆಂಬ ಚಕ್ರರತ್ನಮಂ ಪೂಜಿಸಿದಿಂಬೞಿಯಂ ದ್ವಾದಶಯೋಜನಾಯಾಮದೊಳಂ ನವಯೋಜನವಿಸ್ತಾರದೊಳಂ ಬೀಡಂ ಬಿಡುವ ಚಕ್ರವರ್ತ್ತಿಯ ಕಟಕಮಂ ತನ್ನ ನೆೞಲೊಳೆ ಕಾವ ಸೂರ್ಯ್ಯಪ್ರಭಮೆಂಬ ವಿಚಿತ್ರಮಣಿಮಯೂಖಚಿತ್ರಿತಚ್ಛತ್ರರತ್ನಮುಮುತ್ತ್ರಸ್ತಮಾತ್ರವಿತ್ರಸ್ತಸಮಸ್ತಾರಿಮಂಡಲಮುಂ, ವೀರಲಕ್ಷ್ಮೀಕರ್ಣ್ಣಪೂರನೀಲೇಂದೀವರಶ್ಯಾಮ[5]ಮುಮೆನಿಸಿದ[5] ಸೌನಂದಕಮೆಂಬ ಖಡ್ಗರತ್ನಮುಂ, ವಿಜಯಾರ್ದ್ಧಾಚಲಮಹಾಗುಹಾ[6]ಗಹ್ವರವಜ್ರ[6]ಕವಾಟಪುಟವಿಘಟನಪಟುವಪ್ಪ ಚಂಡವೇಗಮೆಂಬ ದಂಡರತ್ನಮುಮಗಾಧಜಲದುರ್ಗ್ಗಸಮುತ್ತರಣನಿರತಸಕಲಶಿಬಿರಸಂಧಾರಣಶಕ್ತಿಯುಕ್ತಮಪ್ಪ ವಜ್ರಮಯಮೆಂಬ ಚರ್ಮ್ಮರತ್ನಮುಂ, ಚಕ್ರವರ್ತ್ತಿಯ ಮಣಿಮುಕುಟಶಿಖರಾಯಮಾಣಮಪ್ಪ ಚೂಡಾಮಣಿಯೆಂಬ ಮಣಿರತ್ನಮುಂ, ಮಹಾಗುಹಾಗಹ್ವರಾಂತರಸೂಚಿನಿರ್ಭೇದ್ಯತಮಸ್ತಮೋ[7]ನಿರಸನಪ್ರಭಾಪ್ರಭೂತಗುಣೋಪೇತಮಪ್ಪ ಚಿಂತಾಜನನಿಯೆಂಬ ಕಾಕಿಣಿರತ್ನಮುಂ, ನಾಮಗ್ರಹಣಮಾತ್ರದಿಂದಮೆ ಸಮಸ್ತವಸ್ತುವಿಸ್ತಾ-

೧-೧ (ಬ) ಪರ್ವ್ವಿದುದ. ೨-೨ (ಅII) ಅನುದಿನಂ. ೩-೩ (ಅII) ಜಗಚ್ಚಕ್ರ. ೪-೪ (ಅ) ಶೌರ್ಯ್ಯದ. ೫-೫ (ಚ) ಳಮಪ್ಪ. ೬-೬ (ಚ) ಗಹ್ವರಮುಖವಜ್ರ. ೭ (ಅ,ಬ) ಮ.

ರಾಂತರ್ನಿಹಿತವಸ್ತುಸಮರ್ಪಣಪರಾಯಣ[೧]ನಪ್ಪ ಕಾಮವೃಷ್ಟಿಯೆಂಬ ಗೃಹಪತಿ-ರತ್ನಮುಮಂ ಮ್ಲೇಚ್ಛರಾಜಸೇನಾಪತಿಚ್ಛೇದನಮಹಾವ[೨]ಲೇಪವಿಲೋಪ[೨]ವಿಳಾಸಿಯುಮಂ ಷಡ್ವಿಧಸೇನಾನಾಯಕಪರಾಯಣನುಮಪ್ಪ ಯೋಧ್ಯನೆಂಬ ಸೇನಾನಿ[೩]ರತ್ನಮುಮಂ, ಮಹಾ[೪]ನದಾವಗಾಹನ[೪]ಸಮಯನಾದ್ರೋಣಿಸಂಕ್ರಮಾದಿವಿಧಾನಪ್ರಾಗಲ್ಭ್ಯ-ನುಮನುಸ್ಮರಣಮಾತ್ರನಿಷ್ಪಾದಿತಸಪ್ತತಲಾದಿಪ್ರಾಸಾದಪ್ರಕರನುಮಪ್ಪ ಭದ್ರ-ಮುಖನೆಂಬ ತಕ್ಷಕರತ್ನಮುಮಂ, ಶಾಂತಿಕಪೌಷ್ಟಿಕಕ್ರಿಯಾಕುಶಲನುಂ ಧರ್ಮ್ಮ-ಕಾರ್ಯಾದಿ[೫]ಕುಶಲ[೫]ನುಮಪ್ಪ ಬುದ್ಧಿಸಾಗರನೆಂಬ ಪುರೋಹಿತರತ್ನಮುಮಂ, ಕಾಮರೂಪಿಯುಂ ಕಾಮಚಾರಿಯುಮಪ್ಪ ವಿಜಯಾರ್ದ್ಧಪರ್ವ್ವತಮೆಂಬ [೬]ಹಸ್ತಿ[೬]ರತ್ನಮುಮಂ ಪವನವೇಗನಿವರ್ತ್ತನ[೭]ನಿಪುಣನುಂ[೭] ದ್ವಾದಶಯೋಜ-ನೋಲ್ಲಂಘನ[೮]ರಂಹೋ[೮]ನಿವಾಸಭೂಮಿಯುಮಪ್ಪ ಪವನಂಜಯಮೆಂಬ ತುರಗರತ್ನಮುಮಂ, [೯]ಮನೋಹರಮುಮಪ್ಪ ಸ್ತ್ರೀರತ್ನ[೯]ಮುಮೆಂದಿಂತು ಜೀವಾ-ಜೀರತ್ನಂಗಳಂ ಬೇಱೆಬೇಱೆ ಸಹಸ್ರಯಕ್ಷರಕ್ಷಿತಂಗಳಪ್ಪುವಂ,

ಪೂಜಿಸಿ ಪೂಜಿಮಟ್ಟಗ್ರತ-
ನೂಜೋತ್ಸವತ್ಯುತ್ಸವ[೧೦]ಕ್ಕೊಡರ್ಚಿದ[೧೦]ಂ ಪದದೊಳ್|
ರಾಜಾಧಿರಾಜನಮರಮ-
ಹೀಜದ ಲೀಲೆಯನೆ ಲೀಲೆಯಿಂ ಕೈಕೊಂಡಂ ||೪||

[೧೧]ಮಲಿಪರ್ಗಭಿ*ಚಾರ[೧೧]ಕ್ರಿಯೆ
ವಲಮೆನಿಸಲ್ [೧೨]ಚಕ್ರಪೂಜನಂ[೧೨] ಸಕಲಮಹೀ-|
ವಲಯಕ್ಕೆ ಶಾಂತಿಕರ್ಮ್ಮಂ
ಬಲಮೆನಿಸಲ್ ಜಾತಕರ್ಮ್ಮಮೇಂ ನೆಱೆವತ್ತೋ ||೫||

ವ|| ಅಂತು ಭರತೇಶ್ವರಚಕ್ರವರ್ತ್ತಿಚಕ್ರಪೂಜಾಗ್ರತನೂಜಜಾತಕ-ರ್ಮ್ಮೋತ್ಸವನಿರ್ವ್ವರ್ತ್ತನಾಪ್ರೀಣಿತಾಂತಃಕರಣನಾಗಿರ್ಪ್ಪನ್ನೆಗಮಾತನ ತೀವ್ರಪ್ರ-ತಾಪಮೆ ತನ್ನೊಳ್ ಸಂಕ್ರಮಿಸಿದಂತೆ ದಿನಕರಕಿರಣಂ[೧೩]ಗಳೊಳ್ ಪಳಚ್ಚನ[೧೩]ಪ್ಪ ಪೊಳೆವುಮಾತನ ಬೆಳ್ಗೊಡೆಯ ಪಜ್ಜಳ[೧೪]ವುಜ್ಜಳಿಕೆಯೆ [೧೫]ತನ್ನೊಳ್ಪೊಕ್ಕಂತೆ[೧೫] ಚಂದ್ರಮಂಡಲಕುಚ್ಚಮಾಗೆ ಪಳಚ್ಚನಪ್ಪ ಬೆಳ್ದಿಂಗಳುಮಾತನ ದಿಗ್ವಿಜಯ-

೧ (ಅ) ಮ. ೨-೨ (ಚ) ಲೇಪಪರಿಲೋಪ. ೩ (ಅIi) ಪತಿ. ೪-೪ (ಅ,ಬ) ನದಿ ವಿಗಾಹನ. ೫-೫ (ಅ) ಕೃತನು; (ಬ) ಸ್ಥಿತನು. ೬-೬ (ಚ) ಯಾಗಹಸ್ತಿ. ೭-೭ (ಚ) ನಿರೂಪಣಮುಮಂ. ೮-೮ (ಚ) ರಹೋ. ೯-೯ (ಅ,ಬ) ಪ್ರತಿಗಳಲ್ಲಿಲ್ಲ. ೧೦-೧೦ (ಚ) ಕ್ಕೊಡರ್ಚುವ. ೧೧-೧೧ (ಅ,ಬ) ಮಲವರಿಗಭಿಚಾರ. ೧೨-೧೨ (ಚ) ಚಕ್ರಿಪೂಜ್ಯನುಂ; (ಅII) ಚಕ್ರಪೂಜನಂ. ೧೩-೧೩ (ಅ) ಗಳ್ಗೆ ಪಳಚ್ಚನಪ್ಪ; (ಬ) ಗಳು ಪೇಳ್ದನಚ್ಚ. ೧೪ (ಚ) ಸುವ ಪ. ೧೫-೧೫ (ಅ) ತಂನೊಳೆಪೊಕ್ಕಂತೆ; (ಬ) ತಂನೊಳೊಳಪೊಕ್ಕಂತೆ.

* ಮಾರಣ (ಪೂ. ಪು. ೨೬-೪)

ಪೊಸಗೆಯೊಳ್ ದಿಗಂಗನೆಯುಡಿತ್ತಿದ ಬೆಳ್ಪಿನ ಕಳತಂಗಳಂತೆ ತಳತಳಿಸಿ ಪೊಳೆವ ಬೆಳೆಯ ಮುಗುಳ್ಗಳುಮಾತನ ಬರವಿನುತ್ಸವಕ್ಕೆ ಸಂತಸಂಬಟ್ಟು ಮಹೀಲಲನೆಯ ನಗೆಮೊಗದಂತೆ ತಿಳಿದ ಕೊಳಂಗಳುಮಾತನಂತಃಪುರಕಾಂತೆಯರ ನಗೆಮೊಗದ ನಗೆಗಣ್ಗಳ ಬೆಡಂಗನೆ ಕಿಱುನಗೆ ನಗುವಂತೆ ಮೆಲ್ಲಮೆಲ್ಲನುಳ್ಳಲರ್ದ ಮಹೋತ್ಪಳ-ನೀಳೋತ್ಪಳಂಗಳುಮಾತಂಗೆ ತುಱುಂಗಲುಂ ಬಂಬಲುಮಾಗೆ ಬೀಸುವ ಚಾಮರದ ಪೊಳ್ಪುಗಳ್ ಬೆಸಬೆಸಗೆಸೆವಂತೆ ಪಸರಿಸಿ ¹ನೆಗೆವ¹ ರಾಜಹಂಸೆಗಳು-ಮಾತನ ನಡೆಗೆ ನಡೆಯಲಿಡೆ²ಮಾಡಿಪಂತೆ²ಬಳ್ಸಾವ ದೆಸೆಗಳುಮಾತನ ³ವಿಜ-ಯ³ಸೈನ್ಯಕ್ಕೆ ತಡೆಯದೆ ⁴ಪಾಯಲ್ಕೆಬಟ್ಟೆ⁴ಗೊಂಬಂತೆ ⁵ನೆಲೆಯಾದ⁵ ಮ-ಹಾ⁶ನದಿಗಳು⁶ಮಾತನ ವಿಜಯಕಟಕವಾದಸಿಂಧುರಬಂಧುರಮದಗಂಧಮನೆ-ತಮಗೆ ಪಡೆವಂತೆ ಬೆಸಸೆಸೆಗೆ ಪೊಣ್ಮುವ ಸಪ್ತಚ್ಛದವನಂಗಳುಂ ತನ್ನ ಬರವಂ ಪ್ರಕಟಂ ಮಾಡೆ,

ಸೊಗಯಿಸಿ ನೀಳ್ದೊಱಗಿದ
ಪೊಸಗಱಿಮೆಯೆ ಪೊಸತರಲ್ದ ತಾವರೆಗಳ ಕಂ-|
ಪಸವಳಮೆಸೆದಿರೆ ಪಸೆವಸೆ-
ಗೊಸಗೆಯೆ ಬಪ್ಪಂತೆ ಕಣ್ಗೆವಂದುದು ಶರದಂ ||೬||

ಖರಕಿರಣಂಗಳ ಕಾಯ್ಪಿನ
⁷ಖರತನದಿಂ⁷ ಚಂದ್ರ⁸ಕಿರಣ⁸ಮುಜ್ಜ್ವಳಿಕೆಯಿನಾ|
ಭರತನ ಮುಳಿಸೊಸಗೆಯುಮನ-
ಕರಸಿದುವೇಂ ಚಕ್ರವರ್ತ್ತಿಸ್ವೃತ್ತಮೊ ಶರದಂ ||೭||

ಸುರಿದಪುದು ಮುಗಿಲ ಮುತ್ತಿನ
ಸರಿ ಗಗನದಿನೆನಿಸಿ ⁹ಪೊಳೆವ ಬಿಸಿಲೊಳಗಣ⁹ ಬೆಳ್-|
ಸರಿ ತೋರವನಿಯ ಪುದುವಿನೊ-
ಳರಲ್ದ ತಿಳಿಗೊಳನೆ ¹⁰ನಭದಿನಿ¹⁰ಬಿದಂತಿರ್ಕ್ಕುಂ ||೮||

ಕಾಂತಿಯೊಳ್ ಪುದಿದು ಬೆಳಪ ಬೆ-
ಳಂತಿಗೆ ಬೆಳ್ದಿಂಗಳಲರ್ದ ಪೊಸಜಾದಿ ದಿಶಾ-|

---

೧-೧ (ಜ) ನೆರೆವ. ೨-೨ (ಅ) ಮಾಡುವಂತೆ. ೩-೩ (ಜ) ವಿಜಯಾರ್ಥ. ೪-೪ (ಜ) ಪಾಯಲ್ಕೆ ವೇೞ್ಕು. ೫-೫ (ಜ) ನೆಲೆಮಾಡಿದ. ೬-೬ (ಜ) ನದೀನದಂಗಳುಂ. ೭-೭ (ಬ,ಜ) ಕರತನದಿಂ. ೮-೮ (ಅ) ಕಾಂತ. ೯-೯ (ಜ) ಪೊಳೆವುವೆಳವಿಸಿಲೊಳ್. ೧೦-೧೦ (ಜ) ನಭದೊಳ್.

ಕಾಂತೆಯು ಬೆಳ್ಪಸವನದಡ–
ಗುಂತಿಯನೇಂ ತನಗೆ ನಾಡೆಯುಂ ಮಾಡಿಮುದೋ ॥ ೯ ॥

ವ॥ ಅಂತು ತನ್ನ ದಿಗ್ವಿಜಯೋದ್ಯೋಗಕ್ಕುಪ[೧]ಯೋಗಿಯಾಗಿ[೧] ಬಂದ ಶಾರವಶ್ರೀಯನಿದಿರ್ಗೊಂಡನೇಕಗಣಕಗಣ[೨]ನಿಗದಿತ[೨]ಶುಭದಿನನಕ್ಷತ್ರಮುಹೂರ್ತ್ತದೊಳ್ [೩]ದಿಗ್ವಿಜಯಭೇರಿಯಂ[೩] ಪೊಯ್ಸಿದಾಗಳ್,

ಸಮುದಾರಾತಿಮುರಾಳನೀರದರವಂ ಸಂಕ್ರುದ್ಧವೈವಸ್ವತೋ–
ಪಮವಿದ್ವಿಷ್ಟಫಣೀಂದ್ರಚಂದ್ರ[೪]ಕಿರವಂ[೪] ದೋರ್ದ್ದಂಡಕಂಡೂಯದು– ।
ರ್ದ್ದಮವೈರಿದ್ವಿರದೇಂದ್ರಕೇಸರಿರವಂ ತಾನೆಂಬಿನಂ ವ್ಯೋಮಭಾ–
ಗಮನೆಯ್ದಿರ್ದ್ದುದು ಚಕ್ರವರ್ತ್ತಿವಿಜಯಪ್ರಸ್ಥಾನಭೇರೀರವಂ ॥ ೧೦ ॥

ವ॥ ಆಗಳಾ ವಿಜಯಪ್ರಸ್ಥಾನಭೇರೀನಿನಾದಾನಂತರಮೆ, ಶಾರದನೀರದನಿಕಾಶವಿಶಾಲಧವಲದುಕೂಲಾಂಬರವಿರಾಜಮಾನನುಂ, ಚಂದ್ರಾತಪಪಾಂಡುರಹರಿಚಂದನಾನುಲಿಪ್ತಗಾತ್ರನುಮಭಿನವವಿಕಸಿತಮಾಲತೀಮಾಲಾಪರಿನಿಷ್ಕೃತಮಕುಟನಿಕಟನುಮಪೂರ್ವ್ವದೂರ್ವ್ವಾಪ್ರವಾಲಾಲಂಕೃತಕರ್ಣ್ಣಪೂರನುಂ, ಗೋರೋಚನಾರಚಿತವಿಚಿತ್ರತಿಲಕವಿಲಸಿತಲಲಾಟನುಂ, ತಾರಾತರಲಮುಕ್ತಾಫಲಕಲಿತಾಜಾನು[೫]ಲಂಬ[೫]ಬ್ರಹ್ಮಸೂತ್ರನುಮಿಂದ್ರಚಾಪವಿಲಾಸೋಪಹಾಸಿರುಂದ್ರೇಂದ್ರಚ್ಛಂದಹಾರಾಭಿರಾಮವಿಶಾಲವಕ್ಷಸ್ಥಲನುಂ, ಪುರೋಹಿತೋಚ್ಚಾರ್ಯ್ಯಮಾಣಪುಣ್ಯಾಶೀರ್ವ್ವಚನನಿರ್ಘೋಷಪತ್ತಕರ್ಣ್ಣನುಮಾಗಿರ್ದ್ದಾಗಳ್,

ದಕ್ಷಿಣಭುಜಮುಚಿರಪ್ರತಿ–
ಪಕ್ಷಮಹೀಪಾಲವಿಜಯಲಕ್ಷ್ಮೀಲಲನಾ– ।
ವಕ್ಷೋಜಸ್ಪರ್ಶನಮನ–
ನಕ್ಷರಮುಱಿಪಿದುದು ಪತಿಗಮಂದಸ್ಪಂದಂ ॥ ೧೧ ॥

ಅರಿಮುಕುಟರತ್ನಮುಂ ನಿಜ
ಚರಣಕ್ಕರ್ಘ್ಯಪ್ರದೀಪಮಾಗಿರ್ಪ್ಪುದನಾ– ।
ಭರತೇಶ್ವರಂಗೆ ಕಾಣ್ಬಂ–
ತಿರೆ ಸೂಚಿಸಿದತ್ತು ದಕ್ಷಿಣಾಕ್ಷಿಸ್ಪಂದಂ ॥ ೧೨ ॥

೧–೧(ಅ) ಯೋಗ್ಯಮಾಗಿ. ೨–೨(ಅ) ನಿರೂಪಿತ; (ಜ) ಗಣಿತ. ೩–೩(ಜ) ದಿಗ್ವಿಜಯಪ್ರಯಾಣಭೇರಿಯುಂ. ೪–೪(ಜ) ಕರೆಪಂ. ೫–೫(ಜ) ಲಂಬಿತ.

ವ|| ಆಗಳ್ ನಿಜಸ್ಥಪತಿರತ್ನಪ್ರಯತ್ನನಿರ್ಮಿತಮುಮಂ, ಕುಮುದದಳಧವಳಮನೋಜವಕಾಮಚಾರಿ[1]ಸ್ಥೂರಿ[1]ತ್ಪೃಷ್ಟಯೋಜಿತಮುಮನುಪಕೂಲ[2]ಶೂರ[2]ರಥಕಲ್ಪಸಂಪಾದಿತರಥಚೋದಕಭ್ರಾಜಿತಮುಮಾಗಿ,

ಒದವಿದ ಚಕ್ರರತ್ನದೊಳಿದೊಂದೆಣೆಯಾಯ್ತೆನಿಸಿರ್ದ ಚಕ್ರಯು-
ಗ್ಮದಿನಸಮರ್ಚಿಷ್ಟು ವಜ್ರಮಯಮಾಗೆ ಕನನ್ಮಣಿಮೌಕ್ತಿಕಪ್ರಭಾ-
ಸ್ಪದಮಮರೇಂದ್ರದಂಪ್ರಗಿರಿಕುಂಜವಿಜಂಚಲಕೇತನಾಳಿ ಕ- |
ಟ್ಟಿದಿರೊಳೆ ಬಂದು ನಿಂದುದಜಿತಂಜಯಮಾತ್ತಮನೋರಥಂ ರಥಂ ||೧೩||

ವ|| ಆಗಳ್ ಮೌಹೂರ್ತಿಕರ್ ಬಂದು, ದೇವಾ, ವಿಜಯಪ್ರಸ್ಥಾನಲಗ್ನಂ [3]ನಾರಿಸಂದುದೆಂದು[3] ಬಿನ್ನಪಂ[4]ಗೆಯ್ದಾಗಳ್[4],

ರೋದೋಂತರ್ಭಾಗದೊಳ್ ದುಂದುಭಿಗಳೆಸೆಯೆ ಮಾಂಗಲ್ಯಗೀತಪ್ರಣಾದಂ
ವಾದಿತ್ರಧ್ವಾನದೊಳ್ ಸಂದಣಿಸೆ ಗುರು[5]ಜನೋದೀರ್ಣ[5]ನಾನಾವಿಧಾಶೀ- |
ರ್ವಾದಂ ಶೇಷಾಕ್ಷತಂಗಳ್ ವೆರಸೆಸೆಯೆ ಮಹಾಮಂದಿವೃಂದಾಂಕಮಾಲಾ-
ನಾದಂ ಗಂಭೀರನಾದಂ ನೆಗಟ್ದಿರೆ ತಳರ್ದಂ ರಾಗದಿಂ ಸಾರ್ವಭೌಮಂ ||೧೪||

ವ|| ಅಂತು ತಳರ್ದು ಕೃತಪ್ರಸ್ಥಾನವಿವಿಧಮಂಗಲವಿಧಾನೋ[6]ಚ್ಛ್ರಿತಚಿತ್ರಾತಪತ್ರಧೋಧೂಯಮಾನಧವಲಚಾಮರಸಹಸ್ರಸಂಛಾದಿತಸಹಸ್ರಕರ[7]ಪ್ರಭಾಭಮಪ್ಪ[7]ರಥಮನೇಱಿ ಮಹಾಮುಕುಟಬದ್ಧಪರಿವೃತಂ ರಾಜಭವನಸಮಂ[8]ಪ್ರೊಜಿಮಟ್ಟು ಚಂಚತ್ಪಂಚರತ್ನತೋರಣಾಲಂಕೃತರಾಜಮಾರ್ಗದಿಂ ಬರ್ಪ್ಪಾಗಳ್,

ದಿಶಾಯುವತಿಕೇಳಿಕೀರ್ಣ್ಣಪಟವಾಸಚೂರ್ಣ್ಣಂ ಜಗ-
ತ್ಸ್ವಶೇಶಯನಿವಾಸಿನೀಪ್ರಮದವೃಷ್ಟಿಸಿಷ್ಟಾತಕಂ |
ವಿಶಾಲತರತುಂಗಸೌಧತಳಸಂಗಿ ಪೌರಾಂಗನಾ
ವಶೀಕರಣಚೂರ್ಣ್ಣಮಾದುದು ಬಳೌಘಧೂಳೀಚಯಂ ||೧೫||

ವ|| ಅಂತು ಬರ್ಪ್ಪಾಗಳಂಗಜವಿಜಯಕವಲಿಕಾವಿಲಾಸಮಂ ತಾಳ್ದಿ,

ನೊಸಲಂ ತೊಂಗಲ್ಗುರುಳ್ ಮೇಲುದನೊಗೆವ ಕುಚಂ ಬೆನ್ನನಾನೀಳಕೇಶ-
ಪ್ರಸರಂ ಜೆಲ್ವಿಂ ಪೋದಟಿಸ್ದೊಳ್ ನಿಱಿಯನೆಡಪ ತೋಳ್ ಸೋಗೆಯುಂ ನೂಲ
ತೊಂಗಲ್ |

೧-೧(ಚ) ಸ್ಥೂಲ. ೨-೨(ಅ) ಸ್ಥೂಲ; (ಬ) ಸೂರಿ. ೩-೩(ಅ) ಸಾಕ್ಷಿಗೆ ವಂದುದೆಂದು (ಬ) ಯಾತ್ರತ್ವಕ್ಕೆ ಬಂದುದು. ೪-೪(ಅ) ಗೆಯ್ದಾಗಳ್. ೫-೫(ಚ)ಜನೋದ್ಗೀತ. ೬(ಅ)ನನು ೭-೭(ಚ) ಪ್ರಭಾಪ್ರಸರ. ೮(ಅ) ದಿಂ.

ಚಲತ್ಕಾಂಚೀಕಳಾಪಮಣಿಕಿಂಕಿಣೀಗಣಝುಂಕಾರಮೆ ಮದನಡಿಂಡಿಮರವಾಡಂ-
ಬರ೧ಮಾಳೋಳತುಳಾಕೋಟಿ೧ಕಳಕ್ವಣಿತಮೆ ೨ನಿಗಳಾಂದುಕಾ೨ರವಮಾಗೆ

ಸಮದಂ ಯಾನಮೆ ಮಂದಮಂದಗಮನಂ ಕಸ್ತೂರಿಕಾ೩ಪಂಕಪ-
ಟ್ಟಮೆ೩ ಧಾರಾಮದಪಟ್ಟಮಾಗೆ ನಿಸಿನಂ ಸೇನಾಮನೋಮರ್ದನೋ- |
ದ್ಯಮದಿಂದಂಗಜಚಕ್ರವರ್ತಿಯ ಗಜಂ ವಾರಾಂಗನಾರೂಪದಿಂ-
ದಮೆ ಬರ್ಪಂತಿರೆ ಬಂದು ಚಕ್ರಧರರೂಪಾಶ್ಚರ್ಯಮಂ ನೋಡಿದಳ್ || ೨೧ ||

ವ|| ಮತ್ತಮಿರ್ವಳ್ ನಿಜಪ್ರಸಾಧನಗ್ರಹಣಪ್ರಸ್ತಾವದೊಳ್,

ಪಿರಿದೊಂದುತ್ಸಕಭಾವದಿಂ ಸರಿಗೆಯಂ ಕಾಲೊಳ್ ಕಟೀಸೂತ್ರಮಂ
ಕೊರಲೊಳ್ ಚಂಪಕಮಾಲೆಯಂ ಕನಕಕಾಂಚೀಸ್ಥಾನದೊಳ್ ರತ್ನನೂ-
ಪುರಮಂ ಕೈಗಳೊಳಾಗಳಾಗಳೆ ತೊಡರ್ಚುತ್ತಂ ಜನಂ ಕೂಡೆ ಕ-
ಪ್ಪರಿಗೊಂಡೆಯ್ತರೆ ನೋಡಲೆಂದು ಪರಿದಳ್ ಚಕ್ರೇಶಸೌಂದರ್ಯಮಂ || ೨೨ ||

ವ|| ಅಂತು ಭರತೇಶ್ವರಚಕ್ರವರ್ತಿಯ ರೂಪಾತಿಶಯಮಂ ನೋಡುವಲ್ಲಿ,

ಗಣಿಕೆಯರ ವಿಳಾಸಾಗಾರದೊಳ್ ಜಾಲಮಾರ್ಗ-
ಪ್ರಣಯಿನಿಯರಪಾಂಗಶ್ರೇಣಿಯೊಳ್ ಮೂಱು ಬಣ್ಣಂ |
ಪೆಣೆದೊದವೆ ಗವಾಕ್ಷಸ್ಥೇಂದುಕಾಂತೇಂದ್ರನೀಲಾ-
ರುಣಮಣಿಕಿರಣಂಗಳ್ ಪೊಣ್ಮುವಂತಾದುವಾಗಳ್ || ೨೩ ||

ವ|| ಅಂತು ಮನಸಿಜನಾವೇಶಮಂತ್ರದಿಂ ಸ್ತೋಭಂಗೊಂಡಂತೆ ಪುರಪುರಂ-
ಧ್ರೀಕ್ಷೋಭಮಾಗೆ ಮನುವಂಶಗಗನ ಚಂದ್ರೋದಯಕ್ಷುಭಿತನಗರಕ್ಷೀರಾಂಭೋ-
ರಾಶಿಯ ಕಲ್ಲೋಲಮಾಲೆಗಳಂತೆ ದೆಸೆದೆಸೆಗೆ ಪೊಳೆವ ಪುರಾಂಗನಾಜನದ೪ಪಾಂಗ-
ಮಾಲೆಗಳುಂ೪ ತದೀ೫ಯ ಶೀಕರನಿಕರಂಗಳಂತೆ ಸೊಗಯಿಸುವ ಧವಳಾಕ್ಷತಸಿತ-
ಕುಸುಮಮಂಗಳಲಾಜಾಂಜಲಿಗಳುಮನುರಾಗಮಂ ಪಡೆಯೆ, ಪುರಪ್ರಧಾನಜನ-
ನಿ೬ಹಿತಾಶೇಷಾಶೀರ್ವಾದಪರಂಪರೆಯನಾನುತ್ತಂ, ಪಂಚರತ್ನತೋರಣದ್ಯುತಿಸ-
ಮುದ್ಯೋತಿತಕನಕಪ್ರಾಕಾರಪ್ರತೋಲಿದ್ವಾರಮನೆಯ್ದಿವಂದಾಗಳ್,

ಗಿರಿರಾಜೋದಗ್ರಸಿಂದೂರಿತಕರಟಿಘಟಾಟೋಪಮಂ ಕುಂಕುಮಾಂಭ-
ಸ್ಫುರಿತಾಂಗೋತ್ತುಂಗವಲ್ಗತ್ತುರಗಬಲಮದೋದ್ದಾಮಮಂ ಚಿತ್ರನೇತ್ರಾಂ-

೧-೧(ಅII) ಮಳಾತುಳಾಕೋಟಿ. ೨-೨(ಅII) ನಿಗಳಾಂದೋಳ. ೩-೩(ಅ) ಪತ್ರಭಂಗಮೆ. ೪-೪(ಬ) ಪಾಂಗೇಕ್ಷಣಂಗಳು ತದೀಯ. ೫(ಚ) ಡಿ. ೬(ಚ) ಸ.

ಬರೆಸಾನಾಹೇತಿಹಸ್ತೋತ್ಕಟಭಟಸ್ಫೃತನಾಭೀಳಮಂ ಚಿತ್ರದೊಳ್ ವೀ-
ರರಸಂ ಕೈಗಣ್ಮಿ ಪೊಣ್ಮುತ್ತಿರೆ ನಿಜಬಲಮಂ ನೋಡಿದಂ ಸಾರ್ವಭೌಮಂ
॥ ೨೪ ॥

ಎರೆಮಂ ಕೆಲದೊಳಮರಸರ
ಬರವಂ ಸಾಱುತ್ತೆ ಭೂಪರಿರ್ದಲ್ಲಿಯೆ ಮಾ- ।
ಣ್ದಿರೆವೆಱಗೆ ಮಕುಟಮಣಿಗಣ-
ಮರೀಚಿ ಪ್ರದಿಪತ್ತು ದೆಸೆಯುಮಂ ವಸುಧೆಯುಮಂ ॥ ೨೫ ॥

ವ॥ ಅಂತು ತಿರೀಟಕೋಟಿರತ್ನರಶ್ಮಿರಂಜಿತದಿಕ್ಚಕ್ರಮುಮಾಗಿ ಬಂದೆಱಗಿದ ರಾಜಚಕ್ರಮನನುಕ್ರಮದೊಳ್ ನೇತ್ರತ್ರಿಭಾಗಕಟಾಕ್ಷಸಮೀಕ್ಷಣಭ್ರೂವಿಭ್ರಮ-ದರಹಸಿ[1]ತಾಳಾಪನ[1]ಪರಿಹಾಸವಿಸ್ರಂಭಾಳಾಪಂಗಳಿಂ ಸಂತಸಂಬಡಿಸುತ್ತಂ, ಬಂದಂದಿನ[2]ದಿನ[2]ಮಯೋಧ್ಯಾಪುರಾಸನ್ನದೊಳ್ ನಿಜಸ್ಥಪತಿರತ್ನವಿರಚಿತಮಾಗಿ

ವಿಜಯಶ್ರೀಗೃಹಮೆನಿಸುವ
ವಿಜಯಪ್ರಸ್ಥಾನಶಿಬಿರನೃಪಮಂದಿರಮಂ ।
ವಿಜಿಗೀಷು ಬಂದು ಪೊಕ್ಕಂ
ವಿಜಯಾಲಂಕಾರಬಾಹು ಭರತಮಹೀಶಂ ॥ ೨೬ ॥

ವ॥ ಅಂತು ಪೊಕ್ಕು [3]ಮಂಗಳ[3]ಶೇಷಾಕ್ಷತಂಗಳನಾಂತುಕೊಂಡು ಹರಿನೀಲ-ಕುಟ್ಟಿಮನಿಹಿತರಜತಹೇಮಭಾಜನಾಲಂಕೃತಮಾಗಿ ವಿಕಸಿತಾಂಭೋಜಹೇಮ-ಕಮಲಮನೋಹರ[4]ಸರಶ್ರೀಯಂ ತಾಳ್ದಿರ್ದ ಭೋಜನಭೂಮಿಗೆ ರಾಜಹಂಸ-ವಿಳಾಸದಿಂ ಬಿಜಯಂಗೆಯ್ದು [5]ಸಕಲವಿದ್ಯಾಪ್ರವೀಣಗುರುಜನಾರ್ಯಜನವಿಳಾ-ಸಿನೀಜನ[5]ಪರಿವೃತನತಿಮೃದುರಸನಾ[6]ಮರ್ದನ[6]ಮಾತ್ರದ್ರಾವಣೀಯಘೃತಪೂ-ರಮುಮಲ್ಪದಶನದಂಶಮಾತ್ರಖಂಡನೀಯಮಂಡಕಮುಮತ್ಯಂತಕೋಮಲತಾ-ಲುತಳಸಂಘಟ್ಟಮಾತ್ರಕ್ಷೋದನೀಯ ಮೋದಕಮುಮನಿಷ್ಠುರೋಷ್ಠಪುಟಮಧ್ಯ-ಸಂಧಾರಣಮಾತ್ರಚೂರ್ಣನೀ[7]ಯಶಾಕ[7]ವರ್ತಿಕಮುಮತಿದೂರೋಚ್ಛ್ವಾಸವಿ-ಕಾಸನಾಸಾಂಜಲಿ[8]ಪುಟ[8] [9]ಪೀಯಮಾ[9]ನಮುಗ್ಧಹಯ್ಯಂಗವೀನಮುಂ ನೀಹಾರ-ಶಕಲಧವಲಪರಿಣತಕಪಿತ್ಥಫಲಪರಿಮಳಮಧುರದಧಿಯುಮೇಕೀಭೂತಸಕಲಭು-

---

೧-೧(ಅ) ತಾಳಾಪನವಿಲಾಸ. ೨-೨(ಅ,ಬ) ದಿವಸಮ. ೩-೩(ಅ) ಮಂಗಳಾಳಂಕೃತ. ೪(ಚ) ತ. ೫-೫(ಅII,ಬ) ಜಾಂಗುಳಿ ವಿದ್ಯಾಪ್ರವೀಣಪ್ರಾಣಾಚರ್ಯ್ಯ. ೬-೬(ಚ) ಸಮ್ಮರ್ದನ. ೭-೭(ಅ) ಯಾಶೋಕ; (ಬ) ಯಾಶಾಕ. ೮-೮(ಬ) ಪುಟಾ. ೯-೯(ಅ) ಪೇಯ-ನವೀನ; (ಬ) ಪೀಯನವೀನ.

ವನಕಿತಿತಿರಪ್ರಸ್ಫುರದ್[೧]ಘಾರಪ್ರ[೨]ವರಂ[೩]ಪಾಕಾರಶಿಖರಿಣೀರಮಣೀಯಮುಮಪ್ಪ-
ತ್ತೆ[೪]ಪಿಂಡಮನ್ನೃತ್ಯಮುಮಪ್ಪ ಮನೋಹರಾಹಾರಮಂ.

ಕೆಲದೊಳ್ ರಾಜಕುಮಾರವೃಂದಮಿದಿರೊಳ್ ವಾರಾಂಗನಾವರ್ಗಮಾ-
ವಳಿ ವಂದಿಪ್ರಕರಂ ಯಥೋಚಿತನಿಜಸ್ಥಾನಂಗಳೊಳ್ ಗಾಯಕರ್ ।
ಸಲೆ ಮುಂ ಬಂದುಣೆ ನೋಡಿಯುಂ ನುಡಿದುಮುಟ್ಟುತ್ತುಂ ಸಮಾಯಂಗಳಂ
ಕೆಲಕೆಲ್ಲಂ ಭರತೇಶನಾರೊಗಿಸಿದಂ ಕಲ್ಯಾಣಕಾಹಾರಮಂ ॥ ೨೭ ॥

ವ॥ ಅಂತಾರೋಗಿಸಿದಿಂ ಬಟಿ[೫]ಮೂಶಾಂತ[೫]ಚಂದ್ರಕಾಂತದ್ರವಸುರ-
ಭಿಸಲಿಲಮುಂ, ಘನಸಾರಚಂದನಸಾರಪ್ರಸ್ಪೃಷ್ಟಕರ[೬]ತಳನುಮಂಗೀ[೬]ಕೃತಕಸ್ತೂ-
ರಿಕಾವಿಲೇಪನನುಂ, ವಿರಚಿತಸುರಭಿ[೭]ಕುಸುಮ[೭]ಶೇಖರನುಂ, ಮೃಗಮದಖದಿರ-
[೮]ಗುಳಿಕಾ[೮]ಬಹಳಕರ್ಪೂರಪಾರಿ[೯]ಸಂವಿಮಿಶ್ರ[೯]ತಾಂಬೂಲದ್ವಿಗುಣಿತವದನಾರ-
ವಿಂದಾಮೋದನುಮಾಗಿ, ಷಟ್ಖಂಡಮಂಡಲವಿಜಯವಿಲಾಸವಿಹಾರಲೀಲಂ ಕತಿ-
ಪಯಪದಂಗಳಂ ವಿಹಾರಿಸಿ, ಮಕರೂಲಪ್ರಷ್ಠದಾಚ್ಛಾದಿತಸುಖಾಸನಾಸೀನಂ
ಮಣಿಮಯ[೧೦]ಸಿಂಹಾಸನ[೧೦]ಮನವಷ್ಟಂಭಿಸಿ,

ಕಳಕಂಠೀಗೀತಂ ಬಗೆ-
ಗೊಳಿಯುಂ ವೀಣಾಕ್ವಣಂ ಮನಂಗೊಳಿಯುಮಿಳಾ- ।
ವಳಯೇಶ್ವರನಮರ್ದಿನ ಕಡ-
ಲೊಳಗಿರ್ಪಂತಿರ್ದ[೧೧]ನಂತವಾಸ[೧೧]ದೊಳಾಗಳ್ ॥ ೨೮ ॥

ವ॥ ಅಂತಂದಿನ ದಿವಸಮಂ ಕಳಿದು ಮಱುದಿವಸಂ ದ್ವಾದಶಯೋಜನ-
ಸಂಸರ್ಪದ್ ಗಂಭೀರವೀರಾರವಂಗಳಪ್ಪಾನಂದಿಗಳೆಂಬ ಪನ್ನೆರಡುಂ ಭೇರಿಗಳು-
ಮಹಿತಮಹೀಪಾಳಹೃದಯಕವಾಟಪುಟವಿಘಟನಪಟುಗಳಪ್ಪ ವಿಜಯಘೋ-
ಷಂಗಳೆಂಬ ಪನ್ನೆರಡು ಪಟಹಂಗಳುಮ[೧೨]ಗಣ್ಯಪುಣ್ಯಕ್ಷೀರಾಬ್ಧಿ[೧೨]ಸಂಭವಂ-
ಗಳಪ್ಪ ಗಂಭೀರಾವರ್ತಂಗಳೆಂಬಿಪ್ಪತ್ತುನಾಲ್ಕು ಶಂಖಂಗಳುಂ, ಮತ್ಸ್ಯಮು-

೧(ಆII,ಬ) ಭಾ. ೨(ಅ) ಪ್ಯ. ೩(ಆ,ಬ) ಕಾ. ೪(ಅ) ಪಿಂಡಾಯಿಪಪಾಸ; (ಬ) ಪಿಂಡ. ೫-೫(ಆII) ಮೂಸಾಂದ್ರ; (ಚ)ಂ ಆಚಾಂತ. ೬-೬(ಚ) ತಳನುಪಾಗೀ. ೭-೭(ಅ) ಸುಮನ. ೮-೮(ಅ) ಘಟಿಕಾ. ೯-೯(ಅ) ವಿಮಿಶ್ರಿತ ಪಾರಿಜಾತ ಬಹುಳ; (ಬ) ಬಹಲ. ೧೦-೧೦(ಆII) ಲೋಹಾಸನ. ೧೧-೧೧(ಚ) ನಂತವಾಸ. ೧೨-೧೨(ಬ) ಗಣ್ಯಪ್ರಣ್ಯ; (ಚ) ಗಣ್ಯಪುಣ್ಯಾಬ್ಧಿ.

ಕರಿಕುಳೀರಕಲಶವರಾಹಹಂಸಾಸನರಕಂಠೀರವಶಿಖಿಚಮೂರುಗರುಡಫಣಿಚಿಹ್ನಚಿಹ್ನಿತಂ-
ಗಳಪ್ಪಂಗಳಪ್ಪ ನಾಲ್ವತ್ತೆಂಟುಕೋಟಿ ಪತಾಕೆಗಳುಮೆಸೆಯೆ ಪೂರ್ವಾಭಿ-
ಮುಖನಾಗಿ ಚಕ್ರರತ್ನಪುರಸ್ಸರಂ ದಿಗ್ವಿಜಯಂಗೆಯ್ವಾಗಳ್,

ಅನವರತಗಳನ್ಮದಮ-
ಲಿನಾನನಂ ವರ್ಣಜಕಸಮನ್ವಿತಮಂಭೋ-।
ದನಿನಾದಂ ಭದ್ರಮನಂ
ಮನೋಜವಂ ಚತುರಶೀತಿಲಕ್ಷಪ್ರಮಿತಂ ॥ ೨೯ ॥

ಘನಘಟೆ ನಭದಿಂದಂ ಧಾತ್ರಿಗೆತ್ತಿಕ್ಕೆ ಬಂದ-
ತ್ತೆನಿಸಿಳಿತಕರ್ದಮಳಿಚಿತ್ತಂ ಜೂತಸತ್ತ್ವಚ್ಛವಿಶ್ವಾ-।
ವನಸುರಭಿಮನಾಗಮೋದಾಗಸವಾಸಕ್ತ ಭೃಂಗೀ-
ನಿನದಮುಖರಿತಾಶಾಚಕ್ರಗಂಧೇಭಚಕ್ರಂ ॥ ೩೦ ॥

ವನಧಿಯ ನೀಳ್ದ ಪೆರ್ದೆರೆಗಳೀ ನೆಲನಂ ಕವಿವಪ್ಪುವೀಗಳೆಂ-
ಬಿನಮತಿವೇಗದಿಂ ಪರಿವ ಪಾಜುವ ಲಕ್ಕೆಯನೊಡ್ಡವೊಪ್ಪು ತ-।
ನ್ನನೆ ನಡೆ ನೋಡಿಸುತ್ತುಮಿರೆ ಜಾಯಿಲವೊಂದೆರಡೆಂದು ತೋಜಿ ನೆ-
ಟ್ಟನೆ ಪದಿನೆಂಟುಕೋಟಿವರೆಗಂ ತಳರ್ದತ್ತು ತುರಂಗಸಾಧನಂ ॥ ೩೧ ॥

ವಿವಿಧಾಯುಧಪೂರ್ಣ್ಣಂಗಳ್
ಪ್ರವೀರಪುರುಷಪ್ರತಿಷ್ಠಿತಂಗಳ್ ಚೇತೋ- ।
ಜವಹರಿಯೋಗ್ಯಂಗಳ್ ತಳ-
ರ್ದುವಾಗಳೆಂಬತ್ತುನಾಲ್ಕುಲಕ್ಕೆ ರಥಂಗಳ್ ॥ ೩೨

ಪಾದಾಭಿಘಾತವಿಚಲನ್
ಮೇದಿನ್ಯುತ್ಥಿತವಿಶಾಲಧೂಳೀಪಟಲಾ - ।
ಚ್ಛಾದಿತಗಗನಂ ನಡೆದುದು
ಪಾದಾತಂ ಚತುರಶೀತಿಕೋಟಿಪ್ರಮಿತಂ ॥ ೩೩

ಎಡೆನೆಱೆಯದು ಭುವನತಳಂ
ನಡೆವ ಚತುರ್ಬಲಕೆ ದಿವಿಜಖೇಚರಸೈನ್ಯ - ।
ಕ್ಕೆಡೆನೆಱೆಯದು ಗಗನಮುಮೆನೆ
ಷಡಂಗಬಲಮಿಂತು ತಳರೆ ತಳರ್ದಂ ಭರತಂ ॥ ೩೪ ॥

೧-೧(ಚ) ಕಲಶ ಕುಳೀರವರಾಹ. ೨-೨(ಚ) ಚಮೂರು ಮಯೂರಗರುಡ. ೩-೩(ಚ) ಫಣಿರಾಜಚಿಹ್ನಂಗಳಪ್ಪ. ೪-೪(ಚ) ಕಳಿಸು. ೫-೫(ಚ) ಸಾರಾ. ೬-೬(ಅ) ಸಾಣಿ. ೭(ಚ) ಬರ್.

ದೆಸೆಗಳನೆಂಟುಮಂ ನೆಱೆಯೆ ಮುನ್ನಮೆ ಬಳ್ವಳ[೧]ನಾಗೆ ಪೂಡದಾ-
ಗಸಮುಮ[೨]ಸುಚ್ಚಮಾಗಿನಿಸನೆತ್ತದೆ ನೀಳ್ದಿರೆ ಭೂಮಿ ಭಾಗಮಂ |
ಪಸರಿಸದೀ ಬಳಪ್ರ[೩]ಕರಮಂ ಭರತೇಶ್ವರನೇಕೆಯೋ ವಿನಿ-
ರ್ಮ್ಮಿಸಿದನೆನಲ್ಕೆ ಪೆಂಪುವಡೆದೇಂ ನಡೆದತ್ತೊ ಸಮಸ್ತಸಾಧನಂ || ೩೫ ||

ವ|| ಅಂತು ಮಹೀಭಾಗಮೆಲ್ಲಂ ಚತುರಂಗಮಯಮುಂ, ದಿಗ್ವಿಭಾಗಮೆಲ್ಲಂ ರಜೋಮಯಮುಂ, ನಭೋಭಾಗಮೆಲ್ಲಂ ದಿವಿಜವಿದ್ಯಾಧರಮಯಮುಮಂತರಿಕ್ಷಮೆಲ್ಲಮಾತಪತ್ರಮಂಡಲಮಯಮುಂ, ಸಮೀರಣಸಂಚರಣಮೆಲ್ಲಂ ಮದಗಂಧಮಯಮುಂ, ಸೃಷ್ಟಿಯೆಲ್ಲಮಪನಿಪಾಳಮಯಮುಂ, ಭುವನವಿವರಮೆಲ್ಲಂ ಜಯಜಯನಿನಾದಮಯಮುಮಾಗೆ, ನಡೆವ ನಿಜವಿಜಯಸೈನ್ಯದೊಳನೇಕಮಕುಟಬದ್ಧ ಶೇಖರ ಸಹಸ್ರ[೪]ಪರಿಸ್ರಸ್ತ[೪]ಕುಸುಮಕೇಶರರಜಮುಮನವರತವಿತರಣನಿರತರಾಜಕುಮಾರಮುಷ್ಟಿವಿಕೀರ್ಯ್ಯಮಾಣ[೫]ಸಂತರ್ಪಣ[೫]ಚೂರ್ಣಸಂಕೀರ್ಣಕರ್ಪೂರರಜಮುಂ, ಸಮುದವಿಜಯಗಜವಿಶಾಲಕುಂಭಭಿತ್ತಿಪರಿಕ್ಷಿಪ್ತಸಂಪ್ರಸಿಂದೂರರಜಮುಂ, ನೆರಂಬಡೆದು,

ಮದಕರಿತುರಂಗಮಾನವ-
ಪದಹತಿಯಿಂ ಗಗನತಳಮನೊಡನಡರ್ವ ರಜಂ |
ಪದೆಪೊದವೆ ದಿಗಂಗನೆಯರ
ಕೆದರಿದ ಪಟವಾಸಚೂರ್ಣರಜಮನೆ ಪೋಲ್ಗುಂ || ೩೬ ||

ಪರಿಪೂರಿತಸಕಲದಿಗಂ-
ಬರತಲಮನುಕೂಲಮಂದಪವನವಿಲೋಲಂ |
ಕರಮೆಸೆದುದು ಬಹಳ ರಜೋಂ-
ಬುರಾಶಿಯೊಳ್ ಮತ್ಸ್ಯಮಕರಕೇತನನಿಕರಂ || ೩೭ ||

ವ|| ಆಗಳ್,

ಕರಿಕರಶೀಕರಮದಜಲ-
ತುರಂಗಲಾಲಾಂಬುಸೇಕದಿಂದಱಿದುಱಿದಿ- |
ರ್ದ್ದ ರಜಂ ನರೇಂದ್ರಚಾಮರ-
ಮರುದಭಿಹತಿಯಿಂ ತೆರಳ್ದುತೂಳ್ದತ್ತಾಗಳ್ || ೩೮ ||

೧(ಅ) ಮಾ. ೨(ಅ) ಪು. ೩(ಡ) ವ. ೪-೪(ಅ) ಪರಿಶ್ಲಿಷ್ಟ; (ಬ) ಪರಿಸ್ರದ್ಧ.
೫-೫(ಅ,ಬ) ದರ್ಪ್ಪ.

ಸಿಪಿಗೆ ತಟಿ[೧]ದುಱುಗಲೊಪನಿ-
ರ್ಕ್ಷಿವ ಕುಂಚಂ ಲೀಲೆವಡೆದು ಚೆಲ್ವಿಸಿದುದು ಪ- ।
ಣ್ಣವತಿಸಪಸ್ತ್ರಾಂತಃಪುರ-
ಮವಯವವದೊಳೆ ಭರತಚಕ್ರವರ್ತಿಯ ಕೆಲದೊಳ್ ||೩೯||

ಬಾಸಣಿಸಿದ ಚೆನ್ನದ ಪೊಸ
ವಾಸಣಿಗೆಯ ಪೊನ್ನ ಸಿಪಿಗೆ ಮಣಿಮಯಕಳಶೊ- ।
ದ್ಭಾಸಿ
ಳಿಂಸಂ ಬೆರಸುಱುಗೆ ಭೋಗಿಯರ್ [೨]ಕೆಲದೆ[೨]ಸೆವರ್

ಆವಯವದಿ ಕುಣಿದು ಮುಟ್ಟುವ
[೩]ಸವಸಿ[೩]ಯ [೪]ಬಜ್ಜಣಿಗೆ ಪಿಡಿದ ಸತ್ತಿಗೆಯ ವಿಳಾ-
ಸವಮುಮದರ್ ಲೀಲೆಯಿಂ[೪] ಪೆಂ-
ಡವಾಸದೊಳ್ ಪೆಂಡಿರೊಯ್ಯನೊಯ್ಯನೆ ನಡೆದರ್ ||೪೧||

ಕರಿಣೀವೃಂದದ ಮೇಲೆ ಕತ್ತ ತಟಿಗಳ್ ವಾರಾಂಗನಾಗೀತಮಂ-
ದ್ರರವಂಗಳ್ ಜಲಕೇಳಿಪಾಳಕುಸುಮಾಮೋದಾಸವಾಸಕ್ತ ಭೃಂ- ।
ಗರವಂಗಳ್ ಪ್ರಿಯಕುಬ್ಜವಾಮನಗಣಾಲಾಪಂಗಳತ್ಯಂತಸೌಂ-
ದರಮಪ್ಪಂತವಧೂಕದಂಬಕಮನೇಂ ಪ್ರೈಯ್ವಿಚಿಸಲ್ಕಾರ್ತಿಯೋ ||೪೨||

ಪೊಳೆವಲರ[೫] ಮದ್ದಿನ[೫] ಕಪ್ಪುರ
ವಳುಕಿನ ಕತ್ತುರಿಯ [[೬]ಕೊಳಪ[೬]] ದುರ್ವಾಭರಣಂ ।
[೭]ಗಳೊಳೆಸೆವ[೭] ಮಾಣಿಕಂಗಳ
ಬೆಳಗಿದೆ [೮]ಸೂಚಿಸಿತು ಭರತನಂತಃಪುರಮಂ[೮] ||೪೩||

ಶೃಂಗಾರಾಂಭೋಧಿವೇಳಾವಿಳಸನದೆಸಕಂ ಮೇಣ್ ಸ್ಮರಪ್ರಾಜ್ಯಸಾಮ್ರಾ-
ಜ್ಯಾಂಗಂ ಮೇಣ್ ಚೈತ್ರಲಕ್ಷ್ಮೀಪರಿಕರವಿಭವಂ ಮೇಣಿದೆಂಬಂತೆ ಲೀಲಾ- ।
ಪಾಂಗಜ್ಯೋತ್ಸ್ನಾಪ್ರಸೃತಾಂಭಃಪ್ಲವಧವಳಿತದಿಗ್ಭಿತ್ತಿ ಬಂದತ್ತು ಪುಷ್ಪಾ-
ಸ್ತ್ರಾಂಗೀಕಚ್ಛತ್ರವಾಯ್ತ್ರೀಜಗಮೆನೆ ಭರತಾಂತಃಪುರಸ್ತ್ರೀಸಮೂಹಂ ||೪೪||

ಲಯದಿಂ ಮೆಲ್ಪಿಂ ಬೆಡಂಗಂ ಪಡೆವ ತುರಗದಿಂ ಚಿತ್ರಿತಚ್ಛತ್ರಕಾಲೀ-
ಲೆಯಿನುದ್ದಂ ಬರ್ಪ[೯] ಚೇಟೀ[೯] ನಿವಹದ ಬರವಿಂ ಭೂಷಣಾಡಂಬರೋದ್ಯೋ[೧೦]ಗಂ- ।

೧(ಚ) ಗೆ. ೨–೨(ಚ) ಕರಮ. ೩-೩(ಚ) ಸವತಿ; (ಬ) ಸವಲಿ. ೪–೪(ಅ) ಬಜ್ಜರಿಗೆ ಪಿಡಿದ ಸತ್ತಿಗೆ ಪಿಡಿದೊಂ । ದು ವಿಳಾಸಮುಮರ್ದು ನಿಲೆ. ೫-೫(ಬ) ಮಡ್ಡಿನ. ೬-೬(ಅ,ಬ) ಕೊಳತ ಗು; (ಚ) ಕೊಳತ ೭-೭(ಚ) ಗಳ ಪೊಳೆವ. ೮-೮(ಅ) ಸೂಚಿಸಿಪುದರಸನಂತಃಪುರಮಂ; (ಬ) ಸೂಚಿಸದೆ ಭರತನಂತಃಪುರದೊಳೂ. ೯–೯(ಅ) ಭೇರೀ. ೧೦(ಅ₁,ಬ) ಜ್ಯೋ.

ತಿಯಿಸೊಪ್ಪಿದ್ದ್ರಾವಿಲಾಸಮಂ ವಿಲಸಿತಕಮಲಾವಾಸಮೀಬಪ್ಪರ್ದೇಂ ರಾ-
ಣಿಯವಾಸಂ ನೋಡಿಮೆಂಬಂತೆಸೆದುದು ಪಲವುಂ ತಂಡದಿಂ ಪೆಂಡವಾಸಂ ॥೪೫॥

ವ॥ ಆ ಪ್ರಸ್ತಾವದೊಳ್,‡

ಅಂತು ನೃಪಂ ನಡೆಯೆ ಲಲಾ-
ಟಂತಪತಪನಾಂಶುವಿಂ ಸರೋವರಜಲಮೋ- ।
ರಂತಿರೆ ಕಾಯ್ಗೊಂಡಪ ನೀ-
ರಂತಿರೆ ಕುದಿಪತ್ತು ಪೊಳೆಯೆ ಜಲಚರನಿಕರಂ ॥೪೬॥

ಬಾಳಕಳಹಂಸಜಾಳಮೃ-
ಣಾಳಂಗಳ ನಡುವೆ ಶಿಶಿರಕರಕರಶತಪಾಂ- ।
ದೋಳ್¹ಮೊಳೆರ್ಪವೊಲಿರ್ದುದು¹
ಲೀಳೆಯಿನೇಂ ಲೀಲೆ ರಾಜಹಂಸಂಗರಿಪೇ ॥೪೭॥

ತಪನಕರಂ ತನುಗಳನು-
ರ್ಚಿ ಪೋಗೆ ಸಾರ್ದತ್ತು ಜಕ್ಕವಕ್ಕಿಯ ಪೊಣರಂ²- ।
ಗ್ಲಪಿತಮನಸಿಮಾಗಳುದ್ದಂ-
ಡಶಿ ಪುಂಡರೀಕೋಜ್ಜ್ವಲಾತಪತ್ರದ ನೆಲಂ ॥೪೮॥

ಪೊಳೆವಿನಕಿರಣಂ ಮೆಯ್ಗಳ-
ನಳುರೆ ಕನಲ್ದಗಿದು ಸೋಗೆಯುಂ ಪರಪಿ ನೆಲ- ।

‡ (ಚ) ಪ್ರತಿಯಲ್ಲಿ ಹೆಚ್ಚಿನ ಪದ್ಯಗಳು.

ತುರಗಮುಮೊಂದು ಸತ್ತಿಗೆಯುಮೊಂದಿರೆ ಕಾಪಿನ ಬಂಟು ಸುತ್ತಲುಂ-
ಬರೆ ಮುಸುಕಿಟ್ಟ ಪಟ್ಟಣಿಗೆಯುಂ ಪೊಱಪೊಣ್ಮುವ ಕಣ್ಣ ಬೆಳ್ಪುಮೋ- ।
ಪರ ಮನದೊಳ್ ತೆಱಂಬೊಳೆವ ಬಾಳೆಗಳಂತಿರೆ ನಾಟ್ಯವಿಳಾಸದೊಳ್
ಪೊರೆದಿರೆ ಬಂದುದಂದೊಡನೆ ಸಜ್ಜನಪೆಂಡಿರ ತಂಡಮೋಳಿಯೊಳ್ ॥೪೬॥

ಪಡೆಗಡ್ಡಮಿರ್ದ್ದ ಬೆಟ್ಟ-
ಟ್ಟಡೆ ಮಟ್ಟಮಿಱುಂಬಮೆಂಬಿವಂ ಸಣ್ಣಿಸಿ ಸಾ- ।
ರ್ವಡೆ ನಡೆವ ದಂಡರತ್ನಂ
ಪಡೆವಳ್ಳನ ಮುಂದೆ ನಡೆಯೆ ನಡೆದಂ ಭರತಂ ॥೪೭॥

೧-೧(ಚ) ದೊಳೆರ್ಪಂತಿರ್ದುದು. ೨(ಚ) ರಂ. ೩-೩(II) ನಾಗಲುದ್ದಂಡ.

ಲ್ಗಳೆನಾಸೆವಡೆ ಶಿಖಾವಳಿ-
ಕುಳತಾಂಡವಮೆಸೆಮುದಾಶರತ್ಸಮಯಮೊಳಂ ॥೪೯॥

ಕರಿಣೀಗಣಕರಶೀಕರ-
ಪರಿಕರದೊಳಮಲೆವ ಚಮರರುಹಪವನಪರಂ- ।
ಪರೆಯೊಳಮಾಱಿದೆ ನೃಪಸೌಂ-
ದರೀಶ್ರಮಾಂಭಃಕಣಂಗಳುಣ್ಮಿದುವಾಗಳ್ ॥೫೦॥

ಲಾವಣ್ಯರಸದ ಬಂಡುಗ-
ಳಾವರಿಸಿದುವೆನಿಸಿ ಪೊಳೆವುವವನೀಶ್ವರ ಕಾಂ- ।
ತಾವದನಂಗಳ್ ಸ್ವೇದ೧ಜ-
ಲಾ೧ವಳಿಯಿಂ ಸಜಲಲವಸರೋಜಂಗಳವೋಲ್ ॥೫೧॥

ಕಡುವೆಂಕೆಯಿಂ ಕಟಾಕ್ಷಂ
ಬಿಡಿದಿಱುವ ಲಲಾಟಕುಂಕುಮಸ್ವೇದಜಲಂ।
ಕಿಡಿಸಿದುದು ಕದಪಿನೊಳ್ ಪೊ-
ಲ್ತಿಡೆ ಬರೆವರಸಿಯರ ಪತ್ರಲೇಖಾವಳಿಯಂ ॥೫೨॥

ಶರತ್ತಪನತಾಪದಿಂ ಕೊರಗಿ ಕೂಡೆ ಕೋರೈಸಿದಾ-
ನರೇಶ್ವರವಧೂಕದಂಬಕಮನಾಱಿಸಲ್ಕಾಗಳ-।
ಬ್ಜರೇಣುಗಳನೆತ್ತಿಬಂದುದಿದಿರ್ವರ್ಪವೋಲ್ ನಂದನೋ-
ತ್ಕರಂಬಿಡಿದು ಮಾರುತಂ ಚಳತರಂಗೆಯಿಂ ಗಂಗೆಯಿಂ ॥೫೩॥

ವ॥ ಅಂತು ಮಲಯಜರಸಶಿಶಿರಶೀಕರಾಸಾರಚಾರಿಯಾಗಿ ಬಂದ ಮಂ-
ದಾನಿಳನ ಬೞಿವೞಿಯನೆ ಬಂದು,

ಹಿಮಶೈಲಾಗ್ರಸರಸ್ಸರೋರುಹರಜಃಪಿಂಗಾಂಗೆಯಂ ತೀರಸಾ-
ರಮಹೀಜಪ್ರಸವಪ್ರಭೂತಮಕರಂದಾಮೋದಸಂಸಂಗೆಯಂ
ಭ್ರಮರೀಗೀತಸಮೇತಹೇಮನಳಿನೀಶ್ರೀಸಂಗೆಯಂ ನೋಡಿ ನಾ-
ಡೆ ಮನಂಗೊಂಡನಿಳೇಶ್ವರಂ ಲುಳಿತಮತ್ಸ್ಯಾಪಾಂಗೆಯಂ ಗಂಗೆಯಂ ॥೫೪॥

೧-೧(ಅII) ಲವಾ.

ಆರಪ್ಯನದಿಯ ಚೆಲ್ವನಿ-
ಳಾರಾಪೂರಮಣನಟ್ಟಿಯಿಂ ನೋಡುವಿನಂ ।
ಸಾರಥಿ ಕಣ್ಣಱಿದೊಯ್ಯನೆ
ತೀರಂ ಕೊಸೆಗೊಂಡು ಚಕ್ರಿಯಂ ಬಿನ್ನವಿಕುಂ ॥೫೫॥

ದಿವಿಜಜನಸೇವಿತಂ ಭುವ-
ನಪಂವ್ಯಪಾಹ್ಲಾದಿತತ್ರಿಲೋಕಂ ನೋಡೀ ।
ದಿವಿಜನದಿ ನಿನ್ನ ಗುರುವಿನ
ಧವಲಯಶಶ್ರೀಯನಿನಿಸನನುಕರಿಸಿರ್ಕುಂ ॥೫೬॥

ನಿನ್ನಾಜ್ಞೆಯಂತೆ ಗಗನಪು-
ನ್ನುನ್ನತಿಯಿಂ ದಾಂಟಿ [೧]ಪೆಜಗೆ[೧] ಲಂಘಿಸಲರಿದೇಂ-
ಬನ್ನಗವೊಪ್ಪಿದ್ದುದು ಲೋ-
ಕೋನ್ನತ ನೋಡಿದಱ [೨]ಕನಕ[೨]ವೇದಿಕೆಯಿರವಂ ॥೫೭॥

ತ್ರಿದಶಸ್ತುತ ನೋಡ ಪೊದ-
ಱ್ದುದವಿದ ತಾಳೀತಮಾಳನೀಳದ ಕಪ್ಪಿಂ ।
ಪುದಿದು ಪರಭಾಗಮಂ ಪಡೆ-
ದಿದಱ[೩]ರಡುಂ[೩] ಕೆಲದೊಳೆಸೆವ ವನರಾಜಿಗಳಂ ॥೫೮॥

[೪]ಪರೆದು[೪] ತಟವನದ ಪಸುರೆಸೆ-
ದಿರೆ ತನ್ನೊಳ್ ತನ್ನ ಬಣ್ಣಮೆಸೆ[೪]ದಿರೆಯುಂ[೪] ವಿ- ।
ಸ್ಫುರಿತತರಕನಕವೇದಿಕೆ
ಮರಕತವೇದಿಕೆಯ ಚೆಲ್ವನಿರ್ಕೆಗೊಳ್ಗುಂ ॥೫೯॥

ವನಕುಸುಮಸ್ತಬಕದ ನೆಱ-
ಲಿನಿಸಚ್ಛಾಂಬುವಿನೊಳೆಸೆಯೆ ಮಧುಕರಮದು ಭೋಂ- ।
ಕನೆ ಪಾಯ್ದೆಱಂಕೆ ನಾಂದೊಡೆ
ಜಿನುಂಗಿ ನೆಲಸಿದುದು ವಿಕಚಕನಕಾಬ್ಜಿನಿಯೊಳ್ ॥೬೦॥

ಕೊಡೆಯೆಲೆಗಳ ತಿಂತಿಣಿಯಿ-
ಟ್ಟೆಡೆಗಳ ಕಟ್ಟಲೆಯನಿರುಳೆಗೆತ್ತಾತ್ಮೀಶಂ ।

೧-೧(ಅII) ಪೆಜಗೆ. ೨-೨(ಅII) ವಜ್ರ. ೩-೩(ಚ) ಎರಡು. ೪-೪(ಅ) ದಿರಲೇಂ.

ತಡೆವೊಡೆ ನರೇಂದ್ರ ನೋಡೀ-
ನಡುವಗಲೊಳ್ ಚಕ್ರವಾಕವಧು ವಿರಹಿ[1]ಸುವಳ್[1] ||೬೧||

ಮದಗಂಧಮೆಂದೆ ಸಪ್ತ-
ಚ್ಛದಗಂಧಮನೀವನೇಭಮಾಘ್ರಾಣಿಸಿ [2]
ಚ್ಚಿ ಸಕದಿಂದೆ ಪಾಯ-
[2]ಲ್ದಿದಪ್ಪು[2]ಗೆಯ್ದಪುದು ನೋಡ ವನವೇದಿಕೆಯಂ ||೬೨||

ಮದಕಳಹಂಸೆಯು ಪಿಂಡಿದೆ
ಪೊದೞ್ದು ಚಮರೀಜಮಾಗೆ ಜಳದೇವತೆಗೆ |
ತ್ರಿದ ಪಚ್ಚೆಯ ಸತ್ತಿಗೆಗಳ
ಪುದುವೆಸಿಪ್ಪುವು[3] ವನಜವನದ ಕೊಡೆಯೆಲೆ ಪಲವುಂ ||೬೩||

ಮಲಯಸಮೀರಣೇರಣಚಲತ್ತರುಶಾಖೆಗಳೊರ್ಮೆಗೊರ್ಮೆ ನೀ-
ರೊಳಗೆ ಬೞಲ್ದು ಹೇಮಸರಸೀಜರಜಾರುಣವಾರಿಯಂ ಪುದುಂ-
ಗೊಳಿಸಿ ನಭಂಬರಂ ಮಿಳಿರ್ದಲಂಪಿನ ದಂಪತಿಯಿರ್ಪ ಜೊಂಪಮಂ
ತಳಿತಳಿದಲ್ಲಿ[4]ತಣ್ಪು[4]ವೆಸಕೆಯ್ವುವು ತೀರವನಾಂತರಾಳದೊಳ್ ||೬೪||

ಬಳ್ಳಿಗವುಂಗಂ ತಕ್ಕೆಲಿ-
ವಳ್ಳಿಯ ಕಟ್ಟಿಲಿಯನಲೆವ ಸೊಡಗರ್ಗುಡಿಗಳನೀ |
ಯಳ್ಳಿಱಿ[5]ದಲೆವುವು[5] ಬನದೊಳ-
ಗುಳ್ಳಿಲದರ್ಜ್ಜಳಿಸಿ[6] ಚಂಪಕ[7]ಪ್ರಸವಂಗಳ್[7] ||೬೫||

ಗೊಲೆಯೊಳ್ ಪಣ್ತುದು ಪೈಂದವಾಟಿ ಪಥಿಕರ್ಬ್ಬಕ್ಕೆಂದು ಭೃಂಗಂಗಳಿಂ-
ದುಲಿಪಂತಿರ್ದ್ದುದು[8] ಪಣ್ತ ಬಕ್ಕೆ ತನಿವಣ್ಣಾಗಿರ್ದ್ದುದಿಮ್ಮಾವು ಕ-|
ಟ್ಟಿಲಿಸಿರ್ದ್ದತ್ತೆಲೆವಳ್ಳಿ ಕಾಯ್ತ್ತು ಕರೆವಂತಿರ್ದ್ದತ್ತು ಚೆಂದೆಂಗು ಸಾ-
ಜಿಲೆ[9]ವಂತಿ[9]ರ್ದ್ದುದು[10]ಬಂದ[10] ಕರ್ವ್ವಿನ ವನಶ್ರೀಬಣ್ಣಿಸಲ್ಬಕ್ಕುಮೇ ||೬೬||

ಕಡು ಪಗಲಾದುದು ಬೇಡಂ
ಬಿಡಿಸುವುದೀಪುಣ್ಯನದಿಯ ತಡಿಯೊಳ್ ದೇವರ್ |
ನಡೆವುದು ವನಜಳಕೇಳಿಗೆ
ಕಡು ರಯ್ಯಂ ಬನದ ತೊರೆಯು ಸಿರಿ ಧರಣಿಪತೀ ||೬೭||

---

೧-೧(ಅ) ಸುಗುಂ. ೨-೨(ಅII, ಚ) ಲ್ಕದಿರ್ಪು. ೩(ಚ) ದು. ೪-೪(ಅII) ಸಾಂಕು; (ಅ) ಗೊಂಕು. ೫-೫(ಅII) ದೆಸೆವುವು. ೬(ಚ) ಪ. ೭-೭(ಬ) ಪ್ರಸರಂಗಳು ೮(ಅ) ವು. ೯-೯(ಅ) ಯುತ್ತಿ. ೧೦-೧೦(ಅ) ಬೆಂಡ; (ಬ) ಬಂಡ.

ಎಂದೊಡೆ ಭರತೇಶ್ವರನಾ-
ನಂದದೆ ಬೀಡಂ ಬಿಡಲ್ಕೆ ವೇಟ್ಟುದುಮಿರ್ದ ಜಯದ ।
ಸ್ಯಂದನದಿಂದಂ ಜನಿತಾ
ನಂದಂ ನಂದನವನಮಂ ವಿಳಾಸದಿಂ ಪುಗುತಂದಂ ॥೬೮॥

ವ॥ ಆಗಳ್ ಶರದದ ಬಿಸಲಳುರೆ ಪೊಣ್ಮಿದ ಘರ್ಮಬಿಂದುಗಳಿಂ ನಾಂದು ಪುಚ್ಚುಟುದಿರೆ ಪೊರೆಕನಾದ ಕುಂಕುಮ ಪತ್ರಭಂಗದ ಕೊಱಗಿದ ನಗೆವೊಗಂಗಳುಂ ಪಯಣದೊಳಳ್ಳೆವಿಳ್ಳೆಯಾಗಿ ಬಂಬಲಂ ಬಾಡಿದ ತನುಲತೆಗಳು ಮೆಱೆವಿಱನಾದ ತಲೆದುಡುಗೆಗಳುಂ ಬಾಡಿದ ಪೂಮಾಲೆಯೊಡನೆ ಬಟಿಲ್ದ ಸೋರ್ಮುಡಿಗಳುಮಡಿಗಡಿಗೆ ತಡಪಡವಪ್ಪ ನಡೆಗಳುಂ ಬೆರಸು,

ವನದೇವತೆಗಳ್ ನಂದನ-
ವನಮಂ ಪುಗುವಂತೆ ತಳಿರ ಕಳಿಕೆಯ ಪೊಸ ಪೂ- ।
ವಿನ ಮೇಗೆ ದಿಟ್ಟಿಯಾಗಿರೆ
ವನಜಾನನೆಯರ್ ವಿಳಾಸವನಮಂ ಪೊಕ್ಕರ್ ॥೬೯॥

ಪುಗೆ ನಡೆವ ಪರಿಶ್ರಮದಿಂ-
ದೊಗೆವ ಲತಾಂಗಿಯರ ಸುಯ್ಯ ಕಂಪಿಂಗಳಿಗಳ್ ।
ಮೊಗಸಿ ಮುಸುಱುದುವು ಪೊಸಗಂ-
ಪುಗಂಡು ಸ್ವೈರಿಸುವ ಮಧುಕರಂಗಳು ಪೊಳವೇ ॥೭೦॥

ಕತ್ತುರಿಯ ಕಂಪುಮಂ ಬೆಮ-
ರೊತ್ತರಿಸಿ ಪೊದಟ್ದು ಕಂಪನೀಯುತ್ತಿರೆ ವ್ಯ- ।
ತ್ಯೋತ್ತುಂಗಸ್ತನೆಯರ್ ಶ್ರಮ-
ಮುತ್ತುಮದೇಂ ಸುರಭಿಗಂಧಮಂ ಬೀಱುದರೋ ॥೭೧॥

ವ॥ ಆಗಳ್ ಭರತೇಶ್ವರಂ ಸಮಸ್ತಾಂತಃಪುರದೊಡನಿಡಿವಡರೆ ಸಲೆ ಪೂತಚೂತಲತೆಯನೊಳಗುಮಾಡಿ ಬಳಸಿದ ಮಾಧವೀಲತೆಯ ಬಳ್ಳಿವಳ್ಳಿಯ ಬಳ್ಳಿಗಾವಣದ ಮುಂದೆ ಬಳ್ವಳ ಬಳೆದೆಳೆದಳಿಸುವ ಪೊಸ ಕೆಂದಳಿರ ಗೊಂದಳದೊಳ್ ಸಂದಣಿಸಿದಶೋಕಲತೆಯೋಲಗಶಾಲೆಯೊಳಗಣ ಕಪ್ಪುರವಳಿಕಿನ ಜಗುಲಿಯ

೧-೧(ಅ) ನಿಱ. ೨-೨(ಜ) ನಂದದೆ. ೩-೩(ಅII) ಪೌರನಾರಿಯರ ಕದಪಿನ.

ಮೇಗಣ ಕುಸುಮದೆಸಳ ಮಸುಗುವ ಪೊಸಪಳಿಂಬದ ಮೇಗೆ ಕಿಱಿದು ಬೇಗಂ ವಿಶ್ರಮಿಸಿ ಮೇಳವಾಕೆಗಳ್ ವೆರಸು ಬಂದು ಕಾನನಮಂ ಪುಗಲೊಡಂ,

ತಳಿರ ಪೊಸಪೆರ ಕಾನನ-
ದೊಳಗೆ ಸ್ಫುರತ್ಸ್ವೇದ ಘರ್ಮಜಲಕಣಗಣಮಂ ।
ಕಳೆದುದು ಚಂದನಮಕರ-
ವಿಳುಳಿತಜಳಪರಿಚಿತಂ ಜಲಾರ್ದ್ರಸಮೀರಂ ॥೭೨॥

ವ॥ ಅಸ್ತು ಭರತರಾಜಂ ಸಕಲಕ್ಷತ್ರಿಯರಾಜನಪ್ಪ ಮನೋಜರಾಜಂಗೆ ಮಾಡಿಮಡಿಸಿಸುವ ವಿರಾಜಯಾನರಕ್ತಾಶೋಕಪಲ್ಲವೋಲ್ಲಸಿತಕಾಯಮಾನ—ದೊಳ್ ಕಿನ್ನರೀಕರಕಿಸಲಯಚಾಳನಸಮುತ್ಪನ್ನಕಾಕಲೀಕಲರವಮಿಳಿತಮಧು-ಕರತಂತ್ರೀಸಮಂಚಿತವಿಪಂಚೀಮಂಪ್ರತಾರಮಧುರಮೂರ್ಛನಾಸನಾಥಪ್ರ—ಯೋಗಂಗಳುಮನಂತಃಪುರಪರಿವಾರವಾರಾಂಗನಾಸಂಗೀತಂಗಳುಮಂ ನವ ಪ್ರಸವಪರಾಗಾಸವಾಸಕ್ತಭೃಂಗಾಂಗನಾಗೀತಂಗಳುಮನಾಲಿಸಿ ಕೇಳುತ್ತಿರ್ಪನ್ನೆಗಮಂತಃಪುರಸ್ತ್ರೀಯರಿಮ್ಮಾವಿನ ಸೋನೆಯಸೋನೆಯೊಳ್ ತಳಿದೆಳದಳಿರ ಜೊಂಪಂಗಳೊಳಂ ಕುಳಿರ್ವ ಪುಳಿನಂಗಳೊಳಂ ಕೋಡುವ ಧಾರಾಗೃಹಂಗಳೊಳಂ ವಿಶ್ರಮಿಸಿ ಶಾರದಾತಪಪರಿಶ್ರಮಮುಮಂ ಕಳೆಯೆ,

ನವನಖಪದರೇಖೆಗಳಂ
ಸವತಿಯರಿದಿರೊಳ್ ವಿಲಾಸವತಿಯರ್ ಮೆರೆಯು ।
ಲ್ಕವಯವದಿಂ ಕುಪ್ಪಸಮಂ
ಸವಂಗಮಂ ಕಳೆದು ಕಳೆದರಲ್ಲಿಂದವರಂ ॥೭೩॥

ಪೊಳೆವಲರ ಪಸೆ[೫]ಯೊಳಿರ್ದ್ದರಂ[೫]
ಪುಳಿನದ ಲೋಹಾಸನಂಗಳೊಳ್ [೬]ನೆವ್ವಿರ್ದ್ದರಂ[೬] ।
ಚಳದಳಕೆಯರೆಬರವೇಂ
ಕಳೆದರೊ ಶರದಾತಪಪ್ರಭೂತಶ್ರಮಮಂ ॥೭೪॥

ಪೊಸತಳಿರ್ಗಳ ಬಿಜ್ಜಣಿಗೆಯಿ
ನೆಸೆವೆಲರ್ಗಳಿನೊಗೆವ ಘರ್ಮಜಲಮಂ ಪೀರ್ದ್ದು- ।

೧-೧(ಜ) ಚ. ೨-೨(ಅ,ಬ) ವನ. ೩-೩(ಜ) ಗಂ, ಅತನಂತಃಪುರ. ೪(ಅ,ಬ) ಶ. ೫-೫(ಅII) ಯೊಳುಸಿರ್ದಂ. ೬-೬ (ಅII) ಳ್ಕುಳ್ಳಿರ್ದ್ದಂ.

ಊಸಿದುವು ಕುಸುಮರಜಂಗಳ್
[1]ಪೊಸಯಿಸಿದುವು ಬಣ್ಣಮಂ ಲತಾಂಗಿಯರ್ಗಳ್[1] ||೭೫||

ಅಲರ ಮುಸುಂಗಿಯೊಳುಸಿರ್ದು-
ಳ್ಕಲರ್ದಪ್ಪಂ ನಿಮಿರ್ದ ಲತೆಯ ಮೇಲೆ ವಿಳಾಸಂ|
ನಿಲೆ ನೀಡಿ ಕಾಲನರೆಬರ್
ಮುಲುಂಗಿದರ್ ಪೊಳೆವ ತಳಿರ ಜೊಂಪರಿಗೆಗಳೊಳ್ ||೭೬||

ತಳಿರ್ಗಳ ಕಂಡ [2]ಪಟಂಗಳ[2]
ತಳಿರ್ಗಳ ಪಾಸುಗಳೆ ತಳಿರ್ಗಳೋವರಿಗಳೆ ಕೆಂ-|
[3]ದಳಿರ್ಗಳ ಪೊಳೆವಿಱಿಸಿಲ್ಗಳೆ[3]
ವಿಳಾಸಮಂ ಮೆಱೆದರಲ್ಲಿ [4]ಕೆಲದಬಲೆಯರೊಳ್[4] ||೭೭||

ಪೊಳೆವೆಳೆದಳಿರೊಳ್ ಪುದಿದೆಳೆ
ಪಳಸಿ ಕುಳಿರ್ ಕೋಟ್ಪ ಸೋನೆಯ ಸೋನೆಯನೆ ಪುದುಂ|
ಗೊಳಿಸಿದೆಲೆ[5]ವಳ್ಳಿ ಮಾವಿನ
ಕುಳಿರ್ವೋವರಿಯಲರ ಪಸೆಯೊಳುಸಿರ್ದರ್ ಕೆಲಬರ್ ||೭೮||

ಪನಸಾಮ್ರಕದಳಿನಾರಂ-
ಗನಾಳಿಕೇರೀಫಲಾಮೃತಾಸ್ವಾದದೆ ತ-|
ಣ್ಣನೆ ತಣಿದು ಕಿವಿಯೊಳಮರ್ದಿನ
ಪನಿಪನಿವಿನಮೆಸೆದರರೆಬರಳಿಕುಳರುತಿಯಿಂ ||೭೯||

ಗಿಳಿಗಳೊಳೆ ಗಳಪಿ ಮೊಱೆವಳಿ-
ಕುಳದೊಡ[6]ನಾಲಯ್ಸಿ[6] ಪುರುಳಿಯೊಡನೆಳಸಿ ನವಿ-|
ಲ್ಗಳ ಬಳಗದೊಡನೆ ನರ್ತಿಸಿ
ವಿಳಾಸಿನೀ[7]ನಿವಹ[7]ಮಾಗಳೇಂ ದಳ್ಳಿಸಿತೋ ||೮೦||

ಅಂತು ಭರತೇಶ್ವರಂ ಸಕ-
ಳಾಂತಃಪುರಸಹಿತಮಲ್ಲಿ ವಿಶ್ರಮಿಸಿ ವನಾ-|

---

೧-೧(ಅII) ಸೊಗಯಿಸಿದುವು. ಬಂಣಮಂ ಲತಾಲಲಿತೆಯರೊಳೂ. ೨_೨(ಚ) ಪಡಂಗಳೆ. ೩_೩(ಅ) ದಳಿರ್ಗಳ ಪೊಳೆವಿನಿಸಿಲ್ಲದೆ; (ಬ) ದಳಿರ್ಗಳ ಸಮೆದಿರಿಸಿಲ್ಗಳೆ; (ಚ) ದಳಿರ್ಗಳೆಳಸಿ ಪೊಳೆವಿಱಿಲ್ಗಳೆ. ೪_೪(ಅII) ಕೆಲಬಲಬರೆಯೊಳೂ. ೫(ಚ) ಳ. ೬-೬(ಅ,ಚ) ನಾಳ್ಕೈಸಿ. ೭-೭(ಅ,ಬ) ನಿಕರ.

ಭ್ಯಂತರಮಂ ತೊಱಲೆ ಪುನ-
ಕ್ಕೆಂತಿಲ್ಲದಮುದಮನುಂಟು ಮಾಡಿಸುದು ಬನಂ ||೮೧||

ಕೊಳಗಳ ಮಱಗಳ ಲತೆಗಳ
ಫಳಪ್ರಸೂನಂಗಳೊದವಿನೊಳ್ ಪಕ್ಷಿಗಣಂ- |
ಗಳ ಪ್ರಮದವಿನೊಳಾಱುಂ ಋತು-
ಗಳ ಚೆಲ್ವಂ ಕಾಣಲಾದುದಾನಂದನದೊಳ್ ||೮೨||

ಪೊಸತಲರ್ದ ಕೊಸಗು ತಳಿರ್ಪ್ರೋ-
ದಸುಗೆ ಪಸುರ್ಗನೆಯೊಳೆಡಿದ ಮಲ್ಲಿಗೆ ೧ತಳಿರಿಂ೧ |
ಮುಸುಕಿದರಿಸನೆಯಂತಿ ಪೇಱ್ದ
ಪೊಸ ಮಾವುಗಳಿಂ ಬಸಂತಮೆಸೆದಪ್ಪುದಿದಱೊಳ್ ||೮೩||

ನವಚೂತಾಂಕುರಸುರಭಿ-
ಪ್ರಪಮಂ ಸವಿದಸಿತಱಿಂದೆ ಮದನಧನುರ್ಜ್ಯಾ- |
ರವಸನ್ನಿಕಾಶಮೀಗಳ್
ಕಿವಿಯಂ ಮುಟ್ಟಿದುದು ಪಿಕದ ಪಂಚಮನಿನದಂ ||೮೪||

ಪಾದರಿ ಪೂತುವು ತೋರಿದು-
ವಾದುವು ಮಲ್ಲಿಗೆಗಳೆಯ್ದೆ ಪಣ್ತುವು ಮಾವಿಂ- |
ಬಾಱಿದು ನಿದಾಘಮಧುವಿನ
ಭೇದಮದೀಬನದೊಳಾತಪಕ್ಕೆಡೆಯುಂಟೇ ||೮೫||

ಧಾ೩ರಾಕದಂಬಸುರಭಿಸ-
ಮೀರಂ ಪರಿಪಕ್ವರಾಜಜಂಬೂದ್ರುಮವಿ- |
ಸ್ತಾರಂ ಶಿಖಂಡಿತಾಂಡವ-
ಸಾರಂ ನವಜಲದಸಮಯಮೇನೆಸೆದಪುದೋ ||೮೬||

ಸೋಂಕು೪ವೆಲರ್ ಜಾದಿಯ೪ ಕಂ-
ಪಂ ಕರಮಗ್ಗಲಿಸಿ ಸೋಂಕಿದಪ್ಪುದಿದೆಂತೊ |

೧-೧(ಜ) ನನೆಯಿಂ. ೨-೨(ಜ) ತಳಿರಂ ೩(ಜ) ವಾ. ೪-೪(ಬ) ವೆಲಪ್ಪೊಗಸಜಾದಿಯ.

ಘೋಂಕೆನೆ ಪಯಣಮೊಳಿಪ್ಪಂ
ನೋಂಕಿದ ಶರದೃತುವೆ ಬನದೊಳವತರಿಸಿದುದೋ ||೮೭||

ಅಲರ್ದ ಪೊಸಸಿಂದುರಂಗಳ
ನಲಿವಳಿಕುಳಮಂ ತಳರ್ಚಿ ತಣ್ಪಲಿಪಲರ್- |
ಯುಲಿಯುದಪ್ರುದಗಿಪ್ಪಂತ್ಕಪುರ -
ಲಲನೆಯರಂ ಕೋಡುನೇಡುಗೊಳ್ವಿನವಿರ್ಗಳ್ ||೮೮||

ವನತರುಪತ್ರಂಗಳನೊ-
ಯ್ಯನೆ ನೆಲಿಯಿಂ ಪತ್ತಿವಿಡಿಸಿ ಕಳಿಕೆಗಮುತ್ಪ- |
ತ್ತಿನಿಮಿತ್ತಮಾಗಿ ಶಿಶಿರಮು-
ಮಿನಿಸಿನಿಸನೆ ತನ್ನ ನೆಱನನಱಿಪಿದುದೀಗಳ್ ||೮೯||

ವ|| [2]ಎಂದು[2] ದಿವ್ಯಪ್ರಭಾವದಿಂ [3]ಸಕಳ[3]ರ್ತುಕಸೌಂದರ್ಯ್ಯಮುಂ ಬೇಱಿ ಬೇಱಿ ತೋಱುವ ರಾಜ್ಯಲಕ್ಷ್ಮೀವಲ್ಲಭಂ ವನಲಕ್ಷ್ಮಿಯುಂ ನೋಡುವಾಗಳ್,

ನೋಡತ್ತೆಂತಿರ್ಪ್ಪುದೀಬಂದತಿಥಿಗತಿಥಿಸತ್ಕಾರಮಂ ನಾಮುಮೋಘಂ
ಮಾಡಲ್ವೇಟ್ಕುಂ ಯಥಾಶಕ್ತಿಯಿನೆನುತೆ ಮಹಾಶ್ಚರ್ಯ್ಯಮಂ ಕಣ್ಗೆ ಳುಂಬಂ|
ಮಾಡುತ್ತುಂ ದಿವ್ಯವಸ್ತ್ರಾಭರಣಕುಸುಮಗಂಧಂಗಳಂ ಚಕ್ರಿಗಾಗಳ್
[4]ನೀಡಿತ್ತತ್ಯಂತ ಭೋಗೋತ್ಕಿತ[4]ಕರತಳದಿಂ ತದ್ವನಸ್ತ್ರೀಸಮೂಹಂ ||೯೦||

ವ|| ಆಗಳಾವನದೇವತಾಪ್ರೇರಣೆಯೊಳೆ ಚಕ್ರವರ್ತಿಗೆ ಸಂಗೀತಮಂ ತೋಱುವಂತೆ,

ಅಳಿನಿನದದ ಮದಕೋಕಿಳ-
ಕಳನಿನದದ ಜತಿಯೊಳಭಿನಯಂ ನೆಗಟ್ವಿನೆಗಂ |
ಲಳಿತಮನೇನಾಡಿಸಿದನೊ-
ಮಳಯಾನಿಳನರ್ತ್ತಕಂ ಲತಾನರ್ತ್ತಕಿಯಂ ||೯೧||

ಅಂಕುರಪಲ್ಲವಕುಸುಮಾ-
ಲಂಕಾರದ ಚೂತಲತಿಕೆ ನರ್ತ್ತಕಿಯೊಲ್ ತ-
ನ್ನಂಕುರದಿಂ ಶಾಖೆಯಿನೇ-
ಸಂಕುರಶಾಖಾಭಿನಯಮನಭಿನಯಿಸಿದುದೋ ||೯೨||

---

೧(ಚ) ವೆ. ೨-೨(ಚ) ಅಂತು. ೩-೩(ಅ,ಬ) ಸರ್ವ. ೪-೪(ಅII) ನೀಡಿತ್ತಾಪರ್ವ-
ಭೋಗೋತ್ಕಿತ; (ಬ) ನೀಡಿತ್ತಂ ಸರ್ವ ಭೋಗೋತಿಕ; (ಚ) ನೀಡಿತ್ತತ್ಯಂತರಾಗೋತ್ಕಿತ.

ಪೃಥುಕದ ಪೆರ್ಚಿಸ ಭಂಗಿಯ
ನೆಱವಿನೊಳಿಪೆ ಮಿಗಿಲಪರ್ಕ್ಷವೆನೆ ಭರತನ ಕ-|
ರ್ಗ್ಗಱಕೆವನೆ ಪಡೆವ ಚೆಲ್ವಿಂ
ಮಱಸಿವುಪೃಪ್ಪಾನ ಲತೆಗಳಂ ವನಲತೆಗಳ್ ||೯೩||

ವ|| ಅನ್ನೆಗಮಲ್ಲಿ ನವಮಾಲಿಕಾಕುಸುಮಸುಕುಮಾರಿಯರ್ ನವಮಾಲಿಕಾಲತೆಗಳುಮಂ, ರಂಭಾಸ್ತಂಭೋಪಮಾನೋರುಯುಗಳೆಯರ್ ಶಾತಕುಂಭ-ರಂಭಾವನಂಗಳುಮಂ ಮುಮುಖಸವಮೃಗಮದತಿಲಕವಿಲಸಿತಲಲಾಟೆಯರುತ್ಪಲತಿಲಕ-ತರುಗಳುಮಂ, ಚಂಪಕಮುಕುಳನಿಕಾಶನಾಸಾವಂಶೆಯರ್ ಕನಕಕಿಂಕಿಣೀಕ-ಮನೀಯಕುಸುಮಚಂಪಕವಿಟಪಿಗಳುಮಂ, ರಕ್ತಾಶೋಕಪಲ್ಲವಾಧರೆಯರತಿರಕ್ತ-ಪಲ್ಲವಾಶೋಕಾನೋಕಹಂಗಳುಮಂ, ಕಾಮಕಾರ್ಮುಕೋಪಮಾನಭ್ರೂಲತಿ-ಕೆಯರ್ ಪುನ್ನಾಗಲತಿಕೆಗಳುಮಂ ನೋಡುತ್ತುಂ, ಕುಸುಮಾಪಚಯಕ್ರೀಡಾ-ವಿಲಾಸದಿಂ ತೊೞಲ್ವಾಕ್ಷೆ,

ತಳಿರೊಳ್ಗೊಂಬಿನೊಳೊಪ್ಪೆ ಕೋಕಿಲಕುಲಂ ಪೂಗೊಂಬಿನೊಳ್ ಪಾಡುತಿ-
ರ್ಪ್ಪಳಿವೃಂದಂ ಪುದುಗಿರ್ಪ್ಪ ಬಲ್ಮಿಡಿಯ [1]ತೂಗುಂಗೊಂಬಿ[1]ನೊಳ್ ಪಾಯ್ದು ಬಂದಿ-|
ಡಳಿಸುತ್ತಿರ್ಪ್ಪ ಶುಕಾಳಿ ತಮ್ಮ [3]ಬೆಸದಿಂ ತಂತಮ್ಮ[3] ತಾಣಾಂತರಂ-
ಗಳೊಳಿರ್ಪ್ಪಂಗಜತಂತ್ರದಂತೆಸೆವಿನಂ ಚೆಲ್ವಾದುವಿಮ್ಮಾವುಗಳ್ ||೯೪||

ತೀವಿರ್ದ್ದತ್ತು ಮೊದಲ್ ಮೊದಲ್ಗೆ ಪಣೆಯುಂ ಮಾಗಯ್ಯ ಮಾಗಯ್ಯನಿ-
ತ್ತಾಪಕ್ಕೆಯ್ದೆ ಕವಲ್ ಕವಲ್ತು ಪಲವುಂ ಕೊಂಬಾದುವೊಳ್ಗೊಂಬುಗಳ್,
ತೀವಿರ್ದ್ದತ್ತು ತಳಿರ್ ಮೊದಲ್ ಪಣೆಕವಲ್ಗೊಂಬೆಂಬುವೀಕೆಂದಳಿರ್
ಮಾವಿಂಗಲ್ಲದೆ ಮಾವುಗಳ್ಗೆ ಪೆಱವಕ್ಕಿಂತೀಂ ಬೆಡಂಗಪ್ಪುಮೇ ||೯೫||

ಎಂದು ಅದಂ ಮೆಚ್ಚಿ ಮತ್ತೊಂದು ಪಲ್ಲವಿತಕೋರಕಿತಕುಸುಮಿತ-ಫಲಿತ ಪರಿಣತಫಲಲಲಿತಸಹಕಾರಭೂರುಹಮನತಿ[4] ನಿಬಿಡಾಲಿಂಗನಂಗೆಯ್ದು,

ತಳಿರೊಳ್ ನೀನೆ ಬೆಡಂಗನೈ ನನೆಗಳೊಳ್ ನೀಂ [5]ನೀಱನೈ[5] ಪುಷ್ಪಸಂ-
ಕುಳದೊಳ್ ನೀನೆ ವಿಲಾಸಿಯೈ ಮಿಡಿಗಳೊಳ್ ನೀಂ [6]ಚೆಲ್ವನೈ[6] ಪಣ್ತ ಪ |

೧-೧(ಅ) ತೂಱಲ್ಗೊಂಬಿ; (ಬ) ಪೂಗೊಂಬಿ. ೨(ಅ) ಮಂ. ೩-೩(ಅ,ಬ) ಬೆಸದೊಳ್ತಂತಮ್ಮ. ೪(ಅ) ಲ್ಲಿ. ೫-೫(ಅ) ಚೆಲ್ವನೈ. ೬-೬(ಬ) ನೀರನೈ.

ಙ್ಗಳಿನೋವೋ ಪೆಱತೇನೊ ನೀನೆ ಭುವನಕ್ಕಾರಾಧ್ಯನೈ ಭೃಂಗಕೋ-
ಕಿಳಕೀರಪ್ರಿಯಚೂತರಾಜ ತರುಗಳ್ ನಿನ್ನಂತೆ[1] ಚೆನ್ನಂಗಳೇ ||೯೬||

ವ|| ಎಂದಪಂ ಪೊಗೞ್ದು,

ರತಮೊಳಗಗ್ಗಳಂ ಮುಖರತಂ [2]ಸುರತೋತ್ಸವ[2]ಕೆಂದು ಕಾಮಿನೀ-
ಪ್ರತತಿಗೆ ತೋರ್ಪವೋಲ್ ಮಧುರಸೀತ್ಕೃತನಾದಮೊಳಣ್ಮಿ ಪೊಣ್ಮಿ ಭೂ- |
ಷಿತನಯನೋಪರಿಷ್ಟಕರತಂಗಳ ಭೇದಮೊಳೊಂದಿದಾಪ್ರಭೂ-
ಷಿತಕಮನಾಪ್ರಪಕ್ವಫಳದೊಳ್ ಶುಕಕಾಮಿನಿ ಚೆಲ್ವುದೋಱಿದಳ್ ||೯೭||

ವ|| ಎಂದಪಂ ಮೆಚ್ಚುತ್ತಂ,

ಪೊಸ ಮಾವಿನ ಮಿಡಿಯೊಳ್ ಪ-
ಚ್ಚಿಸಾರವಂ ಮಾಡುವಟ್ಟಿಯಿಂ [3]ಪಡೆದೊರ್ವಳ್[3] |
ಪಸವನದ ಬಸನಿ ನಿಜಕರ
ಕಿಸಲಯರುಚಿ ಪಸುರೊಳೆಸೆಯೆ ಮಿಡಿಯಂ ಕೊಯ್ದಳ್ ||೯೮||

ಪೊಸಮುತ್ತಿನ ಲಂಬಣದೊಳ್
[4]ಮುಸುಂಕಿದಂತಿಡಿಯೆ[4] ಪೂತ ಸುರಯಿಯ ಮುಗುಳಂ |
ಪಸವಟ್ಟಂತೊರ್ವಳ್ ತನ-
ಗೆ ಸರಿಗೆಗಂ ಲಂಬಣಕ್ಕೆ[5]ಮಟ್ಟಿಯೆ ಕೊಯ್ದಳ್[5] ||೯೯||

---

ವಿರಹಿಗಳಂ ತೆರಳ್ಚಿ ತುಱುವಲ್ಲಿಗೆ ನೀಂ ನೆರಮಯ್ಯೊಳಕ್ಕೆ ನೀಂ -
ಬರೆ ಭುವನಂಗಳೊಳ್ ನೆಗೞ್ದುದೀಮಧುಮಾಸಮುಮೀಬನಕ್ಕೆ ನೀ- |
ನರಸನೆ ಎನ್ನ ರಾಜ್ಯವಿಭವಕ್ಕೆಲೆ ನೀನೆ ದಲೆಂದು ಬಂದ ಮಾ-
ಮರನನೆ ಮೂರುಸೂೞ್ ಪಿರಿದುಮಕ್ಕಱಿನಿಂ ಬಲವಂದನಂಗಜಂ ||೧೦೦||

ಸಿರಿಸದ ಬಾಸಿಗಮಂ ಮಾಂ-
ಕರಿಸುವ ನಳಿತೋಳ ಪಿಂಡುಗಂಕಣದ ಸರಂ |
ಮೊರೆವಳಿಗಳ ಸರಮಂ ಜ-
ಪ್ಪರಿಸುವಿನಂ ಚೆನ್ನೆ ಪೊನ್ನೆಯರಲಂ ಕೊಯ್ದಳ್ ||೧೦೧||

೧-೧(ಅ) ತು. ೨-೨(ಬ) ಮದನೋತ್ಸವ. ೩-೩(ಜ)ಮತ್ತೊರ್ವಳ್. ೪-೪(ಅ) ಮು-ಸುಕಿಟ್ಟಂತಿಡಿಯೆ. ೫-೫(ಅII,ಬ) ಮಟ್ಟಿಯೊಳುಯ್ದಳ್.

ಒಪೆವ ಮೃದುತಳದ ಕೆಂಪೇಂ
ಪುದಿದುದೊ ಕೆಂಪಳಿರನದಱ ನೂಪುರನಿನದಂ ।
ಪುದಿದುದೊ ಮೊರೆವಳಿಗಳೆನಿ-
ಸಿದಶೋಕೆಯ ತಳಿರನೊರ್ವಳೊತ್ತಿಯೆ ತಿಱಿದಳ್ ॥೧೦೦॥

ಎಳಮಾವನದೊಂದೆಳಲತೆ
ಬಳಸಲ್ ಒಗೆವಪ್ಪುದೆಂಬಿನಂ ನಳಿತೋಳಂ।
ಸೆಳೆಗೊಂಬಂ ತೆಗೆದೊರ್ವಳ್
ವಿಳಾಸವತಿ ತಿಱಿದಳಾಪ್ರಸವಕಿಸಲಯಮಂ ॥೧೦೧॥

[೧]ಪೊಗಡದ[೧] ಪೊಸ[೨]ಪೂವಿನ[೨] ತುಡು
ಗೆಗಳ್ಗಮರ್ದಪ ಪೊದಱ್ದ ತಣ್ಗಂಪಿಂಗಂ ।
ಮೃಗನಯನೆಯರನೆ ಬಿಡದೋ-
ಲಗಿಸಿದುದಳಿನಿಕರಮಮರನಾರೋಲಗಿಸರ್ ॥೧೦೨॥

ವ॥ ಮತ್ತಮೊರ್ವಳ್ ಮಲ್ಲಿಕಾವಲ್ಲರೀಸಮುಲ್ಲಸಿತಮುಕುಳಂಗಳನಲಂ-ಪಿನೊಳಾಯ್ದು ಕೊಯ್ದು ಮಲ್ಲಿಕಾ[೩]ಮಾಲಾಭಾರಿಣಿ[೩],

ಮುಗಮುಗಿಸಲ್ಕೆ ಮುಂದಯಿಸಿ ದಿಕ್ತಟಮಂ ಬಳಸಲ್ಕೆ ಪೀರ್ವ ತುಂ-
ಬಿಗೆ ತಣಿಪಲ್ಕೆ ನಮ್ಮ ಜಸಮಂ ಬೆಳಗಲ್ಕಿದೆ ಸಾಲ್ಗುಮೆಂದು ತ- ।
ಳ್ತಗಲದಲಂಪಿನಿಂ ಮಧುಮನೋಭವರಿರ್ವರುಮೊತ್ತವಟ್ಟೆ ಮ-
ಲ್ಲಿಗೆಗೆ ಬಸಂತದೊಳ್ ಬಯಸಿ ಮಾಡಿದರಲ್ಲರೆ ಪಟ್ಟಬಂಧಮಂ ॥೧೦೩॥

ಭುವನದೊಳಿಂತು ನಿನ್ನೆಸೆವ ಗೋಸನೆ ಸಂದುದು ಪಟ್ಟಬಂಧಮು-
ತ್ಸವಮಿದು ದೇವ ಮಲ್ಲಿಗೆ ಪಸುರ್ನನೆದೋಱಿದುದೆಂದು ನಾಡೆ ಬಿ-।
ನ್ನವಿಸಲೊಡಂ ವಸಂತಕನದೇಂ ಗುಡಿ ತೋರಣಶೋಭೆ ಪೊಯ್ವ ಬ-
ದ್ದವಣಮಳುಂಬಮಾದುದೊ ನಿಕೇತನದಲ್ಲಿ ಮನೋಜರಾಜನಾ ॥೧೦೪॥

ಸೊಡರ ಬೆಳಗಿನೊಳ್ ಕೊರಗುವ ಜಾದಿಯುಂ ತುಂಬಿಯೊಳ್ ಪಗೆಗೊಂಡ ಸಂಪಗೆಯುಂ
ಮುಡಿಯೆ ಸೊಗಯಿಸಿದದಿರ್ಮುತ್ತೆಯಲರಂ ಮಸಿಯೊಳ್ ಸವನಾದ ಗೊಜ್ಜುಗೆಯುಂ।

೧-೧(ಆ,ಬ) ಬಕುಳದ. ೨-೨(ಅ) ಪೂಗಳ. ೩-೩(ಅII) ಮಾಲಾಭಾರಿಣಿ; (ಬ) ಮಾಲಾಧಾರಿಣಿ.

ಸುಡಿಮುಲಿಕ್ಕುಮೆ ಪೂಗಳೆ ಲಕ್ಕ[೧]ಮೊಳೆಂದೆಟ್ದು[೧] ಕಾಮನೊಡ್ಡೋಲಗದೊಳ್
ಮುಡಿಗೆಯಿಕ್ಕಿಯುಂ ಕೈಯನೆತ್ತಿ ಪೂಗಳ್ದುಂ ತಣಿಯನೆ[೨]ಮಧುನೃಪಂ[೨]
ಮಲ್ಲಿಗೆಯಂ ||೧೦೫||

ವ|| ಎಂದು ಸಂತಸಂಬಡಿಸಿ,

ಪರಿಮೆ ಪಸುರ್ಪ್ಪು ಬೆಳ್ಪಡರೆ ಬಲ್ಮುಗುಳೊಳ್ ಪೊರೆದೋರೆ ತೆಂಬೆಲರ್
ಪೊರೆಪೊರೆಯುಂ ಸಡಿಲ್ಚೆ ನಡು ಪೊಂಗಿರೆ ಮಲ್ಲಿಗೆಗಳ್ ವಸಂತದೊಳ್|
ಬಿರಿಮೊಡೆ ನಲ್ಲರಂ ನೆನೆದು ನಲ್ಲರ ಮೆಲ್ಲೆರ್ದೆಗಳ್ ನಿರಂತರಂ
ಬಿರಿವುವವೆಂತೊ ಮಲ್ಲಿಗೆಗೆ ನಲ್ಲರ ಮೆಲ್ಲೆರ್ದೆ ಮೇಳಗೊಂಡುವೋ ||೧೦೬||

ವ|| ಎನೆ ಮತ್ತೊರ್ವಳ್ ಮಾಲತೀನವಮಾಲಿಕಾಕುಸುಮಸುಕುಮಾರೆ,

ರತಿಗೆ ಮುಡಿಯಲ್ಕೆ ಮದನಂ-
ಗೆ ತುಱುಂಬಲ್ಕಿರ್ದ್ದ[೩]ದೆಂದು ವಧು[೩] ಸುಱಿವ ಮಧು-|
ವ್ರತಮುಮನಲಿವವನೆಂ[೪]ಬೀ
ಪ್ರತೀತಿಗಿದುವಂತಿಯಂತೆ ನೋಂತಲರೊಳವೇ ||೧೦೭||

ವ|| [೫]ಮತ್ತೊರ್ವಳ್ ಮಾಧವೀಲತಾಲಲಿತೆ,

ಇದಿರೊಳ್ ನನೆದೋರಿ ವಸಂ-
ತಮೂರ್ತಿ[೬]ಯೆನೆ ತಾನೆ ನೆಗಟ್ದ ಮಾಧವಿಯೆನೆ[೬] ಸಂ-|
ಪದಿಮೂರ್ತ್ತಿಯ ಪೂಗೊಂಚಲ
ಪುದುವಿನೊಳೆಱಗಿದ ಮದಾಳಿಗಳ್ ಮಱೆ[೭]ದಪ್ಪುವೇ ||೧೦೮||

ವ|| ಮತ್ತೊರ್ವಳ್ ಮಾಲತೀ[೮]ಶ್ಯಾಮಳಾಂಗಿ[೮],

ಪೊಸತಲರ್ದ ಪದದೊಳುಣ್ಮುವ
ಪೊಸ[೯]ಗಂಪಂ ಪಡೆದು[೯]ಪೊಟ್ಟುಱೊಳ್ ಜನಮಂ ಸೋ-|
ಲಿಸುಗುಮನಂಗಾಮೃತಸೌ-
ಖ್ಯಸಾರಮಂ ಜಾದಿಯಲ್ಲದೇಂ ಪಡೆದಪುದೇ ||೧೦೯||

ವ|| ಮತ್ತೊರ್ವಳ್ ಕುಂದಕುಟ್ಮಲ[೧೦]ದಶನೆ[೧೦],

ಪುಲ್ಲಶರಂಗಿಸುವೆಡೆಗಿವೆ
ನಲ್ಲಂಬುಗಳೆನಿಸಿ ತುಱುಗಿ ಮಲರ್ದಲರ್ದೆಸೆವೀ -|

೧-೧(ಚ) ಮನೆಂದೆಯ್ದೆ. ೨-೨(ಚ) ಮಧನನುಂ. ೩-೩(ಅII) ವೆಂದಮುದ್ದರ್; (ಬ) ಮೆದೆಂಮಯ್ಯ. ೪(ಅ) ವೆಂ. ೫-೫(ಚ) ಮತ್ತೊರ್ವಳ್ ಮಾಳತೀಶ್ಯಾಮಳಾಂಗಿ; ೬-೬(ಚ) ಯನೆ ನೆಗಟ್ದ ಮಾಧವೀಲತೆಯೆನೆ. ೭(ಚ) ಮ. ೮-೮(ಅ) ಶ್ಯಾಮಾಂಗಿ (ಚ) ಶ್ಯಾಮಳಕೋಮಳಾಂಗಿ. ೯-೯(ಅ) ಗಂಪಂ ಪಡೆಯೆ; (ಬ) ಗಂಪಪ್ಪರೆಯೆ. ೧೦-೧೦(ಚ) ರದನೆ.

ಪೊಣ್ಮಿಪುವೊಲಿಸಿದ ನಲ್ಲರ
ಉಣ್ಮಿಪುವಾರಾರ ಮನಮುಮಂ ಸೋಲಿಸವೇ ||೧೧೦||

ವ|| ಎನೆ ಮತ್ತೊರ್ವಳ್ ಸುರಭಿಪಾಟಲೀಪಾಟಲದಶನವಸನೆ,

ಕಂಪು¹ಗೊಳಲ್ ತೆಗೆದುಸಿರಿನಿ¹ -
ನಂ ಪೊಱಮಟ್ಟಿನಳ ತುಱಿಯ²ನೆಯ್ದಲೊಡಂ² ಮು-|
ನ್ನಂ ಪಳಿಯುವಪ್ಪ ಪೂಗಳ
ಕಂಪಿನೊಳೇಂ ಪೊಗಱ³ ಪಾಟಳೀಪರಿಮಳಮಂ ||೧೧೧||

ವ|| ಎನೆ ಮತ್ತೊರ್ವಳಭಿನವಸುರಭಿಕುಸುಮಸೌರಭೆ,

ಎಸಳ್ಗಳನೆಯ್ದೆ ಕಂಡರಿಸಿ ಮುತ್ತಿನೊಳಲ್ಲಿ ಸುವರ್ಣಚೂರ್ಣಮಂ
ಪಸರಿಸಿ ಕೇಸರಾಕೃತಿಯೊಳಲ್ಲಿಗೆ ಕರ್ಣಿಕೆಯಂದಮಾಗೆ ಕೀ-|
ಲಿಸಿ ಪೊಸತಪ್ಪ ಮಾಣಿಕದ ⁴ನುಣ್ಬರಲಿಂ⁴ ಮಧುಮನ್ಮಥಂಗೆ ಬ-
ಣ್ಣಿಸಿ ಸಮೆದಂತೆ ತೋಱುವುದು ಪೂಗಳೊಳೇಂ ಸುರಪೊನ್ನೆ ಚೆನ್ನನೋ ||೧೧೨||

ವ|| ಎನೆ ಮತ್ತೊರ್ವಳ್ ಕರ್ಣಿಕಾರ⁵ಕುಸುಮವರ್ಣೆ⁵,

ಪರಿಣಯನೋತ್ಸವಂ ರತಿಗನಂಗನೊಳಾಗೆ ವಸಂತಕಾಂತೆಯರ್
ನೆರೆದು ದಿಗಂಗನಾ ಸಮಿತಿಗಟ್ಟಿದುವೋಲ್ ಕುಡುವಲ್ಲಿ ಕೇಸರಂ |
ಬೆರಸಿದ ಪೊನ್ನ ಬಾಯಿನದ ಬಟ್ಟಲಿವೆಂಬಿನಮಾರ್ದ್ರಕೇಸರಂ
ಬೆರಸಿದ ಚೆಲ್ವ ⁶ತಳ್ತೆಸಳೊಳೇ⁶ನೆಸೆದಿರ್ದ್ದುದೊ ಕರ್ಣಿಕಾರದಾ ||೧೧೩||

ವ|| ಎನೆ ಮತ್ತೊರ್ವಳ್ ಚಂಪಕ⁷ಸುರಭಿ⁷ಗಂಧಿ,

ಪಡೆವೊಡೆ ಕಂಪಂ ಬಣ್ಣಂ
ಬಡೆಯವು ಬಣ್ಣಮನೆ ಪಡೆದುವಪ್ಪೊಡೆ ಕಂಪಂ |
ಪಡೆಯವು ಬಿದಲರ್ಗಳೆರಡುಮ-
ನೊಡೆವೆಳೆದೀ ಚಂಪಕಕ್ಕೆ ಪೂಗಳ್ ದೊರೆಯೇ ||೧೧೪||

ಗಟ್ಟಿನೆ ಕೊಳೆ ಕಡುಗಂಪಿನೊ-
ಳಟ್ಟಿಮೆಗೊಳಗಪ್ಪೆವೆಂದು ಮಧುಪಂಗಳ್ ತಂ-|

---

೧-೧ (ಚ) ಗೊಳಲ್ದುಸಿರ್ದಸಿರಿನಿ. ೨-೨ (ಅII,ಬ) ನಲೆಯಲೊಡಂ. ೩ (ಬ) ಳೆ. ೪-೪(ಬ) ನುಣ್ಬಲರಂ; (ಚ) ನುಣ್ಬರಲಂ ೫-೫ (ಚ) ಕುಸುಮಸುಕುಮಾರವರ್ಣೆ. ೬-೬ (ಚ) ತಳ್ತೆಸಳದೇ. ೭-೭ (ಚ) ಕುಸುಮ.

ಪುಟ್ಟಿಪೆಯಿ ಜಾತಪಾಗಿರೆ
ನಿಟ್ಕಿರಿಸಿದುವ್ವೆಂತು೧ ಚಂಪಕಕ್ಕೈಱಗದುವೇ ||೧೧೫||

ವ|| ಎನೆ ಮತ್ತೊರ್ವ್ವಳ್ ಕೇತಕೀವಲಧವಳಲೋಚನೆ,

ಭುವನದೊಳಿಪ್ಪ ಮುಟ್ಟದಲರಾವುದೆಱಂಕೆಯ ಗಾಳಿ ಮುಟ್ಟೆ ಕಂ-
ದುವುದೆಸಳೊಪ್ಪ್ರೆ ಪೀಲೊಡವಾಗಳೆ ಸೋರ್ವ್ವವು ಕಂಪು ಸೋಂಕೆ ಕಂ-|
ದವು ದಳದೆಯ್ದೆ ಪೀರೆ ತವದುಣ್ಮುವ ಸೌರಭಮೆಂದು ಪೀರ್ದ್ದ ಪೀ-
ರ್ದವಜಱದೇಂ ತೆಱಂದಿರಿಪು ಪಾಯ್ದಪೊ ೨ಕೇತಕಿಯೊಳ್೨ ಮದಾಳಿಗಳ್ ||೧೧೬||

ಎಸಳಂ ಮುಟ್ಟಲೊಡಂ ತ-
ನ್ನ ಸೌರಭಂಗೆಟ್ಟ ಸೆಗಟ್ಟ ಕತ್ತುರಿವಣ್ಣಂ |
ಮಸಿಗಮೆಣೆಯಪ್ಪುದೆನೆ ಬ-
ಣ್ಣಿಸುವಂ ಕೇದಗೆಯ ಕಂಪನೇವಣ್ಣಿಸುವಂ೩ ||೧೧೭||

ವ|| ಎನೆ ಮತ್ತೊರ್ವ್ವಳ್ ಸಿಂಧುವಾರಕುಸುಮಸುರಭಿನಿಶ್ವಾಸೆ,

ಉನ್ನತಮಾಗಿರೆ ಸೊರ್ಕ್ಕಿ-
ದ್ದುನ್ನತಕುಚೆಯರ ವಿಲೋಚನಾರುಣರುಚಿಯಂ |
ತನ್ನಸಳ್ಗಳಿನನುಕರಿಸುವ
ಚೆನ್ನೈದಿಲ ಕಂಪನೆಯ್ದಲಾರ್ಪ್ಪವೆ ಪೂಗಳ್

ವ|| ಎನೆ ಮತ್ತೊರ್ವ್ವಳ್ ನೀಲೋತ್ಪಳದಳನಯನೆ,

‡ ಅಲರ್ದರೆಗಳಿಗೆಯೆ ಜಾದಿಯ
ಮಲೆಪುಂ ಮಲ್ಲಿಗೆಯ ಪೊಂಕಮುಂ ಬಳಿಕವನಾರ್|
ತಲೆಯೊಳ್ ತಾಳ್ದುವರೆಂದೇ -
ನಲೆದುದೊ ಸಿಂದುರದ ತವದ ತನಿಗಂಪಿಂದಂ ||೧೧೮||

ವ|| ಎನೆ ಮತ್ತಮೊರ್ವ್ವಳ್ ವಕುಳಮುಕುಳಾಸವವದನಪರಿಮಳೆ,

ಮುಕ್ಕುಳಿಸಿಯುಗುಟ್ಟ ಮಧುವಿಂ
ಮಿಕ್ಕೆಸೆವಾಮೋದಮಿದಱ ತಣ್ಗಂಪಿನೊಳೊಳ † |

೧(ಚ) ತೆ. ೨-೨ (ಅ,ಬ) ಕೇತಕದೊ. ೩(ಅII) ವೆಂ; (ಬ) ಪೊಂ.

‡ (ಅ) ಪ್ರತಿಯಲ್ಲಿ ೧೨೩ ರ ಮುಂದೆ ಬಂದಿದೆ.
† ಈ ಚರಣದ ಅಂತ್ಯದಲ್ಲಿ ಒಂದು ಮಾತ್ರೆ ಹೆಚ್ಚಾಗಿದೆ.

ಪೊಕ್ಕುವೆಸೆ ಮಧುಪ ಕಂಪಂ
ಮುಕ್ಕುಳಿಸಿದ ವಕುಳಮಾಲುಮಂ [1]ಸೋಲಿಸದೇ[1] ||೧೨೦||

ವ|| ಎನೆ ಮತ್ತೊರ್ವ್ವಳ್ ಶತಪತ್ರ[2]ಕುಬ್ಜ[2]ಕುಸುಮಮಾಳಾಕೋಮಳೆ,

ಮಗಮಗಿಸುವ ಕಂಪಿನಕೊಳೆ
ತಗುಳ್ದುಂ ಪೊಲ್ಪಿಸೆಯೆ ಮನಮನಳಿಗಳ ಬಳಗಂ |
ಜಗದ ಮನಮೊಡನೆ ಸೇಪಂ-
ತಿಗೆಗಂ ಗೊಜ್ಜುಗೆಗಮಲ್ಲದೇನೆಱಗುಗುಮೋ ||೧೨೧||

ವ|| ಅಂತುಮಲ್ಲದೆ,

ಬಿದಿರ್ದೊಪ್ಪುವುದೆಯ್ದೆ ತುಱುಂ-
ಬಿದೊಡೊಪ್ಪುವುದೆಸಳ [3]ಪೊಲ್ಪಿನಿಂ[3]ದೊಪ್ಪುವುದು-|
ಣ್ಮಿದ ತಣ್ಗಂಪಿಂದೊಪ್ಪುವು-
ದದಱಿಂದಲರೊಳಗೆ [4]ಗೊಜ್ಜ[4]ಗೊಜ್ಜುಗೆಯೆ ವಲಂ ||೧೨೨||

ವ|| ಎನೆ ಮತ್ತೊರ್ವ್ವಳ್ ಕಸ್ತೂರಿಕಾಕದಂಬಚುಂಬಿತಕಬರೀಭಾರೆ,

ಪರಿಮಳಿತಸೌಂದರಂ ಬಂ-
ಧುರಗಂಧಂ ಮದನರಾಗವರ್ಧನಕರಮೀ-|
ಮರುವಂ ಕಬರ್ಣಳಮುಮಿರೆ
ಮರುಳಲ್ಲವೆ ಕುಸುಮನಿಚಯದೊಳ್ ಪಾಯ್ವಳಿಗಳ್ ||೧೨೩||

ವ|| ಎಂದು ಭಿನ್ನರುಚಿಗಳಾಗಿ ತಂತಮ್ಮ ಮೆಚ್ಚಿನಿಚ್ಚೆಯ ಪೂಗಳನೆ ಪೊಗೞೆ ಮತ್ತೊರ್ವ್ವಳ್ ಕುಂಕುಮಪಂಕಾಂಕಿತ[5]ವದನಮೃಗಾಂಕಬಿಂಬೆ[5],

ಲಲನಾಮುಖೇಂದುಲಾವ-
ಣ್ಯಲೀಲೆಯಂ ಪಡೆವ ಬಣ್ಣದಿಂ ಕಂಪಿಂದೇ-|
ನಲೆಮುದೊ [6]ಪೈತಿಕೆ[6]ದಂತಿರೆ
ತಲೆಗೇಱುವ ಕುಸುಮನಿಚಯಮುಮಂ ಕಾಶ್ಮೀರಂ ||೧೨೪||

೧-೧ (ಚ) ಸೊಕ್ಕಿಸದೇ. ೨-೨(ಅ) ಕುಬ್ಜಿಕಾ. ೩-೩(ಅ) ಬಲ್ಪಿನಿಂ. ೪-೪ (ಇ,ಬ) ಗೊಜ್ಜೆ. ೫-೫ (ಚ) ಕದಂಬಚುಂಬಿತಮೃಗಾಂಕವಕ್ತ್ರೆ. ೬-೬(ಚ) ಬಯ್ತುಗ.

ವ|| ಎಂದು ಬಗೆಗೆವಂದ ಪೂಗಳೊಳ್ ಪೂದುಡುಗೆಯಂ ಮಾಡಿ ವಸಂತಕಾಂತೆಯುರಂತೆ ನೆಱೆಯೆ ಕಯ್ಗೆಯ್ದಾಗಳ್,

ಬಸವ ತಳಿರ್ ಕಳಿಕೆ ಮುಗುಳ್
ನನೆ ಬಿರಿಮುಗುಳಲರ ಗೊಂಚಲೆಂಬಿವು ವನಜಾ- |
ನನೆಯರ ಪೂದುಡುಗೆಗೆ [೧]ವು-
ಟ್ಟೆನಾಮವೇಂ ಪೆಂಪೊ ಭರತನಂತಃಪುರದಾ ||೧೨೫||

ವ|| ಆಗಳಂತಃಪುರಕಾಂತಾಪ್ರಸಾಧನಕುಸುಮಾಮೋದಮತಿಪ್ರಮೋದಮಂ ಪಡೆಯೆ,

ಅವಚಱಿದೊಂದೆ ಪದ್ಮದೊಳೆ ನೇಲ್ದೊಳಗಾದಳಿಗೆಮ್ಮ ವೃತ್ತಿ ಸಂ-
ಭವಿಸದು ಕಲ್ಪವಲ್ಲಿ ವಿಟರಿಂ[೨] ವಿಟವೃತ್ತಮನೆಮ್ಮೊಳಲ್ಲಿಗಾ- |
ಮೊವಜರೆಮೆಂಬವೋಲ್ಮೊರೆವ ಮೆಲ್ಪೆಸೆಯುತ್ತಿರೆ ಸೂಱೆಸೂಱೆದೇಂ
ಸವಿದುವೊ ಬಣ್ಣವಣ್ಣಿಗೆಯ ಪೂಗಳ ಸೌರಭಮಂ [೩]ಮದಾಳಿಗಳ್[೩] ||೧೨೬||

ವ|| ಆಗಳಾಕೆಗಳಲಕ್ತಕಾರಕ್ತಮಣಿನೂಪುರಕ್ವಣಿತಸುಭಗವಾಮಪಾದಪ್ರಹರದೊಳಶೋಕತರುಗಳಂ ಕುಸುಮಿಸಿಯುಂ, ವದನಸರಸಿಜಾಸವಸೇಕದೊಳೆ ವಕುಳಕುಜಂಗಳನಲರ್ಚಿಯುಮುನ್ನತಕುಚತಟಾಘಾತದೊಳೆ ಕುರವಕಂಗಳಂ ಪುಷ್ಪಿತಂಗಳಂ ಮಾಡಿಯುಂ, ಕ್ಷೀರಗಂಡೂಷಸೇಚನದೊಳೆ ಚಂಪಕವಿಟಪಿಗಳನಲರ್ಚಿಯುಮಾಯತಧವಳಾಪಾಂಗಸಂಗದೊಳೆ ತಿಳಕಭೂರುಹಂಗಳನಭಿನವಲತಾಂತಂಗಳಂ ಮಾಡಿಯುಮಿಂತು ನಾನಾವಿಧಕ್ರೀಡೆಯಿಂದುಪವನಕ್ರೀಡೆಯಂ ನಿರ್ವರ್ತಿಸಿ,

ಇದು ಕಡುನಾಣ ಪುತ್ತು ವಲಮಿಂ ನೆನೆಯುತ್ತಿರಿಮೆಮ್ಮನೆಂಬುದಾ-
ವುದು ಗುಣಮೆಮ್ಮೊಳಾಗೆ ನೆನೆದಪ್ಪಿರಶೋಕಮೆ ವಾಮಪಾದದಿಂ- |
ದೊದೆದುದೊ ಕೇಸರದ್ರುಮಮೆ ನಿನ್ನುಮನಾನನಸಿಂಧುವಿಂದೆ ಪೂ-
ಟ್ದುದೊ ಕೃತಮಾವುದಿಂ ಮುಱಿವುದೆಮ್ಮ ಮದೋತ್ಕಟಚೇಷ್ಟಿತಂಗಳಂ ||೧೨೭||

ವ|| ಎಂದಶೋಕವಕುಳಪಾದಪಂಗಳಂ ಬೀಱೆಕೊಂಡು,

ನನೆಗಳ ಗೊಂಚಲಂ ತಳಿರ ತೊಂಗಲನಾಡುವ [೪]ಚೆಲ್ವನಪ್ಪ[೪] ಕೊಂ-
ಬಿನ ಮಿಡಿಯಂ ತೆರಳ್ಚಿ ತೆಗೆದೋವದೆ ಕಾಯದೆ ಕೂರಕರ್ಮದಿಂ |

೧ (ಅ,ಬ) ಮೊ. ೨ (ಅ) ರೀ. ೩-೩ (ಅII,ಬ) ಮಧುವ್ರತಂ. ೪-೪(ಚ) ಬೆಳ್ವಳಪ್ಪ.

ಕೊನೆಸುಱಿವನ್ನೆಗಂ ಪಱಿದು ನೋಯಿಸಿ ಕಾಡಿದೆವಿನ್ನದೊಂದುಮಂ
ನೆನೆಯದಿ ನೀನುಮಾದುದೊಡನಿರ್ದಿರವಂ ನೆನೆ ಬಾಳಚೂತಮೇ ॥೧೨೮॥

ವ॥ ಎಂದು ಮಾಕಂದಮುಮಂದುಹದಮನಪ್ಪುಕೆಯ್ದು,

ಭೃಂಗಗಳೊಕೆಮ್ಮೊತ್ತಾವೀ
ಸಂಗಡಿಸಂ ನೀಮೆ ಮನದೆಗೊಂಡಿಮ್ಮ ಕಿಸುರ್ಗ ।
ಪಿಂಗುಗಗಲ್ದಿದೆಯೊಳ್ ಕೆಳೆ
ಸಂಗಳಿಸುಗೆ ನಿಮಗಮೆಮಗಮಿಂ ಲತೆಗಳಿರಾ ॥೧೨೯॥

ವ॥ ಎಂದು ವನಲತೆಗಳನುನಯಿಸಿ,

ಪಡೆಮತ್ತಂಸವತಂಸಶೋಭೆಗೆ ಭವತ್ಬಾಲಪ್ರವಾಲೋಲ್ಲಸನ್-
ನ್ಮೃದುಪುಷ್ಪಸ್ತಬಕಂಗಳಂ ಪಱಿದೆವಿನ್ನಾದೋಷಮಂ ಕೊಳ್ಳದಿ-।
ರ್ಪುದು ಕೇಳೀವನಪಾದಪಂಗಳಿರ ಚಿತ್ತಂಗೊಂಡು ಬೀೞ್ಕೊಂಡು ರಾ-
ಗದೆ ನಿಮ್ಮಂ ಬಲಗೊಂಡು ಪೋಪ ಗುಣಮಂ ಕೊಳ್ಳಿಂ ಮನಃಪ್ರೀತಿಯಿಂ॥೧೩೦॥

ವ॥ ಎಂದು ವನತರುಗಳನೊಡಂಬಡಿಸಿ,

ಬನದ ಪಡಿಯಱನನಂಗಂ
ನಿನಗಿತ್ತೊಳಿಡೆ ಪುಗಲಿವೆಂಬುದೇಂ ದೋಷಮೆ ಚಿಃ ।
ನೆನೆಯುವದಂ ನಿನ್ನಿಂಚರ-
ಮನೆ ಮನದೊಳ್ ನೆನೆವೆವಾಗಳುಂ ಪರಭೃತಮೇ ॥೧೩೧॥

ಇರು ಮೌನವ್ರತಮಂ ಪೂ-
ಣ್ದಾರಣ್ಯದೊಳಗಾರ್ಗೆ ಮೆಱೆದಪೈ ನಿನ್ನೆಸೆವಿಂ-।
ಚರಮಂ ಕಳಕೋಕಿಳ ಕಿ-
ನ್ನರವೀಣಾಕ್ವಣಿತದಿಂಪನನುಕರಿಸುವುದಂ ॥೧೩೨॥

ವ॥ ಎಂದು ಕೋಕಿಳಕುಳಮಂ ವಿಸರ್ಜಿಸಿ,

ಪೊಸತಲ್ತು ನಿನಗೆ ಪೂವಿನ
ಪೊಸಗಂಪೀಬನದೊಳೀಮೃಗೋದ್ಭವಗಂಧಂ ।

೧-೧(ಬ) ಳು ನಿಂವೊಳುಕಡು । ಸಂಗಮಮೆಮಗದನೆ ಮನದೆಗೊಂಡೆಂಮ ಪಿಸು॥
೨(ಅII) ತ. ೩(ಅ) ಗೆ. ೪(ಅ) ತ್ತೆ. ೫-೫(ಅII) ಕೊಂ । ಡರಣ್ಯ; (ಜ) ತಳೆ । ದರಣ್ಯ.

ಪ್ರಸವರಸೋಲಗಿಸಿದವಿದು
ಕುಸುಮಾಸವರಸದ ತಣಿಪು ನೀನಳಿಕುಳಮೇ ॥೧೩೩॥

ವ॥ ಎಂದು ಮಧುಕರನಿಕರಮಂ ಬಿಡಿಸಿ,

ಮನದ ಪ್ರೌಢದರ್ಪ್ಪುಗುಂದದೆ ಲತಾಲಯಕೇಳಿವಿಹಾರದಲ್ಲಿ ನಂ-
ದನವನವಿಭ್ರಮಭ್ರಮಣದಲ್ಲಿ ಸರೋವರದೀರ್ಘಿಕಾಂಬುಮ- ।
ಜ್ಜನಮುತಲೀಲೆಯಲ್ಲಿ ಬಳಲ್ದೊಂದುಗುವೀಗಳಿದೆಮ್ಮ ಪಾಂಗುಗೆಂ-
ಟನಿತದೆಯುಂ ತಗುಳ್ವ ಬಳಲಾರ್ಪ್ಪರೆ ನಿಮ್ಮ ವಿಳಾಸಯಾನದಿಂ ॥೧೩೪॥

ವ॥ ಎಂದತಿಲಲಿತಗಗನಸಮುಚ್ಚಲಿತರಶನಾಕಲಾಪನೂಪುರಕಿಂಕಿಣೀಕ್ವಣಿತಾನುಸಾರಿಯಾಗಿ ಬರ್ಪ್ಪ ರಾಜಹಂಸಮಂಡಳಮಂ ಮಗುಳ್ಚಿ ಬರ್ಪ್ಪಾಗಳ್,

ಪ್ರೋಳೆಯುತ್ತಿರ್ಪ ಪಕ್ಷ್ಮವಿಕ್ಷೇಪದ ಪ್ರೊಳಪುಗಳಿಂದಾನನಶ್ರೀವಿಲಾಸಂ-
ಗಳನಂಗೋಪಾಂಗದೊಳ್ ಸಂಗಳಿಸುವ ಪಲವುಂ ಭಂಗಿಯಿಂ ಕೂಡಿ
ನೀಲೋ-।
ತ್ಪಲಷಂಡಂ ಪದ್ಮಷಂಡಂ ಲಲಿತವನಲತಾಷಂಡಮುಂ ತಂಡತಂಡಂ-
ಗಳನೀಬಂದಪ್ಪುದೆಂಬಂತೆಸೆದುದು ಭರತಾಂತಃಪುರಸ್ತ್ರೀಸಮೂಹಂ ॥೧೩೫॥

ವ॥ ಅಂತು ವನವಿಹಾರಾನಂತರಂ ಭರತೇಶ್ವರಚಕ್ರವರ್ತ್ತಿ ವನಕುಸುಮಪಲ್ಲವೋಪಪಾದಿತ ಲೀಲಾಪ್ರಸಾಧನಂ ಮದಾಂಧಗಂಧಸಿಂಧುರಲೀಲೆಯಿಂದಮಂತಃಪುರಕರಿಣೀಗಣಂ ಬೆರಸು ಗಂಗಾಜಲಕ್ರೀಡಾಸಕ್ತಚಿತ್ತನಾಗಿ ತತ್ಪರಿಸರಪ್ರದೇಶಮನೆಯ್ದೆವಂದು ಚಂಚತ್ಪಂಚರತ್ನಂಗಳೊಳಂ ಕೆದಱಿದ ಕಾಳಾಗರುಕಾಶ್ಮೀರಕಸ್ತೂರಿಕರ್ಪೂರಯಕ್ಷಕರ್ದ್ದಮಕ್ಷೋದದೊಳಂ ನದೀತರಂಗಂಗಳಂ ವಿಚಿತ್ರವರ್ಣಂಗಳಂ ಮಾಡಿ,

ಯುವತಿಜನಶಂಕೆಯಿಂ ಮ-
ನ್ನವಯುವದೊಳೆ ಪೊಕ್ಕು ಕಳಿದು ಸುರಸರಿದಂಭಃ ।
ಪ್ಲವದೊಳೆ ಚಕ್ರಧರಂ ದು-
ಗ್ಧವಾರ್ದ್ಧಿಯೊಳ್ ನಿಂದ ಕನಕಗಿರಿಯನೆ ಪೋಲ್ತಂ ॥೧೩೬॥

ವ॥ ಅಂತು ಚಕ್ರಧರಜಲಕ್ರೀಡಾಪ್ರಾರಂಭಮಂ ಕಂಡು ನೀರಾಟಕ್ಕೆ ತಕ್ಕ ಪಸದನಂಗೊಂಡು ತಂಡತಂಡದಿಂ ಪುಗುವಾಗಳ್,

---

೧-೧(ಜ) ಪೋಗು. ೨(ಅ) ಜ. ೩(ಜ) ಯುಂ. ೪-೪(ಜ) ಪಶೋಭಿತ. ೫(ಬ) ಯಿಂ. ೬(ಜ) ನ.

ಕಳಹಂಸೀಶ್ರೇಣಿ ನಿತಂಬೋತ್ಸಂಗರುಚಿ ಕನಕಾಂಭೋಜಿನೀಲಕ್ಷ್ಮಿ ಭೃಂಗೀ-
ವಳಯಂ ಶ್ರೀ ಚಕ್ರವಾಕಸ್ತನಯುಗಳಸನಮಂತಃಪುರಸ್ತ್ರೀಸಹಸ್ರಂ-।
ಗಳ ಮೆಯ್ಯೊಳ್ ತಾನೆ ತಳ್ತೊಪ್ಪುತ್ತಿರ್ದುದು ಪೆಸರ್ಗೊಳ್ಪಿಗ್ಗರಾರೆಂಬಿನಂ ನಿ-
ಮ್ಮಳ ಹಾರಂ ಸ್ವಚ್ಛನೀರಂ ಸೊಗಯಿಸಿತಂದು ಬೇಱೆಕೊಂಡು ಗಂಗಾಪ್ರವಾಹಂ ॥೧೩೭॥

ಜಳಕೇಳಿಯೊಳಧಿಪನನಿರ್ದೆ-
ಗೊಳಿಸಿದುದಂತಃಪುರೀಜನಂಗಳ ಲೀಲಾ-।
ಶಿಂಜಿತಲಲಿತವಿಸ್ವ-
ಧ್ವನಸ್ಮಿತವಿಭ್ರಮಾದಿಗುಣಂಗಳ್ ॥೧೩೮॥

ಸರಸಿಜನೀಲೋತ್ಪಲಕರ-
ಕರಮಂಸೀಮವದನರೂಪದಿಂ ನೆಱೆದಂತಃ-।
ಪುರಕಾಂತಾಕರತಳದೊಳ್
ಬರಮೆಸೆದುವು ಕನಕಶೃಂಗಕಂಗಳ್ ಪಲವುಂ ॥೧೩೯॥

ಜಲಕೇಳಿಸಿಮಿರ್ಗೆ ಭರತನ
ಲಲಿತಾಂತಃಪುರದೊಳೆಂಬ ತನ್ನಬ್ಬಿಱಿಕೊಳಾ- ।
ಜಲದೇವಿ ಬೆಸನೆ ಗಂಗಾ
ಜಲಮಾಯ್ತು ನಿತಂಬಿನೀನಿತಂಬಪ್ಪಯಸಂ ॥೧೪೦॥

ನವವಧುವ ಶಂಕೆಯುಂ ಕಳೆ-
ವ ವಿದಗ್ಧವಿಟಂಬೊಲಲೆವ ೨ತೆರೆಗಳ್ ಮೆಲ್ಪಂ೨ ।
ಬವರಿಸಿ ಸೋಂಕುತ್ತುಂ ಕಳೆ-
ದುವು ಘನಕುಚಕಳಶಕುಂಕುಮಸ್ಥಾಸಕಮಂ ॥೧೪೧॥

ಅಲಘುನಿತಂಬದ ಪೊಯ್ಲೊಳ್
ನೆಲೆ ಮೊಲೆಯಳ್ಕೇಱಿನೊಳ್ ತರಂಗಂಗಳ್ ೩ತೂ- ।
ಳ್ದಲಱುಗುಮವಱಳ್ಕೇಱಿ೩ನೊ-
ಳಲಱುಗುಮೆರ್ದೆ ತೆರೆಗಳಳಱು ತೂಳ್ವುದು ಪಿಱಿದೇ ॥೧೪೨॥

ಮಂದರಪರ್ವತಮುಂ ಸುರ
ಸೌಂದರಿಯರ್ ದುಗ್ಧಜಲಧಿ ತಳಿಪಂತೆವೊಲಾ ।

---

೧(ಅ) ದು. ೨-೨(ಅ) ತೆರೆಗಳೆ ಮೆಲ್ಪಂ. ೩-೩(ಅ,ಬ) ತೂಳ್ದ ಳಱಿದವವಱಳ್ಕೇಱು.

ಸಂದೋಹಮುಮಂತಃಪುರ
ಸೌಂದರಿಯರ್ ತಳಿದರಾದಿದೇವಾತ್ಮಜನಂ ||೧೪೩||

ವ|| ಆಗಳಮೃತಕಿರಣನಮೃತ[೧]ಜಲಂಗಳಿಂ[೧] ಕುಮುದಿನಿಗಳಂ ತಳಿವಂತೆ,

ಕಳಿಕಾಸಂದೋಹಮುಂ ಪೊಣ್ಮುವ ಪುಳಕಚಯಂ ಪಲ್ಲವೋಲ್ಲಾಸಮುಂ ಕೆಂ-
[೨]ದಳಮೆತ್ತಿತ್ತಂ[೨] ಪೊದಳ್ದುರ್ವರಲರ್ಗಳನಲರ್ಗಣ್ ಪೋಲ್ತು ಕೈಮಿಕ್ಕು ಚೆಲ್ವಿಂ |
ಪೊಳೆಯುತ್ತಿರ್ಪನ್ನೆಗಂ ಕುಂಕುಮದ ಕದಡಿನೊಳ್ ಕೆಂಕಮಾಗಿರ್ದ ನೀರಂ
ತಳಿದಂ ಮದ್ವಾಂತಕಾಂತಾಲತಿಕೆಗಳನತಿಪ್ರೀತಿಯಿಂ ರಾಜರಾಜಂ ||೧೪೪||

ಸುಕ್ಕಿರ್ದಳಿಮುಡಿಗುಡಲ್ ನಸು
ಸುಕ್ಕಿದ ಕುಚಕೂಚುಕಂ ಬೆಳರ್ತ್ತಧರಂ ನೀರ್ |
ಪೊಕ್ಕಣಬಿಯೊಳ್ ಜೋಲ್ದು ಕ್ಕಡೆ
ಸಾಕ್ಷಿಯೊಳೇಂ ನೃಪನಮನಮನಳವಡಿಸಿದುದೋ ||೧೪೫||

ಕಳೆದುದು ಪತ್ರಭಂಗದ ಬೆಡಂಗುಗಳಂ ಕುಟಿಲಾಲಕಂಗಳಂ
ಬಳೆಯಿಸಿದತ್ತು ಕಣ್ದೆಸೆವ ರಾಗಮು[೪]ನೆಯ್ದಿಸಿ[೪]ಕೇಶಹಸ್ತಮಂ |
ಚಳಯಿಸಿದತ್ತು ಮೆಯ್ಗೆ ಪುಳ[೫]ಕೋದಯಮಂ[೫] ಪಡೆದತ್ತು ತಲ್ಲತಾ-
ಲಳಿತೆಯ[೬]ಗಿತ್ತುದಿಂತು[೬] ಜಲಕೇಳಿ ಮನೋಭವಕೇಳಿಲೀಲೆಯಂ ||೧೪೬||

ಅಂತು ಬೆಳರ್ತಧರಂ ಕ-
ಣ್ಣಿಂ ತುಳ್ಕುವ ಕೆಂಪು ಸರದ ನಡುಕಂ ಮಿಗೆ ತ-|
ನ್ನಂತಃಪುರಲಲನೆಯರ್ಗೆ ಲ[೭]—
ತಾಂತದ ವಿಭವಮನೆ ಮಾಡಿ[೮]ಪತಿ[೮] ಪೊಱಮಟ್ಟಂ ||೧೪೭||

ಮನಸಿಜನೃಪಲೀಲಾಲಾಂಛನಂ ಸ್ವಸ್ತಿಕಂ ಸ್ತ್ರೀ-
ಜನದೊಳೆಸೆದು ನಿಂದತ್ತುತ್ತರೀಯಾಂತರೀಯಂ |
ತೊನೆಯೆ ತೊಲಗಿ ನಿಂದಿರ್ದಲ್ಲಿ ತಂದಿತ್ತುದುಚ್ಚ-
ಸ್ತನದೊಳಮರ್ದಹಸ್ತಸ್ವಸ್ತಿಕಂಗಳ್ ಬೆಡಂಗಂ* ||೧೪೮||

ಮಱಸಿರ್ದಂಬರಮೆಯ್ದೆನಾಂದ ತನುವಂ ಪತ್ತಿರ್ದ ಕಣ್ಗೆಲ್ಲಿಯುಂ
ತೆಱಪಂ ಮಾಡಿ ಮನೋಜಚಕ್ರಿಯ ಜಯಶ್ರೀರಾಜ್ಯಚಿಹ್ನಂಗಳಂ |

೧-೧ (ಅ) ಜಲಲವಂಗಳಿಂ. ೨-೨ (ಅII, ಬ) ಪಳದೊಳ್ಪಿತ್ತಂ; (ಚ) ದಳಮೆತ್ತಂ, ೩-೩(ಅII) ಹಂಸಂ. ೪-೪(ಅ) ನಿತ್ತುದು; (ಬ) ಸುಯ್ದುದು. ೫-೫(ಅ) ಕೋತ್ಕರಮಂ; (ಬ) ಕೋದ್ಗಮಮಂ. ೬-೬ (ಅ) ಗಿಂತುದಾತ್ತ. ೭(ಅ, ಬ) ರ. ೮-೮(ಚ) ತಾಂ.

* ಈ ಚರಣದಲ್ಲಿ ಎರಡು ಮಾತ್ರೆಗಳು ಹೆಚ್ಚಾಗಿವೆ.

ಮೆಱೆದೊಂದಂದದಿನೀಕ್ಷಣಕ್ಕೆ ಪರಮಾನಂದಾಮೃತಂ ಸಾರ್ವಿನಂ
ಮೆಱೆದರ್ ಚಕ್ರಿಯ ಮುಂದೆ ತತ್ಕೃತವಿಚಿತ್ರಾನಂಗಚಿಹ್ನಂಗಳಂ ॥೧೪೯॥

ವ॥ ಅಂತು ಜಲಕ್ರೀಡಾವಿನೋದಂಗಳಂ ನಿರ್ವರ್ತ್ತಿಸಿದಾಗಳ್,

ಉದಿರ್ದಲ್ಲೊಕ್ಕ ವಿಚಿತ್ರಪುಷ್ಪಚಯದಿಂ ತದ್ಗಂಧಸಂಸಕ್ತಷ-
ಟ್ಪದದಿಂ ಸ್ತ್ರೀಕುಚಕುಂಭಕುಂಕುಮರಜಃಕಲ್ಲೋಲದಿಂ ಬಣ್ಣವ-
ಣ್ಣದ ಜೆಲ್ಲಂಗೆಡೆಗೊಂಡು ಚಿತ್ರಿತಪತಾಕಾಲೀಲೆಯಂ ತಾಳ್ದಿನಿಂ-
ದುದು ಗಂಗಾನದಿ ಚಕ್ರವರ್ತ್ತಿಯ ಸಮಸ್ತಾಂತಃಪುರಕ್ರೀಡೆಯೊಳ್ ॥೧೫೦॥

ಧರೆಯೊಳ್ ಸಂದಿರ್ದ್ದ ಗಂಗಾನದಿಗೆ ಜಯಸಮಾರಂಭನಿಕ್ಷೇಪದಿಕ್ಸಂ-
ಚರಣಾಕ್ಷುಣ್ಣಾವಗಾಹಾಗತಕರಟಿಶಿರಃಪೀಠಸಿಂದೂರಪಾಂಸೂ-
ತ್ಕರದಿಂ ಸೀಮಂತಸಿಂದೂರದ ವಿರಚನೆಯಂ ಕೂಡೆ ಮಾಡುತ್ತುಮಿರ್ದ್ದಂ
ಭರತೇಶಂ ತತ್ತಟೀನಂದನವಿಟಪತಟಚ್ಛಾಯವಿಶ್ರಾಂತಸೈನ್ಯಂ ॥೧೫೧॥

ವನಲಕ್ಷ್ಮೀಲೀಲೆಯಂ ತದ್ವನಕುಸುಮದಳಂಕಾರದಿಂ ತಾಳ್ದುತುಂ ಯೌ-
ವನಲಕ್ಷ್ಮೀಲೀಲೆಯಂ ತನ್ನೊಡನೆ ಮೆಱೆಯುತುಂ ತನ್ನ ಶುದ್ಧಾಂತಕಾಂತಾ-
ಜನಮೊಪ್ಪಿರ್ದ್ದಲ್ಲಿ ನಾನಾವನಕುಸುಮಕೃತೋತ್ತಂಸಕರ್ಣಾವತಂಸಂ
ಮನುವಂಶಂ ಶೋಭೆವೆತ್ತಂ ಸುಕವಿಜನಮನೋಮಾನಸೋತ್ತಂಸಹಂಸಂ ॥೧೫೨॥

ವನಕೇಳೀವಿಭವಂ ಸಲೀಲಸಲಿಲಕ್ರೀಡಾವಿಳಾಸಂ ಸಮ-
ಸ್ತನಿಜಾಂತಃಪುರದೊಳ್ ಪೊದಳ್ದಿಸೆಯೆ ಕಣ್ಗೊಂಡುಂ ಮನಂಗೊಂಡುಮಿಂ-
ದ್ರನೆ ಭೋಗೀಂದ್ರನೆ ಖೇಚರೇಂದ್ರನೆ ದಲೀ ಭೂಪೇಂದ್ರನೆಂಬನ್ನೆಗಂ
ಮನುವಂಶಪ್ರಭು ಬೀಡಿನತ್ತ ತಳರ್ದಂ ಸಂಸಾರಸಾರೋದಯಂ ॥೧೫೩॥

ಗ॥ ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರ-
ವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣ್ಣಸೂಕ್ತಿಕಲ್ಲೋಲಮಾಲಾ-
ಕೀರ್ಣ್ಣಕವಿತಾಗುಣಾರ್ಣ್ಣವಪ್ರಣೀತಮಪ್ಪಾದಿಪುರಾಣದೊಳ್-
ದಿಗ್ವಿಜಯಪ್ರಾರಂಭದೊಳ್ ಜಲವನಕೇಳೀವ್ಯಾವರ್ಣ್ಣನ-
ಮೇಕಾದಶಾಶ್ವಾಸಂ ಸಂಪೂರ್ಣಂ.

# ದ್ವಾದಶಾಶ್ವಾಸಂ

ಶ್ರೀವರನೊಡನೆಯೆ ವನಜಳ-
ದೇವತೆಗಳ್ ಬರ್ಪ್ಪುವೆನಿಸಿ ತನ್ನೊಡವರೆ ಮಾ-|
ದೇವಿಯರಿನೆಸೆದನೋ ಧೃತ-
ಲಾವಣ್ಯರಸಂ ಸರಸ್ವತೀಮಣಿಹಾರಂ ॥ ೧ ॥

ವ॥ ಅಂತು ಭರತೇಶ್ವರಚಕ್ರವರ್ತ್ತಿ ನಿಜಸ್ಥಪತಿರತ್ನವಿರಚಿತಮಣಿಮಯ ರಾಜಮಂದಿರಮಂ ಪುಗುವುದುಮಾಪ್ರಸ್ತಾವದೊಳಂತಃಪುರದ ಪೂಸಿದ ಕಾಶ್ಮೀರ-ರಾಗಮುಮುಟ್ಟ ಕೌಸುಂಭಾಂಬರರುಚಿಯುಂ ತೊಟ್ಟ ಪದ್ಮರಾಗಾಭರಣಕಿರಣಂ-ಗಳುಂ ಸಂಕ್ರಮಿಸಿದಂತೆ,

ಒಳಕೊಂಡ ಕೆಂಪಿನಿಂ ದಿಸ
ವಳಯಂ [1]ಪೋಲ್ತಿರ್ದ್ದು[1]ದಪರದಿಗ್ವಧು ಭೂಭೃ-|
ತ್ತಿಳಕಂಗೆ ಪಿಡಿವ ಬಗೆ ಕೈ-
ಕೊಳೆ ಬೆಳಗಿದ ಪದ್ಮರಾಗಮಣಿದರ್ಪ್ಪಣಮಂ ॥ ೨ ॥

ವ॥ ಆಗಳ್ ವೃಷಭೇಶ್ವರನಂದನಂ ಸಂಧ್ಯಾಸಮಯೋಚಿತಜಿನೇಂದ್ರವಂ-ದನಾಕುತೂಹಲಿತಾಂತಃಕರಣನಾಗಿ,

ಬೆಳಗುವ ಕೈದೀವಿಗೆಗಳ
ಬೆಳಗುಂ ತರತರದಿನೊಗೆವ ತಾರಗೆಗಳ ಗೊಂ-|
ದಳಮುಮಿಳಾತಳದ ವಿಯ-
ತ್ತಳದ ವಿಳಾಸಮನದೇ[2]ನೊಡಂಬಡಿಸಿದುವೋ[2] ॥ ೩ ॥

ಭರತನನೋಲಗಿಸಲ್ ಬಂ-
ದರಸುಗಳ ತಿ[3]ರೀಟಪದ್ಮರಾಗಪ್ರಭೆಗಳ್ |
ಪರೆವಂತೆ ಪರೆದು ಕೌಸುಂ-
ಭರಾಗರಮಣೀಯಮಾಯ್ತು ಸಂಧ್ಯಾರಾಗಂ ॥ ೪ ॥

ವ॥ ತದನಂತರಮೆ[4] ತದಾಸ್ಥಾನಮಂಟಪದೊಳ್ ಬೆಳಗುವ ಕೈದೀವಿಗೆ-ಗಳ [5]ಬಳಗದೊಳ್ ಬಳ್ವಳ[5]ಬಳೆವ ನಿಮಿರ್ವ ಕಾಡಿಗೆಗುಡಿಗಳ ಮಹೇಂದ್ರನೀ-ಲಮರಕತಮಣಿಭವನಂಗಳ ವಿಜಯಕಟಕಸಮುಂಗಜಸಾಮಜಂಗಳ ಕರ್ಪ್ಪುಗ-ಳೆಲ್ಲಮಂ ನೆರಂಬಡೆದು,

---

೧-೧ (ಅ) ಪೊರ್ತ್ತಿರ್ದ್ದು. ೨-೨ (ಅ¹, ಬ) ನಲಂಕರಿಸಿದುವೋ. ೩ (ಚ) ಕಿ. ೪ (ಚ) ದೊಳ್. ೫-೫ (ಚ) ಬೆಳಗುಗಳೊಳಂ ಬಳ್ವಳ.

ಒಳಿದ ತಮೋಮದೇಭಘಟೆಯೊಡ್ಡೊಡೆದಸ್ಸಿಗಮುನ್ನತೋದಯಾ-
ಚಳಗುಹೆಯಿಂ ಲಸತ್ಕಿರಣಕೇಸರಮಂ ಪರಪುತ್ತು ಮಾಗಳಾ-|
ಗುಳಿಸುವ ಬಾಯ ಕೆಂಪನುದಯಂಗೆಯೆ ಪ್ರೋಣ್ಮವ ಕೆಂಪು ಪೋಲ್ವಿನಂ
೧ತಳರೆ೧ ಪೆಡಂಗಿನೊಳ್ ಪ್ರವಿಮುವೆಟ್ಟ್ರ೨ಸಿಮುದ್ಗತ೨ಚಂದ್ರಸಿಂಹದಾ೩ ‖ ೫ ‖

ನೆರೆಪ್ಪೆ ಸಂಜೆಯೊಳ್ ಪಾಟಿಸ್ಸಿದೆಸೊ೪ಡೇನಾ೪ತ್ಯಾಂಗದೊಳ್ ರೋಹಿಣೀ-
ಚರಣಾಲಕ್ತಕರಾಗಮುಚ್ಚಿಱಿಮುದೋ ಮೇಣ್ ಕಾಮಿಗಳ್ಗೀವ ರಾ-|
ಗರಸಂ ಪ್ರೋಣ್ಮಿದುದೋ ತಮೋಗಜದ ಕೋಡೇಱಿಂದಮೋ ನೊಂದುದೋ
ಹರಿಣಂ ಮೇಣ್ನಿಸಿತ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ ‖ ೬ ‖

* ಅದೊಂದಿನಿಸು ಬೇಗದಿಂ ನವಜಪಾಪ್ರಸೂನಾಭಮಾ-
ಯ್ತದೊಂದಿನಿಸು ಬೇಗದಿಂ ಕನಕಕುಂಭದಂತಾಯ್ತು ಮ-|
ತ್ತದೊಂದಿನಿಸು ಬೇಗದಿಂ ಮೃದುಮೃಣಾಳಸಂಕಾಶಮಾ-
ಯ್ತದೇಂ ಬಟಾಕೆ ಬಿಂಬಮುಜ್ಜ್ವಳಿಕೆಯೋ ಸುಧಾಸೂತಿಯಾ ‖ ೭ ‖

ವ॥ ಅಂತು ಪುರಂದರದಿಗ್ವಧೂವದನಮಂಗಲಮಣಿದರ್ಪಣಮುಮನಿಂ-
ದ್ರಗಜೇಂದ್ರಧವಲಕರ್ಣ್ಣಚಾಮರಮುಮನನುಕರಿಸಿ,

ತ್ರಿಜಗಕ್ಕ್ಯಾಕ್ಷ್ಯಯ್ಯ್ಯದಂಡಸ್ಥಪತಿಗೃಹಪತಿಚ್ಛತ್ರಯೋಷಿತ್ಪುರೋಧೋ
ಗಜನಿಸ್ತ್ರಿಂಶಾಶ್ವಕಾಕಿಣ್ಯಜಿನಮಣಿಚಮೂನಾಥಚಕ್ರಾದಿನಾಥಂ-|
ಗೆ ಜಯಪ್ರಾರಂಭಗಚ್ಛಸ್ಫಟಿಕಕಳಶಮಂ ತೀವಿ ದಿವ್ಯಾಂಬುವಿಂ ನಾ-
ಕಜನಾಥಂ ಮಜ್ಜನಕ್ಕೆತ್ತಿದ ತೆಱದೆ ಸುಧಾಸೂತಿ ಕಣ್ಗೆಡ್ಡಮಾದಂ ‖ ೮ ‖

ಪಗಲಂತಿರ್ದ್ದಚ್ಚವೆಳ್ದಿಂ೫ಗಳನಿನ೫ಕಿರಣದ್ಯೋ೬ತಿಗೆತ್ತಾಗಳಾಗಳ್
ಮುಗಿದಿರ್ದ್ದಂಭೋಜಮೋ೭ರಂತಲರ್ದುವು೭ ಬಿಸುಸುಯ್ಯುತ್ತಗಲ್ದಿರ್ದ್ದ ನೀರ್ವ್ವ-|
ಕ್ಕಿಗಳಾಗಳ್ ಕೂಡಿ ತೋಡಾದುವು ಕುವಲಯಷಂಡಂಗಳಾಶಂಕೆಯಿಂದಂ
ಮುಗಿಯಲ್ಕೆಂದಿರ್ದವೇನುಜ್ಜ್ವಳಿಸಿದುದೊ ಜಗಚ್ಚಕ್ರಮಂ ಚಂದ್ರಬಿಂಬಂ ‖ ೯ ‖

---

೧-೧ (ಅII) ತಳೆದ. ೨-೨ (ಅII) ಮುದ್ಧತ. ೩ (ಬ) ದಂ. ೪-೪ (ಅII) ಡಂದಾ. ೫-೫ (ಚ) ಳೊಳಿನ. ೬. (ಅ,ಬ) ಜ್ಯೊ. ೭-೭ (ಚ) ರೊಂಡಲರ್ದುದು.

* (ಬ) ಪ್ರತಿಯಲ್ಲಿಲ್ಲ.

ವ|| ಅಂತು ಪುರಂ[1]ದರೋದ್ಧೃತ[1]ಗಗನತಳಸ್ಪರ್ಧಿ[2]ಗಗನಸ್ಫಟಿಕ[2]ಕಲಶ-ಮುಖವಿಗಲಿತಸುಧಾ[3]ವಾರಿಧಾರಾ[3]ಪ್ರಸರಮನನುಕರಿಸಿ,

ಧರಿತ್ರೀಸ್ಫುರದಂತಃಪುರ-
ದರಸಿಯರ ವಿಲೋಚನೋತ್ಪಲಾಕರಮನಲಂ-|
ಕರಿಸಿ ಪೆಸೆವೆಸೆಗೆ ಪಸರಿಸಿ
ಶರದದ ಬೆಳ್ದಿಂಗಳೆಂ ಮನಂಗೊಳಿಸಿದುದೋ ||೧೦||

*ಒಸರ್ದಪುದಮರ್ದಿನ ಪಾಲ್ಕಟಿ[5]
ಪಸರಿಸಿತೆನೆ ಜಗಮ[4]ನೊಡನೆ[4] ಕರ್ಪೂರದ ರಜಂ |
ಮುಸುಕಿದುವೆನೆ ಪುದಿದೀನಾ-
ಜಿ[5]ಸಿದುವೊ[5] ಪೊಳೆವಮೃತಕಿರಣನಮೃತಕರಂಗಳ್ ||೧೧||

ವ|| ಅಂತು ಕಾಮರಾಗರಸಸಾಗರಮಂ ನೆಲೆವೆರ್ಚಿಸುವ ಶರಚ್ಚಂದ್ರಾತಪದೊ-ಳ್ ಪಗಲಿನ ಶರದಾತಪಪರಿಶ್ರಮಮನಾಱಿಸಿ ನಿಜವಿಜಯಕಟಕನಾಗರಿಕರಮ-ಣರಮಣೀಜನಂಗಳ್ ಕೌಮುದೀಮಹೋತ್ಸವೋತ್ಸುಕರಾಗಿ ನೆರೆದಲ್ಲಿ,

ಮೃಗಮದದಣ್ಪು ಜಾದಿಯ ಬಟಲ್ಮುಡಿ ನೆಯ್ದಿಲ ಕರ್ಣಪೂರಮು-
ಟ್ಟಗಲದೆ ಕಟ್ಟಿದೈಸರಮದೊಂದು ಬೆಡಂಗಿನ[6]ಸೇತುಮಾಲೆ[6]ಪ-|
ಟ್ಟಗೆ ಕಟಿಸೂತ್ರಮೆಂಬಿವು ಮನಂಗೊಳೆ ಮನ್ಮಥಚಕ್ರವರ್ತಿಗೀ-
ಕೆಗಳೆ ವಿನೋದದಾಕೆಗಳೆನಲ್ [7]ನೆರೆ[7]ದತ್ತು ವಿಲಾಸಿನೀಜನಂ ||೧೨||

ವ|| [8]ಆ ವಿಲಾಸಿನೀವಾಟದೊಳೊಂದೆಡೆಯೊಳೊಂದು [9]ವನಾಭ್ಯಂತರ-ದೊಳ್ ಚಂಚತ್ಕಾಂಚನಮಂ[9]ಚೋಪಶೋಭಿತಮೃದುತಳ್ಪತಳದೊಳಿರದಱಿಯದೆ ಕೂರ್ತ[10]ನಲ್ಲಳ್,[10]‡

‡ ಮುಳಿದು ಮನಃಪ್ರಿಯಂ ಪೆಱಗುಗೆಯ್ದಿರೆ ಬೆಂಬಿಡದಪ್ಪಿಕೊಂಡ ನ-
ಲ್ಲಳ ಮೊಲೆಯೊತ್ತಿನೊಳ್ ತೊಡರ್ದುದಾಕೆಯ ದೂಱಿಸಿ ಮುಯ್ದು ಮುಯ್ಯೊಳ-|
ಚ್ಚಳಿಸಿದುದಾ ಸರೋಜದಳನೇತ್ರೆಯ ನಲ್ಮೆಯೊಳತ್ತ ಕಣ್ಣ ನೀ-
ರ್ಗಳ ಪೊನಲಿಂದೆ ಕರ್ಚಿ ಕಳೆದಂತಿರೆ ಪೋದುದು ಕೋಪಮೋಪನಾ ||

೧–೧ (ಚ) ಪರಕರೋದ್ಧೃತ. ೨–೨ (ಬ) ಗಗನತಲಸ್ಫಟಿಕ. ೩–೩ (ಚ) ಧಾರಾ. ೪–೪ (ಅ) ನೆಯ್ದೆ. ೫ (ಚ) ದೊ. ೬–೬ (ಅII) ಶ್ವೇತಮಾಲೆ. ೭–೭ (ಚ) ಮೆರೆ. ೮ (ಚ) ಆಗಳಾಸ್ತ್ರೀಸಮೂಹಂ ನೆಱೆದಿರಲಲ್ಲಿ. ೯–೯ (ಚ) ಕಮನೀಯಕಾಯಮಾನಾಭ್ಯಂತರ-ಚಂಚತ್ಕಾಂಚನಮಂ. ೧೦–೧೦ (ಚ) ನಲ್ಲಳ್ಗೆ.

* (ಬ) ಪ್ರತಿಯಲ್ಲಿಲ್ಲ.
‡ (ಅ,ಬ) ಪ್ರತಿಗಳಲ್ಲಿ ೩೪ನೆಯದಾಗಿದೆ. (ಚ) ಪ್ರತಿಯಲ್ಲಿ ಇಲ್ಲಿ ಇದೆ.

ತುಂಗಘನಸ್ತನಂ ಬೆಮರೆ ಮೇಲುದನಾಂತೆಱೆದಿರ್ದ್ದೊರ್ವದತ್ತಲಿ-
ರ್ದಂಗಜಸನ್ನಿಭಂ ತಳಿಯನೇಕೆಗೆ ತೂಗಿದನೆಂದೊಡಕ್ಕ ಕೇ- ।
ಳಂಗನೆ ನಿನ್ನ ಬೀಗಿ ಬಿಗಿದಿರ್ದ್ದ ಕುಚದ್ವಯಮಧ್ಯದಲ್ಲಿ ತಾ-
ನಿಂಗಡೆ ನಟ್ಟ ದಿಟ್ಟಿಯುನವಂ ಕಿಱಿಱೆಂದನುಗೆಯ್ದು ತೂಗಿದಂ ||೧೩||

ವ॥ [1]ಅಗಲ್ದಾತ್ಮೀಯಸಮೂಹಂ ನೆರೆದು ತಂತಮ್ಮ ವಿಳಾಸದಿಂ ನಿಂದಿರ್ದ್ದೊರ್ವ-
ರ್ವಂ[1] ತನ್ನ ಪ್ರಾಣೇಶ್ವರಿಯ ಮೊಗಮಂ ನೋಡಿ ತಳಿಯಂ ತೂಗಿಮೊಡೆ ಆಕೆ
ಶಂಕಾಕುಳಿತೆಯಾಗಿ ತನ್ನ ಕೆಳದಿಗಿಂತೆಂದಳ್,

ಪೊಸಲ್ದ ಕಬರೀಭರಂ ಪರೆದು ಪರ್ವೆ ತುಂಗಸ್ತನಂ
ಕದಸ್ಪದಿಸೆ ಕಣ್ ಮಲರ್ ಪೊಳೆಯೆ ಕಾಂತನಂ ಮೆಚ್ಚಿಸಲ್ ।
ವಿದಗ್ಧ ಪುರುಷಾಯಿತಂ ತಗುಳೆ ನರ್ತ್ತಕೀಲೀಲೆಯಿಂ-
ದಮೊಂದು ಪೊಸಗಾರ ಸೋಗೆನವಿಲಾಟಮಂ [3]ತಾಳ್ದಿದಳ್[3] ||೧೪||

ವ॥ [4]ಮತ್ತೊಂದು ವಿಚಿತ್ರಕಾಂಡಪಟಪರಿವೃತಪಟಕುಟಿಪ್ರದೇಶದೊಳ್[4],

ಮೆಳಿರ್ವ್ವಸಿಯ ಪಸಿಯ ಪೊಸಬಾ-
ಸುಳ ಕರರುಹರೇಖೆ ತುಱುಗಿ ರತಸಾಟ್ಯೆಪರಿ- ।
ಸ್ಖಳಿತಕ್ಕೆ ಮುಳಿದು ದಂಪತಿ-
ಗಳನಂಗಜನಟನ [5]ಸೆಳೆದ ಬಾಸುಱಿಯನಿಕುಂ[5] ||೧೫||

ವ॥ ಎನೆ ಮತ್ತೊರ್ವ್ವನಿಂತೆಂದಂ,

ಬಳ್ಳಿಗಳಿಮ್ಮಾವಿನ ಮರ-
ನುಳ್ಳೆಡೆಗಳನಱಿಪಿ ಪೋಪುವಲ್ಲವು ಕೆಲದೊಳ್ ।
ಕಳ್ಳಿಯಿರ[6]ಲಡವ್ವರ್ವಬಲೆಯ-
ರಳ್ಳೆರ್ದೆಗಳ್ ಪುರುಷಗುಣಮನಱಿದೆಱಗುಗುಮೇ ||೧೬||

ವ॥ ಮತ್ತಮೊಂದೆಡೆಯೊಳ್ ಪಲರ್ ವಿದಗ್ಧವಿಟರ್ ನೆರೆದಿರ್ದ್ದಲ್ಲಿಯೊರ್ವ್ವಂ,

ಬಸನಿಯೆ ಗೆಲ್ಲಕಾಱನ ನೆಗಟ್ತೆಗೆ ಕೇಳಿಗೆ ನಾಡ ಗೆಂಟದಂ
ಬೆಸಗೊಳವೇಡ ನೆಟ್ಟನೆ ಚದುರ್ ತನಗುಳ್ಳೊಡೆ ಮೆಲ್ಪು ಮೇಳಮಂ।

೧-೧ (ಚ) ಮತ್ತೊಂದೆಡೆಯೊಳ್ ಒರ್ವಂ. ೨ (ಅ,ಬ) ದೆ. ೩-೩ (ಚ) ತೋಱು-ದಳ್. ೪-೪ (ಚ) ಮತ್ತಮೊಂದೆಡೆಯೊಳ್. ೫-೫ (ಅ,ಬ) ಸೆಳೆದ ಬಾಸುಳನಿಳಿಕುಂ; (ಚ) ಸೆಳೆಯೆ ಬಾಸುಳಿವೆನಿಕುಂ. ೬ (ಚ) ಡ.

ಪೊಸಯಿಸಿ ತನ್ನ ಪುನ್ನಾಱಾವು ಬೇಟದ ಲಲ್ಲೆಯ ಬಲ್ಮೆ ಪತ್ತಿ ಸು-
[೧]ತ್ತ್ರಿಸೆ[೧] ಪುದುಡಿಂಬುಕ್ಕೆಸೆ ಬಿಯಮಾಱಿಸಿ ಪೊಂದಪವಂ ಬೊಜಂಗನೇ ॥೧೭॥

ನೆಲಸಂ ಪರ್ವುವ ಬಳ್ಳಿಗಂ ಚಮರಸೊಳ್ ಪೈಪೈಯೊಡಂಬಟ್ಟು ತ-
ತ್ಲತಾ[೨]ಕೋಮಳಿಗಂ ತಗುಳ್ವ ಪೆಱದೊಂದೆಂತ[೩]ಕ್ಕು ಮಾಬಳ್ಳಿಗೆ-।
ಪ್ಪಲಳುಂಬಂ ನೆಲನಾಕೆಗಂ ಬಳಸಿಯುಂ ಲಲ್ಲೈಸಿಯುಂ ನೋಡಿ ಕಾ-
ಣಲಳುಂಬಂ ಮನಮೆಂಬಿದಂ ಚಮರರೊಳ್ ಮುಂ ಕೇಳದಿಂ ಕೇಳ್ವ[೪] ನೇ ॥೧೮॥

ವ॥ ಎಂಬು ಮತ್ತೊರ್ವನಿಂತೆಂಬಂ,

ನಿಧಿ ದೊರೆಕೊಳ್ವೊಡಂ ಕುಲಧನಂ ದೊರೆಕೊಳ್ವೊಡಮೆಲ್ಲಿಯಾನುಮ-
ಲ್ಲದೆ ದೊರೆಕೊಳ್ವದಂತೊಲವುಗಳ್ ದೊರೆಕೊಳ್ವೊಡಮೆಲ್ಲಿಯಾನುಮ-।
ಲ್ಲದೆ ದೊರೆಕೊಳ್ವವಂತಱಿವರಿಂ ದೊರೆಕೊಂಡುವನೇವಮಾಗಲೀ-
ಯದೆ ಕಿಡಲೀಯದಿರ್ಪಿರವಿದೊಂದೆ ಚಮರ್ ಚಮರೆಂಬುದಾವುದೋ ॥೧೯॥

ಬಳಸುವ ಬೇಟದೊಳ್ ಮೊಳೆಪ[೫] ಗೊಟ್ಟಯೊಳೀರೆಲೊಪೂ[೬]ವಲುಂದಿನೊಳ್[೬]
ಬಳೆದ ವಿಯೋಗದೊಳ್ ಪೊಱಿದ [೭]ಚಿಂತೆಯೊಳೆಯ್ದೆ ಮಡಲ್ತು ತಳ್ತ ಮ[೭]-।
ಯ್ಗೊಳಡರ್ದೋ[೮]ತದೂತ[೮]ವಚನಾಮೃತದೊಳ್ ಗೊಲೆಗೊಂಡ ಬೇಟಮೆಂ-
ಬೆಳಲತೆ ಕೂಟದೊಳ್ ಪಡೆದು ಪಣ್ತೆರ್ದಗಿಂಪಿನಲಂಪನೀಯದೇ ॥೨೦॥

ದಿವಸಂಗಳ್ ವಿಧುಬಿಂಬಚುಂಬಿತನಭೋಭಾಗಂಗಳಾದಂದು ಮಾ-
ಪ್ಪುವನಂಗಳ್ ಕಳಿಕಾಪ್ರವಾಳಕುಸುಮಾಕ್ರಾಂತಂಗಳಾದಂದು ಮಾ-।
ಡ ವಿನೋದಂಗಳನಂಗರಾಗರಸಸಂಕೀರ್ಣಂಗಳಾದಂದುಮಾ-
ಱುವ ಪಾಂಗಾವುದು ಕೊಂಡು ಪೋಗಗಲಲಾನಾಱಿಂ ಮನೋವಲ್ಲಭಾ ॥೨೧॥

ಒದವಿದ ಚಿಂತೆ ಪೆರ್ಚ್ಚೆ ಪಸಿವಿಲ್ಲದೆ [೯]ಮುರ್ಚ್ಚೆದೆಯುರ್ಚ್ಚೆ[೯] ನಿದ್ರೆಯಿ-
ಲ್ಲದೆ ಬಗೆ ಜೆರ್ಚ್ಚೆ ಬುದ್ಧಿಯಣಮಿಲ್ಲದೆ ನಲ್ಲಳಗಲ್ಕೆಯಿಂದಮಾ-
ದದವಳಲಚ್ಚಿಗಂ ಮಱುಕಮೆಂಬಿವಱಿಂದೆ ಕನಲ್ದು ಮುನ್ನೆ ಬೇ-
ಟದ ಸವಿಗಂಡನಲ್ಲದಱಿಯಂ ಶ್ರಮಮಂ ಕಡುವೇಟಕಾರರಾ[೧೦] ॥೨೨॥

ವ॥ ಎಂದು ಇ ಟಮನೆ ಪಸ್ತಮಾಡಿಯೆ ಕವಿತ್ವವರ್ಣ[೧೧]ಕವಿತ್ವಕಾರಾಪ[೧೧]-
ತ್ತ್ವವಿದನೆನಿಸಿದತಿವಿದಗ್ಧನೊರ್ವನಿಂತೆಂದಂ,

೧-೧ (ಅ,ಬ) ತ್ತ್ರಿರೆ. ೨ (ಚ) ರ್ತ್ತಾ. ೩ (ಚ) ದ. ೪ (ಅ,ಬ) ಳ. ೫ (ಚ) ದ. ೬-೬ (ಅ,ಬ) ಓವಲುಂಟನೊಳ್. ೭-೭ (ಅ,ಬ) ಚಿಂತೆಯೊಳೆಯ್ದೆ ಮಡಲ್ತು ಕಾಣ್ಬ ಮೆ; (ಚ) ಚಿಂತೆಯೊಳೀ ಮಡಲ್ತುತಳ್ತ ಮೆ. ೮-೮ (ಚ) ತಂಪೂತ. ೯-೯ (ಅ,ಬ) ಮುರ್ಚೆದೆ-ಯೊಳೆ. ೧೦ (ಅ,ಬ) ರೊಳು. ೧೧-೧೧ (ಅI,ಚ) ಕವಿತ್ವ ಕಾಮತ

ಅಲೆದುಂ [೧]ನೋಡಿ[ಯೊ][೧]ಱಲ್ದುವಿಟ್ಟಪದಮುಂ [೨]ನೋೞ್ಪಂ[೨] ಕಳಲ್ದುಂ ಪಳಂ-
ಚಲಿಪುಂ ಮುಟ್ಟಿದ ಸೀಯನಪ್ಪ ಪನಿಯುಂ ಪೇಲ್ವಾಯ್ದುಪೋಪೈಸಿಯುಂ|
ಪಿಱಿದುಂ ಉಂದುವ ಬೇಟದೊಂದು ಸುಸಿಲುಂ[೩] ನೋ[೪]ಯಿಕ್ಕೆ ಮಾಱುಕ್ಕೆ ಮು-
ಗ್ಗಲಿಕೆಯುಂ ಕಬ್ಬುವ ಗೇಯದೊಂದು [೫]ಸುಸಿಲೊಂ[೫]ದಿಂಪೆಂಬುದೇಗೆಯ್ವುದೋ ||೩೩||

ವ|| ಎಂದು ಮಾಣದೆ,

ಒಡನಿರಲಿತ್ತುದಿಲ್ಲ ವಿಧಿ ನಮ್ಮನಗಲ್ದಳವೇಡ ನೀಂ ಮನಂ-
ಬಿಡೆ ನಡೆಯೆಂದು ಪೇೞ್ವುನಿಸನಾಂ ಮಗುೞ್ದಾಗಳೆ ಸೂಸಿ ಕಣ್ಣ ನೀ-
ರೊಡನೊಡನುಣ್ಮೆ ಕುಂಕುಮದೊಳದ್ದಿದ ಬಾಳೆಗಳನ್ನವಾಗಿ ಕೆಂ-
ಪಡರ್ದಲರ್ಗಣ್ಗಳಿಂ ಮಗುೞ್ದು ನೋಡಿದುದಂ ನೆನೆವೇಂ ಮೃಗಾಕ್ಷಿಯಾ ||೩೪||

ವ|| ಎಂದೆರ್ದೆಯಾಱದೆ,

ಒದವಿ ತಗುಳ್ದ ಗಗ್ಗರಿಕೆ ಸೂಸುವ ಕಣ್ಬನಿ ಕಣ್ಗಳೊಳ್ ಕಲಂ-
ಕಿದ ಬೆಳಗೆಂಪು ಕಣ್ಗೆವರೆ ಸಾರ್ಚಿದಗಲ್ಕೆಯೊಳಿಂತು ಬೇಟದು-|
ಬ್ಬದಿಗಮನಾಂತ ನಲ್ಲಳ ಮುಖಾಂಬುಜಮಂ ನಡೆ ನೋಡಿ ನೋಡಿ ಸಾ-
ಯದೆ ಬರ್ದುಕಾಡಿದಂ ಜವನ ಬಾರಿಯೊಳಂ ಬರ್ದುಕಾಡದಿರ್ಕ್ಕುಮೇ ||೩೫||

ವ|| ಎಂದುಮವಧರಿಸದೆ,

ನಡುಕಮುಮುಳ್ಕಱುಂ ಬೆರಸಗಲ್ಕೆಯೊಳಂದಿನಿತೆಂಬವೋ[೬]ಲ್ತ್ತೊಡಂ[೬]
ತೊಡರೆ ರಸಾಂತದೊಳ್ ಬಗೆದು ಭೋಂಕನೆ ಪೋ[೭]ದಪನೋವನೀಸಲುಂ|
[೮]ಕೆಡೆಯಿಸುವಿಲ್ಲ[೮]ವೆಂದಱ[೯]ರ್ಳಲ್ದಿಱದೊಂದಿದ[೯]ಲುಂದುಗಳ್ಗ[೧೦]ಂ ನೀ-
ಗರ್ದಿಡಿದವೊಲಾದುದುಚ್ಚಳಿಸಿ ಸೂಸುವ ಕಣ್ಬನಿ ಕಂಜವಕ್ತ್ರೆಯಾ ||೩೬||

ವ|| ಎಂದು ಸೈರಿಸದೆ,

ಅಮರ್ದಿನ [೧೧]ಧಾರೆ[೧೧]ಯಂತೆ ಸುಡಿಯಿಂಪಮರ್ದಂ [೧೨]ತಳಿ[೧೨]ದಂತೆ ಸೋಂಕಿನಿಂ-
ಪಮರ್ದಿನ ಪೂರದಂತೆ ಪಡೆದಿಂಪಮರ್ದಂ ಕುಡಿವಂತೆ ಉಂದಿನಿಂ-|
ಪಮರ್ದೊಡಮೇನಗಲ್ಕೆ ಮುಳಿಸೆಂಬೆರಡುಂ ಗಡ ಕಾಳಕೂಟಮಾ-
ಗಮರ್ದಿನ ಕಾಳಕೂಟದೊಡವುಟ್ಟಿದಳೆಂದಪೆನೇಕೆ ನಲ್ಲಳಂ ||೩೭||

ವ|| ಮತ್ತಮೊಂದೆಡೆಯೊಳಂದೆ ಪೊಸಯಿಸಿದ ಪೊಸವೇಟಕಾಱರಪ್ಪ ಕಡುನಲ್ಲರಿರ್ವ್ವರಿರೆ,

---

೧-೧ (ಅ,ಬ) ನೋಡಿಮೊ; (ಚ) ನೋಡುವೊ. ೨-೨ (ಚ) ಮೊಲ್ದುಂ. ೩ (ಅ,ಬ) ಲೆ. ೪ (ಅII,ಬ) ಯೊ. ೫-೫ (ಅ,ಬ) ಸುಸಿಲಾ. ೬-೬ (ಅ,ಬ) ಲ್ತರಂ. ೭ (ಅ,ಬ) ಪೆ. ೮-೮ (ಅ,ಬ) ಕೆಡೆಯಿಸುವಿಲ್ಲಿ. ೯-೯ (ಅ,ಬ) ಳಲ್ಲರಿಬಂದಿ. ೧೦ (ಅ,ಬ) ಳ್ದ. ೧೧-೧೧ (ಚ) ದೋರೆ. ೧೨-೧೨ (ಅ,ಬ) ತಳೆ.

ಕು[1]ಡುಗುರುಳೆಂಬ ತುಂಬಿಲರ ಬೆಂಬಡಿ[2]ದಿಂ ಪೊಸಪೇಟಪೆಂಬ ಚಿ-
ಪ್ಪಿಡಿ[3]ದಿಡಿಗಾರಮುಂ[3] ಪ್ರಕಟಕಪೆಂಬ [4]ನವಾಂಕುರದಿಂ[4] ವಿಳಾಸಮುಂ |
ಪಡೆಪಸುರಾಗಪೆಂಬ ತಳಿರಿಂಪೆಸೆದ[5]ಕ್ಕಱನಾಳ್ದ[6] ನೋಟಪೆಂ-
ಬಿಡಿಪಲರಿಂ ಪುಸುಂಕೆ ಸುಸಿಲೆಂಬ ಬಸಂತಮೊಳೇಂ ಪೊಪಟ್ಟುವೋ ||೨೮||

ವ|| ಪತ್ತ್ರಪೊಂಪೆಡೆಯೊಳ್ ಪಳಿಕೆಯ್ದು ಬಂದು ನಲ್ಲಳ ಮುಳಿಸನೊಳ-ಕೊಂಡು[7] ಮುಖಮುಂ ಮುಗುಳ್ನಗೆಪೆರಸು ನುಡಿದು ಗೆಂಟಾದಂ. ಮತ್ತಮೊಂದೆ-ಡೆಯೊಳ್[8] [9]ಪಳ್ಳಿಪಳ್ಳಿಯುಳ್[9] ಬೇಟದ ತೋಟಿಯುಂ ತೊಡರ್ದಟ್ಟುಪೆತ್ತ್ರಪ್ರೊಳ್ಗಿಂ-ಪ್ರಸ್ಲೆ[10]ಯುಳ್ಳೆ ಪಾಪ ಪಾತಂ ತನ್ನ ನೂಳಿಯ ಬೇಸಱಿಂ[11] ಕೆಳೆಯಂಗಿಂತೆಂದಂ,

ಮಱುಗುವೆ ನಾನಿವಳ್ಗಿ ವಳವಂಗೆರಡಿಲ್ಲವೆ ನಲ್ಲಳಾತನುಂ
ಮಱುಗುವನಾಕೆಗಾಕೆಯುಮನಂಗವಿನೋದದೊಳಿನ್ನು ಪಂಬಲೊಳ್ |
ಮಱುಗುವಳೆಂದೊಡೇಂ ತಿಳಿವನಾತನನಾಕೆಯು[12]ನಿನ್ನ[12]ನೋಡು[13]ಕಾ-
ಯ್ದುರಿಯು[13] ವಿಧಾತ್ರನೇಂ ಪಡೆದನೋ ಬಿಸಪಂದಮನೊಂದ[14]ವಿಂತಿದಂ[14] ||೨೯||

ವ|| ಎಂದು ನುಡಿದು ಮತ್ತೊಪ್ಪನಿಂತೆಂದಂ,

ಲಲಿತಲತಾಂಗಿ ನೂತವಿಪರೀತರತಕ್ಕಡಿಯಿಟ್ಟಳಿನ್ನ ಕ-
ಣ್ಗಳ ಪಸವೋಡೆ ನೋಡಲಣಮಿಯದೆ ನೀಳ್ದ ಕುರುಳ್ ಮುದೀಯ ಕೋ- |
ಮಳೆಯ ಮುಖೇಂದುವಂ ಮುಱಿಸಿದಂ ದಿನದೊಂದೊಳಲಿಂದಮೀಗಳಿಂ-
ತೆಳಸಿತಳಲ್ ಮುಗಿಲ್ ಮಱಿಸೆ[15] ಭೋಂಕನೆ ಕಂಡಮೃತಾಂಶುಬಿಂಬಮಂ ||೩೦||

ವ|| ಅಂತು ಕಂಡು ಮೀರಲಾರದಿಂತೆಂದಂ,

ಪನಮುಂ ಕೋಗಿಲೆ ಜಕ್ಕವಕ್ಕಿ ಪಗಲಂ ಪೂಗೊಂಚಲಂ ತುಂಬಿ ಚಂ-
ದ್ರನನಂಭೋನಿಧಿ ಬಂಧಪಾಸೆ ಪನಮುಂ ಕಾರ್ಗಾಲಮುಂ ಸೋಗೆ ಮುಂ- |
ಬನಿಯಂ ಜಾದಗೆವಕ್ಕಿ ಹಂಸೆ ಕೊಳನಂ ಪದ್ಮಂಗಳಾದಿತ್ಯನಂ
ನೆನೆವಂತಾಂ ನೆನೆವೆಂ ಸರೋಜಮುಖಿಯಂ ಶ್ಯಾಮಾಂಗಿಯಂ ನಲ್ಲಳಂ ||೩೧||

ವ|| ಎಂದುಸಿರದೆ,

ನುಡಿಪೊಡೆ ಲಲ್ಲೆಯೆಂಗುಮೆರ್ದೆವೇಟಿಡ್ಡೊಡೆ ಕೈತವಮೆಂಗುಮಾಸೆಯುಂ
ಪಿಡಿದೊಡೆ ಸೇದೆಯೆಂಗುಮಿರಿವೆಂದೊಡೆ ಕೈತವಮೆಂಗುಮೆಂದು ನಾಂ |

---

೧ (ಆ,ಬ) ಕ. ೨ (ಅ,ಬ) ಡ. ೩–೩ (ಚ) ದೆಳಮಾವುರಂ. ೪–೪ (ಆ,ಬ) ವನಾಂಕುರದಿಂ. ೫ (ಆ,ಬ) ಗ. ೬ (ಅII) ರಿ. ೭ (ಆ,ಬ) ದ. ೮ (ಆ,ಬ) ಡ. ೯–೯ (ಚ) ಳ್ ಪಳವಳಿಯು ೧೦ (ಚ) ಲೆ. ೧೧ (ಚ) ಱಿಂ. ೧೨–೧೨ (ಅII,ಬ) ನಿನ್ನ. ೧೩–೧೩ (ಆ,ಬ) ವಾಯ್ದುರಸಿ. ೧೪–೧೪ (ಚ) ವಿಂದದುಂ. ೧೫ (ಚ) ಸಿ.

ಮಿಸುಕದೆ ಪೋದಗಲ್ಕೆಡೆಯೊಳಿನ್ನಿರೆನೆಂಬೊಡೆ ಕಣ್ಣ ನೀರ್ಗ್ಗಳೋ-
ಗಡಿಸದೆ ಸೂಸೆ ಗಗ್ಗರಿಕೆಗೊಂಡುವನಾಂ ನೆನೆವೆಂ ಲತಾಂಗಿಯಂ ||೩೨||

ವ॥ ಎಂದು ಮತ್ತೊಂದೆಡೆಯೊಳೊರ್ವ್ವಂ ವಿರಹಪರಿತಾಪದೊಳ್ ಸೈರಿಸಲಾಱದೆ ಮದನನಂ ಬಯ್ದು ಬೆಸ್ತನೆ ಸುಯ್ದು ತನ್ನ ಕೆಳೆಯಂಗಿಂತೆಂದಂ,

ಪಗಲಿರುಳೆನ್ನದೆನ್ನೊಳಿ ಕಡಂಗುವನೆನ್ನೊಳಿ ಬಿಲ್ಪಿಡೋರ್ವನಾ-
ನಗಿಪಜಾವಿಪೋರಡಂ ಚಲದಿನೆನ್ನೊಳೆ ಪೊಂಗಿ ಪೊಡಪ್ಪುದೋರ್ವ್ವನೋ-|
ಲಗವ್ಪುದಿಲ್ಲ ಪೆಚ್ಚವಣೆಗಿಲ್ಲ ಕರಂ ಮುಳಿಸಿಲ್ಲ ಕಾಯ್ದು ಕಂ-
ದುಗೆ ಬಳಸಂದು ಕೊಂದಪನಕಾರಣದಿಂ ಮೊಱೆಯೋ ಮನೋಭವಾ ||೩೩||

ವ॥ ಮತ್ತಮೊಂದೆಡೆಯೊಳೆರಡಱುಮದೆ ಕೊರ್ತ ನಲ್ಲಳ್ಗೆ,

ಮುಳಿದು ಮನಃಪ್ರಿಯಂ ಪೆಱಗುಗೆಯ್ದಿರೆ ಬೆಂಬಿಡಿವಪ್ಪಿಕೊಂಡ ನ-
ಲ್ಲಳ ಮೊಲೆಯೊತ್ತಿನೊಳ್ ತಳರ್ದುದಾಕೆಯ ದೋರಿಸಿ ಸುಯ್ದು ಸುಯ್ದ್ಯೊಳು-|
ಚ್ಚಳಿಸಿದುದಾಸರೋಜದಳನೇತ್ರೆಯ ನಲ್ಪ್ರಿಯನೊಳ್ತ್ತ ಕಣ್ಣನೀ-
ರ್ಗ್ಗಳ ಪೊನಲಿಂದೆ ಕಚ್ಚಿದ ಕಳೆದಂತಿರೆ ಪೋದುದು ಕೋಪದೋಪನಾ ||೩೪||

ವ॥ ಮತ್ತೊಂದೆಡೆಯೊರ್ವ್ವಳಾತ್ಮೀಯಪ್ರಾಣನಾಥನಗಲ್ಕೆಯಂ ಸೈರಿಸಲಾಱದೆ,

ಪ್ರಾಣದಗಲ್ಕೆಯೊಳ್ ಮಱುಕಮೇಮೊರೆತಕ್ಕುದೊಡಲ್ಗಳಂ ಕೆಲಂ
ಕಾಣದು[೨] ಕಾಣ್ಬುದಾವುದೊಡಲ[೨]ಲ್ತಿಮುಕಾರಿಪ[೩]ಮೇನೊ[೩]ಡಲ್ಗೆ ನೀಂ|
ಪ್ರಾಣಮಮೋಘಮಪ್ಪುದಱಿನೋಪನೆ ನಿನ್ನನಗಲ್ಪಗಲ್ಕೆಯುಂ
ಪ್ರಾಣದಗಲ್ಕೆಯುಂ ಸಮನದಕ್ಕೆ ವಿಯೋಗಮನೆಂತು ಸೈರಿಪೆಂ ||೩೫||

ವ॥ ಎಂದು ತನ್ನ ನಿರ್ಭರಪ್ರಣಯನಿಗಳದೊಳೆ ತೊಡರ್ಚಿ ತಾಂಗಿದಳ್. ಮತ್ತೊರ್ವ್ವಳ್ ನಿಜಪ್ರಾಣೇಶ್ವರನನೆಂತುಂ ತನ್ನೊಳೊಳಪಡಿಸಲಾಱದೆ ನಿಜ ಪ್ರಿಯಸಖಿಗಿಂತೆಂದಳ್,

ಅನುವಂಗೆಯ್ದುಳಿಯೆಂಬ ತಾಯ ನುಡಿಯುಂ ಕೈಕೊಂಡನೇ ನಂಟರೀ-
ತನ ನಣ್ಪಂ ಬಿಸುಡೆಂದೊಡಾ[೪]ನುಡಿಯ[೪]ನಾನೇಗೊಂಡೆನೇ ನಾಣನೆ-|
ಳ್ಪನಿತುಂ ಕಾದೆ[೫]ನೆ ಬೇಡಿಮೊಂದು ಪುರುಳಂ[೬] ಮಾರ್ಕೊಂಡೆನೇ ಬೇಡಿ ವೇ-
ಡೆನೆ ಗೊಂಡಾನೆಱೆ[೭]ದಟ್ಟಿಯುಂ ಬಗೆಯನೇ[೮]ಂ ಗಂಡಂ ಮನಂಗೊಂಡನೋ ||೩೬||

೧ (ಅ) ವಂ. ೨–೨ (ಅ,ಬ) ಕಾಣದಾವಪೊಡಲ. ೩–೩ (ಚ) ಮೆನೆಮ್ಮ. ೪–೪ (ಅ,ಬ) ಬಗೆಯ. ೫ (ಅ,ಬ) ಡೆ. ೬ (ಅ,ಬ) ಡಂ. ೭ (ಚ) ನೇ. ೮ (ಚ) ಗಂ.

ವ|| ಎಂದು ನುಡಿಯುತ್ತುಮಿರ್ದ್ದಳ್. ಮತ್ತೊಂದೆಡೆಯೊಳ್ ತೋಳ ಪಲ್ಲಟಿಪೊಳ್ ಜಿವಱುವ ಬಗೆ[೧]ವೆರಸುಂ[೧]ತೆ ಲಲ್ಲೆ[೨]ಗೆಯ್ವಳನೊರ್ವ್ವ[೨]ನತಿಚದುರವಿಟಂ,

ಬಿಗಿದಮರ್ದಪ್ಪುವಪ್ಪುಗಳಮುಕ್ಕ್ಗಿಗಳೊಯ್ಯನೆ ಸುಯ್ವಸುಯ್ಯಗಾ-
ಱ[೩]ಗಳೊಳಮುಕ್ಕ್ಗಿಗೆಪ್ಪೊಡಲವ್ರೋಡಿಮುದೆಂದಗಿವೆನ್ನ ನಿನ್ನ ಪ-|
ತ್ತುಗೆಯು ತೊಡರ್ಪ್ಪಿಂದು ಪಱುವತ್ತು ಮನಂ ಬಱಿಕೆಯ್ದೆ ಸೊಕ್ಕಿದಾ-
ನೆಗೆ ಪರಿವಂತ್ರಿರಿಂದು ಪಱುವತ್ತೆನಗಂ ನಿನಗಂ ತಕೋದರೀ ||೩೭||

ವ|| ಎಂದು ಪಱುವಡೆ ನುಡಿದು ಗೆಂಟಾದಂ. ಮತ್ತಮೊಂದೆಡೆಯೊಳೊರ್ವ್ವನಗಲ್ದು ತನ್ನ[೪]ಮನೋ[೪]ವಲ್ಲಭೆಯಂ ನೆನೆದು,

ಮಿಸುಗುವ ತನ್ನ ಬಾಯ್ದೆಱೆ[೬]ಯೊಳಾಲದ ಪಣ್ಣನೆ ವ್ಯೆಯ ಬಣ್ಣದೊಳ್
ಕೊಸಗನೆ ತನ್ನ ಬಳ್ವಳಿಕೆಯೊಳ್ ಸೆಳೆಗೊಂಬನೆ ಪ್ರೋಲ್ತು ನೋಡಮಾ-|
ನಸೆಯುಣಮುಲ್ಲ[೫]ಳೀಕೆ[೫]ಮರವಾನಸೆಯಾಗಿಯುಮಾಮುದೊಂದು ಮಾ-
ನಸಿಕೆ ಮನಂಗೊಳಲ್ಕೆಸಗೆಯತ್ತಳಗಂ ತರಳಾಯತಾಕ್ಷಿಯಂ ||೩೮||

ವ|| ಎಂದುಮುವಧರಿಸದೆ,

ನಳಿತೋಳೊಳ್ ತೊಡರ್ದೊಂದು ತೋಳ ಮಣಿವೊಲ್ ತುಂಗಸ್ತನದ್ವಂದ್ವದೊಳ್
ಪ್ರೊಳೆಯುತ್ತಾರದವೊಲ್ ಸಮುನ್ನತನಿತಂಬೋದ್ದೇಶದೊಳ್ ಪರ್ವ್ವಿ ಪ-|
ಜ್ಜಳಿಸು[೭]ತ್ತುಜ್ವಳಕಾಂಚಿವೋಲಿನಿಯಳಂ ಪತ್ತಿರ್ಪ್ಪ ಸೈಪೇಕೆ ಸಂ-
ಗಳಿಕುಂ ಮಾನದೆ ಮುನ್ನಮಾನವಱ ನೋಂತಾನೋಂಪಿಯುಂ ನೋಂತೆನೇ ||೩೯||

ವ|| ಎಂದು ಪಂಬಲಿಸುತ್ತಿರ್ದ್ದಂ. ಮತ್ತೊಂದೆಡೆಯೊಳೊರ್ವ್ವಳ್ ತನ್ನಭಿನವವಿರಹಪರಿತಾಪದೊಳಿಂತೆಂದಳ್,

ಒಡಲುರಿಗುಂ ಮನಂ ಮಱುಗುಗುಂ ಕಿವಿಗಿಱ್ರನೆ ಪೋಕು ಪುತ್ರೆ[೮]ಕ-
ಣ್ಬಡುಗುಗುಮೆಯ್ದೆ[೮] ಬಾಯ್ಬಿಡದೆ ಬತ್ತುಗುಮಳ್ಕೆರ್ದೆ ನೊಂದು ಕುಂದುಗುಂ |
ನುಡಿ ತಡವಕ್ಕುಮಿಚ್ಛೆಗೆ[೯]ಡುಗುಂ ಗಡನಲ್ಲರಗಲ್ಕೆಗೆಂಬ ನಾ-
ಬ್ನುಡಿಯನೆ ಕೇಳ್ದೆನಿನ್ನೆವರಮೋವೊಲವೆಂಬುದದಿಂತುಟಾಗದೇ ||೪೦||

೧-೧ (ಚ) ವೆರಸು. ೨-೨ (ಅ,ಬ) ಗೆಯ್ವಳನ. ೩ (ಅ,ಬ) ಡಿ. ೪-೪ (ಚ) ಮನೋನಯನ. ೫-೫ (ಚ) ಳಿಂತು. ೬ (ಚ) ಯಂ. ೭ (ಚ) ಸಿ. ೮-೮ (ಅ,ಬ) ಕಣ್ಬಡಿಗುಗುಮೆಯ್ದೆ. ೯ (ಚ) ವಿ.

ವ|| ಎಂದು ಪಂಬಲಿಸುತ್ತಿರ್ದ್ದಳ್. ಮತ್ತೊಂದೆಡೆಯೊಳೊರ್ವ್ವಳ್ ನಿಜ-ಮನೋವಲ್ಲಭಪರಿತಾಪತಾಪಿತತನುಲತಿಕೆ ಗಗನತಲತಿಲಕನಪ್ಪ[1]ಮೃತಕಿರಣನಂ ನೋಡಿ,

ಇನಿಯನಗಲ್ಕೆ ಪೋಗಿ ಪರದೇಶದೊಳಿರ್ದಪನಾನುಮಿಲ್ಲಿ ಮಾ-
ವಿನ ತಳಿರ್ಪಾಸಿನೊಳ್ ಪೊರಳುತಿರ್ದ್ದಪೆನಾಗಳುಮಿಂತೆ ನೀನುಮಿ-|
ನ್ನನೆ ನಡೆನೋಡುತುಂ ನಭದೊಳಿರ್ದ್ದಪೆಯುಪ್ಪುದಱಿಂದೆ ನಿನ್ನನಾ-
ನನುಪಿಪೆನಿನ್ನ ಮೆಯ್ಯ ಬಡಪ್ಪೊ ನಲ್ಲನ ಮೆಯ್ಯ ಬಡಪ್ಪೋ ನಿಶಾಕರಾ ||೪೧||

ವ|| ಎಂದು ಪಂಬಲಿಸುತ್ತಿರ್ದ್ದಳ್. ಮತ್ತಮೊಂದೆಡೆಯೊಳೊರ್ವ್ವಳ್,

ಅವಧಿಯನೊಂದು ತಿಂಗಳೆಡೆಯಿಟ್ಟನಿಯಂ ತಡೆದಿರ್ದ್ದನಲ್ಲನೆಂ-
ಬವಸರದೊಳ್ ನಿಜಾಂಘ್ರಿನಖದರ್ಪ್ಪಣಚುಂಬಿತಮುಗ್ನಜಾನನೆಂ-|
ದವನವಲೋಕಿಸುತ್ತವಧಿತಪ್ಪಿದುದಾಱಿನೆ ಪತ್ತು ತಿಂಗಳಾ-
ದುವು ಬರಲಾತನಾಱಿದೊಡೆ ಸಾಯಲುಮಾಱಿನೆ ಸತ್ತು ನೀಗೆನೇ ||೪೨||

ವ|| ಎಂದು ಪಂಬಲಿಸುತ್ತಿರ್ದ್ದಳ್ ಮತ್ತೊಂದೆಡೆಯೊಳೊರ್ವ್ವಳ್ ತನ್ನ ಪ್ರಾಣವಲ್ಲಭಂ ಬಂದುದರ್ಕ್ಕೆ ರಾಗಿಸಿ ಇಂತೆಂದಳ್,

ಎನಗೆನ್ನೋಪನ[2] ಬಂದುದರ್ಕ್ಕಿದುವೆ ದಲ್ ತೆಲ್ಲಂಟೆ ನೀ ನಿನ್ನ ಕಂ-
ಪನುಗುಳ್ ಮಲ್ಲಿಗೆ ಚಂದ್ರ ನಿನ್ನ ಪೊಳೆಪಂ ನೀಂ ತೋಱು ನೀಂ ಮೆಲ್ಲಮೆ-|
ಲ್ಲನೆ ಮಂದಾನಿಲ ತೀಡು ಕೋಗಿಲೆ ನಲಂದೋಱಿಂದು ಮೆಯ್ವೆರ್ಚ್ಚೆ ತ-
ನ್ನಿನಿಯಂ ಬಂದೊಡೆ ನಲ್ಲಳೇಂ ನಲಿವಳೋ ನಾನಾವಿಲಾಸಂಗಳಿಂ ||೪೩||

ವ|| ಎನೆ ಮತ್ತೊಂದೆಡೆಯೊಳ್,

ವಿದ್ರುಮದಶನಚ್ಛದೆ ಕೋ-
ಪೋದ್ರೇಕದಿನೆರ್ದ್ದು ಪೋಗೆ ತೆಗೆದಪ್ಪಿದೊಡು-|
ನ್ನಿದ್ರಾಂಭೋಜಾಸ್ಯೆಗೆ ಮದ-
ನದ್ರವಮುಂ ಕಣ್ಣ ನೀರುಮುಣ್ಮಿದುವಾಗಳ್ ||೪೪||

ವ|| ಎಂದು ನುಡಿಯುತ್ತಮಿರ್ದಳ್. ಮತ್ತಮೊಂದೆಡೆಯೊಳೊರ್ವ್ವಂ ಚದುರ ವಿಟಂ,

೧ (ಜ) ನ. ೨ (ಅ, ಬ) ನು.

ಒಸವಿನ ಕೂರ್ಮೆಯಿಲ್ಲದೞಿಪಾ[೧]ರಯು[೧]ಮಿಲ್ಲದ ಪಾೞಿ ರಾಗಮಿ-
ಲ್ಲದ ಸುಸಿಲಬ್ಬ್ಯೆಯಿಲ್ಲದ ಪದಂ ನೆವಮಿಲ್ಲದ ಕಾಯ್ಪು ಬೇಟಮಿ-
ಲ್ಲದ ಪುರುದೇವಮಿಲ್ಲದೞಲುಜ್ಜುಗಮಿಲ್ಲದ ಕಣ್ಣ ನೀರ್ ಕರಂ
ಚಮರಮಂ ಮಸಂಗೊಳಿಪ್ಪುದೇಂ ಕಡುಜಾಣೆಯರೋ ಲತಾಂಗಿಯರ್ ||೪೫||

ವ|| ಎಂದು ನುಡಿವಂತನೇಕಪ್ರಕಾರದ ಕಟಕದ ನಾಗರಿಕನರನಾರೀಜ-
ನಂಗಳಂಗಜ[೨]ರಾಗರಂಜಿತ[೨]ವಿನೋದಂಗಳೊಳಿರೆ,

ಭರತೇಶ್ವರಂ ನಿಜಾಂತಃ-
ಪುರಕುಮುದವನಂಗಳಲರೆ ತನ್ನಿಂ ತಾನುಂ |
ಶರದದ ಚಂದ್ರಮನೋಲ್ ಮ-
ಚ್ಚರಿಸಂತಿರೆ ಚಂದ್ರಚರಿತಮಂ ಕೈಕೊಂಡಂ ||೪೬||

ಅವತಂಸೋತ್ಪಲತಾಡನಂ ಕನಕಕಾಂಚೀಬಂಧನಂ ನೂಪುರಾ-
ರವಝುಂಕಾರಿತಚಾರುವಾಮಚರಣಾಘಾತಂ ಚಲದ್ಭ್ರೂಲತಾ-|
ಗ್ರವಿಭಾಗೋತ್ಕಟತರ್ಜನಂ ತರಳಿತಾತಾಮ್ರಾಧರಂ ಚಕ್ರಿಗಿ-
ತ್ತುವಲಂಪಂ ಪ್ರಣಯಪ್ರಕೋಪಸುರತಪ್ರಾರಂಭದೊಳ್ ಕಾಂತೆಯಾ ||೪೭||

ವ|| ಅಂತು[೩]ಸುರತಾಂಬು[೩]ರಾಸಿಯು[೪]ನೀಸಿ ನಿದ್ರಾಂಗನಾಲಿಂಗಿತನಾಗಿ-
ರ್ಪನ್ನೆಗಂ,

ಕಮಲೋದ್ದಾಮಕಷಾಯಸೌರಭಮಿಲನ್ಮತ್ತಾಳಿನೀಗೀತಮಂ-
ಚಮಹಾಶಬ್ದವಿಜೃಂಭಿತಧ್ವನಿ ಲಸದ್ಗಾಂಧಾರನಾದಂ ಪ್ರಭಾ-|
ತಮರುತ್ಸುಂದರಮಂದಮಂದಗಮನಂ ಶಂಖಸ್ವನಂ ಪೂರ್ವದಿಗ್
ರಮಣೀವಕ್ತ್ರಸರೋಜರಾಗಮಯಮಾಯ್ತುತ್ತಂ ತ್ರಿಯಾಮಾಂತ್ಯದೊಳ್ ||೪೮||

ಮಂಗಳಗೀತಿಗಳೊಳ್ಪಗೆ
ಮಂಗಳಪಾಠಕ[೫]ರವಂಗಳಿಂದೆಸೆದಿರೆ ರಾ[೫]-|
ಜಾಂಗಣದೊಳ್ ಭರತನನಿ-
ದ್ರಾಂಗನೆಯಂ ಪತ್ತುವಿಡಿಸುವಂತೆವೊಲಾಗಳ್ ||೪೯||

[೬]ನಿನಗೋಗಂಪಾಡುವ[೬] ಯುವ-
ತಿನಿಕಾಯದ ದನಿಗೆ ಸೆಣಸುವಂತೆವೊ[೭]ಲಲರ್ವೀ[೭] |

೧-೧ (ಅ, ಬ) ಯುರ ೨-೨ (ಅ, ಬ) ರಾಗರಾಜಿತ ೩-೩ (ಅ) ಸುರತಾಮೃತಾಂಬು, ೪ (ಅ, ಬ) ಯೆ. ೫-೫ (ಅ) ರವಂಗಳೆಸೆದವು. ನಿಜರಾ; (ಬ) ರವಂಗಳಿಂತೆಸೆದಿರೆ ರಾ ೬-೬ (ಅII,ಬ) ನಿನಗಾಗಂ ಪಾಡುವ; (ಅIII) ನಿನ ಜೋಗುಳೆ ಪಾಡುವ. ೭-೭ (ಅ) ಲರಳ್ವೀ.

ವನಜವನಂಗಳ ತೊವರ್ಗಂ-
ಪನಾಂಪ ಬಗೆ ಬಳೆಯೆ ಪೊರೆವು[೧]ವಳಿಗಳ ಬಳಗಂ[೧] ||೫೦||

ಸರಸಿಜವನಂಗಳಲರ್ವಿನ-
ಮಿಱಲಾಱದೆ[೨]ಬೇಗಮೆ[೨]ಱಗುವಳಿನಿವಹದ ಝುಂ-|
ಕರಣಕ್ಕೆ ಕಾಯ್ಪುಗೊ[೩]ಂಡೆ-
ಟ್ಟ[೩]ರಸ ತೊಳಲ್ವುವು ನಿನ್ನ ವಿಜಯಗಂಜಗಳ್ ||೫೧||

ಹಿಮಕರಮಂಡಲಮಿದು ಶ-
ತ್ರುಮಂಡಲಾಭಂ ನೃಪೇಂದ್ರ ಮಸುಳ್ದುದು ಬೇಗಂ |
ನಿಮಿರಲ್ಬಗೆವುದೀಮಿ-
ತ್ರಮಂಡಲಂ ಮಿತ್ರಮಂಡಲಾಭಂ ನಿನ್ನಾ ||೫೨||

ಪುರುಪರಮೇಶ್ವರನಂದನ
ದೊರೆಕೊಳಿಸುಗೆ ನಿನಗೆ ತಡೆಯದಾಪುರುಪರಮೇ-|
ಶ್ವರನ ನಿರತಿಶಯಗುಣಪರಿ-
ಕರಮುಂ ತತ್ಪ್ರಾತಿಹಾರ್ಯ್ಯಮುಂ ಮಂಗಳಮುಂ ||೫೩||

ವ|| ಎಂಬ ಮಂಗಳಪಾಠಕರವಂಗಳೊಳ್[೪] ಭರತೇಶ್ವರನುನ್ನಿದ್ರನಾ-
ನನ್ನೆಗಂ,

ದೆಸೆಗಳ ಸಂದಂ ಪಱಿದಾ-
ಗಸದಿಂದಂ ಪತ್ತುವಿಡಿಸುವಂತೆವೊಲಿಳೆಯುಂ |
ಮಸಕದೊಳೆ ಪೊತ್ತು ನೆಗೆದವೊ-
ಲೆಸೆದುದು ದಿಗ್ವಿಜಯಭೂರಿಭೇರೀನಿನದಂ ||೫೪||

ವ|| ಅಂತು ಭೇರಿಯುಂ ಪೊಯ್ಸಿದನನ್ನೆಗಂ,

ಚಕ್ರರತ್ನಮೊಂದೆಯಲ್ತು ಚಕ್ರಿಗಾನುಮಲ್ತೆ ದೋ-
ಶ್ಚಕ್ರಮೆಂದು ಬಂದು ಮುಂದೆ ನಿಲ್ವ ಮಾಳ್ಕೆಯಿಂ ಪ್ರಭಾ-|
ಚಕ್ರಮೆಸೆಯೆ ಚೆಲ್ವುವೆತ್ತುದುದಯಮೆಂದು ಪದ್ಮಿನೀ-
ಚಕ್ರವಾಳಚಕ್ರವಾಕಚಕ್ರ ಚಕ್ರವರ್ತ್ತಿಯಾ ||೫೫||

ಆಗಳ್ ಪ್ರಭಾತಕಾಲನಿ-
ಯೋಗಮನಾಚಕ್ರವರ್ತ್ತಿ ನಿರ್ವ್ವರ್ತ್ತಿಸಿ ಪೋ |
ಪೋ[೫]ಗಲ್ವೇೞ್ ಶಯಣಮನೆಂ-
ದಾಗಳ್ ತರವೇ[೬]ೞ್ ವಿಜಯಪರ್ವ್ವತಗಜಮಂ ||೫೬||

೧-೧ (ಆ, ಬ) ವಳಿನೀವ್ಯಂದಂ. ೨-೨ (ಅII) ಕಟದೊಳ್. ೩-೩ (ಅ) ಡಿರ್ದ್ದ ೪ (ಚ) ಡನೆ. ೫ (ಅII) ಪಾ. ೬ (ಅ) ಳ್ದ, (ಚ) ಬ್ದು.

ವ|| ಅಂತುಸುಮೂಪತರಸುಂ, ಸುರಭಿನಿಶ್ವಾಸನುಂ, ಶಂಖಚಕ್ರನಂದ್ಯಾವ-
ರ್ತ್ತಸ್ವಸ್ತಿಕಧ್ವಜಾವರ್ತ್ತರಕ್ತಬಿಂದುಚಿತಸುಂ, ಮೃದು[೧]ದೀರ್ಘವಿಸ್ತೃತಾಂಗುಲಿ-
ಯುಂ, ಮಾಸಪೂರ್ವ್ವಪೀತ[೨]ವೃತ್ತ[೩]ಮೃದುಲ[೩]ತಿರ್ಯ್ಯಗ್ವಿಲೋಲಮೃದುಶಿ—
ರೋ[೪]ರುಹಹಸ್ತಸುಂ,[೪] ಸುಸ್ನಿಗ್ಧಸಮಪೂರ್ವ್ವವೃತ್ತಸಮನಾಹಪರಿ[೫]ಪೂರ್ಣಸಿತ-
ವೃತ್ತ[೫]ಪಂತ[೬]ಪರಿವೇಷಿತಸುಂ, ಆಯತಪೃಥುಪಿಬಸ್ಥಾ[೭]ಸುಪದಿ[೮]ಗ್ನಾಂದ[೮]ಪೂ-
ರ್ವ್ವಪೀನರಕ್ತಾಧೋಮಾಶ್ಲಿಷ್ಟಸಮಸಮಾಸಗದಾನುತ್ಕೃಷ್ಟಪರಿಪೂರ್ಣ್ಣಮುಖ—
ಸುಂ, ಮಾಸೋನ್ನತಾವನತಕುಂಭನುಂ, ಸ್ಥಿರಪ್ರಸನ್ನದೃಷ್ಟಿರಕ್ತಾಪಾಂಗಮಧು—
ಪಿಂಗಲವ್ಯಕ್ತಶುಕ್ಲಕೃಷ್ಣಭಾಗಸ್ನಿಗ್ಧಮೃದುಸೂಕ್ಷ್ಮನೀಲದೀರ್ಘಬಾಹುಲಾಂಚಿತ-
ಪಕ್ಷ್ಮನೇತ್ರನುಂ, ಮೃದು[೯]ಸುವೃತ್ತ[೯]ಬಹಲಪ್ರಲಂಬ[೧೦]ಶಿವಾತರ[೧೦]ಮುಹಾಸ್ರೋ[೧೧]
ತ್ರೋಪರಿ[೧೨]ಭಿನ್ನಾಂತಸುತ್ಕೃಷ್ಟಾವಿಪುಲಚೂಲಿಕಾಮುಂದುಭಿನಿರ್ಘೋಷಕರ್ಣ್ಣ—
ನುಂ, ಸ್ನಿಗ್ಧಕೃಷ್ಣಬಹುಲದೀರ್ಘ[೧೩]ಕೇಶನುಂ, ಉತ್ಪನ್ನ[೧೩]ಸಮ್ಯಸ್ಯಮುಗತ—
ವ್ಯಾತಮಸ್ತಕ[೧೪]ಲಂಡ[೧೪]ನಿರ್ವ್ಯನಿರ್ಯ್ಯಾಣೋನ್ನತಾ[೧೫]ವಗ್ರಾಹ[೧೬]ವಿಭಕ್ತ[೧೬]
ವಿಧುವಿಧಾ[೧೭]ನಶರೀರನುಂ, ಅಲ್ಪಘಾಟನುಮುನ್ನತ[೧೮]ಶಿಖನುಂ,[೧೮]ಪೀನ[೧೯]—
ಮಾಂಸಕ[೧೯]ಟಶ್ಲಿಷ್ಟನುಮತಿದೀರ್ಘಸ್ನಿಗ್ಧಕೃಷ್ಣ[೨೦]ಮುದನು[೨೦]ಮನುಪೂರ್ವ್ವದೀ—
ರ್ಘವಾಲಧಿಯುಂ, ಮಾನುಷ[೨೧]ದುಗ್ಧವಿಲಾಸನೋಪೇತಪೇಚಕನುಂ,[೨೧]ಸಮು-
ಸಂಕ್ಷಿಪ್ತಪ್ರಚ್ಛನ್ನವಪ್ಪಾಯು[೨೨]ಮಪಿಂಜೋತ್ಪ[೨೩] ನ್ನಾಂಡಕೋಶನು[೨೩]ಮುಪರಿ-
ಭಿನ್ನಾಂತಶ್ಲಕ್ಷ್ಣಶ್ಲಿಷ್ಟಸಂನಿನಿಕಾಂತರ[೨೪]ಸುಸನ್ನಿವಿಷ್ಟ[೨೪]ಸುಸಂವೃತ್ತಾಂತದರ್ದ್ಧ
ಚಂದ್ರಾಕಾರವಿಂಶತಿನಖನುಮನುಪೂರ್ವೋಚಿತಮಾದಿಸ[೨೫]ಸ್ನಿತ[೨೫]ನೋಪ—
ದಿಗ್ಧಗಾತ್ರಪರನುಂ, ಪೀನೋಪಚಿತ ಮಾಂಸ[೨೬]ವಕ್ಷೋನಾ[೨೬]ಭಿಕಪೋಲೋ—
ರೋಮಣಿಯುಂ, ಪೀನಾಯತಾಪ್ರಪಲ್ಲವಕೋಶಸುಕೋಶ[೨೭]ಮೋಹನನುಂ, ವಿ-
ಪುಲಾಸನನುಮನುಪೂರ್ವ್ವಧರನಾಕಾರವಂಶನುಂ, [ಋಜು][೨೮]ಪರಿಪೂರ್ಣಹ್ರಸ್ವ-
ಗ್ರೀವನುಂ, ಮಹಾವ್ಯೂಢೋರಸ್ಕನುಂ, ವಿಪುಲೋಪಚಿತಾಂಸನುಂ, ಸಮಪಾರ್ಶ್ವನು

೧ (ಚ) ಗ. ೨ (ಚ) ಡ. ೩-೩ (ಚ) ಮೃದು. ೪-೪ (ಚ) ರುಹನುಂ ೫-೫ (ಚ) ಪೂರ್ಣ ವೃತ್ತ. ೬ (ಚ) ಡ. ೭ (ಚ) ಸ್ತ. ೮-೮ (ಆII,ಬ) ದಿಗ್ನಾಂತ; (ಚ) ದಿಗ್ಧಾಂದ. ೯-೯ (ಚ) ವಿತ್ರ. ೧೦-೧೦ (ಅ) ಸೇವಾತರ; (ಬ) ಶಿರೋತರ. ೧೧ (ಚ) ಶ್ರೋ. ೧೨ (ಚ) ತ್ರಿ. ೧೩-೧೩ (ಅ) ಕೇಶಾನುತ್ಪಂನ; (ಬ) ಕೇಶನುತ್ಪಂನ. ೧೪-೧೪ (ಅ,ಬ) ಲಂಡಾ. ೧೫ (ಚ) ತೋ. ೧೬-೧೬ (ಅ) ಸನ್ನಿಭಕ್ತ; (ಬ) ನಿಭಕ್ತ. ೧೭ (ಅ,ಬ) ತಾ. ೧೮-೧೮ (ಅ,ಬ) ಶೀಕರನುಂ. ೧೯-೧೯ (ಅ, ಬ) ಪಾಂಸಿ. ೨೦-೨೦ (ಅ,ಬ) ಮಂಡಲನುಂ. ೨೧-೨೧ (ಅ,ಬ) ದಿಕ್ವಾ-ವಿಲಾಸ ಪೇಚಕನುಂ. ೨೨ (ಅ,ಬ) ಯುಂ. ೨೩-೨೩ (ಅ,ಬ) ನ್ನಾಡಿಕೋಶನುಂ. ೨೪-೨೪ (ಅ,ಬ) ಸುನಿಪಿಷ್ಟ. ೨೫-೨೫ (ಆII,ಚ) ಸ್ಥಿರ. ೨೬-೨೬ (ಅ,ಬ) ವಿಕ್ಷೋಭಿ. ೨೭ (ಬ) ಶ್ವ. ೨೮ (ಅ,ಬ,ಚ) ಭೇಋು. ಯಶಸ್ತಿಲಕಚಂಪುವಿನಲ್ಲಿ "ಋಜು" ಎಂದಿದೆ.

ಮಜಕುಕ್ಷಿಯುಂ, ಗೋಘೋತ್ರಿ[೧]ಷ್ಟನುಂ, ಮೋಹಜಘನಾಪರನುಮ[೨]ನಿಮ್ನನಾ-
ಭಿಯುಂ,[೨]ಹ್ರಸ್ವಚೂಚುಕನುಂ, ಸುವೃತ್ತ[೩]ಪ್ರಸ್ತಾರನುಂ,[೩]ಸುಸಂಚಿತಪ್ರೋಹ-
ಘಳೀಹಸ್ತಗಾತ್ರನುಂ, ಪರಿಪೂರ್ಣ[೫]ಶ್ಲಿಷ್ಟ[೫]ಪಾರ್ಷ್ಣಿಯುಮಂಸಳಕಾಳಭಾಗನುಂ,
ಮೃದುಸ್ನಿಗ್ಧಪ್ರಭೂತಸೂಕ್ಷ್ಮೈಕಜಾತರೋಮನುಮಪ್ರಿಣಾಕಭಾವಿಳಶ್ಲಿಷ್ಟಿತಜ-
ಳನುಂ, ಶ್ಲಕ್ಷ್ಣಸ್ನಿಗ್ಧಮೃದುಬಹಲಚ್ಛವಿಯುಂ, ಬಂಧುಜೀವಶಾಕಪುಷ್ಪ[೬]ಸಪದ್ಮ-
ಮಹಾರಜತಕಂ[೭]ಖಾಸ[೮]ತಳವೆಂಬ ಸಪ್ತಪ್ರ[೯]ಸ್ಥಿತನುಮಪ್ಪ ವಿಜಯ-ಪರ್ವ-
ತಗಜೇಂದ್ರಂ ಬಂದು ಮುಂದೆ ನಿಲ್ವುದುಂ,

ಇಪನಾಸೆ ಮಾಡುವಾಗಳ್
ಬಿದಿ ಗಿರಿಗಳ್ ನೆರೆದ ರೂಪಪರಮಾಣುಗಳಂ-।
[೧೦]ಪದಿನಿರ್ಮವಕ್ಕು[೧೦]ಮೆನೆ ತನ[೧೧]
ಗೊಪವಿದ[೧೨]ಗುರ್ವ್ವಿಸೆಯೆ ಮುಂದೆ[೧೨]ನಿಂಪತ್ತು ಗಜಂ ||೫೭||

ವ|| ಅಂತು ದಿಗ್ಗಜೇಂದ್ರ[೧೩]ದೇವಾಂಶದೊಳ್[೧೩]ನಿರ್ಮಿಸಿದಂತಿರ್ದ್ದ ವಿಜ-
ಯಪರ್ವತ[೧೪]ಗಜೇಂದ್ರಮಂ ನೋಡುವಾಗಳ್,[೧೪]

ಪರಿಪೂರ್ಣೋತ್ಕಟದಾನಧಾರೆ ಕಟದಿಂ ಪಾಯ್ತಿರ್ಪ್ಪುದುಂ ಪೆರ್ಚ್ಚಿ ಪು-
ಷ್ಕರದಿಂ ಶೀಕರನಿರ್ಝರಂ ಸುರಿವುದುಂ ನೇತ್ರಂಗಳೊಳ್ ಬಿಂದು ಬೆಳ್ ।
ನೊರೆಯುಂ[೧೫]ಪೋಲ್ತುದುಮುರ್ಬ್ಬಿ[೧೫]ಕಾಮುರ್ಕ್ಕಿಗಿಲ ನೀರ್ಪ್ಪೋಲ್-
ಕೋಶದಿಂದಂ ಮದಂ-
ಸುರಿಯುತ್ತಿರ್ಪ್ಪುದುಮೊಪ್ಪೆ ಚಕ್ರಿಯ ಮನಂಗೊಂಡತ್ತು ಮತ್ತದ್ವಿಪಂ ||೫೮||

ದಕ್ಷಿಣ[೧೬]ಕಟದೊಳ್ಸಿವುಱುವ[೧೬]
ದಕ್ಷಿಣರದನದೊಳೆ ಹಸ್ತಮಂ ಪೇಱುವ ಜೆ-
ಲ್ವೀಕ್ಷಣಹರಮೆನೆ ಜಯಮನ-
ನಕ್ಷರಮಱಿಪಿದುದು ಭರತರಾಜಮದೇಭಂ ||೫೯||
ದಂತೋತ್ಸಂಗಸ್ಥಿತಜಯ-
ಕಾಂತೆಗೆ ಚೆಲ್ವಾಗೆ ಪಿಡಿದ ಸೀಗುರಿ[೧೭]ಗಳೆವೆಂ[೧೭]-।

---

೧ (ಅ,ಬ)ತ್ಸ್ಯ. ೨-೨ (ಅ,ಬ) ನಂನಾಭಿಯುಂ. ೩-೩ (ಜ) ಪಸ್ತಾರನುಂ. ೪ (ಅ,ಬ) ಪ. ೫-೫ (ಅ)ಶ್ರೀಷ್ಟ; (ಅII) ತುಷ್ಟ. ೬ (ಜ) ಷ್ಪಾ. ೭ (ಅ,ಬ) ಸಂ. ೮(ಅ,ಬ) ಶ. ೯ (ಜ)ಧಾ. ೧೦-೧೦ (ಅ,ಬ) ಪದಿನಿಲ್ವುವಕ್ಕು. ೧೧ (ಅ,ಬ) ನು. ೧೨-೧೨ (ಅ,ಬ) ಪರ್ವೆಸೆಯೆ ಬಂದು. ೧೩-೧೩ (ಅ,ಬ) ದೇವಾವಾಸಂಗಳೊಳ್. ೧೪-೧೪ (ಜ)ಗಜಮಂ ನೋಡಲೊಡಂ. ೧೫-೧೫ (ಅ,ಬ) ಪೋಲ್ವುದುಮೊಪ್ಪಿ. ೧೬-೧೬ (ಜ) ಕಟಮನೆ ಸಿವುಱುವ. ೧೭-೧೭ (ಜ) ದ-ಬಿಕೆಯೆಂ.

[೧]ಬಂತೆ ಪೊಲೆಸೆದುವು ಮದಜಲ-
ಮಂ[೧]ತಣಿಯುಣಲೆಱಗಿ ಸುೞಿವ ಮದಮಧುಪಂಗಳ್ ॥೬೦॥

ಇದು ವಿದ್ವಿಷ್ಟಪ್ರತಾಪೋದಯದವದಹನೋದ್ರೇಕವಿಧ್ವಂಸಿನೀಲಾಂ-
ಬುದಧಾರಾಸಾರಮೆಂಬಂತೊಪವಿದ ಮದಧಾರಾಜಲಾಸಾರದಿಂದು-।
ರ್ವ್ವಿದಗುರ್ವ್ವಂ[೨]ತಾಳ್ದಿ ನಿಂದೂರ್ಜ್ಜಿ[೨]ತಜಯಗಜಮಂ ರಾಗದಿಂದೇಱಿದಂ ನೀ-
ರದಗರ್ಜ್ಜ[೩]ದ್ಘೋರಿ[೩]ಭೇರೀರವಬಧಿರಿತದಿಙ್ಮಂಡಲಂ ಸಾರ್ವ್ವಭೌಮಂ ॥೬೧॥

ವ॥ ಅಂತಧರೀಕೃತಸಪ್ತಚ್ಛದಾಮೋದ[೪]ಗಜಮದ[೪]ಗಂಧಾಂಬುಕುಲ್ಯಾಪ್ರವಾಹಮೊಳಮಪಹಸಿತಶರದಿಂದುಕುಂದಸ್ತಬಕಕರ್ಣ್ಣಚಾಮರರಾಜಹಂಸಸ[೫]ಲೀಲೋತ್ತಂಸಮೊಳಂ, ವಿಜಯಶ್ರೀಕೇಶಹಸ್ತ[೬]ಶಂಕಾಕಾರಿಶಂಖ[೬]ಕೇಲೀಮಯೂರಶೋಭೆಯೊಳಂ, ಗಗನಗಂಗಾತರಂಗಾಯಮಾನಕದಲಿಕಾಕಾನನಕಮನೀಯದೊಳಂ, ವಿಕ್ರಮಕ್ರೀಡಾಪರ್ವ್ವತಮಿಪ್ಪಂತಿರ್ದ್ದ ವಿಜಯಪರ್ವ್ವತಗಜೇಂದ್ರಮನೇಱಿ ದಂಡಚಕ್ರರತ್ನಂಗಳ್ ಮುಂದೆ ನಡೆಪನನುಕೂಲಾನಿಲಾಂದೋಲಾಯಮಾನರಾಜಕುಂಜರವಿಜಯಕದಲಿಕಾತರಂಗಿತಗಗನಾಂಗಣನುಮು[೭]ದಾತ್ತಹೇಷಾರವ[೭]ಮು[೮]ಖರಿತ[೮]ಬಹುಭಂಗಿ[೯]ರಂಗ[೧೦]ತ್ತರಂಗಿತ[೧೦]ಧರಣೀತಲಾಂಗಣನುಮನೇಕಸೇವಕಕ್ಷತ್ರಿಯಾತಪತ್ರಮಂಡಲಪಿಹಿತದಿನಕರನುಮುಚ್ಚಲಿತಬಹಲಧೂಲೀಪಟಲಪಿಹಿತರಿಪುನೃಪತಿನಗರನುಮತಿಪ್ರಚುರಚಲದವನಿಪಾಲ ಸಂಚಲಚ್ಚಾಮರಮರುತ್ಪ್ರೇಂಖೋಲಿತಾಭರಣವಿಚಿತ್ರನೇತ್ರವೈಜಯಂತಿಕಾಂಚಲನುಮತಿಚಕಿತಾರಾತಿಶುದ್ಧಾಂತಕಾಂತಾತ್ಯಂತಚಿಂತಾಶ್ವಾಸಾನಿಲಾಂದೋಲಿತಕುಚನಿ[೧೧]ಚಯಾಂಚಲನುಮುದ್ದಾಮಪದಾತಿಪದಕ್ಷೋಭಸಂಚಲಿತಧರಾಚಕ್ರನುಮಖಿಲ[೧೨]ದಿಗ್ವಿಜೃಂಭಣ[೧೨]ಪ್ರಯಾಣಮಂಗಲಾನಕಾನೇಕರವಶ್ರವಣಕಂಪಿತಪರಚಕ್ರನುಮಾಗಿ ನಡೆಯೆ,

ಅಡಿಯಿಡಲೀಧರಾವಳಯಮಿಟ್ಟೆಡೆಯೆಂಬಿನಮಭ್ರಮಂಡಲಂ
ಕಡು[೧೩]ನಳಿದಾದುದೀ[೧೩]ಬಲದ ಧೂಳಿಯೊಳೆಂಬಿನಮೊಂದನೊಂದು ತ-।
ಳ್ತಿಡೆಗಿಱಿದೆತ್ತಲುಂ ನಡೆವ ದಂತಿ ಘಟಾಳಿಯನೆತ್ತವೋದುದಾ-
ವೆಡೆಯದು ಪೇೞ್ ದಿಶಾವಳಯಮೆಂಬಿನಮಾದುದದೊಂದು ವಿಸ್ಮಯಂ ॥೬೨॥

೧–೧ (ಅ) ಬಂತೆಸೆದವು ಮದಜಲಮಧು; (ಬ) ಬಂತೆಸೆದುವೊಪ್ಪಿಉಮದಜಲ ಮಧುವಂ. ೨–೨ (ಅ, ಬ) ತಾಳ್ದು ಮತ್ತೂರ್ಜ್ಜಿತ. ೩–೩ (ಅII) ಜ್ಜನ್ಯ. ೪–೪ (ಅ,ಬ) ಮಂದ. ೫ (ಬ) ವಿ. ೬–೬ (ಅ) ಶಂಕಾಕಾರಿಶಂಕು; (ಬ) ಸಂಖಾತಿಶಯ. ೭–೭ (ಅ,ಬ) ದಾರಮಧುರ ಹೇಷಾರವ. ೮–೮ (ಅ,ಬ) ರ. ೯ (ಅ) ಗ. ೧೦–೧೦ (ಅ) ತ್ತುರಂಗತರಂಗಿತ. ೧೧ (ಚ) ಸಿ. ೧೨–೧೨ (ಅ,ಬ) ದಿಗ್ವಿಜೃಂಭಣಯಾಣ. ೧೩–೧೩ (ಅ) ದಳವಾಡುದೇ; (ಬ) ವಡಿಲಾದುದೀ.

೧ತಡೆಪಂ೧ ಗಂಗಾದ್ವಾರದಿ-
ನೆಡೆಯೊಳ್ಬೀಡಿಲ್ಲ ಭರತರಾಜಂಗೆಂಪೇಂ।
ನಡೆದು ಪೆರ್ದ್ವಡೆ ಗಂಗೆಯು
ತಡಿವಿಡಿಪೆರಡನೆಯ ಗಂಗೆ ನಡೆವಂತಾಗಳ್ ॥೬೩॥

ಸಾಗರಮೊಳಗಿರ್ಪನೇಕದ
ಮಾಗಧನಂ ಕಟ್ಟಿಪಲ್ಲದಿರನರಸನೆನಿಸು-।
ತ್ತೋಗಡಿಸದೆ ನಡೆಪುದು ಬಲ-
ಸಾಗರಮಾಸಾಗರಂಬರಂ ತರತರದಿಂ ॥೬೪॥

ಚತುರಂಗಬಲಸಮನ್ವಿತ-
ರತರ್ಕ್ಯವಿಕ್ರಮರನೇಕಕರಿತುರಗಮಣಿ-।
ಪ್ರತತಿಗಳಂ ೨ಮುಂದಿಟ್ಟುಪ-
ನತ೨ರಾದರ್ ಚಕ್ರಿಗಳ್ಗೆ ಮಂಡೋಪನತರ್ ॥೬೫॥

ಅತಿಘನಮುಮಂ ತಮಗೆ ಚಮೂ-
ಪತಿಮಾಡಿದೊಡಳ್ಕಿ ಕುಪ್ಯ ಸಾರಾದಿಧನ-।
ಪ್ರತತಿಯನಿತ್ತೆತ್ತಂ ಪ್ರತಿ-
ಹತಭುಜವಿಕ್ರಾಂತರಂತಪಾಲರ್ ಕಂಡರ್ ॥೬೬॥

ಕಸ್ತೂರಿಕಾಂಡಕಂ ೩ವನ-೩
ಹಸ್ತಿರದಂ ಹಸ್ತಿಮಸ್ತಕೋದ್ಭವಮುಕ್ತಾ-।
ವಿಸ್ತಾರಮೊಂದು ತಂದು ಸ-
ಮಸ್ತವನಾಧೀಶರವನಿಪತಿಯಂ ಕಂಡರ್ ॥೬೭॥

ವ॥ ಮತ್ತಂ ಪ್ರಾಚ್ಯಾರ್ಣವತಟನಿಕಟವರ್ತ್ತಿಗಳಪ್ಪತಿಪ್ರಚಂಡ೪ಮಂಡ-
ಲಾಧೀಶರ್ ಭರತೇಶ್ವರ೪ಚಕ್ರವರ್ತ್ತಿಯ ಬರವಂ ಕೇಳ್ದು,

ಕರಿಸಂಘಾತಮುಮಂ ಹಯವ್ರಜಮುಮಂ ಪಿಂತಿಕ್ಕಿ ತೂರ್ಯ್ಯಸ್ವನೋ-
ತ್ಕರಮಂ ಮಾಣಿಸಿ ಹೇತಿಮುಕ್ತಭಟ೫ದೋರ್ದಂಡಾಗ್ರ೫ಶುಂಭದ್ಧ್ವಜೋ-।
ತ್ಕರಸಂದೋಹಮುಮಂ ಬಿಸುಟ್ಟುಡುಗಿ ಪಿಂಛಚ್ಛತ್ರಮಂ ಪ್ರಶ್ರಯಾ-
ಕರವೇಷೋಚಿತರರ್ಘ್ಯಹಸ್ತರಿದಿರಂ ಬಂದರ್ ಭಯಭ್ರಾಂತಿಯಿಂ ॥೬೮॥

---

೧-೧ (ಅ) ತಡವೇಂ; (ಬ) ತಡನೇಂ. ೨-೨ (ಅ) ಮುಂದಿಟ್ಟುಪನತ. ೩-೩ (ಅ)ನವ. ೪-೪ (ಬ) ಮಂಡಲಾಧೀಶ್ವರರ್ಭರತೇಶ್ವರ. (ಚ) ಮಂಡಳಿಕರ್ ಭರತೇಶ್ವರ. ೫-೫ (ಅ,ಬ) ದೋರ್ದ್ವಂಶಾಗ್ರ.

ವ|| ಅಂತು[೧]ಸಮಸ್ತ[೧]ಬಲಂ ಬೆರಸೆಲ್ಲಿಯುಂ ನಿಲ್ಲದೆ ಬಂದು ಕಾಲಾಸುಭಾವಮಂ ಯುಗಾರಂಭವರ್ಷಾರಂಭದೊಳ್ ತಗುಳ್ದು[೨]ದ್ವೀಪಂಗಳೊಳಗಣ [೨]ನದೀನದಂಗಳ ಜಲಂಗಳನೊಳಕೊಂ[೩]ಡಲಂಘತ್ವದೊಳಂ ದ್ವೀಪಪ[೪]ರ್ಯ್ಯಂತ[೪]ವೇಷ್ಟನದೊಳಂ ನೆಱೆದು ವಜ್ರವೇದಿಕೆಯಿಂ ಪೊಱಪೊಣ್ಮಿದ ಲವಣಸಮುದ್ರದೊಳಗನೆ ಪೋಲ್ತಿರ್ದ್ದಪಸಮುದ್ರದ ತಡಿವಿಡಿದಿದಂ[೫]ನೋಡುತ್ತಂ[೫]ಬಂದು ಗಂಗಾದ್ವಾರದ ವಜ್ರವೇದಿಕೋತ್ತುಂಗ ತೋರಣದ್ವಾರದಂತ[೬]ರ್ವ್ವಣದೊಳ್ ನಾಲ್ವತ್ತೆಣ್ಗಾವುದನೀಳದ ಮೂವತ್ತಾಱು ಗಾವುದಗಲದ[೭] ಬೀಡಿಂಗೆ ವಾಸ್ತುವಿಭಾಗಕ್ಕೆ[೭]ಡೆ[೮]ಯಿಲ್ಲದೆ[೮] ಕುಱುಂಬಗಳೊಳ್[೯]ಬೀ[೯]ಡಂ ಬಿಡಿಸಿದಾಗಳ್,-

ಗಂಗಾದ್ವಾರಾಂತರ್ವ್ವಣ-
ತುಂಗಕುಜಂಗಳ ನೆಬಿಲ್ಗಳಂ ತೀಡುವ ತ-|
ದ್ಗಂಗಾತರಂಗಮುದದ-
[೧೦]ಸಂಗಮುಮೋಂ[೧೦] ಪಡೆಯ ಸೇದೆಯುಂ [೧೧]ಕಿಡಿಸಿದುದೋ[೧೧] ||೧೯||

ವ|| ಆಗಳ್,

ಭುವನಸ್ತುತ್ಯಾದಿ ಚಕ್ರೇಶ್ವರಬಲರಜದಿಂ ಪೂತವಾಗಿರ್ದ್ದನೆಂಬು-
ತ್ಸವದೊಳ್ ವೇಲಾತರಂಗೋತ್ಕರಕರಚಯದಿಂದಾಡುವಂತಿರ್ದ್ದ ಪೂರ್ವ್ವಾ-|
ರ್ಣ್ಣವಮಂ ಬಾಹಾಬಲೋಪಾರ್ಜ್ಜಿತವಿಜಯಯಶೋದುಂದುಭಿಧ್ವಾನಧೀರಾ-
ರವಮಂ ಕೈಕೊಂಡುದಂ ಕ್ಷತ್ರಿಯಕುಲತಿಲಕಂ ನೋಡಿದಂ ಚಕ್ರನಾಥಂ ||೨೦||

ವ|| ಅಂತು ಗಗನತಳಮಂ ತಱುಂಬುವಂತೆ ನೆಗೆದ ವಜ್ರವೇದಿಕೆಯುಮಂ ಅಂಬುದ ಪಥಕ್ಕಾಲಂಬಮಿರ್ಪ್ಪಂತಿರ್ದ್ದ ಲವಣಾಂಬುರಾಶಿಯುಂ ನೋಡಿ,

ಎನಗೆ ಪೊಸಂತಿಲೀ[೧೨]ನೆಗೆದ[೧೨] ವಜ್ರದ ವೇದಿಕೆ ಗೋಷ್ಪದಂ ದಲೀ-
ವನನಿಧಿ ಪಾಯ್ದು ಮಾಗಧನನೀಗಳೆ ಕಟ್ಟುವೆನಿಲ್ಲಿ ಪೂಣ್ದು ನಿ-|
ಲ್ವನಿತುವರಂ ಸುರಂ ಗಹನಮೇ ಪುದಿದಪ್ಪಳಿಪೆನ್ನ ಕಾಯ್ದು ಪೋ-
ಪಿನಮಿರದೀಗಳೀಂಟುವೆನೊ ದಾಂಟುವೆನೋ ಲವಣಾಂಬುರಾಶಿಯಂ ||೨೧||

---

೧-೧ (ಅII) ಭಯಭ್ರಾಂತಿವೆರಸು ಬಂದು ಕಂಡಿಂ ಬಳಿಯುಂ; (ಚ) ತನ್ನ. ೨-೨ (ಚ) ದ್ವೀಪದೊಳಗಣ. ೩ (ಅ) ಡುಪು. ೪-೪ (ಅ) ಪರ್ಯ್ಯಂತರ. ೫-೫ (ಚ) ನೋಡುತ್ತಂತೆ. ೬-೬ (ಚ) ತುಂಗಕುಜಂಗಳನೆಬಿಲ್ಗಳೊಳ್ ನಾ. ೭-೭ (ಅ) ಬೀಡಿನ ವಾಸ್ತುಹಿ ವಿಭವಕ್ಕೆ. ೮-೮ (ಬ) ನೆರೆಯುದೆ. ೯-೯ (ಅ,ಬ) ಳೊಳೆ ಬೀ. ೧೦-೧೦ (ಅ) ಗ್ಗ. ೧೧-೧೧ (ಅ) ಸಂಗತಮುಂ. ೧೨-೧೨ ಪಿಂಗಿಸಿತೋ.

ಚಕ್ರಮಿದೊಳೇಂ ಮತ್ತೆ [೧]ಜಗ-
ಚ್ಚಕ್ರ[೧]ಮೆ ಮುಂದಕ್ಕೆ ದಂಡರತ್ನಂಬರ[೨]ಮಾರ್- |
ಚಕ್ರ[೨]ಮೆನಗಹಿತಧರಣೀ-
ಚಕ್ರದೊಳಿನ್ನೆನ್ನ ಬಾಹುದಂಡಮೆ ಸಾಲ್ಗುಂ ||೭೨||

ವ|| ಎಂದು ನಿಜಭುಜಬಳಾವಲೇಪದಿಂ ಮುಂದಿಟ್ಟು ನುಡಿದ ಚಕ್ರ-ವರ್ತಿಯಂ ಪುರೋಹಿತಪ್ರಮುಖಕುಳವೃದ್ಧರ್,

ದೇವರ ಭುಜಗರ್ವಕ್ಕೆ-
ನಾವುಮರಿದುಂಟೆ ಸಂದ ಚಕ್ರಿಗಳೆಸಕಂ |
ದೇವ ನಿನಗೆಸಕಮದಱೊಳೆ?
ದೇ[೩]ವರ್ ನೆಗಳ್ಚಿರ್ಪೆ[೩]ಯೆಂಬುದುಮಾಗಳ್ ||೭೩||

ಅಧಿವಾಸಿತಜೈತ್ರಾಸ್ತ್ರಂ
ವಿಧುವಿಶದದುಕೂಲವಸನಶೋಭಂ ನಾನಾ- |
ವಿಧ ಮಂತ್ರನ್ಯಾಸ-
ಪ್ರಧಾನಸುಪವಾಸದಿಂ ತ್ರಿರಾತ್ರಮನಿರ್ದಂ ||೭೪||

ವ|| ಅಂತು ದರ್ಭಶಯನತಳಗತನಾಗಿರ್ದು ಪಂಚಪರಮೇಷ್ಠಿಗಳ್ಗೆ ಪೂಜೆಯಂ ಪುರೋಹಿತಂ ಮಾಡಿ ಶಾಂತಿಕಪೌಷ್ಟಿಕಕ್ರಿಯೆಯುಂ ನಿರ್ವರ್ತಿಸಿ ಮಱುದಿವಸಂ ನೇಸರ್ ಮೂಡೆ ಮಂಗಳಾಲಂಕರಣಾಳಂಕೃತನಾಗಿ ಪಡೆವಳ್ಳಸಂಪಡೆಗೆ ಕಾವುವೇೞ್ದು ದಿವ್ಯಾಸ್ತ್ರಂಗಳಿಂ ತೆಕ್ಕನೆ ತೀವಿ ಜಲಸ್ಥಲಾವಿಲಂಬಿಗಳಪ್ಪ ಗಿಳಿಯ ಬಣ್ಣದ ಕುದುರೆಗಳೊಳ್ ಪೂಡಿದಜಿತಂಜಯಮೆಂಬ ರಥಮನೇಱಿ ತನ್ನ ಮನದನ್ನನಪ್ಪ ಸಾರಥಿಯುಂ ಚೋದಿಸಲ್ವೇೞ್ದು ವೇದ್ಯಾರೋಹಣಂ ತನಗೆ ವಿಜಯಶ್ರೀವಿವಾಹವೇದ್ಯಾರೋಹಣಮನೆ ಪೋಲೆ,

ವೇದಿಯನಾತ್ಮಗೃಹಾಂಗಣ-
ವೇದಿಯೊಳೆಣೆಯಾಗಿ[೪] ಬಗೆದು ಜಳಧಿಯುಮಂ ಲ- |
ಕ್ಷ್ಮೀದಯಿತಂ ನೀರ್ವರಿಯಿಂ-
ದಾದಮೆ ಕಿಱಿದೆಂದು ಬಗೆದು ನೋಡಿದನಾಗಳ್ ||೭೫||

ವ|| ಅಂತು ತನಗೆ ವಿಜಯಕಾರ್ಯಸಿದ್ಧಿದ್ವಾರಮಿರ್ಪಂತಿರ್ದ ಗಂಗಾದ್ವಾರದೊಳಗನೆ ಲವಣಜಳಧಿಯಂ ಪೊಕ್ಕಾಗಳ್,

೧-೧ (ಅ) ಜಸಚ್ಚಕ್ರ; (ಬ) ಜಯಚ್ಚಕ್ರ. ೨-೨ (ಚ) ಮಾಚಕ್ರ. ೩-೩ (ಅ) ಳ್ದೇ. ೪ (ಚ) ಗೆ.

ನೆಗೞ್ದೆನ್ನ ಗುಣಮುಮಂ ಪ್ಸ್ಯಂ
ಜಗದೊಳವಂ ಕಿಡಿಸಿದಪ್ಪನೀಸ್ಸಪಸೆಂದ[೧]-|
ಜ್ಞಗಪೊಳೆ ಪ್ರುಯ್ಯಲಿಪಂತೆಪ್ಪೊ-
ಳೆಗೆಪುದು ಜಲ[೨]ಪನಿಲ[೨]ಹತಪಯೋನಿಧಿ[೩]ನಿನದಂ[೩] ||೭೬||

ಸ್ಫ್ರೀಸ್ಫತ್ತರಂಗಬಾಹು ಸ-
ಮುಪ್ಯಜ್ಞೀಕರವಿಮಿಶ್ರಮುಕ್ತಾಕ್ಷತದಿಂ-|
ನಾಘ್ಯಮುಮೀಪತಿಗೆತ್ತಿದ
ಪಾರ್ಘ್ಯಮನನುಕರಿಪುದಾಯ್ತು ವಾರ್ಧಿವಿಲಾಸಂ ||೭೭||

ತರಲತರಂಗತುರಂಗಂ
ಕರಿಮಕರಕರೀಂದ್ರಮಮಿಲಸಫರಪದಾತ್ಯು-
ತ್ಕರಮುಗ್ರಗ್ರಾಹರಥಂ
ಭರತಂಗಿತ್ತುದು ಪಯೋಧಿಬಳವಿಳಸನಮಂ ||೭೮||

ಪುಗೆ ಪಲವುಂ ತೊಱೆಗಳ್ ನೀ-|
ರಗಾಧಜಳರಾಶಿ ಕುಡಿದು ತಣಿಯದೆ ಪಾತಾ-|
ಳಗಣಂಗಳಪೆತ್ತಂ ತಾ-
ಳ್ವುಗೆಪರೆಗಂ ತೆಱೆದ ಬಾಯನನುಕರಿಸಿಕ್ಕುಂ ||೭೯||

ವ|| ಮತ್ತ[೪]ಮಂಬರಂಬರಂ[೪] ಬ[೫]ಳೆದು ಮಿಳಿರ್ವ[೫] ತೆರೆಗಳೆಂಬ ಗಿರಿಗಳ ಮೇಗೆ ಕೃತಕಗಿರಿಗಳಿರ್ಪಂತಿರ್ದ್ದ[೬]ವೀಣಾಧರ[೬]ಕಿನ್ನರಪನ್ನಗಾಮರರುಮನೋಳಿಪಟ್ಟು ಬರ್ಪ ಶಂಖದ ಬಳ್ಳಿವಳ್ಳಿಗಳುಮನಳ್ಳಿವಿಳ್ಳಿಯಾಗಿ ಪೋಗಲೀಯದೆ ತಳ್ತು ಪರಭಾಗಂಬಡೆದ ವಿದ್ರುಮಲತೆಗಳುಮಂ ಕರಿಮಕರಂಗಳ ಕಯ್ಯೋೞನೊಳ[೭]ಬಿಬ್ಬಿಱಿ[೭] ಬಿಱಿದೊಡೆದ[೮]ಶುಕ್ತಿ[೮]ಪುಟೋದರಂಗಳೊಳಗಣಿಂದಮುಜ್ಜ್ವಳಿಸಿದ ತಾರಾತರಳಮುಕ್ತಾಫಲಂಗಳುಮನಱಿವಟ್ಟು ನೋಡುತ್ತುಂ ಪೋಗೆಪೋಗೆ,

ರಥದಿಂದಂ ಮುಂಚೆ[೯] ಮನೋ-
ರಥಂ ಮನೋರಥದಿ[೧೦]ಂ ಸತ್ತ್ವಲದು[೧೦]ಂ ಮುಂಚೆ ಬೃಹ-|
ದ್ರಥಮಿಂತು ಭರತರಾಜನ
ರಥದ ಮನೋರಥದ ಜೇಗಮೊದವಿದುದಾಗಳ್ ||೮೦||

ಆಲವಣಜಲಧಿಯುಂ ಪರಿ-
ಕಾಲನೆ ಬಗೆವಂತೆ ಬಗೆದು ಸಾರಥಿ ರಥಮಂ|

---

೧ (ಅII) ಬ. ೨-೨ (ಅ) ಪವನ. ೩-೩ (ಚ) ನಾದಂ. ೪-೪ (ಅ) ಮಂಬರೆಪರಂ. ೫-೫ (ಚ) ಗಿದು ನಿಮಿರ್ವ. ೬-೬ (ಅ) ವೇಳಂಧರ; (ಬ) ವೇಳಾಂತರ. ೭-೭ (ಅ) ಬಿಬ್ಬರಿ; (ಬ) ಬಿಚ್ಚರಿ. ೮-೮ (ಚ) ಮುಕ್ತಾ. ೯ (ಅ) ಚಿ. ೧೦-೧೦ (ಬ) ನರಿತಮುಂ.

ವ॥ ಅಂತು ಮುಳಿದು,

ಕುಡಿತೆಯ ನೀರಂತುಗಲುಂ
ಕುಡಿಯಲ್ಕಿಂಟಿಸಗೆ ಲವಣವಾರ್ಧಿಯ ನೀರೞ[೧]।
ಕಡುಪಿನಜೞ್ಕೞಿಕೊಪ್ಪದಿೞಿಗಳೆ
ಸುಡುವೆಂ ಬಾಣಾನಲಾರ್ಚಿಯಿಂ ಮಾಗಧನಂ ॥೮೭॥

ವ॥ ಎಂದು ವಜ್ರಕಾಂಡಮೆಂಬ ನಿಜವಿಜಯಕಾರ್ಮುಕಕ್ಕೆ ಸುರಕರಿ-[೩]ಕರಾನುಕಾರಿಯಪ್ಪ ನಿಜಭುಜಾದಂಡಮಂ ನೀಡಿ[೩] ನೀಡಿಲ್ಲದೇಱಿಸಿ ನೀವಿ ಜೇವೊಡೆದಾಗಳ್,

ಲವಣಾಂಭೋರಾಶಿ ತೂಳ್ದುಜ್ಜಳಿಸಲೊಡರಿಸಿತ್ತೀಧರಾಭಾಗಮಂ[೪] ಪ-
ತ್ತುವಿಡಲ್ ಭೂಭೃತ್ಕುಲಂಗಳ್ ಬಗೆದುವು ಜಲಧಿದ್ವೀಪಮಧ್ಯಸ್ಥನಾನಾ-।
ದಿವಿಜಾವಾಸಂಗಳಭ್ರಕ್ಕೊಗೆದುವು [೫]ಭರದೊಳ್ ಕೂಡೆ[೫] ದಿಕ್ಪಾಲಲೀಲಾ-
ಭವನಂಗಳ್ ಬಿದ್ದುವಿಂತಾಯ್ತಖಿಳಮಹಿತಳಕ್ಷೋಭಮಾಚಕ್ರಿಯಿಂದಂ ॥೮೮॥

ವ॥ ಅಂತಮೋಘಬಾಣಮಂ ಬಾಣಧಿಯಿಂದುರ್ಚಿಕೊಂಡು,

ಪುರುಪರಮೇಶ್ವರಪುತ್ರಂ
ಭರತೇಶ್ವರಚಕ್ರವರ್ತಿ ಬಂದಿರ್ದಂ ತ-।
ದ್ವರಣಿನಿವಾಸಿಗಳುಂ[೬] ವ್ಯಂ-
ತರಾಮರರ್ ಬಂದು ಕಾಣ್ಬುದವನತಮುಕುಟರ್ ॥೮೯॥

ಎಂಬಕ್ಕರದಿಂದೆಸೆದು[೭]ದ-
ನಂಬರತಳಮೊಡನೆ ಬೆಳಗೆ ಬೆಳಪುದನಾಶಾ-।
ಯ್ಯಾಂಬುಧಿ ತೊಟ್ಟಿಸಲೊಡಮುರ-
ದಂಬರದಿಂ ಮಳ್ಕುವುಳ್ಕುಮಂ ಪೋಲ್ತು ಶರಂ ॥೯೦॥

ಕಾಲಾಂತಪವನಹತಿಕ-
ಲ್ಲೋಲಾವಿಲಜಲಧಿನಿನದಮೋ ನಿರ್ಘಾತಾ-।
ಭೀಲತರ[೮]ರಭಸಮೋ ಲಯ-
ಕಾಲಾಂಬುದಘೋಷಮೋ ನೆಲಂ ಮೊೞಗಿದುದೋ ॥೯೧॥

ಎನೆ ಪುರಜನಮಂತಃಪುರ-
ಜನಮುಂ ಪರಿಜನಮುಮಳ್ಕೆ ತದ್ರಾಜನಿಕೇ-।

---

೧ (ಜ) ರಂ. ೨-೨ (ಜ) ಳಪ್ಪೋಡೀ. ೩-೩ (ಅ,ಬ) ಕರಾಕಾರಬಾಹುವಂ ನೀಡಿ. ೪ (ಅ,ಬ) ದಿಂ. ೫-೫ (ಅ) ಭರದಲ್ಲಾಡಿ; (ಬ) ಭರದಳ್ಳಾಡಿ. ೬ (ಜ) ಳ್; (ಬ) ಳು. ೭ (ಅ) ವು. ೮ (ಬ) ಕ.

ನಡೆಯುವು[1] ಭುವನಾಂತರದೊಳ್
[2]ನಿಡಿಯಂಗಂ ನಿಡಿಯನೊಳವಿದೇಂ ವಿಸ್ಮಯಮೋ[2] ||೧೮೪||

ಮುನ್ನ[3]ರಿಕ್ಕಿಸಿ[3]ದಾವುದು
ಮಿನ್ನ[4]ಗಲಿಲ್ಲಾಗದೆಂಬುದೇ ದೊರೆಕೆವನೆ[4]|
ಚಿನ್ನಿತಮುರಸಾವನಿ[5]ಪಂ
ಮುನ್ನಂ ತೀವಿದುದು ನಿಗಳ ನೆಗಳ್ದುವನೀಗಳ್ ||೧೮೫||

ವ|| ಅವಸ್ಥೆಯುಂ ಪೂರ್ವಾಪರವಿದೇಹಂಗಳೊಳ್ ದೇವನಿಕಾಯದೊಡ-ನೆ[6]ಜಿನೇಂದ್ರ[6]ವಂದನಾಭಕ್ತಿಯಿಂ ಪೋಪಲ್ಲಿ ಭರತಕ್ಷೇತ್ರದೊ[7]ಳೀಯುಗದೊಳ್ ತೀರ್ಥಂಕರರುಂ ಚಕ್ರವರ್ತಿಗಳುಮಪ್ಪರೆಂದು ಸರ್ವಜ್ಞರ್ ಪೇಳ್ವರೆ ಪಲವು ಸೊಬಗಿನಿಲ್ಲಂ [8]ಕೇಳ್ದುದಾದೆವು[8],

ಸಾಮಾನ್ಯಮಲ್ತು ಬರಿದುದು
ಸಾಮಾನ್ಯಮನುಷ್ಯನಲ್ಲಿ[9]ದನೆಚ್ಚಾ[9]ತಂ |
ನಾಮಾಕ್ಷರಮಾಳಿಕೆಗಳ್
ತಾಮಜಿಪವೆ ಚಕ್ರವರ್ತಿಯೆಂಬುದನಾತಂ ||೧೮೬||

ಮಾಗಧ ಪಿಜಿತಂ ಬಗೆಯುದಿ-
ರಾಗದು ಚಕ್ರಿಯೊಳೊಡಂಬಡಂ ನೆಗಬಲ್ ನೀ-|
ನೀಗಳ್ [10]ಪೋಗ[10]ಜಿಸಿ[11] ಬರಮಂ
ಬೇಗಂ ಪೋಗೆಱಗು ಚಕ್ರವರ್ತಿಯ ಪದದೊಳ್ ||೧೮೭||

ನಯಮಪ್ಪೊಡೆ [12]ನೀನೇವಕ[12]ವ್ಯ-
ತ್ರಿಯ [13]ನಿದಲ್ ನಮಗೆಳೆವ [13]ತೊಱೆಯನಿದಿರಿಸುವುದದೆ-|
ಲ್ಲಿಯ ಗಾಂಪು ಚಕ್ರವರ್ತಿಯೊ-
ಳಯಶಂ ನಮಗುಱದು ಬೇಗಮೆಱ[14]ಗುವುದು[14]ಱಗುಂ ||೧೮೮||

ಪುರುಪರಮೇಶ್ವರಪುತ್ರಂ
ಚರಮಾಂಗಂ ಚಕ್ರವರ್ತಿಯೆಂಪೊಡೆ ಪೇಟಲ್-|
ದೊರೆ ಪೆರರಾರ್ ಭರತನೊಳೆನೆ
ಕರಗಿದುದಾಗರ್ವ ಪರ್ವತಂ ಮಾಗಧನಾ ||೧೮೯||

---

೧ (ಅ) ದ; (ಬ) ದೆ. ೨-೨ (ಅ) ನಿಡಿಯಂಗಂ ನಿಡಿಯನೊಡನಡೇನೊಪ್ಪುವುದೇ; (ಅII) ನಿಡಿಯಂಗಂ ನಿಡಿಯನೊಳಮಿದೇಂ ಸೊಗಸುಗುಮೇ; (ಬ) ನಿಡಿಯಂಗಂ ನಿಡಿಯನೊಳನಿದೊಂದಚ್ಚರಿಯೇ. ೩-೩ (ಅ) ದಾರೊಳಮಿಂ. ೪-೪ (ಅ) ಬ ದೊರೆಗಿಡದಿಪನೆ. ೫ (ಚ) ನ. ೬-೬ (ಅ,ಬ) ಪ್ರತಿಗಳಲ್ಲಿಲ್ಲ. ೭-೭ (ಅ) ಜ್ಞಾಂಬೆ. ೮-೮ (ಅ) ಕೇಳ್ದ ಜೀವಂ; (ಬ) ಕೇಳ್ದೆಮದುಕಾರಣದಿಂದಂ. ೯-೯ (ಅ, ಬ) ವನೆಚ್ಚಸುಮೀ; (ಚ) ವನೆಚ್ಚಾಚಂ. ೧೦-೧೦ (ಚ) ಳೆ ಪೊ. ೧೧ (ಚ) ಸು. ೧೨-೧೨ (ಬ) ಚೇತನ. ೧೩-೧೩ (ಬ) ನಿಮಗಂ ದೇವ. ೧೪-೧೪ (ಚ) ಗದೊಡು.

ವ॥ ಅಂತು ನಿಜಶೌರ್ಯ್ಯಮದಜ್ವರಂ ಮಂತ್ರಿವರ್ಗ್ಗ[1]ವೈದ್ಯವಚನಾ-
ಷಧಿಗಳಿಂ[1] ಪತ್ತುವಿಡೆ,

ಮುನ್ನಂ ಪೂಜಿಸಿ ರಥಮಂ
ರನ್ನದ ಪಡಲಿಗೆಯೊಳಿಟ್ಟು ನಿಜಪರಿವಾರಂ-|
ತನ್ನಳ್ಕನಿತುಮಂ ಬೆರಸು ಭ-
ಯನ್ನಡುಕಮನೀಯೆ ಬಂದು ಕಂಡಂ ದಿವಿಜಂ ॥೧೧೦॥

ಪೊಂಗುಳಿದು ಭರತನೃಪಚರ-
ಣಂಗಳ್ಗೆ ಮಾಗಧಾಮರಂ ವಿನಮಿತಸ-|
[2]ರ್ವಾಂಗಂ ಚಚ್ಚಾರವಕೆ ಭು[2]-
ಜಂಗನ ಕೊರಲಂತೆ ಬಾಗಿದಂ ಮೂಱು[3]ಡೆಯೊಳ್ ॥೧೧೧॥

ತಳಮುಗಿಗುತ್ತೆಱಗುವುದುಂ
ವಿಳಸನ್ಮಾಗಧಕಿರೀಟರತ್ನಾಂಶು[4]ಚಯಂ[4]|
ಗಳಿಯಿಸಿದುದವನ ಗರ್ವ್ವಮೆ
ಗಳಿಯಿಸುವಂತಿರೆ ನೃಪೇಂದ್ರಪದಸರಸಿಜದೊಳ್ ॥೧೧೨॥

ಚಕ್ರಂ ಪುಟ್ಟಲೊಡಂ ಪರ-
ಚಕ್ರಭಯಂಕರ ಬರಲ್ಕೆವೇಱ್ಪು[5]ದನಱಿದೆಂ[5]|
ವಿಕ್ರಮಮನುೞಿದೆನೆನತೋ-
ದಕ್ರಮಮುಂ ಸೈರಿಸೊಂದು ಸೂೞ್ ಚಕ್ರಧರಾ ॥೧೧೩॥

ವಿಜಿತರಿಪು[6]ನೃಪ[6]ಭವತ್ಪದ-
ರಜದಿಂದಂ ವಾರ್ದ್ಧಿಯೊಂದು ಪೂತಮೆ ಪಾದಾಂ-|
ಬುಜಸೇವೆಯಿಂದಮಾನುಂ
ವಿಜಯಶ್ರೀಯುತ ಪವಿತ್ರಗಾತ್ರನೆನಾದೆಂ ॥೧೧೪॥

ಎಂದೆಂದಿದು ಭರತಯಶೋ-
ದುಂದುಭಿರವಮೆನಿಸಿ ದೆಸೆಗೆ ಪೊಣ್ಮುವ ನಿಜವಾಕ್|
ಸೌಂದರ್ಯದೆ ಪೋಲ್ತಂ ಪುರು-
ನಂದನನಂ ಪೊಗೞ್ದು ಮಾಗಧಂ ಮಾಗಧನಂ ॥೧೧೫॥

---

೧-೧ (ಅ) ವೈದ್ಯವಾಗೌಷಧಿಗಳಿಂ; (ಬ) ವೈದ್ಯಪಾಗ್ರೌಷಧಿಗಳಿಂ. ೨-೨ (ಅ) ರ್ವಾಂಗಂ ತಾರ್ಕ್ಷ್ಯರವಕೆ; (ಚ) ರ್ವಾಂಗಭರಂ ಚಚ್ಚಾರು ಭು. ೩-೩ (ಚ) ಗಣಂ. ೪-೪ (ಬ) ದು ತೊರೆದಂ. ೫-೫ (ಅ,ಬ) ಬಲ್.

ಇವು ದಿವದೊಳಗಗ್ಗಳಮೆನಿ-
[1]ಪ್ಪುವು[1] ರತ್ನವ್ರಾತಮೆಮ್ಮ ಮನೆ[2]ಯೊಳ್ ಮಿಗಿಲ-|
ಪ್ಪುವು[2] ನಿಧಿಗಧಿಪಾ ಸಿಸಲ-
ಪ್ಪುವೇಂ ಪು ರತ್ನಂಗಳನಿತುಮಂ ಮುಂದಿಟ್ಟಂ ||೧೧೬||

ಇವು ರತ್ನಕುಂಡಲಂ ಜಿತ-
ರವಿಮಂಡಲಮಿವು ತುಡಲ್ಕೆ[3]ಯೋಗ್ಯಮೆ ನಿನಗಿಂ-|
ತಿವು ಪದೆಪನೆನ್ನ[3] ಭಕ್ತಿಯ-
ನಿಜಮಂ ನಾಂ ನಿನಗೆ ಮೆಱೆವೆಂ ಚಕ್ರಧರಾ ||೧೧೭||

ವಾರಾಶಿಯೊಳಿನ್ನವು[4]ಮು-
ತ್ತೋರನ್ನವು[4] ಪಡೆಯಲಾಗದತಿತರಲತರ-|
ತ್ತಾರಾಹಾರಂ ಜಿತನೀ-
ಹಾರಂ ತ್ರೈಲೋಕ್ಯ ಸಾರಮಿಂತಿದು ಹಾರಂ ||೧೧೮||

ಇದುನಿನ್ನೀಯಗಲ್ದುರದೊಳ್
ಪೊದಟ್ಟು ತನತೊಂದು ಜನ್ಮಮಂ ಸಫಲಂ ಮಾ-|
ಟ್ಟಿದಪೆಂದು ಕುಂದಪಲಿಶಾ-
ರದನೀರದನಿರ್ಮ್ಮಲಂ ಭವತ್ಕೀರ್ತ್ತಿಯವೋಲ್ ||೧೧೯||

ಎಂದು ಮಾಗಧಾಮರಂ ತನ್ನ ಸದ್ಭಾವಸರ್ವ್ವಸ್ವದೊಡನೆ ಸರ್ವ್ವಸ್ವಮೆಲ್ಲಮುಮಂ ಮುಂದಿಟ್ಟಾಗಳ್,

ಕುಲಶೈಲೋನ್ನತನುಗ್ರಶಾತ್ರವಶಿರೋಮಾಣಿಕ್ಯಮಾಲಾಂಶುಮಾಂ-
ಸಲಿತಶ್ರೀಪದಪೀಠರತ್ನಕಿರಣಂ ಚಕ್ರೇಶ್ವರಂ ವಾರ್ದ್ಧಿಭೂ-|
ತಲನಾಥಂಗನುರಾಗಮಂ ಬಳೆಯಿಸಲ್ಕರ್ಘ್ಯಕ್ರಿಯಾತಂಡುಲಂ-
ಗಳಿವೆಂಬಾದರದಿಂದೆ ಕೊಂಡನವಱೊಳ್ ಪತ್ತೆಂಟುರತ್ನಂಗಳಂ ||೧೨೦||

ವ|| ಅಂತು ಮಾಗಧನಂ ಸಂತಸಂಬಡಿಸಿ ಪೋಗಲ್ವೇಟ್ಟು ನಿಜವಿಜಯಕಟಕಾಭಿಮುಖ[5]ನಾದಾಗಳ್[5] ಸಾರಥಿ ರಥಮಂ ಜೋದಿಸುತ್ತಂ,

ಮಾಗಧನಂ ಗೆಲ್ದೊಸಗೆಗೆ
ರಾಗಿಸಿ ಜಲರಾಶಿ ನಿನಗೆ ಸೇಸಿಕ್ಕುವವೋಲ್-|

೧-೧ (ಚ) ಸುವ. ೨-೨ (ಅ,ಬ) ಯೊಳ್ಕಿನಗಿಂತಿವು. ೩-೩ (ಅ) ಯೋಗ್ಯಮೆ ನಿನಗಲ್ಲವೆ ಪದೆಪನೆನ್ನ; (ಚ) ಯೋಗ್ಯಂ ನಿನಗೆಲ್ಲವು ಪೆಱರ್ಗದೆನ್ನ. ೪-೪ (ಅ) ಮುತ್ತೇರೆಂನವು. (ಬ) ಮುಕ್ತಾರತ ಉ. ೫-೫ (ಚ) ನಾದನಾಗಳ್.

ಈಗಳ್ ಸೊಗಯಿಸಿಪುದು ಮು-
ಕ್ತಾಗಣ[1]ವಿಶ್ರಿತ[1]ತರಂಗಹಸ್ತೋತ್ಕರದಿಂ ||೧೨೧||

ಪಸರಿಸಿದ ಪದ್ಮರಾಗದ
ಪೊಸಗೆಂಪಂ ಮಾಂಸಮೆಂದು ಮುಂ ಕರ್ದುಕಲ್ಕಾ-|
ಟಿಸಿಯುಂ ಬಱಿಕದಸುರಿಯಿಂ-
ಬ ಸಂಕೆಯಿಂ ಪೊರ್ದದಿಪ್ಪುವೀಮತ್ಸ್ಯಂಗಳ್ ||೧೨೨||

ಸಮದಕರಿ ಮ[2]ಕರಹತಿಯಿಂ[2]
ಸಮುಚ್ಚಲದ್ವೀಚಿಮಾಲಿಕಾಸ್ಫಾಲಾಂತ-|
ಸ್ಥಿ ಮಿತಾಕ್ಷನೀಗಳೀತಿಮಿ-
ತಿಮಿಂಗಿಳಂಗೆತ್ತ ನೋಟ್ಪುದೀಸ್ಯಂದನಮಂ ||೧೨೩||

ಕಡುಗುಣ್ಪುವೆರಸು ಪಾಂಟಂ
ಗಡ ಮೇಱಿ[3]ಯುನೆಂದು ವಜ್ರವೇದಿಕೆಯುಂ ತಾಂ-|
[3]ತೊಡೆ ಸಕ್ಕಿ[3]ಪೊಯ್ವವೊಲ್ ಪೊ-
ಯ್ದಾಡನೊಡನುಚ್ಚಳಿಪುವಿದಱ ತುಂಗತರಂಗಂ ||೧೨೪||

ವ|| [4]ಎಂಬಿನೆಗ[4] ಮತ್ತ ವಿಜಯಕಟಕಜನಮಂಬುಧಿತಟದೊಳಿರ್ದ್ದ ರಸನೊಂದೆ ಮೆಯ್ಯೊಳ್ ಪೋಗಿ ಬಾರದೆ ತಡೆದುದರ್ಕ್ಕೆ ಕಟ್ಟಿ ಕಡಿಪು,

ಅರಸಂ ತುಂಗತರಂಗಭಂಗುರಗಭೀರಾಂಭೋಧಿಯಂ ಪೊಕ್ಕನೊಂ-
ದೆ ರಥಂ ಸಾರಥಿಯೊರ್ವನಾದುಮೊಡ[5]ನಿಲ್ಲಿನ್ನೆಂತುಟೋ[5] ಬಲ್ಲಿದಂ-|
ಸುರನಾಮಾಗಧನಲ್ಲಿ ಭೂಭುಜನ ದೋರ್ದ್ದಂಡಕ್ಕೆ ಪುಣ್ಯೋದಯಂ
ನೆರಮಕ್ಕೆಂದು ಪಲುಂಬಿ ಪಂಬಲಿಪುದಾಯ್ತಂತಾಪುಳವ್ಯಾಕುಳಂ ||೧೨೫||

ವ|| ಅನ್ನೆಗಂ

ಪರಿತಂದಪ್ಪುದ[6]ದೊಂದದೇಂ[6] ಮಕರಮೋ ತುಂಗಾದ್ರಿಯಂ ಪೋಲ್ವ ಪೆ-
ರ್ದೆರೆಯೋ ಪೆರ್ದೆರೆಯಲ್ತು ಪೋಮಕರಮುಂ[7] [8]ತಾನಲ್ತಿದುದ್ಯದ್ಧ್ವಜಂ[8]-|
ಭರತಾಧೀಶ್ವರನೇಱಿ ಪೋದರಥಮೀ ಬಂದಂ ಧರಾಧೀಶನೆಂ-
ಬ ರವಂ ಪೊಂಪುಱಿವೋಗೆ ವಾರಿಧಿತಟಂ ಚೆಲ್ವಾದುದಾಸೈನ್ಯದಿಂ ||೧೨೬||

೧-೧ (ಅ) ವಿಶ್ರುತ. ೨-೨ (ಅ, ಬ) ಕರಕರಹತ. ೩-೩ (ಅII) ತೊಡೆಸಾಕ್ಷಿ. ೪-೪ (ಅ,ಬ) ಎಂಬಂನೆಗ. ೫-೫ (ಚ) ನಿಲ್ಲೆಂತೆಂತುಟೊ. ೬-೬ (ಅ) ವೇಂ; (ಬ) ದೊಂದೆಮುಂ. ೭ (ಅ) ಮೋ. ೮-೮ (ಅ) ತಾನಲ್ತುಮುದ್ಯಜ್ವಲಂ; (ಚ) ತಾನಲ್ಲದುದ್ಯದ್ಧ್ವಜಂ.

ತೆರೆಗಳ ಪೊಯ್ಲಿಂ[1] ಸ್ಯಂದನ-
ತುರಗಂಗಳ್ ಬೆಗಮನೆತ್ತಿ ಬಂಚಿಸಿ ಪುಟ್ಟಿಂ-|
ಪರಿಯೆ ತೆರೆಯಿಲ್ಲದೆಡೆಯೊಳ್
ವರೂಥಮುಮಯುವಡೆ ತಡಿಯನೆಯ್ದಿದುದಾಗಳ್ ||೧೩೭||

ವ|| ಅಂತು,

ಮಣಿಸಂಘಾತಂಗಳಂ ಮಾಗಧನತಿಭಯದಿಂದಿತ್ತುವಂ ಚಕ್ರಿ[2] ಚೂಡಾ-
ಮಣಿ ಕೈಕೊಂಡಾಜ್ಞೆಯಂ ಪಾಂಟಿಪೆ ನಡೆವುದು ನೀನೆಂದಣಂ ಮಾಣದೇಕ-|
ಕ್ಷಣದಿಂದಂ ತನ್ನ ಲೀಲಾರಥದೊಳೆ ಲವಣಾಂಭೋಧಿಯಂ ಪಾಂಟಿ ನಾನಾ-
ಗುಣರತ್ನಾಂಭೋಧಿ ಬಂದಂ ಸುಕವಿಜನಮನೋಮಾನಸೋತ್ತಂಸ-
ಹಂಸಂ ||೧೩೮||

ವ|| [3]ಅಂತುಸಮುತ್ತೀರ್ಣ್ಣ[3] ಪ್ರತಿಜ್ಞಾಸಾರಂ ಪಾರಾವಾರಾಪಾರವನೆಯ್ದಿ-
ದಾಗಂಗಾದ್ವಾರದೊಳ್ ಬಂದು ಕಾಣ್ಬ ಮಕುಟಬದ್ಧರುಂ, ತದ್ವೇದೀತಟ-
ದೊಳ್ ಬಂದೆಱಗುವಧಿಕಾರಿಗಳುಂ, ಶಿಬಿರಬಹಿರ್ಬ್ಭಾಗದೊಳ್ ಬಂದು ಕೈ-
ಕೊಂಡ ಸೈನ್ಯಂಗಳುಂ ಬೆರಸು,

ನೆರೆದಂತಃಪುರಕಾಂತೆಯರ್ ಪಲಬರುಂ ಸೇಸಿಕ್ಕೆಯುಂ ವಾರಸೌಂ-
ದರಿಯರ್ ಚಾಮರಮಿಕ್ಕೆಯುಂ ಮಕುಟಬದ್ಧಾಧೀಶರಾಗಳ್ ವಸುಂ-|
ಧರೆಯುಂ ಪರ್ವಿರೆ ಪೈಯನಿಕ್ಕೆಯುಮುದಾತ್ತೋತ್ಸಾಹದಿಂ ರಾಜಮಂ-
ದಿರಮಂ ಪೊಕ್ಕನುದಾರ[4]ಸಾರವಿಭವಂ ಸಂಸಾರಸಾರೋದಯಂ ||೧೩೯||

ಗ|| ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ-
ಚಂದ್ರವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣ್ಣಸೂಕ್ತಿ-
ಕಲ್ಲೋಲಮಾಲಾಕೀರ್ಣ್ಣಕವಿತಾಗುಣಾರ್ಣ್ಣವ-
ಪ್ರಣೀತಮಪ್ಪಾದಿಪುರಾಣದೊಳ್
ಮಾಗಧಾಮರದರ್ಪ್ಪದಲನಂ
ದ್ವಾದಶಾಶ್ವಾಸಂ
ಸಂಪೂರ್ಣ್ಣಂ

೧ (ಜ) ಯ್ಲಂ. ೨ (ಅ) ಕ್ರ. ೩-೩ (ಬ) ಅಂತುತ್ತೀರ್ಣ್ಣ. ೪ (ಅ) ತ್ತ.

# ತ್ರಯೋದಶಾಶ್ವಾಸಂ

ಶ್ರೀಯೊಳೊಡಂಬಡಿಸಿ ಜಯ-
ಶ್ರೀಯಂ ಷಟ್ಖಂಡಮಂಡಲಕ್ಷಿತಿಯುಮನಾ- ।
ತ್ಮೀಯಂ ಮಾಡುವೆನೆಂಬ ನಿ-
ಜಾಯತಿಯಿಂಪಂ ಸರಸ್ವತೀಮಣಿಹಾರಂ ॥೧॥

ವ॥ ಅಂತು ಭರತೇಶ್ವರಚಕ್ರವರ್ತಿ ದಕ್ಷಿಣದಿಗಂಗನಾಳಂಕಾರನಾಗಿ ನಡೆದು ದಕ್ಷಿಣಾಂಬುರಾಶಿಯನೆಯ್ದಿ ವೈಜಯಂತೀದ್ವಾರದೊಳ್ ಬೀಡಂ ಬಿಟ್ಟಾಗಳ್,

ಏಲಾಲವಂಗಲವಲೀ-
ವೇಲಾವನಭೂಮಿಯೊಳ್ ನಿಧೀಶ್ವರಸೈನ್ಯ- ।
ವ್ಯಾಲಗಜಂಗಳ್ ವನಗಜ-
ಲೀಲೆಯನನುಕರಿಸೆ ಕಣ್ಗೆವಂದುವು ಪಲವುಂ ॥೨॥

ವ॥ ಅಂತಾವನೋಪಾಂತದೊಳ್ ಮುನ್ನಿನಂತೆ ಶಿಬಿರಮಂ ನಿಱಿಸಿ ವೈಜಯಂತೀದ್ವಾರದೊಳಗಣಿಂದಮೊಂದೇ [1]ರಥದೊಳ್ ಜಲಧಿಯಂ[1] ಪೊಕ್ಕು,

ಮಾಗಧನಂ ಗೆಲ್ದಂತೆವೊ-
ಲಾಗಡೆ ವರತನುವನೊತ್ತಿ ಕಪ್ಪಂಗೊಂಡು- ।
ದ್ಯೋಗದ ಫಲಿತನಮಂ ಪೊಗ-
ಟ್ವಾಗಳವಾಙ್ಮನಸಗೋಚರಂ ಪೌರವನಾ ॥೩॥

ವ॥ ಅಂತು ವರತನುವಿನ ಕೈಯೊಳಭೇದ್ಯಕವಚಮುಮಂ[2] ಚೂಡಾರತ್ನ[2]ಮುಮಂ ರತ್ನಕಟಕಂಬೆರಸು ಪಲವುಂ ಪರಾರ್ಧ್ಯರತ್ನಂಗಳಂ ಕೊಂಡು ಮಗುಳ್ದು ಲವಣಸಮುದ್ರಮುಪಸಮುದ್ರದ ನಡುವೆ ನಡೆದು ಚಂದನಪನಸನಾಳಿಕೇರತಾಂಬೂಲವಲ್ಲೀಪ್ರಚುರಪ್ರದೇಶಂಗಳೊಳ್ ನಿಜವಿಜಯಕುಂಜರಂಗಳಂ ವಿಹಾರಿಸಿ ಬಂದು ಸಿಂಧುದ್ವಾರದೊಳ್ ಸಮುದ್ರಕಲ್ಲೋ[3]ಲಲೀಲಾಂ[3]ದೋಲಿತವನದೇವತಾಂ[4]ದೋಲಾನುಕಾರಿ[4]ತಾಂಬೂಲಲತಿಕಾಲಂಬಕ್ರಮುಕಮುಮಾಕಂಪಿತಮಧುಕರನಿಕರಾನುಕಾರಿಲತಾಗೃಹಪ್ರದೀಪಚಂಪಕಮುಂ ಪ್ರೇಂಖೋಲಿತವನ-

೧-೧ (ಜ) ರಥದೊಳ್ ಲವಣಜಲಧಿಯಂ. ೨-೨ (ಅ) ಚೂಡಾಮಣಿರತ್ನ. ೩-೩ (ಅ) ಲಾಪಿಲ್ಲಾಂ ೪-೪ (ಜ) ದೋಳನಾನುಕಾರಿ.

ನಿಜವಿಜಯಪ್ರಶಸ್ತಿಲೇಖನೋ[೧]ಚಿತಚ್ಛದಶ್ರೀತಾಳಿಕೆಯುಮಪ್ಪ ವೇಲಾವನದೊ-
ಳಾವಾಸಿತವಿಜಯಕಟಕನಾಗಿ ಪೂರ್ವ್ವಸ್ಥಿತಿಯೊಳೆ ಪೋಗಿ,

ಜಳಧಿಯ ನೀರನದೊಂದಾಂ
ಗೊಳಗಿನ ನೀರಿಂದು ಬಗೆದು ಪಾಂಟಿದ ವಸುಧಾ-।
ತಳಪತಿಗಿತ್ತಂ ತ್ರಾಸಂ
ಗೊಳುತುಂ ಸರ್ವ್ವಸ್ವಮುಂ ಪ್ರಭಾಸಾಮರನುಂ ॥೪॥

ವ॥ ಅಂತಾಪ್ರಭಾಸಾಮರನಂ ನಿಜವಿಜಯಯಶಃಪ್ರಭಾಸಮೂಹದಿಂದಂ
ಪ್ರದಿಮ ಸಿಂಧುನದೀತೀರಂಬಿಡಿದು ಬರ್ಪ್ಪನ್ನೆಗೆ,

ಎಳವಿರಿಲೀಗಳೀಗಳೆ[೨] ಮುಸುರ್ದ್ದಮು[೨]ಚೂತಕುಜಾತಮೀಗಳೀ-
ಗಳೆ ನನೆ[೩]ವೋದಮದಿಂದೊಳವಿನುನ್ಮದ[೩]ಷಟ್ಪದವೃಂದಮೀಗಳೀ-।
ಗಳೆ ಮೊರೆವತ್ತು ಚಂದನದ[೪] ತಳ್ತ[೪]ಬಲಾನಿಕರಕ್ಕೆ ದೀಗಳೀ-
ಗಳೆ ನೆಗಟ್ಟಿತ್ತಲೀ ಪುಗಿಲಿದಾಗಡ[೫] ಪೇಡ ವಸಂತರಾಜನಾ[೬] ॥೫॥

ಜಿನುಗುವ ತುಂಬಿಯಿಂಚರಮೆ ಗಾಣರ ಕಾಕಲಿ ಕೂಡೆ ಸೋರ್ವ್ವ ಮಾ-
ವಿನ ಸೊನೆ ಗಂಧಸಿಂಧುರಮದಂ ತಳಿರೋಳಿ ತಗುಳ್ದು ತಳ್ತ ಕೇ-।
ತನತತಿ ಚಾಮರೋತ್ಕರದೆಲರ್ ಮಲಯಾನಿಲನಾಗೆ ರಾಜರಾ-।
ಜನ ಪಡೆ ಚೆಲ್ವನೇನೆಱೆದುಕೊಂಡುದೊ ಬಂದ ವಸಂತರಾಜನಾ ॥೬॥

ವ॥ ಮತ್ತಮತ್ಯಂತಧೌತಕಲಧೌತಸ್ನಾನಕಾಲಂಕೃತನಕ್ಷತ್ರಮಾಲಾಪ-
ರಿಕಲಿತಕರೀಂದ್ರಂಗಳೆ ವಿಕಚ[೭]ಕರ್ಣ್ಣಿಕಾರ[೭]ನಿಕೀರ್ಣ್ಣಜಂಗಮಕ್ರೀಡಾಗಿರೀಂ-
ದ್ರಂಗಳಾಗೆ, ಸಕಲದಿಕ್ಪ್ರಚಲಿತರಾಜಪುತ್ರ[೮]ನಿಚಯಮೆ[೮] ಸಂಚಾರಿ[೯]ಚೂತಾ[೯]-
ರಾಮಮಾಗೆ, [೧೦]ವಿಜಯಕುಂಜರಕೌಸುಂಭ[೧೦]ರಕ್ತಾಂಶುಕಪತಾಕಾನಿಕಾಯಮೆ
ಪಲ್ಲವಿತಾಶೋಕವನಮಾಗೆ, ಮದಾಮೋದಸುರಭಿಯುಂ ಮದಶೀಕರಾಸಾರಶಿಶಿ-
ರಮುಂ ಮದಾಮೋದಭರಮಂಥರಮುಮಪ್ಪ ಕರಿಕರ್ಣ್ಣತಾಲಾನಿಲನೆ ಮಲಯ-
ರುಹನಂ[೧೧]ದನಾಂದೋಲನೋದ್ಗಂಧಿಯುಂ ಮಲಯಗಿರಿನಿರ್ಝರಾಸ್ಫಾ[೧೨]ಲ-
ನ[೧೨]ಶೀತಲಮುಂ ಮಲಯವಿಲಾಸಿನೀನಿರಂತರಾಲಸ್ತನತಟಸ್ಖಲನಮಂದಮಂ-
ದಗಮನಮುಮಪ್ಪ ಮಲಯಾನಿಲಮಾಗೆ,

---

೧ (ಅ) ಸೂ. ೨-೨ (ಅ) ಮುದಿತ್ತುರ್ದ್ದು; (ಚ) ಮುದಿರ್ದ್ದುದು. ೩-೩ (ಚ) ದೋಜಿಂದೊಳದಿನುನ್ಮದ; (ಅ) ವೋದುದೀ ಮೊರೆವುವುನ್ಮದ. ೪-೪ (ಅ) ತತ್ಕ; (ಬ) ಜಲ್ಲೆ. ೫ (ಚ) ಳೆ. ೬ (ಅ,ಬ) ನಂ. ೭-೭ (ಚ) ಕರ್ಣ್ಣಿಕಾಕಾರ. ೮-೮ (ಚ) ಮಯೂರಾತಪತ್ರನಿಚಯಮೆ. ೯-೯ (ಚ) ಭೂತಚೂತಭೂಜಾ. ೧೦-೧೦ (ಬ) ವಿಜಯಕಟಕಕುಂಭ; (ಚ) ವಿಜಯಕೌಶುಂಭ. ೧೧ (ಅ) ಚಂ. ೧೨-೧೨ (ಚ) ಲಿತ.

ಕರಿಣೀವೃಂದ¹ಪ್ರಜದ್ಗಾಯನ¹ಸಮುದಯಕರ್ಣಾರ್ಣಪ್ರೃತಸ್ಯಂದಿ ಪಿಂದೋ-
ಳ್ಕರವಂ ಸಾಮೋದಸಾನಾವಿಧಕುಸುಮ²ರಸಾಪಾನ²ಸಾನಂದಭೃಂಗಾ-|
ಘರವಂ ತಾನಾಗೆ³ ಪುಷ್ಪಾಕರ³ಬಲವಿಜಯೋದ್ದರ್ಪಕಂದರ್ಪಲೀಲಾ-
ಕರನಾದಂ ಚೈತ್ರಯಾತ್ರೋತ್ಸವದೊಳಖಿಲಷಟ್ಖಂಡಭೂಮಂಡಲೇಶಂ ॥೭॥

ವ॥ ಅಂತು ದಿಗ್ವಿಜಯಯಾತ್ರೆಯೆ ವಸಂತೋದ್ಯಾನಯಾತ್ರೆಯನನುಕರಿಸೆ,

ಸಲಿಲಕ್ರೀಡಾಭವೋದ್ಯಜ್ಜಲಕಣನಿಕರಾಕಾರಮತ್ತದ್ವಿಪೇಂದ್ರಾ-
ವಲಿಹಸ್ತಾಗ್ರೋಚ್ಚಲಚ್ಛೀಕರಸಮುದಯಮುದ್ಯಾನಕೇಳೀಚಲತ್ಸ-|
ತ್ರಿಲಸಾಖಾಕಾರಚೈತ್ರಧ್ವಿರದಕದಳಿಕಾಡಂಬರಂ ಭೂರಿ ಕೋಲಾ-
ಹಲಸೇನಾಚಕ್ರವಾಲಂ ನಡೆದುದು ವಿಜಯಶ್ರೀವಧೂತ್ಕಂಠೆಯಿಂದಂ ॥೮॥

ವ॥ ಅಂತತ್ಯಂತ ಪ್ರವರ್ಧಮಾನವಿಜಯೋದ್ಯೋಗದಿಂ ವಿಜಯಾರ್ಧಾ-
ಚಲೋಪಾಂತಮನೊಯ್ಯನೊಯ್ಯನೆಯ್ದೆವಪ್ಪಾಗಳ್,

ಚಿರವಿಕ್ಷೋಭಿತಸಿಂಧುತೋಯಶಿಶಿರಂ ತತ್ತೀರನಾನಾಲತೋ-
ತ್ಕರಸಂಘಟ್ಟನಮಂಥರಂ ಮದಪಯಃ ಕಂಡೂಲ⁴ಗಂಡಸ್ಥಲಂ⁵ |
ದ್ವಿರದೋದಪ್ಪೃಷ್ಟಘನಸ್ರವತ್ಸರಲಸಾರಾಮೋದಮುದ್ದಾಮಭೃಂ-
ಗರವಂ ಚಕ್ರಿಯನಾಟಿಸಿತ್ತು ವಿಜಯಾರ್ಧೋಪಾಂತಮಂದಾನಿಲಂ ॥೯॥

* ವ॥ ಮತ್ತಮಂತಂತೆ ಬರೆವರೆ,

* ಗಗನಾಭಾಗಮನೆಯ್ದೆ ನೀಳ್ದ ಮಣಿಕೂಟಾಟೋಪಮೆಂಬಂತು ದಿ-
ಟ್ಟಿಗೆ ಮುನ್ನಂ ಬರೆ ಸಾರೆ ಸಾರೆ ತನುವಂ ತತ್ಕುಂಜಸಂಜಾತಭೂ-|
ಜಗಲತ್ಪುಷ್ಪಪರಾಗಸೌರಭವಹನ್ಮಂದಾನಿಲಂ ಸೋಂಕೆ ತೊ-
ಟ್ಟಿಗೆ ಕಣ್ಗೊಂಡುದು ಪೌರವಂಗೆ ವಿಜಯಾರ್ಧಾದ್ರೀಂದ್ರ-
ಶೋಭೋದಯಂ ॥೧೦॥

ವ॥ ಆವಿಜಯಾರ್ಧಪರ್ವತದ ಕಡೆವಿಡಿದು ಮೇಗೆ ನೆಗೆದ ವನವೇದಿಕಾ
ಪ್ರದೇಶ⁶ಮನೆಯ್ದೆವಂದಾಗಳ್,⁶

ಅದಱೊಳಗೆ ಪುದಿದಸಪ್ತ-
ಚ್ಛದಚಂಪಕನಾಗಪೂಗಪುನ್ನಾಗವನಂ
ಪುದಿದ ಪೊಸಗಂಪಿನೊಳ್ ಬಳ
ಸಿದುದಾಗಳ್ ಪುಗುವ ಭರತನಂತಃಪುರಮಂ ॥೧೧॥

೧-೧ (ಜ) ಪ್ರಜೋದ್ಗಾಯನ. ೨-೨ (ಅ) ರಸಾಮೋದ; (ಬ) ರಸಸುಧಾ. ೩-೩ (ಜ) ಪುಷ್ಪೋತ್ಕರೆ. ೪ (ಅII) ಯ. ೫ (ಅ,ಬ) ಲ. ೬-೬ (ಜ) ಮನೆಯ್ದೆವಂದಾಗಳ್,

* (ಬ) ಪ್ರತಿಯಲ್ಲಿಲ್ಲ.

ಸಾರಮಿದು ರತ್ನಮಯಭೃಂ-
ಗಾರಂ ಹರಿಪೀಠಮಿದು ಜಗತ್ತ್ರಿತಯಾಲಂ-|
ಕಾರಮಿದು ದಿವ್ಯಮಾತಪ-
ವಾರಣಮಮೃತಾಂಶುಬಿಂಬಧವಲವಿಲಾಸಂ ||೧೭||

ಇವು ಚಮರೀಜಾತಂ ದು-
ಗ್ಧವಾರ್ಧಿಫೇನೋಪಯಾನಮಿವು ನಿನಗೆಯೆ ತ-|
ಕ್ಕುವು ನಿನ್ನ ಜಸದ ರೂಪಿನೊ-
ಳಿವೆ ಮೆಱೆವುವು ಸಕಳಚಕ್ರವರ್ತ್ತಿಶ್ರೀಯಂ ||೧೮||

ವ|| ಎಂದು ವಿಜಯಾರ್ದ್ಧಕುಮಾರಂ ಸಾರವಸ್ತುಗಳನೋಲಗಿಸಿ[೧]ತನಗಾ[೧]ಜ್ಞಾವಿಧೇಯನಾಗಿ ಪೋದನನ್ನೆಗಂ ಭರತೇಶ್ವರಚಕ್ರವರ್ತ್ತಿಯುಮಲ್ಲಿ ಚಕ್ರರತ್ನಮಂ ಪೂಜಿಸಿ,

ವಿಜಯಾರ್ದ್ಧಜಯಮಿದೆನಗಾ-
ವ ಜಯಂ ನೆಗೞ್ದುತ್ತರಾರ್ದ್ಧಜಯಮೆ ಜಯಂ ದಿ-|
ಗ್ವಿಜಯದೊಳೆಂದೂರ್ಜ್ಜಿತ[೨]ಭುಜ-
ವಿಜಯಂ ದಿಗ್ವಿಜಯಚಿಂತೆಯಿಂ[೨] ತೊಡರ್ದಾಗಳ್ ||೧೯||

ವ|| ಅಂತು ತನ್ನ ಮುನ್ನೆ ಬಂದ ವನವೀಥಿಯೊಳಗನೆ ಪುಗುಳ್ದು ಪೋಗಿ ವೇದಿಕಾದ್ವಾರತೋರಣದಿಂ ಪೊಱಮಟ್ಟು ವಿಜಯಾರ್ದ್ಧವನ[೩]ವೇದಿಕೆಯ ನಡುವಣ[೩] ವಿಶಾಲ ಪ್ರದೇಶದೊಳ್,

ನೆಲೆವೀಡಂ ಬೀಡುಮಾಡಲ್ ಕೆಲವುದಿವಸಮಂ ಮಾ[೪]ಟ್ಪುದಿನ್ನಿಲ್ಲಿ ರೂ[೫]ಪ್ಯಾ-
ಚಲಮಂ ಪಾಯ್ದುತ್ತರಾರ್ದ್ಧಕ್ಕೆಮಗೆ ನಡೆವ ಸಾಮಗ್ರಿಯಂ[೬]ಮಾಡಲುಂ ದ[೬]ಲ್
ನೆಲೆ ಗಂಗಾ ಸಿಂಧುಮಧ್ಯಕ್ಷಿತಿಪತಿಗಳುಮೀತಾಣದೊಳ್ ಬಂದು ಕಾಣ್ಬರ್
ಪಲರೆಂದಂತಲ್ಲಿ ಚೆಲ್ವಾಗಿರೆ ಬಿಡಿಸಿದನುರ್ವ್ವೀಶ್ವರಂ ತನ್ನ ಬೀಡಂ ||೨೦||

ವ|| ಅಂತು ಬೀಡಂ[೭]ಬಿಡಿಸಿ[೭]ರ್ಪ್ಪನ್ನೆಗಂ ಗಂಗಾಸಿಂಧುಗಳೆರಡಱೆಡೆಯ ಭೂಪಾಲರಿಂದೆ ಮುನ್ನ ವೃಷಭ[೮]ನಾಥನ[೮] ನಡಪಿದುದುಮಂ ತಮ್ಮ ನಣ್ಪುಮಂ ಬಗೆದು ಕುರುರಾಜಾದಿಮೂರ್ದ್ಧಾಭಿಷಿಕ್ತ ಪಾರ್ಥಿವರ್ ಸನ್ನದ್ಧಬಲಪರಿವೃತರಾಗಿಭರತೇಶ್ವರಚಕ್ರವರ್ತ್ತಿಯನಾಸ್ಥಾನದೊಳ್ ಬಂದು ಕಂಡು,

೧-೧ (ಅ) ತನ್ನಾ. ೨-೨ (ಬ) ದಿಗ್ವಿಜಯಂ ತದ್ವಿಜಯಚಿಂತೆಯಿಂ. ೩-೩ (ಚ) ವೇದಿಕಾಸನ್ನ. ೪ (ಅII,ಬ) ಬೇ. ೫ (ಅ) ರೌ. ೬-೬ (ಚ) ಮಾಡಲೀಗಳ್. ೭-೭ (ಚ) ಬಿಟ್ಟು. ೮-೮ (ಅ) ನಾಥಂ.

ಒಡೆವುದೆ ವಜ್ರಕವಾಟಮು-
ನಡರ್ವುದೆ ವಿಜಯಾರ್ಧಗಿರಿಯ[1]ನಿಂತೀಗಳೆ ಪೂ-।
ಣ್ದೆಡೆಗಿಡುವುದೆ[1] ಸಿಂಧು[2]ವನಿಂ[2]
ತಡೆವಂದವಿದಾವುದೆಮ್ಮನೆಮ್ಮನೆ ಬೆಸಸಾ ॥೩೧॥

ನಿನಗುತ್ತರಾರ್ಧವೊಂದ-
ರ್ಧನಿಮೇಷಮುಹೂರ್ತಮಾತ್ರದಿಂ ಬಾರದೆ ಕೈ-।
ಗಿನಿತುಮದಂ ದೇವರ್ ನಡೆ
ವನಿತುಂ ಪಾಣ್ಬನಿತುಮಂತದಾವುದು ಗಹನಂ ॥೩೨॥

ಎಂಬನ್ನೆಗಮಂಬರದೊಳ-
ಳುಂಬಂ ಬೆಳಗೆಸಿಸಿ ಮಕುಟಮಣಿಕುಂಡಲದಿ-।
ವ್ಯಾಂಬರಭೂಷಿತನಮರಕ-
ದಂಬಕವೃತನೊರ್ವನಮರನಾಗಿರಿವರದಿಂ ॥೩೩॥

ಅವತರಿಸಿ ಚಕ್ರಿಯಂ ಕಂ-
ಡವನತಮಣಿಮುಕುಟನುಚಿತಪೀಠನಿವಿಷ್ಟಂ।
ಭುವನೇಶಂ ಬೆಸಗೊಳೆ ವಿನ-
ಯವಚಃಪ್ರಸರಂ[3]ಗಳೆಸೆಮೊಡಂಬಡೆ ನುಡಿದಂ ॥೩೪॥

ಭುವನಕ್ಕೆ ಕುಶಲಮಂ ಮಾ-
ಡುವ ನಿನಗೇನೆಂದು ಕುಶಲಮೋ ಎಂಬೆಂ ಪೇಳ್।
ಭುವನನುತ ಮಾಣದರಿನೃಪ-
ಭುವನಕ್ಕನ್ವಳಿಪ ತೋಳ್ಗೆ ಕುಶಲಮೆ ನಿನ್ನಾ ॥೩೫॥

ದೇವರ ಕುಲದೊಳ್ ಪುಟ್ಟಿಯು
ದೇವವೆಸರ್ ನೆಗೞ್ದುದೆಮಗೆ[4] ಕಾರಣಮದನಾ।
ಮೇವೆಮೊ ವಿಜಿಗೀಷುತೆಯಿಂ
ದೇವ [5]ನೆಗೞ್ತಿ[6] ದೇವ ನೀನೆ ದೇವನೆ ಅ[6]ಲ್ತೇ ॥೩೬॥

ಇದು ನೃಪತೇಜಶ್ಚಕ್ರವ
ಪೊದೞ್ಕೆ ತಾನಲ್ತೆ ಚಕ್ರರೂಪದಿನಿರ್ದ-।

೧-೧ (ಬ) ನಿಂತೀಗಳ್ಕೆಡುವುದೆ. ೨-೨ (ಬ) ವನಿದನಿಂ. ೩ (ಅ) ವೆಂ. ೪ (ಅ) ಗೆ. ೫ (ಅ,ಬ) ಯು. ೬-೬ (ಜ) ೞ್ದೇ.

ಪ್ಪುದು ನಿನ್ನ ದಂಡನೀತಿಯು
ಪುದುವೆ ಪಲಂ ದಂಡರತ್ನಮೆಂಬುದು [೧]ಪೆಱತೇ[೧] ||೨೭||

ಭವದೀಯಬಲವಿಜೃಂಭಿತ-
ರವದಿಂ ತ್ರಸ್ತನೆನರ್ಧೀಶ ಬಂದೆಂ ಕಾಣಲ್।
ಭವದಂಘ್ರಿಸರೋಜಮನಾ-
ನವಘೂತಾರಾತಿನೃಪ ಭವತ್ಕಿಂಕರನೆಂ ||೨೮||

ಕೃತಮಾಲನೆನೆಂಬೆನಿಲಾ-
ಪ್ರತೀತನೆಂ [೨]ಗಿರಿಯ ತಟಮಿದೆನ್ನಱಿವನಿತಿ-।
ಲ್ಲ[೨] ತ[೩]ಮಿಸ್ರಗುಹಾಕೂಟ-
ಸ್ಥಿತನೆಂ ನೀನೆನ್ನನಾಳ್ವುದಾಳ್ವಿಸಗೆಯ್ವೆಂ- ||೨೯||

ವ|| ಎಂದು ತನ್ನಂ ಮುನ್ನಮಱಿಪಿ,

ಬೆಳೆಯಿಡಲಱಿವೊಡೆ ಮಂಡಲಿ
ಬೆಳೆಯಿಡುಗೆಮ [೪]ನೋಟ್ಟೊಡಿಪಱ[೪] ತೇಜದ ಮೇಲು-।
ಜ್ಜ್ವಲತೇಜ ನಿನ್ನ ತೇಜಂ
ನೆಲಸಿದುದೆನೆ ಪೇಳಿವರ್ಕೆ ಬೆಳಗಳುವೊಳವೇ ||೩೦||

ಒಂದೊಂದಱನೀತುಡುಗೆಗ-
ಳೊಂದೊಂದಗ್ಗಳಮಿವೆಂದು ಪದಿನಾಲ್ಕುಮನೋ-।
[೫]ರೊಂದನೆ[೫] ತೋಱ ನಿಜಾದರ-
ದಿಂದಂ ಭರತೇಶ್ವರಂಗೆ ದಿವಿಜಂ ಕೊಟ್ಟಂ ||೩೧||

ವ|| ಅಂತು ಕೊಟ್ಟು ತಾನುಂ ಚಕ್ರವರ್ತಿಯ ಮಾಡಿದ ಮನ್ನಣೆಯೊಳ್-ಸಂತಸಂಬಟ್ಟು ವಿಜಯಾರ್ಧಗುಹಾದ್ವಾರಪ್ರವೇಶೋಪಾಯಮನೆಲ್ಲಮಱಿಯೆ ಬಿನ್ನಪಂಗೆಯ್ದು ವ್ಯಂತರಾಮರಂ ಪೋಗಲೊಡಂ ಮನುವಂಶಧ್ವಜಂ ಸೇನಾನಾಯ-ಕಂಗೆ ಬಱಿಯನಟ್ಟಿದಾಗಳಾತಂ ಬಂದು ಮುನ್ನಮೆ ಬಂದಿರ್ದ ಕುರುರಾಜಾದಿ-ಪಾರ್ಥಿವರಂ ನೋಡಿ,

ಅವನೀಶಾದೇಶಮಂ ದಾಂಟಿದರೆನಿಪ ಜಗದ್ದುರ್ಯಶೋಧೂಲಿಯುಂ ಪಾ-ರ್ಥಿವಸೇನಾಧೂಲಿಯುಂ ಮುಟ್ಟಿದು ದಲಿವರನೆಂಬಂತೆ ಮುಂದಿಟ್ಟು ಬಂದಿ-।

---

೧-೧ (ಅII) ಮುಂಟೇ. ೨-೨ (ಬ) ಗಿರಿಯ ತಳಮಿದೆನ್ನರಿವಿನಿತಲ್ತೆ; (ಚ) ಗಿರಿತಟಂ ಗಳೆನ್ನಱಿಯದುದುವಿಲ್ಲ. ೩ (ಅ,ಬ) ತಿ. ೪-೪ (ಬ) ನೋಳ್ಪಮಿದರ. ೫-೫ (ಅ) ರಂಪದೆ; (ಬ) ರೊಂಪಂ.

ರ್ಪ್ವವರುದ್ಧ್ರಕ್ಷತ್ರಕಂಠೀರವರಿಪರಥಿಕೋ¹ಚ್ಚಂಡದೋರ್ದ್ದಂಡಚೈತ್ರೋ
ತ್ಸವಸಾಧೋಪಗ್ರಕೀರ್ತ್ತಿಧ್ವಜರಿವರೆ ಪತಿಶ್ರೀಲತೋಪ್ಯಾಸಪಾಲರ್ ॥೩೫॥

ವ॥ ಎಂಬುದುಂ ತದುಕ್ತಿಸುಧಾಸಾರವಾರಿಧಾರೆಯಿಂದಂ ಕೊಸರ್ತ್ತ ರಾಜಪುತ್ರರ ಮಾರ್ಗ್ಗಶ್ರಮಾತಪಾಕ್ರಾಂತಮಪ್ಪ ಮನಮೆಂಬ ಲತೆಯುಮನೇಕಕುಲಾಲಾಪಪ್ರಕ್ಷೆಯಿಂದಂ ಕುಸುಮಿತಮುಮಂ ಸ್ವಹಸ್ತತಾಂಬೂಲದಾನದಿಂದಂ ಫಲಿತಮುಮಂ ಮಾಡಿ ತವ್ಮತಮ್ಮ ಬೀಡುಗಳ್ಗವರಂ ಪೋಗಲ್ವೇಳ್ದು ಸೇನಾನಾಯಕನ ಮೊಗಮಂ ನೋಡೆ ಕೃತಮಾಲಾಮರೋದ್ದಿಷ್ಟೋಪಾಯಮೆಲ್ಲಮಂ ಪೇಳ್ದು

ತೆಱೆಪ ತೆಜನಿಂತುಬಿಂತೀ-
ತೆಱದಿಂದೆ ತಮಿಸ್ರಗುಹೆಯ ವಜ್ರದ ಪಡಿಯಂ।
ತೆಱೆವಱ ಬೆಂಕೆ ಪೋಪಿನ-
ಮೆಱಗಿಸು ನೀಂ ಮ್ಲೇಚ್ಛಖಂಡಮಂ ಪಡುವಣದಂ ॥೩೬॥

ಎನೆ ರಥಿನೀಪತಿ ಚಕ್ರೇ-
ಶನ ಬೆಸನಂ ಪೂಣ್ದು ರಾಗದಿಂದೇಱ ಜಗ-
ದ್ವಿನುತಾಶ್ವರತ್ನಮಂ ಪಿಡಿ-
ದು ನಡೆನೊಳ್ ಪಿಡಿದು ದಂಡರತ್ನಮನಾಗಳ್ ॥೩೭॥

ಕತಿಪಯತುರಂಗಬಲಪರಿ-
ವೃತನೊಳಪೊಕ್ಕೊಗೆದ ಸಿಂಧುವನವೇದಿಕೆಯಂ।
ಸತತಗತಿವೇಗದಿಂದೂ-
ರ್ಜ್ಜಿತಭುಜಬಲನೆಯ್ದಿ ನಗದ ವನವೇದಿಕೆಯಂ ॥೩೮॥

ವ॥ ಆವೇದಿಕೆಯ ಮೂಡಣ ಮಣಿಮಯಸೋಪಾನಂಗಳಿಂದಂ ರಜತಾಚಲಜಗತೀತಲಮನೇಱ ತನ್ನೊಡನೆಯ ಬಲಮೆಲ್ಲಮಂ ಪಡುವಣ³ಸೋಪಾನದಿಂದಂ³ ಬೆಂಕೆ ಭೋಂಕೆನಳುರದಂತು ಬೇಗಂ ಮ್ಲೇಚ್ಛಖಂಡಾಂತರ್ವ್ವರ್ತ್ತಿಯಾಗೆ ಮುನ್ನಂ ಕಳಿಪಿ ಗುಹೋತ್ಸಂಗಮಂ ತಾನೊರ್ವ್ವನೆಯ್ದೆವಂದು ತುರಗರತ್ನಮನೇಱ ಪಶ್ಚಿಮಾಭಿಮುಖನಾಗಿ ನಿಂದು ಭರತೇಶ್ವರಚಕ್ರವರ್ತ್ತಿಗೆಱಗಿಂದು ಸಾತಿರೇಕಂ⁴ ದ್ವಾದಶಯೋಜನವಿಸ್ತಾರಾಷ್ಟಯೋಜನೋತ್ಸೇಧವಜ್ರಕವಾಟಪುಟಂಗಳಂ,

೧ (ಬ) ಪೋ; (ಚ) ಶರ್. ೨-೨ (ಅ,ಬ) ಮೆಲ್ಲಮಂ. ೩-೩ (ಬ) ಸೋಪಾನಮನೇಱಲ್ವೇಳ್ದು; (ಚ) ಸೋಪಾನಂಗಳಿಂದಂ. ೪ (ಅ,ಬ) ಕ.

[೧]ಭರದಿಂದಂ ದಂಡದೊಳ್[೧]ತಾಟಿಸಿದೊಡೆ ವಿಜಯಾರ್ಧಾಚಲಂ ತೊ-
ಟ್ಟನಾಗಳ್
ಬಿರಿವತ್ತೆಂಬಂತುಮಾಪರ್ವತಮುಳಱಿದುದೆಂಬಂತುಮಾಕಾಶಮಾಶಾಂ।
ತರದಿಂದಂ ಪತ್ತುವಿಟ್ಟೇಧರೆಗೆ ಕೆಡೆದುದೆಂಬಂತುಮಾಶಂಕೆ ಪೊಣ್ಮ-
ತ್ತಿರೆ ಪೆರ್ಚಿತ್ತುಗ್ರಘೋಷಂ ಪ್ರಲಯಘನಘಟಾಟೋಪಗಂಭೀರಘೋಷಂ ॥೩೬॥

ಅರರೀಪುಟಮೆರಡುಂ ಜೀ-
ರ್ಗರೆದು ಮರಲ್ದಂದಮೆಂತುಟಾಯ್ತೆನ್ನ ಭಯಂ।
ಕರದಂಡರತ್ನಹತಿಯಿಂ
ಗಿರಿ ನೊಂದು ನರಳ್ವ ಮಾಱ್ಕೆಯಂತಾಯ್ತಾಗಳ್ ॥೩೭॥

ತೆಱೆಯುಲೊಡಮಲ್ಲಿ ಬೆಂಕೆಯ
ಪೊರಮಡುವೊಂದಂದಮನಿತುಕಾಲದೊಳೆಂದುಂ।
ಪೊಱಮಡದೆ ಭೊಂಕೆನಾಗಳ್
ಪೊಱಮಟ್ಟವೊಲಾದುದುಷ್ಣದೀರ್ಘೋಚ್ಛ್ವಾಸಂ ॥೩೮॥

ವ॥ ಅಂತಭೇದ್ಯವಜ್ರಕವಾಟಪುಟಂಗಳಾಪರ್ವತದೆರ್ದೆದೆಱೆವಂತೆ ತೆಱೆಯೆ ಭೋಂಕೆನಳುರ್ವ ಬೆಂಕೆಯಂ ಸೋಂಕಲೀಯದೆ,

ಕಸೆಯನಿನಿಸಱಿಪಿ ಕುಡೆ ಲಂ-
ಘಿಸಿದುದು ಪನ್ನೆರಡುಯೋಜನಂಬರಮಿನ್ನೇ।
ವೆಸಗೊಳ್ವುದೊ ಕಡುವೇಗದಿ-
ನಸಕಳಿದುದು ಮನಮುಮಂ ತುರಂಗಮರತ್ನಂ ॥೩೯॥

ವ॥ ಅಂತು ತುರಂಗರತ್ನದ ಜವದೊಳೊಡಂಬಟ್ಟಂತೆ ಸಕಳಚಮೂಪತಿ-ಯುಮನಶ್ವರತ್ನಮುಮಂ ದಂಡರತ್ನಮುಮಂ* ಮೆಯ್ಮೆಯ್ಯೊಳೆ ಕಾಪದೇವತೆ-ಗಳ್ ವಿಜಯಾರ್ಧತಟವೇದಿಕೆಯಿಂ ತಗುಳ್ದು ಸಿಂಧುವಿನ ಪಶ್ಚಿಮದಿಗ್ಭಾಗದ ವನವೇದಿಕೆಯ ತೋರಣದ್ವಾರದಿಂದಂ ಮ್ಲೇಚ್ಛಖಂಡದೊಳಗಣ ವಿವಿಧಾಕಾರ-ಪುರಗ್ರಾಮ[೨]ಸೀಮಾರಾಮ[೨]ಭೂಮಿಭಾಗಮುಮಂ ಪುಗಿಸಿದಾಗಳ್ ಸೇನಾನಾಯ-ಕಂ ಮ್ಲೇಚ್ಛಖಂಡಮುಮಂ [೩]ಪ್ರದಕ್ಷಿಣಂ[೩]ಗೆಯ್ದು ಬಾಯ್ಕೇಳಿಸಿ [೪]ಪಲಂಬರ್ [೪]ಮ್ಲೇಚ್ಛರಾಜರನವರವರ ಜೀವಧನಕುಲಧನಂಗಳ್ ವೆರಸು ಮುಂದಿಟ್ಟು ತೋ-ರಣದ್ವಾರದಿಂದಂ ಸಿಂಧುವನವೇದಿಕೆಯೊಳಗನೆ*ಬಂದು ಸೋಪಾನಾಂತರದೊಳ್

೧-೧ (ಆ,ಬ) ಭರದಿಂ ದಂಡಾಗ್ರದೊಳ್ತಾ. ೨-೨ (ಚ) ಸೀಮಾಭಿರಾಮ. ೩-೩ (ಚ) ತ್ರಿಪ್ರದಕ್ಷಿಣಂ. ೪-೪ (ಅ) ಪಲರುಂ; (ಬ) ಪಲಬರುಂ. * (ಅ) ತೆಂಡಂ.

* * (ಅ) ಪ್ರತಿಯಲ್ಲಿಲ್ಲ.

ವಿಜಯಾರ್ಧ[೧]ತಟವೇದಿಕೆಯುಂ[೧] ಕಳಿದು ಜಗತೀತಳಮನೇಱಿ ಬರ್ಪನ್ನೆಗಂ,

ಒಳಗಣ ಬೆಂಕೆಯುಂನಱುದಿಂ-
ಗಳಂತು ನಗಮುಗುಳ್ದು ಶಾಂತರೂಪದಿನಿರ್ದ್ದ
ತ್ತಳುರುತ್ತಮಿರ್ದ್ದ ಕೋಪಾ-
ನಳನಿಂದುಪಶಾಂತನಾದ ಭೂಭೃತ್ಪತಿವೋಲ್ ॥೪೦॥

ವ॥ ಆಗಳಾಗುಹಾದ್ವಾರಮಂ ಪತಾಕಿನೀಪತಿ ಪಡೆಗೆ [೨]ನಡೆಯಲಿಂಬಪ್ಪಂತು[೨] [೩]ಶೋಧಿಸಿ[೩]ಕಾಪಂ ಪೇಳ್ದು [೪]ನಿಜವಿಜಯ[೪]ಶಿಬಿರಮಂ ಪೊಕ್ಕು ಚಕ್ರವಲ್ಲಭ-ನಾಸ್ಥಾನಮಂಟಪದೊಳ್ ದೂರಾವನತಮಣಿಮಕುಟನಾಗಿ ಕಂಡು ವಸ್ತುವಾ-ಹನಪುರಸ್ಸರಂ ಮ್ಲೇಚ್ಛರಾಜರಂ ಲಲಾಟ[೫]ಘೃಷ್ಟ[೫]ಭೂತಳರಂ **ಮಾಡಿ** ಕಾಣಿಸಿ,

[೬]ಹರಿಕರಿ[೬]ಕನ್ಯಾ[೭]ರತ್ನೋ-
ತ್ಕರಂಗಳಿವು[೭] ದೇವಕುಲಧನಾದಿಗಳಿವು ದೇ-।
ವರದೊಂದಾಜ್ಞೆಯನಾಂಪರ್
ಕಿರೀಟದಿಂದಿವರ್ಗಳಿನಿಬರುಂ ಭೂಪತಿಗಳ್ ॥೪೧॥

ವ॥ ಎಂದವರ ದೇಶನಾಮಕುಲಗೋತ್ರಂ[೮]ಗಳನಱಿಯೆ[೮] ಬಿನ್ನಪಂಗೆಯ್ದು ಭೃತ್ಯಭಾವಮಂ ಪೊಣಿಸಿ ಸನ್ಮಾನದಾನಾದಿಗಳೊಳ್ ಸಂತಸಂಬಡಿಸಿ ತಂತ-ಮ್ಮ ನೆಲೆಗಳ್ಗೆ ಪೋಗಲ್ವೇಳ್ದು ಶುಭದಿನಮುಹೂರ್ತದೊಳುತ್ತರಭರತವಿಜಯೋ-ದ್ಯೋಗಮಂ ಭರತರಾಜನಱಿಪಲೆಂದು ವಿಜಯಭೇರಿಯುಂ ಪೊಯಿಸಿದಾಗಳ್,

ದೆಸೆಗಳ ಸಂದಂ ಪಱಿದಾ-
ಗಸದಿಂದಂ ಪತ್ತುವಿಡಿಸುವಂತೆವೊಲಿಳೆಯಂ।
ಮುಸಕದೊಳೆ ಪೊತ್ತು ನೆಗೆವವೊ
ಲೆಸೆವುದು ದಿಗ್ವಿಜಯಭೂರಿಭೇರೀನಿನದಂ ॥೪೨॥

ವ॥ [೯]ಆವಿಜಯಪ್ರಯಾಣಭೇರೀನಿನಾದಮಂಭೋಭಾರಗಂಭೀರಾಂಭೋ-ಧರಸ್ತನಿತಬಹಳಸ್ನಿಗ್ಧಂಗಳಪ್ಪ ಮದಸ್ತಂಬೇರಮಬೃಂಹಿತಂಗಳಿಂದಮುಸಕ್ಕದಾ—

---

೧–೧ (ಅ) ವೇದಿಕೆಯುಂ. ೨–೨ (ಅ) ನಡೆಯಲು ಬಪ್ಪಂತು. ೩–೩ (ಅ,ಬ) ಮಾಡಿ. ೪–೪ (ಅ) ವಿಜಯ. ೫–೫ (ಜ) ಸ್ಪೃಷ್ಟ. ೬–೬ (ಅ,ಬ) ಕರಿಹರಿ. ೭–೭ (ಜ) ರತ್ನಾಭರಣಂಗಳ್. ೮–೮ (ಜ) ಗಳಂ ನೆಱೆಯೆ ತಿಳಿಯೆ. ೯ (ಅ) ಅಂತು.

ಸ್ಫಾಲಿತಾನೇಕದುಂದುಭಿಧ್ವನಿಮಧುರಗಂಭೀರಂಗಳಪ್ಪ ಹಯಹೇಷಿ-
ತಂಗಳಿಂದಮುದಗ್ರಕುಂಜರಕುಂಭಜಜ್ಝರಣಾಜನಿತೋತ್ಕಂಠಕಂಠೀರವರ-
ವೋದ್ಘಟಿಭೈರವಂಗಳಪ್ಪ ಸುಭಟ[೧]ಪದ[೧]ಕ್ಷೋಭಿತಂಗಳಿಂದಂ ಸಂದಣಿಸಿ[೨]ಘೂ-
ರ್ಣಮಾನಾರ್ಣವ[೨]ಘೋಷಮಂ ಗೆಲ್ದು ಹರ್ಷದಿಂ ಪೆರ್ಚ್ಚುವಂ[೩]ತೆ ಪೆರ್ಚ್ಚಿ,

ವೀರಶ್ರೀಸ್ನಾನಕುಂಭದ್ವಯಮೆನಿಪ ಕಟದ್ವಂದ್ವದಿಂ ದಾನಧಾರಾ-
ಸಾರಂ ಕೈಗಣ್ಮೆ ಕಣ್ಗೊಪ್ಪುವ ಜಯಗಜಮಂ ಲೀಲೆಯಿಂದೇಱಿ ವಾದಿ-
ತ್ರಾರಾವಂ ವಂದಿವೃಂದಧ್ವನಿ ಜಯಜಯಕೋಲಾಹಲಂ ಮಂಗಲಾಲಂ-
ಕಾರಂ ಯಾತ್ರೋತ್ಸವಪ್ರಸ್ತುತಮೆನೆ ತಳರ್ದಂ ರಾಗದಿಂ ರಾಜರಾಜಂ ||೪೩||

ವ|| ಅಂತು ತಳರ್ದು ರಾಜವಂಬಿರಮಂ[೪] ಪೊಱಮಡುವಾಗಳ್,

ಜಳ[೫]ಧಿದ್ವೀಪಾಂತರಾಳಂಗಳನಿಱಿದೆ ಪುಗಿಂ ಪೋಗಿಮುಗ್ರಾರಿಗಳ್ ಮಾ-
ರ್ಕೊಳಲಾಱರ್ ಚಕ್ರನಾಥಪ್ರಬಲಬಲ[೬]ಮನೆಂಬಂತೆವೊಲ್ ಸಾನುಕೂಲಾ-
ನಿಳ[೭]ನಿಂದಂ ಕೇತುಹಸ್ತಾವಳಿ ಮಿಳಿರ್ವಿನೆಗಂ [೮]ಒಂದುವು[೮]ತ್ತುಂಗಭೂಭೃತ್-
ಕುಳಸಂಕಾಶಂಗಳಾಕಾಶದ ನೆಲದೆಡೆಯಂ ಪರ್ವಿ[೯] ಗಂಧದ್ವಿಪಂಗಳ್ ||೪೪||

ವ|| ಅಂತು ಪೊಱಮಟ್ಟುತ್ತರ[೧೦]ಭರತದ[೧೦] ವಿಜಯಶ್ರೀವಿವಾಹಮಹೋ-
ತ್ಸವ ಪ್ರಾರಂಭದೊಳ್[೧೧] ದಿಕ್ಪಾಲಕರ ಕೆದಱುವ ಪಿಷ್ಟಾತಕಚೂರ್ಣಮೆನಿಸುವ
ರಜಃ[೧೨]ಪುಂಜಮುಮಂ[೧೨] ದಿಕ್ಕನ್ಯಕೆಯರ ಸೂಸುವ ಲಾಜಾಂಜಲಿನಿಚಯಮೆ-
ನಿಸುವ ಮದಕರಿಕರಶೀಕರಮುಮನಂಬರದೊಳಮರವೃಂದಂ ಬಿತ್ತರಿಸುವ ಪ-
ತಾಕೆಗಳೆನಿಸುವ ಕರಿಕದಳಿಕೆಗಳುಮಂ ಮುಂದೆ[೧೩]ಮುಂದನಿಲ[೧೩]ದೇವನ ತಳಿವ
ಕುಸುಮಪ್ರಸರಮೆನಿಸುವ ತುರಂಗಮುಖಫೇನಪಲ್ಲವಸ್ತಬಕಮುಮಂ ನೋಡು-
ತ್ತುಂ ನಡೆಯೆ,

ಬಲವತ್ಪ್ರತ್ಯಂತಭೂಪಾಲಕ[೧೪]ನಿವಹ[೧೪]ಮುಹಾ[೧೫]ವಾಹಸಂ-
ವಾಹಿನೀ[೧೫]ಸಂ-
ಕುಲಮತ್ಯುತ್ಸಾಹದಿಂದಂ ಪುಗೆ ದೆಸೆದೆಸೆಯಿಂ ಬಂದು ಚಕ್ರೇಶಭೂಭೃ-
[೧೬]ದ್ಬಲ[೧೬]ಚಕ್ರಾವಾರಪಾರಂ ಸುಭಟಜನಚಮತ್ಕಾರಿ ತೇಜೋಮಹೌರ್ವ್ವಾ-
ನಲಮುಗ್ರಾರಾತಿವರ್ಗಪ್ರಲಯಕರಮದೊಂದೆಯ್ದೆ ತಾಳ್ದಿತ್ತಗುರ್ವ್ವಂ ||೪೫||

ವ|| ಆಗಳ್ ಸೈನ್ಯಾಧಿನಾಥನಧಿನಾಥನ ಕೆಲದೊಳ್ ಪಕ್ಷಗಜಾಧಿರೂಢನಾಗಿ
ದೇವ ನೋಡೀತೋರ್ಪುದು ದವದಹನಧೂಮಾಧಿಕಶ್ಯಾಮಲಿತೋತ್ತಾಲತಾಲಕಾ-

---

೧-೧ (ಚ) ಪಟು. ೨-೨ (ಅ) ಘೂರ್ಣಿತಾರ್ಣವ; (ಬ) ಘೂರ್ಣ್ಣಾರ್ಣ್ಣವ. ೩ (ಅ) ತಿರೆ.
೪ (ಅ) ದಿಂ. ೫ (ಅ,ಬ) ಲ. ೬ (ಅ,ಬ) ಲ. ೭ (ಅ,ಬ) ಲ. ೮-೮ (ಚ) ಬಂದನು.
೯ (ಚ) ವ್ವೆ. ೧೦-೧೦ (ಅ,ಬ) ಭರತ. ೧೧ (ಅ) ಳಂ. ೧೨-೧೨ (ಅ,ಬ) ಪಟಲಮುಮಂ.
೧೩-೧೩ ಮುಂದಣಸಿಲ. ೧೪-೧೪ (ಚ) ನಿಕರ. ೧೫-೧೫ (ಚ) ವಾಹಿನೀವಾಹಿನೀ.
೧೬-೧೬ (ಚ) ತ್ತು ಳ.

ಯುಮತಿವಿಚಿತ್ರತ್ರಪುಷಯಪತ್ರಖಚಿತೋಚ್ಚಂಡತಾಳಚಾಪದಂಡಮನೇಕವ-
ರ್ಣ್ಣಾಕೀರ್ಣ್ಣತ್ರಿಸರವೇಣಿಕಾಗಾಢಗ್ರಥಿತ[೧]ತ್ರಾಪುಷ[೧]ಕೋಶಗುಪ್ತಗುಲ್ಫಾಂತರ-
ಪ್ರಾಪ್ತಖಡ್ಗಧೇನುಕಮಾಂಧ್ರಧಾನುಷ್ಕಬಲಂ, ಮತ್ತಿತ್ತ ಕೋಮಲಶ್ಯಾಮಲಚ್ಛಾ-
ಯಾಕಾಯಮುಪಸಿಕ್ಕಿಲಕುಟಿಲಘಟಿತಜೂಟ[೨]ಬಂಧಮುಪಮಾಕರ್ಪೂರಭರಿತ[೨]-
ಕಾಲಾಯಸವಲಯಭಯಂಕರಕರದ್ವಯಮಭಿನವಶುಂಭತ್ತ್ರಿಸುಂಭವೇಣಿಕಾಬಂ
ಧೋಲ್ಲಸನ್ಮೃಕ್ಷಿಕಾಮುಕುಲಾಕಾರವಿತಸ್ತಿಮಾತ್ರಾಸಿಧೇನುಕೋಶಮನೇಕರುಚಿವಿ-
ಚಿತ್ರವೇತ್ರವಿಶಿಖಾತಿರುಚಿರಪ್ರಾಂತಕುಂತಮುತ್ತರೀಯಕಂಟಕಮತಿಸುಭಟ-
ಮುದ್ಧೋತ್ಕಂಟ[೩]ಮಿದು ಕರ್ಣ್ನಾಟಬಲಂ, ಮತ್ತೀಭಾಗದೊಳಭಿನವಪ್ರಿಯಂಗು
ಶ್ಯಾಮಾಂಗಮುದ್ಧರಚಂದ್ರಬುದ್ಬುದವ್ಯಾಕೀರ್ಣ್ಣತ್ರಿಶೂಲಶರಾಲವಿಶಾಲ[೪]ವೇತ್ರ[೪]-
ಖೇಟಕಮುದ್ಧೃ[೫]ಷ್ಟ ಪಾಂ[೫]ಡುರಪಾಲಿಮಂಡಿತಕರವಾಲಾದ್ಯಾಯುಧಮಿಕ್ಷು-
ದಂಡ[೬]ಪ್ರಣೀತನಿಜಭುಜದಂಡ[೬]ಕ್ರೀಡಾವಖಂಡಿತೋಚ್ಚಂಡಶುಂಡಾಲಗಾತ್ರಾಪ-
ರಮ[೭]ತಿಬಾಲಕದಲಿಕಾಕಾಂಡಲೀಲಾಚ್ಛಿನ್ನಸಿಂಧುರಮಧ್ಯಹಸ್ತಮತ್ಯಂತಮೃದು
ಮೃಣಾಲದಂಡಹೇಲಾದಲಿತದಂತಿದಶನ[೮]ಮುಸಲಮುಲ್ಲಾಸಲಂಘನ[೮]ಲಾಘವ-
ಲಂಘಿತಪರಪುರಪರಿಖಾವಲಯಮನೇ[೯]ಕಾಹವ[೯]ದೃಷ್ಟದೋಸ್ಸಾಹಸಮಿದು ಪ-
ರಾಟ ಸುಭಟಬಲಂ, ಮತ್ತಿತ್ತ ಸರ್ವಾಂಗೀಣಸಾಂದ್ರಹರಿದ್ರವಿಲೇಪನವಿಲಿಪ್ತ-
ಹರಿತಾಲ[೧೦]ಪಂಕಪಿಂಗಲ[೧೦]ಶಿಲಾಸ್ತಂಭವಿಭ್ರಮನಿತಂಬಶಿಖರತರಂಗಿತ[೧೧]ಚ-
ತುರಂಗುಳಾಗ್ರ[೧೧]ಪಲ್ಲವನಿವಸನಮತಿಮಸೃಣವರ್ಣ್ಣವ್ಯತಿಕರೋದೀರ್ಣ್ಣಶೋ-
ಭಾಪುಂಜರಂಜಾವುರಪಟ್ಟಿಕಾನಂಪಕನಕ[೧೨]ಪತ್ರಾಂಕಿತ[೧೨]ಯೋಗಖಡ್ಗಪುತ್ರಿ-
ಕೋದ್ಭಾಸಮಾನಸುವರ್ಣ್ಣಕೋಶಮನತಿ[೧೩]ಜಠರ[೧೩]ಕರ್ಣ್ಣಿಕಾಮುಕುಲಸ್ಥೂ-
ಲತ್ರಿ ಚತುರಸುವರ್ಣ್ಣ[೧೪]ಮಣಿಸಂಬಂಧೋ[೧೪]ದ್ಧುರಕಂಧರಮುತ್ಕಟಹಾಟಕಪ-
ದಕಮಣಿ[೧೫]ತ್ರಿಖಂಡ[೧೫]ಕರ್ಣ್ಣಾ[೧೬]ಭರಣಮುದ್ಬದ್ಧೋದ್ಭವ[೧೬]ಮತ್ಯಂತಶೌರ್ಯ್ಯ
ಸೌಂದರ್ಯ್ಯಪ್ರಕಾಶನಪರಿತ್ಯಕ್ತತನುಚ್ಛದಮುತ್ತಪ್ತರಜತಾವದಾತಲೋಹಪು[೧೭]
ತ್ರಿ-ಕಾ[೧೮]ನದ್ಧ[೧೮]ಲಾಕ್ಷಾಹಿಂಗುಲಿಕಪಾಟಲಕಮುದ್ಧರಕರವಾಲಚಾಲನಪ್ರಕಟಿ-
ತಭಟವಿಭೀಷಣಾಡಂಬರಮತಿಸ್ಫುಟವೀರಶೃಂಗಾರನಾಟಕಾಭಿನಯನಟವೃಂದ-
ಮಿದು ಮಹಾನಾಟಕಬಲಂ ಮತ್ತಿತ್ತ ಕಾರ್ತ್ತಸ್ವರಸ್ತಂಭಸಂಚಲರಣಭಾಸ್ವರ-
ಮಾಸ್ಕಂದಪ್ರಲಂಬಸುಭಟಕಥಾಕರ್ಣ್ಣನಾಭರಣಕರ್ಣ್ಣ[೧೯]ಪಾಶ[೧೯]ಮಾಬಾಂ-

---

೧-೧ (ಚ) ತ್ರಪುಷ; (ಬ) ತ್ರಪುರ್ಷ. ೨-೨ (ಚ) ಬಂಧಮುಪಮಾಕರ್ಪೂರರಚಿತ. ೩ (ಚ) ಠ. ೪-೪ (ಚ) ಮಿತ್ರ. ೫-೫ (ಚ) ಷ್ಟರಶ್ಮಿಪಾಂ; (ಅII) ನಿಜದಂತ. ೬-೬ (ಚ) ಪ್ರಣೀತ. ೭ (ಚ) ಪ. ೮-೮ (ಚ) ಮುಸಳಮುತ್ಕಪಾಟ. ೯-೯ (ಬ) (ಅ,ಬ) ಕಸಮರ. ೧೦-೧೦ (ಬ) ಪಂಕಿಲ. ೧೧-೧೧ (ಅ) ಚತುರಂಗುಲಾದ್ರ್ರ; (ಬ) ಹಾಟಕಚತುರಂಗುಲಾಗ್ರ ೧೨-೧೨ (ಅ) ಪತ್ರಿಕಾಯೋಗ; (ಬ) ಪತ್ರಾಂಕಿತಾಯೋಗ. ೧೩-೧೩ (ಅ) ಜಠರಂ. ೧೪-೧೪ (ಚ) ಕಂದೋದರ. ೧೫-೧೫ (ಅ) ಮಣಿತ್ರಿಕ; (ಅII) ಮಣಿಶೃಂಗಾಳಕ; (ಅIII) ಮಣಿಶೃಂಖಳಾ. ೧೬-೧೬ (ಚ) ಭರಮಣಿಮುದ್ಬದ್ಧ ಜೂಟ. ೧೭ (ಅ) ಪ. ೧೮-೧೮ (ಬ) ನದ್ಧ.

ಲಶಾಪ್ರ್ಯಾಲಮುಖರೋಮಕರಾಲಸ್ಯಕ್ರ್ಯೋಪಾಂತಪ್ರರೂಢಶ್ಮಶ್ರುಜಾಲಪಾಹ-ವಮಹಾಹುಂಕಾರಕಾಲಕೂಟವಿಟಪಿಪ್ರರೋಹಶಂಕಾವಹನಾಭಿಕೂಪಾವಲಂಬಿ-ಕೂರ್ಚ್ಚಕಲಾಪಂ ಲಲಾಟನಿಹಿತಕೌಸುಂಭಾಂಶುಕಪಟ್ಟಿಕಾಪ್ರಾಂತನಿಬಿಡನಿಬ-ದ್ಧಕೇಶಬಂಧಮಾಚೂಲಸ್ವಸ್ತಿಕಬದ್ಧವಿಚಿತ್ರವಸ್ತ್ರದ್ವಯೋದ್ದಾಮಧಾನುಷ್ಕಮು-ದ್ರೀಚಿಮರುಮರೀಚಿ ನಿಚಯ ಚಂಚಲೋದ್ದಾಮಬಲಬಹುಲನಿಷ್ಕವಚ[೧]ಪ್ರಾಸ-ಪಾಣಿವಾರಾಶ್ಚಿಕಮುಗ್ರ[೧]ಪ್ರೇಂಖ[೨]ಪ್ರೇಂಖೋಲಾನೇಕನೇತ್ರ[೨]ಪಟ್ಟಿಕಾಸಟಾಲಸ-ರಲಕುಂತಹಸ್ತಮಹಾಹಯಾ[೩]ರೋಹ[೩]ಮಸಿತಭುಜಗಶಿಶುತರಳತರವಾರಿಖಡ್ಗ-ಖೇಟಕವ್ಯಗ್ರಕರದ್ವಯೋದ್ದಾಮ[೪]ಪದಾತಿ[೪]ಬಹಳಮಿದು ಲಾಟಬಲಮೆಂದನೇಕ-ದೇಶಾಧೀಶಬಲಂಗಳಂ ಬೇಱೆವೇಱೆ ತೋರುತ್ತಂ ಬರ್ಪ್ಪನ್ನೆಗಂ ಮುಂದೆ,

ಇಭಖಡ್ಗಿವ್ರಾತನಾನಾಹರಿಮಯಕಟಕ[೫]ಭ್ರಾಜಿತಂ ತುಂಗ[೫]ವಂಶ-
ಪ್ರಭವಂ ಸಿಂಹಾಸನಶ್ರೀಸಮುಚಿತಮನ್ವಿತಾಂಭೋಧಿಕಲ್ಲೋಲಮಾಲಾ-|
ನಿಭಲೀಲಾಸಂಚಲಚ್ಚಾಮರರುಚಿರಮಿಳಾಚಕ್ರವಿಖ್ಯಾತಭೂಭೃತ್
ಪ್ರಭು ಚಕ್ರಾಧೀಶನೊಳ್ ಮಚ್ಚರಿಪವೊಲೆಸದಿರ್ದ್ದತ್ತು ರೌಪ್ಯಾ-
ಚಲೇಂದ್ರಂ ||೪೬||

ವ|| ಅಂತು[೬]ವಿಜಯಾರ್ದ್ಧಾಚಲ[೬]ಕಟಕಾಭಿಮುಖೀಕೃತ ನಿಜವಿಜಯಕ-ಟಕನಾಗಿ ಬಡಗವೊಗದೆ ನಡೆದು ತನ್ಮಹೀಧರದ ಜಗತೀತಲಮಣಿಮಯಸೋ-ಪಾನಮನೇಱುವಲ್ಲಿ ಪಶ್ಚಿಮಾಭಿಮುಖನಾಗಿ ಪೋಗಿ ಪಂಚಷಡ್ಯೋಜ[೭]ನಾಯಾ-ಮ[೭]ದ್ವಾದಶಯೋಜನವಿಸ್ತಾರಾಷ್ಟಯೋಜನೋತ್ಸೇಧವಜ್ರಕವಾಟಪುಟಮುಂ ವಿ-ಚಿತ್ರಮಣಿಮಯೂಖಚಿತ್ರಿತದ್ವಾರಬಂಧಬಂಧುರಮುಮಧಸ್ಸ್ಥಲಪ್ರಸರ್ಪ್ಪತ್ಸಿಂ-ಧುಪ್ರವಾಹವಿರಾಜಿತಮುಂ ಪ್ರಸವಾಗಾರದಂತೆ ನಿಷಿದ್ಧಾನ್ಯಪ್ರವೇಶಮುಂ ರಾಜಭ-ವನದಂತೆ ಕೃತರಕ್ಷಾವಿಧಿಯುಂ ವಿವಾಹಗೇಹದಂತೆ ಸಂಗತಮಂಗಲಪರಿಕರಮುಂ ಜೀವಿತಾಶಯದಂತತ್ಯಾ[೮]ಯತ[೮]ಮುಂ ಮುಕ್ತಜ್ವರದಂತೆ ನಿರ್ಮ್ಮುಕ್ತೋಷ್ಮಮುಂ ಮೂರ್ಚ್ಛಾಪ್ರಾಪ್ತನಂತೆ ತಮೋಮಯಮುಮಪ್ಪ ತಮಿಸ್ರಗುಹೆಯನೆಯ್ದಿ-ದಾಗಳ್,

ಅದಱೊಳಗೆ ಪುದಿದು ಮಂದೈ-
ಸಿದ ಕತ್ತಲೆಗಗಿರ್ದು[೯]ಸುಗಿವ[೯] ಪೆರ್ಬ್ಬಡೆಯಂ ಕಂ-|
ಡಿದು ನಡೆಯದೆ ಸೆಡೆದಿಂದಿ-
ದ್ರ್ದದೆಂದು ಬೆಸಸಿದೊಡೆ ಚಕ್ರಿ ಸೇನಾಪತಿಯುಂ ||೪೭||

---

೧-೧ (ಅ) ಪ್ರಾಸಪಾಣಿಮಾತಸ್ಕಿಕಮನುಗ್ರ; (ಬ) ಪ್ರಾಸಪಾಣಿವಾರಾಶಿಕಮುಗ್ರಭಾಗ. ೨-೨ (ಅ) ಪ್ರೇಂಖನೇತ್ರ; (ಬ) ಪ್ರೇಂಖದನೇಕನೇತ್ರ. ೩-೩ (ಚ) ರೋಹಣ. ೪-೪ (ಅ,ಬ) ಪಾಧಾತ. ೫-೫ (ಅ) ಭ್ರಾಜಿತೋತ್ತುಂಗ. ೬-೬ (ಅ) ವಿಜಯಾರ್ದ್ಧಾಚಲೇಂದ್ರ. ೭-೭ (ಚ) ನಾಯಾಮದೊಳಂ. ೮-೮ (ಚ) ಯಾಮ. ೯-೯ (ಅ) ಸುಳಿವ.

ಆತಂ ಪುರೋಹಿತಂ ಪೇ-
ಸಾತತತಿಮಿರಪ್ರಭೇದನೋಪಾಯಮಿದಂ ।
ಪಾತಮುಮಂ ಕಿಡಿಸಲ್ ಸಂ-
ಘಾತನಮಂ ಬಗೆದು ತಮಸ್ರಗುಹಾಭಿತ್ತಿಗಳೊಳ್ ॥ ೪೮ ॥

ಎರಡುಕೆಲಂ ಚಂದ್ರಾದಿ-
ತ್ಯರನಾಗಳ್ ಬರೆದು ಕಾಕಿಣೀರತ್ನದೊಳಂ ।
ಸ್ಫುರಿತಮಣಿರತ್ನದೊಳಮು-
ಪರಿಮಿತ್ತ್ರಂ ಯೋಜನಕ್ಕೆ [೧]ಬರೆಸೊಂಡಲಮಂ[೧] ॥ ೪೯ ॥

ಬಸಿರಿಂ ಪೆರ್ಬಿಂಗಣಮುಮಂ
ಪಸರಿಸ ಕಪ್ಪುಳಿ ತೆರಪ್ಪು ತೊಳೆಪ್ಪುಡೆ ರಾಗಂ
ಪಸರಿಸೆ ನಡೆಪತ್ತು ಬಲಿಂ
ಪಸರಿಸಿ ನದ್ಯುಭಯತಟದೊಳೊಡನೊಡನಾಗಳ್ ॥ ೫೦ ॥

ವ॥ ಅಂತು ಕಾಕಿಣೀಮಣಿರತ್ನಂಗಳೊಳ್ ಬರೆದ ಚಂದ್ರಾದಿತ್ಯರ ಬೆಳಗುಗಳೊಳಂ ಮುಂದೆ ನಡೆವ ಚಕ್ರರತ್ನಪ್ರಭಾಚಕ್ರದೊಳಮಾಪಡೆ ಕಣ್ಬಡೆದಂತೆ ಸೋಪಾನಾಂತರದೊಳಿಡಿದೆರಟ್ಟಿಗೆಯಾಗಿ ಸಿಂಧುವಿನೆರಡುಂ ತಡಿಯೊಳಮೆರಡುಂಯೋಜನದಗಲ[೨]ದಳವಿಯೊಳ್[೩] ಸೇನಾನೀಸಿಯುಮದೊಳ್[೪]ಪ್ರಭೂತಾಯತಸಮಾನಮಾಗೆ[೪] ನಡೆದು ಕೆಲವು ಪಯಣಂಗಳಿಂ ಗುಹಾಭಿತ್ತಿಗಳೆರಡುಂ ದೆಸೆಯ ಕುಂಡಂಗಳೊಳ್ ಪುಟ್ಟಿ ಬಂದೆರಡುಂ ದೆಸೆಯೊಳಂ ಸಿಂಧುವಿನೊಳ್ ಕೂಡಿದ ಗುಹಾಮಧ್ಯದೊಳುನ್ಮಗ್ನನಿಮಗ್ನಜಲನಿಮ್ನಗಾತಟದೊಳ್ ಬೀಡಂ ಬಿಡಿಸಿ,

ಒಂದಱ [೫]ನಿರ್ಮ್ಮಳಲೊಂದ-
ಕ್ಕೊಂದಿಸುತುಂ[೫] ಮೇಗೆ ಕೊಂಡು ನೆಗೆವುದಿದೇಂ ಮು- ।
ತ್ತೊಂದರ ನೀರಡಿಗದ್ದುವವು-
ದೆಂದತಿವಿಸ್ಮಯದೆ ನೋಡಿದಂ ಭರತೇಶಂ ॥ ೫೧ ॥

ವ॥ ಅಂತುಭಯನದಿಯ ವೈಷಮ್ಯಮುಮನಾಶ್ಚರ್ಯ್ಯಂಬಟ್ಟು ನೋಡಿ ನದ್ಯುತ್ತರಣೋಪಾಯಮಾವುದೆಂದು ಬಗೆದು ಬೇಗಂ ಸ್ಥಪತಿರತ್ನಮುಮಂ ಕರೆದುತ್ಪತನ್ನಿಪತದುಪಕೋಭಯಸರಿತ್ಸ್ವರೂಪಮಂ ತೋಱಿದೊಡೆ,

೧-೧ (ಅ,ಬ) ಬರೆಬರೆದೊಂದಂ. ೨ (ಅ,ಬ) ಲುಂ. ೩-೩ (ಚ) ದೊಳ್. ೪-೪ (ಚ) ಪ್ರಭೂತಯುವಸಮಾಗೆ. ೫-೫ (ಅ,ಬ) ನೀರ್ಮಣಳಂದ। ಕ್ಕಂದಿಸಿ ಕಂ.

[೧]ಅಡಿಯಿಂ ಮೇಗ[೧]ಣ್ಗೆತ್ತುವ
ಕಡುಗಾಳಿಯ ಪ್ರಾಯ್ಗೊಳಿದಱ ನೀರೊಗೆ[೨]ದಪುದಾ[೩]- ।
ರ್ದಡಿಗೆ ಬರೆ ತೆಗೆವ ಗಾಳಿಯಿ-
ನಡಿಗಿೞ[೪]ದಪುದಿದಱ ನೀರಿದೊಂದಚ್ಚರಿಯೇ ॥ ೫೨ ॥

ವ॥ ಎಂದು ಬಿನ್ನಪಂಗೆಯ್ದು ದಿವ್ಯಶಕ್ತಿಪ್ರಭಾವದಿಂದಮಾನುಷಾರಣ್ಯಂ-ಗಳ ಮಹಾದ್ರುಮಂಗಳಂ ತರಿಸಿ ನಡಿಸಿ ನಟ್ಟ ಕಂಭಂಗಳ ಮೇಗೆ ಸಾರದಾರು[೪]-ಗಳನೆಡೆಗಿೞ[೨]ದಿರೆ ಪಾಸಿ ಪಸರಿಸಿ ಪಡೆಗೆ ನಡೆಯ[೫]ಲಿಂಬು[೫]ಮಾಡಿದಾಗಳ್,

ದಳ್ಳಿಸಿ ಕುಕಿಲುತ್ತಂಬುಧಿ-
[೬]ಯಲ್ಲೋಲಂ[೬] ನೆಗೞ[೩] [೭]ನಲಿದು ನರ್ತ್ತಿಸಿ[೭] ನಡೆದ- ।
ತ್ತಳ್ಳಾಡೆ ನೆಲಂ ಬಲಮದು
ಕೊಳ್ಳೆಂದು ಗು[೮]ಹಾರವಂ ಪೊದೞ್ದಿಸೆವಿನೆಗಂ ॥ ೫೩ ॥

ವ॥ ಅಂತು ಭರತೇಶ್ವರಚಕ್ರವರ್ತ್ತಿಯುಮನೇಕಮದಗಜಘಟಾಪರಿವೇಷ್ಟಿ-ತನಾಗಿ ರಾಜಮಾರ್ಗ್ಗದೊಳ್ ನಡೆವಂತದಱ ಮೇಲೆ ನಡೆದು ಕೆಲವು ಪಯಣಂಗ-ಳಿಂದುತ್ತರಗುಹಾದ್ವಾರಮನನಾಯಾಸದೊಳ್ ತೆಱ[೯]ದು ಪೊಱಮಟ್ಟಾಗಳ್,

ಸೆಱ[೯]ವನೆಯಿಂದಂ ತೊಟ್ಟನೆ
ಪೊಱಮಟ್ಟವೊಲಂದು ಗರ್ಭಗೃಹದಿಂದಂ ಮೇಣ್ ।
ಪೊಱಮಟ್ಟವೊಲಾಗುಹೆಯಿಂ
ಪೊಱಮಟ್ಟುದು ಸೈನ್ಯಮಂಬುಧಿಧ್ವನಿಯಿಂದಂ ॥ ೫೪ ॥

ವ॥ ಅಂತು ತಮಿಸ್ರಗುಹಾದ್ವಾರದಿಂ ಪೊಱಮಟ್ಟಾಗಳ್,

[೧೦]ಸಕಟೋದ್ಘೃಷ್ಟ[೧೦]ವನೇಭ[೧೧]ತುಂಗ[೧೧]ಜಠರಸ್ಥೂಲಾಗ್ರಲಾಕಾರಮಾ-
ರ್ಗ್ಗಕುಜಂ ವಾಜಿಖುರಾಹತಿಸ್ಥಪುಟಿತಗ್ರಾವಸ್ಥಲಂ ಸೈನ್ಯದಂ- ।
ತಿಕರೋಚ್ಚಾಟಿತಸಲ್ಲಕೀಕಿಸಲಯಂ ಚಕ್ರೇಶ್ವರಂ ಪೆರ್ಚ್ಚಿದು-
ತ್ಸುಕದಿಂ ದಾಂಟಲಳುಂಬಮಪ್ಪ ವಿಜಯಾರ್ದ್ಧಾದ್ರೀಂದ್ರಮಂ ದಾಂಟಿದಂ ॥೫೫॥

ವ॥ ಅಂತು ವಿಜಯಾರ್ದ್ಧಮಹೀಧರೋಪಕಂಠವನನಿಕಟದೊಳ್ ಬೀಡಂ-ಬಿಟ್ಟಾಗಳ್,

---

೧-೧ (ಅ,ಬ) ಅಡಿಯೊಳ್ಮೇಗ. ೨ (ಚ) ಱ್. ೩ (ಚ) ದ. ೪ (ಚ) ರಂ. ೫-೫ (ಚ) ಲಪ್ಪುತೆ. ೬-೬ (ಅ) ಯುಳ್ಳೋಳಂ; (ಚ) ಯುಳ್ಳಾಳಂ. ೭-೭ (ಅ) ನೆಗೆದು ತರ್ತ್ತಿಸೆ; (ಅII) ನಲಿದು ತರ್ತ್ತಿಸೆ; (ಚ) ಕವಿದು ನರ್ತಿಸಿ. ೮ (ಚ) ಮ. ೯-೯ (ಚ) ಭೋಂಕನೆ. ೧೦-೧೦ (ಬ) ಸಕಲೋತ್ಪಿಷ್ಟ. ೧೧-೧೧ (ಅ) ರುಗ್ಣ; (ಬ) ಮುಷ್ಟ.

ಆಗುಹೆಯೊಳಗಣ ಶರದಮೊ-
ಳಾಗಳೆ ಜಸವಳಿದ ಬಲಮುಸಾಜಾಸುವವೊಲಾ- ।
ಯ್ತಾಗಿರಿಯು ಗಿಕೊಳವ ಮುಂಗಳ
ಪೂಗಳ ಕಂಪನೆ ತೆರಳ್ಚಿ ಬೀಸುವ ಪವನಂ ॥ ೫೬ ॥

ವ॥ ಅಂತಕ್ಷಿ ಜೀಡಂಬಿಟ್ಟು ಮುನ್ನಿನಂತೆ ಪಶ್ಚಿಮಖಂಡಮುಮನಖಂಡ ಪ್ರತಾಪಧ್ವಜಸಂಪು ತನ್ನ ಧ್ವಜಿನೀಪತಿಯನಟ್ಟಿ ಬಾಯ್ಸೋಳಿಸಿ ಚಕ್ರರತ್ನಮಂ ಮುಂದಿಟ್ಟು ಮಧ್ಯಮಖಂಡಮುಮನಾಂಕಿ ಪೂಣೆಸಿಪೊಕ್ಕವಷ್ಟಂಭಿಸಿ ನಿಂದಾ-ಗಳ್ ಕಿಚಿಲಾತಾವರ್ತ್ತರೆಂಬಿರ್ವ್ವರ್ ಮ್ಲೇಚ್ಛರಾಜರ್ ಧನುರ್ದ್ಧರಪ್ರಾಯಮು-ಮಶ್ವೀಯಬಹಳಮುಂ ಹಾಸ್ತಿಕಸಾಧನಮುಮಪ್ಪ ತಮ್ಮ ಬಲಮನೊಂದು ಮಾಡಿ ಕೂಡಿಕೊಂಡು ಚಕ್ರವರ್ತ್ತಿಯೊಳುಚ್ಚವಿಗ್ರಹಗೆಯ್ಯಲೆತ್ತಿಕೊಂಡುದಂ ಕಂಡು ಮಂತ್ರಿಗಳ್ ಪಾರ್ಕೊಂಡು,

ವಿಜಯಾರ್ದ್ಧಾದ್ರಿಯನುಚ್ಚಿ ಬರ್ಪ್ಪಳವಿದೇಂ ಸಾಮಾನ್ಯಮೇ ದೇಶಮಂ
ಭುಜವಿಕ್ರಾಂತದಿನೊತ್ತಿ ಪೊಕ್ಕ ಧಟದೇನಾಶ್ಚರ್ಯಮಲ್ತೇ ಮೃಗ- ।
ವ್ರಜಮೊಡ್ಡೇಂ ಮೃಗರಾಜನಂ ನೆಱವುದೇ ತಾಂಗಲ್ಕೆ ನಧಿಮ್ಮೇಬೃಹ-
ದ್ಧ್ವಜಿನೀಸಂಕುಲಮೀಜಿಗೀಷುವನಿದೇಂ ಸಂಗ್ರಾಮದೊಳ್ ಗೆಲ್ಗುಮೇ ॥ ೫೭ ॥

ವ॥ ಅದಲ್ಲದೆಯುಮೀಗಿರಿದುರ್ಗ್ಗಮಂ ದಾಂಟಿ ಬಂದ ಬಲ್ಲಾಳ್ದಿವ್ಯನಕ್ಕೆ ದಿವ್ಯ-ಪ್ರಭಾವನಕ್ಕುಮಮೋಘನಕ್ಕುಮವಱನೀತನೊಳಿದಿರ್ಚಿ ಕಾದುವ ಮರುಳ್ತನಂ ಬೇಡ; ಹಿಮವದ್ವಿಜಯಾರ್ದ್ಧಗಂಗಾಸಿಂಧುತಟಾವಧಿಯಪ್ಪೀ ನಮ್ಮ ಮಧ್ಯಮ ಖಂಡ[1]ಮೊಳಗಾಧ[1]ನದೀನದದುಸ್ತರಮ[2]ಪ್ಪ ಜಲ[3]ದುರ್ಗ್ಗದ ಮಹಿಮೆಯು-ಮನಭ್ರಂಕಷಶಿಖರಿಶಿಖರದುರ್ಲ್ಲಂಘ್ಯಮಪ್ಪ ಗಿರಿದುರ್ಗ್ಗದ ಪೆಂಪುಮನುದಗ್ರ-ತರುಗಹನದುಷ್ಪ್ರವೇಶಮಪ್ಪ ವನದುರ್ಗ್ಗದುನ್ನತಿಯುಮನೊಳಕೊಂಡು ನಿರಂತ-ರಾಟ್ಟಾಲಕಪ್ರತೋಲೀಂದ್ರ[4]ಕೋಶ[4]ದೇವಪಥಸನಾಥಂಗಳುಂ ಗಂಡಶೈಲಾಭೀಲ ಶಿಲಾಯಂತ್ರಭಯಂಕರಂಗಳುಂ ಪ್ರಲಯಕಾಲಾನಲವರ್ಷಶಂಕಾಕಾರಿಹುತವ-ಹವರ್ಷಾಗ್ನಿಯಂತ್ರಭಯಾನಕಂಗಳುಂ ಕಂಟಕ[5]ಗುಲ್ಮವಿಷವಲ್ಲೀಸಂಘಾತಭೀ-ಷಣಂಗಳುಂ ಜಾನುಭಂಜನಿಶೂಲಪ್ರಕರಪರಿವೃತಂಗಳುಂ ಕೂಪಕೂಟಾವಪಾತ-ಲೋಹಕಂಟಕಸಂಕಟಂಗಳುಂ ತಾಲಪತ್ರಶೃಂಗಾಟಕನಿಚಯನಿಚಿತಂಗಳುಂ—

೧–೧ (ಅ) ತಟದ. ೨ (ಜ) ಬ. ೩–೩ (ಜ) ಬಳಾಕಾ. ೪–೪ (ಜ) ದೊಳಂ ಆಗಾಧ. ೫–೫ (ಅ,ಬ) ಪ್ರದಕ. ೬–೬ (ಜ) ಕೋಶಳ. ೭ (ಅ) ಕಿ. ೮–೮ (ಜ) ಕೂಪಕೂಟಾವ-ಪಾಯ.

ಸ್ವದಂಷ್ಟ್ರಾಗ್ರ[೧]ಳಾಂಬರೀಷ[೧]ಸಂಘಸ್ನಂಗಳುಂ ಯಂತ್ರಾಯುಧಾವರಣೋಪ[೨]-
ಕರಣಪರಿಕಲಿತಂಗಳುಮಾಗಿ[೨] ದುರ್ಗ್ಗಮಂಗಳಪ್ಪ ದುರ್ಗ್ಗಂಗಳೊಳ್[೩],

ಘನಪೋಷ್ಟ್ರಂಡಪ್ರಭಾವಾರ್ಜ್ಜಿತಧರಣಿಗುಹಾಸಿಂಹರಿರ್ ನೀಮುಮೀಗಳ್
ವನಸಿಂಹನ್ಯಾಯದಿಂ ದುರ್ಗ್ಗಮೊಳ್ ಬಲಿದು ನಿಂದಲ್ಲಿ ಬಂದೊತ್ತಿ ಚಕ್ರೇ- |
ಶನ ತಂತ್ರಂ ನಿಲ್ಕುಮಾತ್ರ್ರಕ್ಕಿಗೆ ನೆಱೆದು [೪]ಭರಂಗೆಯ್ದೊಡು[೪]ಕ್ಕೆ ಸಾಸಂ-
ತನಿಕಾಯಂ ಯಂತ್ರಮುಕ್ತಾಸಲಿಲರದ್ಧೃಷದಾಸಾರವಿಧ್ವಂಸಮಕ್ಕುಂ ॥ ೫೮ ॥

ವ॥ ಅಂತೀತನ ಕಟಕಕ್ಕೆ ನಿತ್ಯಕ್ಷಯವ್ಯಯಪ್ರತ್ಯವಾಯಂಗಳಂ ಮಾಡಿ ಜೇಸಱಿಸಿ [೫]ನೆಲದಿಂ ತಳರ್ಚ್ಚುವ[೫]ಮಲ್ಲಮೋಡಂ[೬] ನಮ್ಮ ಕುಲದೇವತೆಗಳಪ್ಪ ಮೇಘಮುಖರೆಂಬ ನಾಗರಾಜರಿಂದಮೀತನನಱುಕ್ಕೆ[೭]ಯುಮನು[೭]ರ್ಕ್ಕುಮಂ ಕಿಡಿಸಿ ಗೆಲ್ವಮೆಂದು ನುಡಿವ ಮಂತ್ರಿಗಳ ಮಾತಂ ಮನದೆಗೊಂಡು ಚಿಲಾತಾವರ್ತ್ತರ್ ಪೂಜಾಪುರಸ್ಸರಂ ದರ್ಬ್ಬಶಯನತಳಗತರ್ ತದುದ್ಯೋಗಪರರಾದಾಗಳಾನಾಗರಾಜರ್ ಬಂದು ನಿಮಗಾಮುಕ್ಕಂತೆ ದಂಡುಗಮೆಂ[೮]ದು[೮]ಮೇಕಪ್ಪುದೆಂದು,

ಜಳದಾಕಾರದೊಳೆಯ್ದೆ ಪರ್ವ್ವ ಸಕಲಾಶಾಚಕ್ರಮುಂ ವ್ಯೋಮಮುಂ-
ಡಳಮಾ ಕರ್ಗ್ಗ ಕಱಂಗಿ ತೋಱೆ ಸಿಡಿಲಿಂ ಮಿಂಚಿಂ ಘನಧ್ವಾನದಿಂ- |
ದಿಳೆ ಕಂಪಂಗೊಳೆ ಸೋನೆಯಿಂ ಸರಿಗಳಿಂ ತಂದಲ್ಗಳಿಂದಂದು ಭೂ-
ತಳಮೇಕಾರ್ಣ್ಣವಮಾಗೆ ಚಕ್ರಿಯ ಬಲಕ್ಕಾತಂಕಮಂ ಮಾಡಿದರ್ ॥ ೫೯ ॥

ವ॥ ಅಂತು ವಿಲಯಕಾಲಜಲದೋದೀರ್ಣ್ಣಜಲಮುಮ[೯]ನಿಱಿಸುವ ತಜ್ಜಲಧಿಯ[೯] ನಡುವೆ,

ಅಡಿಯೊಳ್ ಪಾಸಿದ ಚರ್ಮ್ಮರತ್ನ ಪಟಮುಂ ತಚ್ಛತ್ರರತ್ನಂ ಬೆಡಂ-
ಗಿಡಿದೋರಂತಿರೆ ಮುಟ್ಟೆ ಪೊರ್ದ್ದೆ ತೆಱದಿಂದಿಂಬಾಗೆ ತನ್ಮಧ್ಯದೊಳ್ |
ಸೊಡರಿರ್ಪ್ಪಂತಿರೆ ಚಕ್ರರತ್ನಮದಱೊಳ್ ನಿಬ್ಬಾಧಮಿರ್ದ್ದತ್ತು ಪೆ-
ರ್ಪ್ಪಡೆ ವಾರಾಶಿಯೊಳಿರ್ದ್ದ ಬೈತ್ರದೊಳಗಂದೆತ್ತಂ ತೆರಳ್ದಿರ್ದ್ದ[೧೦]ವೊಲ್ ॥ ೬೦ ॥

ವ॥ ಅಂತು ಕೃತಕಚತುರ್ದ್ವಾರ[೧೧]ಮುಮಂ[೧೧]ತದ್ಬ್ಬಾಗದೊಳ್ ಸೇನಾಧಿನಾಥ[೧೨]ರಕ್ಷಿತಮುಮಪ್ಪ[೧೨]ಕಟಕಕ್ಕೆ ವಜ್ರಪ್ರಾಕಾರರೂಪನಾಗಿ ಕುರುಕುಲಾಗ್ರಗಣ್ಯನಪ್ಪ ಸೋಮಪ್ರಭನ ಮಗಂ ಜಯಕುಮಾರಂ ಸ್ಥಪತಿರತ್ನವಿರಚಿತಾಂಬರ-

೧-೧ (ಚ) ಳೋಪರಿಮ. ೨-೨ (ಬ) ಕರಣಪರಿಕರಂಗಳುಮಾಗಿ; (ಚ) ಕರಣಪರಿಣತಂಗಳಾಗಿರ್ದ. ೩ (ಅ,ಬ) ಳಂ. ೪-೪ (ಚ) ಭರಂಗೆಯ್ದುದು. ೫-೫ (ಚ) ನೆಲದಿಂ ತೆರಳ್ಚುವ. ೬-೬ (ಅ) ಪಂದು. ೭-೭ (ಅ,ಬ) ಯುಮನು. ೮-೮ (ಅ,ಬ) ಮೊಂದು. ೯-೯ (ಅ) ನಿಳಿಸುವ ತಜ್ಜಳಜಳಧಿಯ; (ಬ) ನಿಳಿಸಿದ ತಜ್ಜಲಧಿಯ; (ಚ) ನಿಱಿಸಿ ಜಳಧರಜಳಧಿಯ. ೧೦ (ಅ) ರ್ಪ್ಪ. ೧೧-೧೧ (ಚ) ದಂ. ೧೨-೧೨ (ಚ) ರಕ್ಷಿತಮಪ್ಪ.

ಗೋಚರರಥನಿಕರಂಗಳುಂ [1]ವಜ್ರಗಿರಿಗಳುಂ[1] ಬೆರಸು ಮೇಘಮುಖಾಮರರೊ-
ಳ್ ಕಾದುವಾಗಳ್,

ತಮದೊಡ್ಡಿದ್ದರ್ಗಿವೊಲಿರ್ದ್ದ ಕಾಮುಕ್ಕರಿಗಳ ತಳ್ತೊಡ್ಡಿಲ್ಲವುಂ ಮುನ್ನಮ-
ಗ್ನಿಮುಖಾಸ್ತ್ರಂಗಳಿನೆಚ್ಚು ತೂಳ್ದಿ[3] ಬಿಚ್ಚಯುಂ ಮೆಯ್ಗಂಡು ಪುಂಖಾನುಪುಂ-
ಖಮಿಸುತ್ತಿರ್ಪ್ಪಡೆಯೊಳ್ ತೆರಳ್ದುಮಗುಳ್ದುಂ ಪರ್ವಿ ಬಂದಿರ್ದ್ದ ಮೇ-
ಘಮುಖಾಚೀಂದ್ರ ಪ್ರೋಂಕಮುಂ ಜಯಕುಮಾರೋನ್ಮುಕ್ತಬಾಣಾಳಿಗಳ್ ||೬೧||

ಸಿಡಿಲಿಂ ಮಿಂಚಿಂ ಸೋಗಿಂ
ಪಡೆಗಳ್ತುಂ ಪಡೆಪರ್ವೇಂದ್ರರೆರ್ಗಿಡುವಿನೆಗಂ
ಸಿಡಿಲುಂ ಮಿಂಚುಂ ನೋಳ್ಗುವ
ನೊಡನೆ ತೆರಳ್ದುವು ಜಯನ ಶರನಿಕರಂಗಳ್ ||೬೨||

ಸಿಡಿಲಿಂ ಸಿಡಿಲಟ್ಟುವುದೆನೆ
ಕುಡುಮಿಂಚಂ ಮಿಂಚು ತಳ್ತುದೆನೆ ಗಗನಮನೇ-
ಸಡರ್ದುವೊ ಜಯನ ಶರಂಗಳ್
ಸಿಡಿಲಂ ಮಿಂಚಂ ಪಳಂಚಿ ಸಂಚಳಿಸುವಿನಂ ||೬೩||

ಅಂಬರದಿಂ ಸೂಸುವ ಧಾ-
ರಾಂಬುಗಳುಮನೊಡನೆ ಸುರಿವ ಪಲವಂದದ ಕೂ- |
ರಂಬುಗಳುಮನೊಡನ[4]ಳುರ್ದುವ-
ವೇಂ ಬಿಸಿಯವೊ[4] ಜಯಕುಮಾರನನಲಶರಂಗಳ್ ||೬೪||

ತಳವಳಿಸ ಮುಗಿಲ್ಗಳ್ಕಳ-
ಕುಳಮಪ್ಪಿನ[5]ಮಳುರ್ದು[5] ಜಯನ ಶರತತಿ ಕೊಳೆ [6]ಝ- |
ಲ್ಲರಿಯ[6] ಮರೆವೊಕ್ಕವೋಲ್ ಕಳ-
ಕುಳಮಾದರ್ ನಾಗರಾಜರಪಗತತೇಜರ್ ||೬೫||

ಕಡುಕೆಯ್ದಾನಿರೆ ಚಕ್ರವರ್ತ್ತಿವರೆಗಂ ಮೇಘಾಮರರ್ ಬರ್ಪ್ಪರೆಂ-
ದೊಡಿದರ್ಕ್ಕಂ ಮಿಗಿಲುಂಟೆ ಬನ್ನಮೆನುತುಂ ಮೇಘೋತ್ಕರಧ್ವಾನದಿಂ |

೧-೧ (ಅ,ಬ) ವಜ್ರದ ಗಿಡಿಗೆಗಳುಂ. ೨ (ಚ) ರ್ದ. ೩ (ಚ) ಳ್ದು. ೪-೪ (ಅ) ಳರ್ದ-ವೊಡಂಬಡಿಯೆನೆ; (ಚ) ಳುರ್ದುವದೇಂ ಬಿಗಿಯವೊ. ೫-೫ (ಅ,ಬ) ಮಳಮುರ್ದ. ೬-೬ (ಅ) ಜಲ್ಲಳಿಯ; (ಚ) ಬಲ್ಲಳಿಯ.

ಕಡುಕೆಯ್ಯಾದ್ದರ್ದ್ದ ಜಯಂ ಭುಜಾರ್ಜ್ಜಿತಜಯಂ ಪ್ರೊಕ್ಕ[1]ಜ್ಯೋಡ[1]ಸ್ತ್ರಾಸಳಂ
ಕಿಡಿಯಿಂ ಕೆಂಡದಿನೇಂ ಪೊರಳ್ಚಿದುದೊ ತನ್ಮ್ಲೇಘಾಮರಾನೀಕಮಂ ‖ ೬೬ ‖

ವ‖ ಆಗಳಾ[2]ನೆಗೞ್ದ[2] ಸಮರಕಳಕಳಮಂ ಕೇಳ್ದಿದೇನೆಂದು ಭರತೇಶ್ವರ-
ಚಕ್ರವರ್ತ್ತಿ ಖಡ್ಗರತ್ನಕ್ಕೆ ಕೈಯಂ ನೀಡಿದಾಗಳ್,

ಗಣಬದ್ಧಾಮರಹೊಂಕೃತಂ ಜಯಕುಮಾರೋಸ್ಮೃಜ್ಯಮಾಸೋಗ್ರಮಾ-
ಗ್ಗಣಮಾವೀರನಿನಾದಸಿಂಹನಿನದಂ ತಮ್ಮಿಂ ಪಳಂಚಲ್ಕೆ ತ- ।
ತ್ಕಣಿವೃಂದಂ ಮಣಿದೋಡೆ ಮಾಣದೆ [3]ಚಿಲಾತಾ[3]ವರ್ತ್ತರಳ್ಕುತ್ತಿ ಕೀ-
ಟ್ಮಣಿದಿನ್ನೆಂದುದನೆಂಬೆವೆಂದೆಱಗಿದರ್ ಚಕ್ರೇಶಪಾದಾಬ್ಜದೊಳ್ ‖ ೬೭ ‖

ವ‖ ಆಗಳ್ ಜಯನ ಭುಜವಿಜಯ[4]ಸೂಚಕ[4]ಮಾಗಿ ಮೇಘನಾದಸ-
ಮಾನಮಾದ ಸಿಂಹನಾದಕ್ಕೆ ಚಕ್ರವರ್ತ್ತಿ ಮೆಚ್ಚಿ [5]ಮೇಘಸ್ವರ[5]ನಾಮಮಂ
ವೀರಾಗ್ರಗಣ್ಯಪದವಿಯಂ ದಯೆಗೆಯ್ದು ಚಿಲಾತಾವರ್ತ್ತರ ಕುಲಧನಮುಮಂ
ಯಶೋಧನಮುಮಂ ಕೈಕೊಂಡವರಂ[6] ವಶವಿಧೇಯರಂ[6] ಮಾಡಿ ಸಿಂಧುನದೀ
ತೀರಂಬಿಡಿದು ಪೋಗಿ ಹಿಮವತ್ಪರ್ವ್ವತದ ಸಿಂಧುಪ್ರಪಾತಮನೆಯ್ದಿ ತನ್ನ ಬರ-
ವನಱಿದಿದಿರ್ವ್ವಂದ ಸಿಂಧುದೇವಿಯಿಂದಂ ಸಿಂಧುಜಲಂಗಳೊಳಭಿಷಿಕ್ತನಾಗಿ
ಭದ್ರಾಸನಮಂ ಪಡೆದು ಸಿಂಧುದೇವಿಯನಿರಿ[7]ಸಿ ಕತಿಪಯಪ್ರಯಾಣಂಗಳಿಂ
ಹಿಮವನ್ಮಧ್ಯಕೂಟಾಭಿಮುಖಪ್ರದೇಶದೊಳ್ ಬೀಡಂಬಿಟ್ಟು ನಿಯಮಸ್ಥನಾಗಿ
ಹಿಮವತ್ಕುಮಾರನುಮಂ ವಿಜಯಾರ್ದ್ಧಕುಮಾರನಂದದೊಳೆ ಸಾಧಿಸುವುದು-
ಮಾತನ ತಂದೋಲಗಿಸಿದ ಗೋಶೀರ್ಷಚಂದನದಿವ್ಯೌಷಧಿಮಾಲಾದಿತದ್ಗಿರಿಸ-
ಮುದ್ಭೂತಸಾರವಸ್ತುಗಳಂ ಕೈಕೊಂಡಾಜ್ಞಾವಿಧೇಯನಂ ಮಾಡಿ ಹಿಮವತ್ಪರ್ವ್ವ-
ತಮಂ ನೋಡಿ,

ಇದು ಹೈಮಾದ್ರೀಂದ್ರಮಾಱುಂ ಕುಲಗಿರಿಗೆ ಮೊದಲ್ ಮೇರು
ಶೈಲೇಂದ್ರಮಂ ಮೆ-
ಚ್ಚದಿದಾಕಾಶಂಬರಂ ಪರ್ವ್ವಿದ ಮಣಿಮಯಕೂಟಂಗಳಿಂದಲ್ಲಿ ಮಾದ್ಯ- ।
ದ್ರದನೀಂದ್ರಸ್ಥೂಲದಂತಾಹತಿವಿದಲಿತಗೋಶೀರ್ಷಸಾರದ್ರವಾಮೋ-
ದದಿನೆತ್ತಂ ಗಂಧವಾಹಂ ಮಗಮಗಿಸೆ ಬೆಡಂಗೀನಗೇಂದ್ರೋಪಕಂಠಂ ‖ ೬೮ ‖

೧–೧ (ಚ) ಜ್ಞನ. ೨–೨ (ಅ) ನೆಗೆದ. ೩–೩ (ಚ) ಬಳಾಕಾ. ೪–೪ (ಅII) ಭುಂಭುಕ.
೫–೫ (ಚ) ಮೇಘೇಶ್ವರ. ೬–೬ (ಅII, ಬ) ರಣಾಜ್ಞಾವಿಧೇಯರಂ. ೭ (ಅ) ಲಿ.

ಇವಱೊಳಗೆ ಮಧ್ಯದ ಪದ್ಮಮೆಂಬ ಕೊಳದಿಂದಂ ಗಂಗೆಯುಂ ಸಿಂಧುವುಂ
ಮೊದಲೊಳ್ ಪುಟ್ಟಿ ನೆಗೞ್ತೆವೆತ್ತುವು ನೆಲಕ್ಕೆಮ್ಮಾಕ್ಷೆ ಷಟ್ಖಂಡಮಿಂ[೧] ।
ತ್ರಿದಶೇಂದಿತ್ರಿಯೆ ಮೇರೆ[೨] ನೋಡಿಮೆಮಗೀಶೈಲೇಂದ್ರಮೆಂದೆಂದು ತೋ-
ಱಿದಸಾತನ್ನೊಡವರ್ಪ್ಪ ಭೂಪನಿಕರಕ್ಕುತ್ತುಂಗಹೈಮಾದ್ರಿಯಂ ॥ ೬೯ ॥

ವ॥ ಅಂತು ತದ್ಗಿರೀಂದ್ರಮಧ್ಯಮಕೂಟದಿಂದಂ ಸಯ್ತು ತೆಂಕಮೊಗದೆ ಬಂದು ವೃಷಭಾಚಲಮಂ ಕಂಡನದು ಯೋಜನಶತ[೩]ಮೂಲ[೩]ವಿಸ್ತೃತಮುಂ ತಾವನ್ಮಾತ್ರೋತ್ಸೇಧಮುಂ ತದರ್ಧಪ್ರಮಿತೋಪರಿಮತಲವಿಸ್ತಾರಮುಂ ಪಂಚವಿಂಶತಿಶತಯೋಜನಾವಗಾಹಮುಮಾಗಿ ನಡುವಣೆಡೆಯೊ[೪]ಳತಿಕ್ರಾಂತಾನೇಕ[೪]ಚಕ್ರವರ್ತಿಗಳ ವಿಶದಯಶಃಪುಂಜಮುಮಂ ವಿಜಯಲಕ್ಷ್ಮೀ[೫]ಮುಖಾವಲೋಕನ[೫]ಮಂಗಲದರ್ಪ್ಪಣಶ್ರೀಯುಮಂ ತನ್ನೊಳಕೊಳವಡಿಸಿ,

ಕುವಲಯಪಾಂಡುರಂ ಕನಕಪಂಕಜಷಂಡವಿರಾಜಿ ಕೇಕಿತಾಂ-
ಡವರಮಣೀಯ[೬]ಚೂತ[೬]ಲತಿಕಾವನಮುನ್ಮದಭೃಂಗಮಾಲಿಕಾ- ।
ರವಮುಖರೀಕೃತಾಮ್ರವನಶೋಭಿತಮಾಶ್ರಿತದಿವ್ಯಸೌಂದರೀ-
ನಿವಹನಿಕೀರ್ಣ್ಣಚಂಪಕವನಂ ಕರಮೊಪ್ಪುಗುಮಾಮಹೀಧರಂ ॥ ೭೦ ॥

ವ॥ ಆವೃಷಭಾದ್ರಿಯ ಮೇಖಲಾಭಿತ್ತಿಯೊಳಾತ್ಮೀಯವಿಶ್ವವಿಶ್ವಂಭರಾವಿಜಯಪ್ರಶಸ್ತಿಯನಱ್ತಿಯೊಳ್ ಬರೆಯಿಸುವೆನೆಂದು ಪೋಗಿ [೭]ನೋಡುವನ್ನೆಗಂ[೭],

ಅದಱೊಳನೇಕಕಲ್ಪಶತಕೋಟಿಗಳೊಳ್ ಸಲೆ ಸಂದ ಚಕ್ರಿವೃಂ-
ದದ ಜಲದಾಯದಾಯತಿಯ ಬೀರದ ಚಾಗದ ಮಾತುಗಳ್ ಪೊದ- ।
ಱಿರ್ದ್ದುದವಿರೆ ತತ್ಪ್ರಶಸ್ತಿಗಳೊಳಂತವನೊಯ್ಯನೆ ನೋಡಿನೋಡಿ ಸೋ-
ರ್ದ್ದುದು ಕೊಳಗೊಂಡ ಗರ್ವ್ವರಸಮಾಭರತೇಶ್ವರಚಕ್ರವರ್ತ್ತಿಯಾ ॥ ೭೧ ॥

ವ॥ ಅಂತು ಗಳಿತಗರ್ವ್ವನಾಗಿ ಸಿಗ್ಗಾಗಿ ಪೂರ್ವ್ವಾವನೀಪಾಲಪ್ರಶಸ್ತಿಗಳೊಳೊಂದೊಂದಂ ದಂಡರತ್ನದಿಂ ಸೀಂಟಿ ಕಳೆದು ನಿಜಪ್ರಶಸ್ತಿಗೆಡೆಮಾಡಿ,

ಸ್ವಸ್ತಿಸಮಸ್ತ[೮]ನೃಪೇಶ್ವರ[೮]-
ಮಸ್ತಕವಿನ್ಯಸ್ತಶಾಸನಂ ಸಕಲಜಗ- ।

---

೧ (ಚ) ಱಿಂ. ೨ (ಚ) ಕಿಂ. ೩-೩ (ಅII) ಮಧೋ. ೪-೪ (ಅII) ಳತಿಕ್ರಾಂತರಾವ ಸಕಲ. ೫-೫ (ಚ) ಮುಖವಿಲೋಕನ. ೬-೬ (ಚ) ಕಲ್ಪ. ೭-೭ (ಅ) ನೋೞ್ಪನ್ನೆಗಂ. ೮-೮ (ಚ) ನರೇಶ್ವರ.

ದ್ವಿಸ್ತಾರಿತಯಶನನ್ವಯ-<br>
ವಿಸ್ತಾರಕನಾದಿದೇವನಗ್ರತನೂಜಂ ॥ ೬೨ ॥

ಭುವನವಿಶೇಷಕನಿಕ್ಷಾ -<br>
ಕುವಂಶಗಗನೇಂದು ಚಕ್ರರತ್ನಾಧೀಶಂ ।<br>
ನವನಿಧಿವಲ್ಲಭನಾನತ-<br>
ದಿವಿಜಗಣಂ ನೆಗಳ್ದ ನಾಭಿರಾಜನ ಮೊಮ್ಮಂ ॥ ೬೩ ॥

ಆವನ ದಿಗ್ವಿಜಯದೊಳೈ-<br>
ರಾವತಗಜನಿಭಗಜಂಗಳಿಂ ಭುವನತಳಂ ।<br>
ತೀವಿದುದಾವನ ಸೈನ್ಯದೊ-<br>
[illegible]ವರಿಸಿದ ಧೂಳಿ ಪೂಟ್ಟಿದಂಭೋನಿಧಿಯಂ ॥ ೬೪ ॥

ವೇಳಾವನಂಗಳಿಂ ಕು-<br>
ತ್ತೀಳಂಗಳುಮಾವ [1]ನೃಪನ[1] ಪಡೆ [2]ನಡೆಮೊಡೆ[2] ನಿ-<br>
ಮೂರ್ಳಂಗಳಾದುವಾವನ<br>
ತೋಳಿಂ ನಿಮಿರ್ದತ್ತು ಜಳಧಿವರೆಮವನಿತಳಂ ॥ ೬೫

ದೇವಾಂಗನೆಯರ್ ಪಾಡುವ-<br>
ರಾವನ ಜಸಮಂ ಕುಳಾಚಳಾವಳಿಯೊಳ್ ಶೌ- ।<br>
ರ್ಯಾವಷ್ಟಂಭದಿನಾಳ್ದವ-<br>
ನಾವಂ ಷಟ್ಖಂಡ[3]ಮಂಡಿತ[3]ಕ್ಷಿತಿತಳಮಂ ॥ ೬೬ ॥

ಆತಂ ಭರತೇಶ್ವರನಿಂ-<br>
ತೀತೆಱದಿಂ ನೆಗಳ್ದ ತನ್ನ ಕೀರ್ತಿಯನೀಪ- ।<br>
ಖ್ಯಾತವೃಷಭಾದ್ರಿಯೊಳ್ ಸುರ-<br>
ಗೀತಯಶಂ ನಿಱಿಸಿದಂ ನೆಲಂ ಸಿಲ್ಕಿನೆಗಂ ॥ ೬೭ ॥

ವ॥ [4]ಎಂದಾ[4]ತ್ಮೀಯವಿಜಯಪ್ರಶಸ್ತಿಯನಾವೃಷಭಗಿರಿಯೊಳಾ[5]ವೃಷಭ[5]-ನಂದನಂ ಕಾಕಿಣೀರತ್ನದಿಂ ಬರೆಯಿಸಿ ಬೞಿಕ್ಕದಕ್ಕೀಶಾನದೊಳಿರ್ದ ಗಂಗಾ-ಕೂಟಕ್ಕಭಿಮುಖನಾಗಿ ಪಯಣಂಬೋಗಿ ತತ್ಸಮೀಪದೊ[6]ಳಾತ್ಮೀಯಮಂಗಳ[6]-

೧-೧ (ಅ,ಬ) ವಿಭುವ. ೨-೨ (ಅ) ನಡೆಯೆಯು; (ಚ) ನಡೆವೆಡೆ. ೩-೩ (ಅ) ಮಂಡಳ. ೪-೪ (ಚ) ಅಂತಾ. ೫-೫ (ಚ) ವೃಷಭೇಶ್ವರ. ೬-೬ (ಅ,ಬ) ತನ್ಮಂಗಲಗಂಗಾ.

ಜಳಂಗಳಿಂದಭಿಷೇಕಂಗೆಯ್ದು ಸೇಸಾಶೀರ್ವಾದಪುರಸ್ಸರಂ ಸಿಂಹಾಸನಮಂ ಕೊಟ್ಟು ಗಂಗಾದೇವಿಯುಮಂ ವಿಸರ್ಜಿಸಿ, ಗಂಗಾತಟಂಬಿಡಿದು ಚತುರಂಗಚಮೂಚಕ್ರಪಾಂಸುಪಟಲದಿಂದಂ ದಿಙ್ಮುಖಂಗಳುಂ ವಿರೋಧಿನರಪಾಲಪ್ರಿಯಸಖೀಮುಖಂಗಳುಂ ವಿಚ್ಛಾಯಂಗಳಾಗೆಯುಂ, ಮದಾವಾಹಿನೀವಾರಣೇಂದ್ರಘಟಾನ್ಯೋನ್ಯಸಂಘಟ್ಟಘಂಟಾಟಂಕಾರಾಸ್ಫಾಳನದಿಂದಮುದಗ್ರಗಿರಿಗುಹಾಂತರಂಗ[1]ಳುಮುದೀರ್ಣ[1]ವಿಕ್ರಮಾರಾತಿಕರ್ಣಾಂತರಂಗಳುಂ ವಿಕೀರ್ಣಂಗಳಾಗೆಯುಮಪರಿಮಿತಸ್ತಂಬೇರಮಾನೀಕಶೀಕರನೀಹಾರವರ್ಷದಿಂದಮುಷ್ಣಾಂಶುಮಾಲಿಪ್ರತಾಪಮುಮೂರ್ಜಿತಾರಾತಿರಾಜಪ್ರತಾಪಮುಂ [2]ವಿದ್ರುತೋ[2]ದ್ರೇಕಮಾಗೆಯುಂ, [3]ಸಂಚಾರಿ[3]ಮೇಚಕಾಚಲಚಕ್ರವಾಲರುಚಿಹರಿಕರಟಿಘಟಪ್ರಪಂಚಪಂಚರಾಗಕೇತನಚಂಚಲಾಂಚಲನಿಚಯದಿಂದಮಂಭೋಧಿಪಥಮುಮತಿಚಕಿತವಿದ್ವಿಷ್ಟದೃಷ್ಟಿಪಥಮುಂ ನಿರವಕಾಶಮಾಗೆಯು[4]ಮುದ್ವೃತ್ತವಾ[4]ರಣೇಂದ್ರವಿಷಾಣಕುಲಿಶ[5]ದಂಡದಿಂ[5] ವನದುರ್ಗಭಂಗಮುಂ ವಿಪಕ್ಷಪಾರ್ಥಿವಮನೋರಥಭಂಗಮುಂ ಸಿದ್ಧಮಾಗೆಯುಂ, ದಕ್ಷಿಣಾಭಿಮುಖನಾಗಿ ನಿತ್ಯಪ್ರಯಾಣಂಗಳಿಂ ಬಂದು,

ಇಭಕುಂಭೋದ್ಭೂತಮುಕ್ತಾಫಲ[6]ನಿಕರಮನಾನಂದದಿಂ[6] ತಂದು ಕಂಡಿ-
ರ್ದ್ದಭಯಾರ್ಥಿವ್ಯಾಧರಾಜಪ್ರತತಿಗಭಯಮಂ ಕೊಟ್ಟು ಕಲ್ಪಾಂತಕಾಲ- |
ಕ್ಷುಭಿತಾಂಭೋರಾಶಿಶಂಕಾವಹಬಲನಿಕರಂ ರಾಜತಾದ್ರೀಂದ್ರಶೋಭಾ-
ವಿಭವಕ್ಕಟ್ಕಿತ್ತು ತತ್ಪರ್ವತ[7]ನಿಕಟವನೋಪಾಂತದೊಳ್[7] ಬೀಡುಬಿಟ್ಟಂ||೭೮||

ವ|| ಅಂತು ವಿಜಯಾರ್ದ್ಧಾಚಲಕಾಂಡಕಪ್ರಪಾತಗುಹಾಸಮೀಪದೊಳ್ ಬೀಡಂಬಿಟ್ಟು ಮುನ್ನಿನ ಮಾಟ್ಕೆಯೊಳೆ ವರೂಥಿನೀಪತಿಯಂ ಬೆಸಸಿದೊಡಾತನಾಗುಹಾದ್ವಾರಮಂ ಪೂರ್ವೋಕ್ತಕ್ರಮದೊಳೆ ತೆಱೆ[7]ದದೞ ಬೆಂಕೆ[8]ಯಾೞುವನ್ನೆಗಂ[8] ಮ್ಲೇಚ್ಛಖಂಡಮಂ ಮೂಡಣ ದೆಸೆಯೊಳಿರ್ದ್ದುದುಮಂ ಬಾಯ್ಕೇಳಿಸಲ್ ಪೋಗೆ ದಕ್ಷಿಣೋತ್ತರಶ್ರೇಣಿಗಳ [9]ವಿದ್ಯಾಧರರಾಜನ್ನಿಜಾಧಿರಾಜನ ಮೈದುನರಪ್ಪ[9] ನಮಿವಿನಮಿಗಳಂ ಮುಂದಿಟ್ಟು ಬಂದು,

ಭರತೇಶ್ವರಪದನಖಮಣಿ-
ಮರೀಚಿಗಳ್ ತಮ್ಮ ಮುಕುಟಮಣಿ[10]ದೀಧಿತಿಯೊಳ್[10] |

೧-೧ (ಚ) ಳುಂ ಉದಗ್ರ. ೨-೨ (ಚ) ಅವಿಧೃತೋ. ೩-೩ (ಚ) ಸಂಚಾರಿತ. ೪-೪ (ಚ) ಮುದ್ವೃತ್ತಮತ್ತವಾ. ೫-೫ (ಚ) ದಂಡಹತಿಯಿಂ. ೬-೬ (ಚ) ನಿಕರಮುಮಾನಂದದಿಂ. ೭-೭ (ಅII) ವನತಟದೊಳ್ ರಾಗದಿಂ. ೮-೮ (ಅ) ಯಾೞುವಿನಂ. ೯-೯ (ಚ) ವಿದ್ಯಾಧರರಾಜಾಧಿರಾಜರ್. ೧೦-೧೦ (ಅ) ದೀಧಿತಿಗಳ್.

ಬೆರಸಿರೆ ತಪಾಜ್ಞೆಯಂ ನಿಜ
[೧]ಕಿರೀಟದೊಳ್ ತಾಳ್ದಿ[೧]ಪಂದದಿಂ ಸೊಗಯಿಸಿದರ್ ॥ ೭೯ ॥

ನಮಿವಿನಮಿ[೨]ಗಳಂತಾಕ[೨]-
ಚ್ಛಮಹಾಕಚ್ಛರ್ಕಳಿಂಪವೊಪವಿದ ನಣ್ಪಂ-।
ತಮರ್ದಿರೆ ತಮ್ಮೊಡವುಟ್ಟಿದ
ಕಮಳಾನನೆಯಂ ಸುಭದ್ರೆಯಂ ತಂದಿತ್ತರ್ ॥ ೮೦ ॥

ವ॥ ಅಂತು ಸುಭದ್ರೆಯೆಂಬ ಕನ್ಯಾರತ್ನಮುಮಂಬರಚರೋಚಿತಕಲ್ಯಾಣಂಗಳಿಂಪಮಾಪುರುಷ[೩]ರತ್ನನೊಳ್[೩] ನೆಱಪಿ ತಮ್ಮ ಮನೆಯೊಳುಳ್ಳನರ್ಘ್ಯರತ್ನಂಗಳೆಲ್ಲಮಂ ಬಳವಳಿಗೊಟ್ಟು ಬೀಳ್ಕೊಂಡು ಪೋದರನ್ನೆಗಂ ಮ್ಲೇಚ್ಛರಾಜಬಲಪರಿವೃತನಾಗಿ ನಿಜಭುಜವಿಜಯಮಂ ಮುಂದಿಟ್ಟು ಬಂದು ಕಂಡ ದಂಡನಾಯಕಂ[೪] ತೋಱಿದನೇಕಕ್ಷತ್ರಿಯಪುತ್ರರ ಕುಲಧನಂಗಳಂ ಕೈಕೊಂಡು ಕೋಶಾಧ್ಯಕ್ಷಹಸ್ತನ್ಯಸ್ತಂಗಳ್ ಮಾಡಿ ಬೆಸನನಿರ್ಮ್ಮ ಕೇಳದಂತು ಪೂಣಿಸಿ ಕಳುಪಿ ಮುನ್ನಮೆ ತೆಱೆದಱುದಿಂಗಳ್ಪರಮಾಱಿದ ಕಾಂಡಕಪ್ರಪಾತಗುಹೆಯೊಳಗಣಿಂದೆ ಚಕ್ರರತ್ನಂ ಮುಂದೆ ನಡೆಯೆ ಕಾಕಿಣೀರತ್ನವಿರಚಿತಸೂರ್ಯಚಂದ್ರಮಂಡಲಂಗಳ ಬೆಳಗಿನೊಳಂ ಮಕುಟಬದ್ಧಕಿರೀಟಮಣಿಮರೀಚಿಗಳ ಬೆಳಗಿನೊಳಂ ಗಂಗಾನದ್ಯುಭಯತಟಮಹಾವೀಥಿಗಳೊಳ್ ನಡೆದು ಕತಿಪಯದಿನಂಗಳಿಂ ಗುಹಾದ್ವಾರಮಂ ಪೊಱಮಡುವಾಗಳ್ ಗುಹಾಕೂಟನಿವಾಸಿಯಪ್ಪ ನಾಟ್ಯಮಾಲಾಮರಂ ಸುವರ್ಣ್ಣಪೂರ್ಣ್ಣಕುಂಭಾದಿಮಂಗಳಂಗಳಿನಿದಿರ್ಗ್ಗೊಳೆ ಗುಹಾದ್ವಾರದಿಂ ಪೊಱಮಟ್ಟಾಗಳ್,

[೫]ಧವಳ[೫]ಚಮರೀಜ[೬]ವೀಚೀ-
ನಿವಹಂ ಶ್ವೇತಾತಪತ್ರಫೇನಪ್ರಕರಂ ।
ವಿವಿಧಪ್ರವಾಹಮೆಸೆದುದು
ವಿವಿಧಬಲಂ ಗಂಗೆಯಂತೆ ತದ್ಗಿರಿತಟದೊಳ್ ॥ ೮೧ ॥

ವ॥ ಆಗಳ್ ಪತಾಕಿನೀಪತಿಯ ನಿಯಮದಿಂ ಪೂರ್ವ್ವದಿಗ್ಭಾಗಸ್ಥಿತಮಂ ಮ್ಲೇಚ್ಛಖಂಡಮನಪ್ರತಿಹತಶಾಸನಾಂಕಿತಂ ಮಾಡಿ ಬರೆ ವಿಜಯಸೈನ್ಯವಿನಿರ್ಜ್ಜಿತಭರತಮಂಡಳಂ ಭರತೇಶ್ವರಚಕ್ರವರ್ತ್ತಿ ಸಿದ್ಧದಿಗ್ವಿಜಯನಾಗಿ ವಿಜಯಪರ್ವ್ವತಗಜಮನೇಱಿ ಗಂಗಾತಟಂಬಿಡಿದು ಪಯಣಂಬಂದು ಕೈಲಾಸಾಚಲನಿಕಟದೊಳ್ ಕಟಕಮನಿಱಿಸಿ ಪರಿಮಿತಪರಿಜನಂಬೆರಸು ತದ್ಗಿರೀಂದ್ರಮನೆಯ್ದೆ ವಂದು,

೧–೧ (ಚ) ಕಿರೀಟದಿಂ ತಾಳ್ದಿ. ೨–೨ (ಅ,ಬ) ಗಳಾಗಳ್ಕ. ೩–೩ (ಚ) ರತ್ನಾಕರನೊಳ್. ೪ (ಅ) ಕನಂ; (ಬ) ಕನ. ೫–೫ (ಅ) ನವ. ೬ (ಅ) ಜಂ.

ಶರಭಂಗಳ್ಕಿಡೆ ಸಿಂಹದುರ್ವ್ವರ ವನಗಂಧೇಭೋತ್ಕರಕ್ಕೆಂದುಮಾ-
ಗರವೀಭೂಧರರ್ಮಿಮಹೋಗ್ರವ್ಯಾಘ್ರಸಂಘಾತಂಗಳೊಂದೊಂದನಿಂ- ।
ತಿರೆ ಕಂಡೋಡುವುವಲ್ಲ[೧]ವಂತುವೊಡ[೧]ಗೂಡಿರ್ದ್ದಪ್ಪುವಿಂತೀಜಗ-
ದ್ಗುರು ಬಂದಿರ್ದ್ದಪನೆಂದೆ ಶಾಂತರಸಮಂ ಕೈಕೊಂಡುದೀಪರ್ವ್ವತಂ ॥೮೨॥

ವ॥ ಎಂದು [೨]ಕೈಲಾಸಶೈಲ[೨]ಮನೇಱಿ ಧೂಳಿಶಾಲದಿಂ ತಗುಳ್ದು ಪೂರ್ವ್ವೋ-ಕ್ತವರ್ಣ್ಣನೋಪೇತಮಪ್ಪ ವೃಷಭನಾಥನಾಸ್ಥಾನ[೩]ಮಂಟಪಮಂ[೩] ನೋಡುತ್ತುಂ ಬಂದು ಸಕಲಸುರಾಸುರೇಂದ್ರಮುನೀಂದ್ರರುಂದ್ರಸಭೆಯ ನಡುವೆ ಸಿಂಹಾಸನ-ಮಸ್ತಕದೊಳಿರ್ದ್ದ ಜಗತ್ತ್ರಿತಯತಿಲಕನ ಪಾದಪದ್ಮಂಗಳ್ಗೆ ಭರತೇಶ್ವರಚಕ್ರವರ್ತ್ತಿ ಮಹೀತಲನಿಹಿತಮಣಿಕಿರೀಟರಶ್ಮಿಸಂದೋಹಸಾಂದ್ರಕುಂಕುಮಪಂಕದಿಂ ವಿಹಿ-ತೋಪಹಾರನಾಗಿ,

ಸಮಸ್ತಸುರಕೋಟಿ ಹೇಮಘಟಕೋಟಿಯಿಂ ತೀವಿತಂ-
ದಮೇಯಭುಜಕೋಟಿಯಿಂ ಮಿಸಿಸೆ ಮುಗ್ಧಸಿಂಧುಪ್ಲವಂ ।
ಶ್ರಮಾಂಬುಲವಮೊಂದುಮಂ ನಿನಗೆ ಪುಟ್ಟಿಸಲ್ಕಾತುರ್ದ್ದಿ-
ಲ್ಲಮಾನುಷಮನಂತವೀರ್ಯ್ಯಗುಣಮಾದಿ[೪]ತೀರ್ತ್ಥೇಶ್ವರಾ[೪] ॥೮೩॥

ವಿದಗ್ಧಸುರಸುಂದರೀನಯನಸುಂದರಂ ನಿನ್ನ ರೂ-
ಪಿದೆತ್ತ ಕುಸುಮಾಸ್ತ್ರನಂ ತುಳಿದು ಗೆಲ್ದ ವಿಶ್ರಾಂತಯೆ- ।
ತ್ರಿದಚ್ಚರಿ ದಲೆಂಬಿನಂ ನೆಗೞ್ದನೀಂ ತ್ರಿಲೋಕಂಗಳೊಳ್
ನ ದೇವಚರಿತಂ ಚರಿತ್ರೆನಿಸಿಪ್ಪೈ ತ್ರಿಲೋಕೇಶ್ವರಾ ॥೮೪॥

ಅತೀಂದ್ರಿಯಸುಖಾಮೃತಾಂಬುಧಿನಿವಾಸಮೊಂದೊಂದನಾ-
ತ್ಮತತ್ವವಿದಮುಕ್ತಿಮಾರ್ಗ್ಗಮನೆ ಕೇೞ ಕಂಡೈ ಪೇೞಿರ್ ।
ಚತುರ್ಗ್ಗತಿಯ ಬಟ್ಟೆಯುಂ ನೆಱೆಯೆ ಕಂಡರಂತುಂ ಕರ-
ಸ್ಥಿತಾಮಲಕ[೫]ಮೆಂಬರಾಜಱುಚದೇವುದಿಂದ್ರಾರ್ಚ್ಚಿತಾ[೫] ॥೮೫॥

ಮರುಸ್ಥಳದ ಮಾಳದೊಳ್ ನಡುಪಗಲ್ವರಂ ಗ್ರೀಷ್ಮದೊಳ್
ಸುರುಳ್ವಿನೆಗಮುಟ್ಟಿ ಬೇವವರ್ಗೆ ಜೊಂಪಮಿಮ್ಮಾವು ನಿ- ।
ರ್ಝ್ಝರಾಂಬು ದೊರೆಕೊಳ್ವವೋಲ್ ಭವದವಾಗ್ನಿಯೊಳ್ ಬೇವ ಜೀ-
ವರಾಶಿಗೆ ಭವದ್ವಚೋಮೃತಮೆ ಮರ್ದ್ದನಂಗಾಂತಕಾ ॥೮೬॥

ಭವಂ ತವೆ ಭವತ್ಪದಾಂಬುರುಹಸೇವೆಗೆಯ್ವಾರುಮಂ
ಭವಂಗಿಡಿಪೆಯೇಂ ತ್ರಿಲೋಕಗುರುವೆಂಬ ಪೆಂಪಿಂತುಟೇಂ ।

---

೧-೧ (ಚ) ದಿಂತಿವೊಡ. ೨-೨ (ಚ) ಕೈಳಾಸಾಚಳ. ೩-೩ (ಅ) ಮಂಡಲಮುಂ.
೪-೪ (ಅ,ಬ) ಭಟ್ಟಾರಕಾ. ೫-೫ (ಅ,ಬ) ಮೆಲ್ಲಮೆಂಬಜಾಣುಚೇವುದಿಂದ್ರಾರ್ಚ್ಚಿತಾ.

ಭವಂಗಿಡಿಸುವೋಲಗಕ್ಕೆ ಭವ ಬೇಸಱೆೀಂ ಪ್ರೋಕೆ ಪ್ರೋ-
ಭವಂ ಭವದುಪಾಂತದಲ್ಲಿಯೆ ಮನೋಭವಧ್ವಂಸಕಾ ॥ ೮೭ ॥
ಜವಂಗಿಡದೆ ಮುಟ್ಟೆ ಬರ್ಪ್ಪ ಜವನಂ ಜವಂಗುಂದಿಸಲ್
ಜವಂಗೆ ಜವನಾಗಲಿಂ ಪೆಱರ್ಗೆ ತೀರ್ಗುಮೇ ತೀರದಾ- ।
ಜವಂಜವಜವಾಗಿ ಮುಟ್ಟುಗಿಡುವನ್ನಮಿನ್ನಾಜವಂ-
ಜವವ್ಯಸನಪುಂಜಮಂ ಕಿಡಿಪುದಾದಿತೀರ್ಥೇಶ್ವರಾ ॥ ೮೮ ॥
ಅನೇಕಭಃ ಜನೇತ್ರಪಜ್ತ್ರಿರಸನಾದಿಗಳ್ ದೇವ ನಿ-
ನ್ನನರ್ಚ್ಚಿಸುವ ನೋಳ್ಪ ಬಣ್ಣಿಸುವ ಪೊತ್ತದೇಕಾಂಗದಿಂ- ।
ದ್ವನಂತೆನಗೆ ಸಾಲವಿನ್ನೆರಡೆ ಕೈಯ್ಯೆರಟ್ಟ್ಯಣ್ಗಳೊಂ-
ದೆ ನಾಲಗೆಯುಮೆಂದೆ ಚಿಂತಿಸುವೆನಾದಿಭಟ್ಟಾರಕಾ ॥ ೮೯ ॥
ಫಣಿಪ್ರಭುಗಮೆತ್ತಮತ್ತಳಗಮಲ್ತೆ ರೂಪಸ್ತವಂ
ಗುಣಸ್ತವಮುದಾತ್ತವೃತ್ತ ಭವದೀಯವಸ್ತುಸ್ತವಂ ।
ಗುಣಾಗುಣವಿವೇಕಮೂಕರತಿಮೂರ್ಖರೆಮ್ಮಂದಿಗರ್
ಪ್ರಣಾಮದೊಳೆ ಪುಣ್ಯಮಂ ಪಡೆವರಾದಿತೀರ್ಥೇಶ್ವರಾ ॥ ೯೦ ॥
ವ॥ ಎಂದನೇಕ[1]ಸ್ತವನ[1]ಂಗಳಿಂ ಸ್ತುತಿಸಿ,

ಚತುರಂಭೋರಾಶಿಮಧ್ಯಕ್ಷಿತಿವಲಯದೊಳಂ ತನ್ನದಗ್ರಪ್ರತಾಪೋ-
ನ್ನತಿಯಿಂದಂ [2]ತಂದ[2] ರತ್ನಪ್ರತತಿಗಳೊಳಪೂರ್ವಂಗಳಂ ಕೊಂಡುಕೊಂಡೂ- ।
ರ್ಜ್ಜಿತಪುಣ್ಯಂ ಪೂಜಿಸುತ್ತಂ ತಣಿಯನೆ ಭಗವತ್ಪಾದಪೀಠೋಪಕಂಠ-
ಕ್ಷಿತಿಯಂ ಚಕ್ರಾಧಿನಾಥಂ ಸುಕವಿಜನಮನೋಮಾನಸೋತ್ತಂಸಹಂಸಂ ॥ ೯೧ ॥

ಸುರಗೀತಂ ಸುರದುಂದುಭಿಧ್ವನಿ ಸುರಸ್ತ್ರೀರಮ್ಯಸಂಗೀತಕಂ
ಸುರಪುಷ್ಪೋತ್ಕರಸೌರಭಂ ಸುರಜಯಸ್ತೋತ್ರಂ ಸುರಾಶೀಸ್ತವಂ ।
ಸುರರಾಜೇಂದ್ರಮಹಾವಿಭೂತಿ ತರೆ ಚಿತ್ತೋತ್ಸಾಹಮಂ ತಾಳ್ದಿದಂ
ಪರಮಾನಂದಮನಾದಿದೇವಸಭೆಯೊಳ್ ಸಂಸಾರಸಾರೋದಯಂ ॥ ೯೨ ॥

ಗ॥ ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖಚಂದ್ರ-
ವಾಕ್ಚಂದ್ರಿಕಾಪ್ರಸರಪ್ರಸಾದೋದೀರ್ಣ್ಣಸೂಕ್ತಿಕಲ್ಲೋಲಮಾಲಾ-
ಕೀರ್ಣ್ಣಕವಿತಾಗುಣಾರ್ಣ್ಣವಪ್ರಣೀತಮಪ್ಪಾದಿಪುರಾಣ-
ದೊಳ್ ಷಟ್ಖಂಡಮಂಡಳವಿಜಯಂ
ತ್ರಯೋದಶಾಶ್ವಾಸಂ
ಸಂಪೂರ್ಣ್ಣಂ.

೧-೧ (ಅ) ಸ್ತುತಿ. ೨-೨ (ಚ) ತನ್ನ.

# ಚತುರ್ದಶಾಶ್ವಾಸಂ

ಶ್ರೀರಮಣನೆಱಗಿ ಮುಕ್ತಿ-
ಶ್ರೀರಮಣನ ಪಾದಪೀಠಮೊಳ್ ಸುರಸಭೆ ಕ-।
ಣ್ಣಾರೆ ನಡೆನೋಡೆ ಮದನಾ-
ಕಾರಂ ತಳರ್ದಂ ಸರಸ್ವತೀಮಣಿಹಾರಂ ॥೧॥

ವ॥ ಅಂತು ಸಮವಸರಣಮಂಡಳದಿಂ ಪೊಱಮಟ್ಟು ಲೀಲಾಪ್ರಸಾದಿತ-ಸಕಲದಿಙ್ಮಂಡಲಂ ಕೈಲಾಸಶೈಲಕಟಕನಿಕಟವರ್ತಿಯಾಗಿರ್ದ ನಿಜವಿಜಯಕಟ-ಕಕ್ಕೆ ವಂದು,

ಅಱುವತ್ತುಸಾಸಿರಂಗಳ್
[1]ನೆಱೆದಿವು[1] ಬರಿಸಂಗಳೆಂ[2]ದು ದಿಗ್ವಿಜಯದೊಳ್-।
ಟ್ಟುಱುನೊಳಯೋಧ್ಯೆಗೆ ಮೊಗಸಿದ-
ನಱುಕೆಯ ಪಱೆ ಪಲವುಮೆಸೆಯೆ ಭರತಮಹೀಶಂ ॥೨॥

ವ॥ ಅಂತು ಕೆಲವು ಪಯಣಂಗಳಿಂದಂ ನಿಜಾನ್ವಯರಾಜಧಾನಿಯನ-ಯೋಧ್ಯಾಪುರಮನೆಯ್ದಿದಾಗಳ್,

ಹತವೈರಿಕ್ಷತ್ರಚಕ್ರಂ ಭಯಚಕಿತಜಗದ್ವೀರಚಕ್ರಂ ವಿನಮ್ರ-
ಕ್ಷಿತಿಚಕ್ರಂ ದೀಪ[3]ದೀಪ್ತಿಪ್ರತಿಹತದಿನಕೃಚ್ಚಕ್ರತೀವ್ರಾಂಶುಚಕ್ರಂ ।
ಜಿತದಿಕ್ಚಕ್ರಂ ಪ್ರಭಾಪ್ರಜ್ವಲಿತದಶದಿಶಾಚಕ್ರಮುಗ್ರಪ್ರತಾಪೋ-
ರ್ಜ್ಜಿತತೇಜಶ್ಚಕ್ರಮಿರ್ದ್ದತ್ತೊಳಪುಗದೆ ಪುರೋಪಾಂತದೊಳ್ [4]ಚಕ್ರರತ್ನಂ[4] ॥೩॥

ವ॥ ಅಂತು ಚಕ್ರರತ್ನಮಯೋಧ್ಯಾಪುರಮಂ ಪುಗದೆ ತಱುಂಬಿನಿಂದು-ದಂ [5]ಕಂಡದಂ[5] ರಕ್ಷಿಸುವ ಯಕ್ಷಸಹಸ್ರಂಬೆರಸು ಗಣಬದ್ಧದೇವರೆಲ್ಲಂ ನೆರೆದು,

ಪುರಗೋಪುರದೊಳಗಂ ಚ-
ಕ್ರರತ್ನಮಿಂತೇಕೆ ಪುಗದೆ ಮೂಣ್ದಿರ್ದ್ದುದುಮೊ ಹು-।
ಚ್ಚರಿಪಥಘಟನೆ[6]ನ್ನಾವನೊ
ಭರತೇಶ್ವರಚಕ್ರವರ್ತ್ತಿಗಿನ್ನುಂ [7]ಜಗದೊಳ್[7] ॥೪॥

ಆವಂಗೆ ಕಾಲಚಕ್ರಮ-
ನೋವದೆ ಮಾಡಲ್ಕೆ ಚಕ್ರಮಿದು ಬಗೆದುದೊ ಶಾ-।

---

೧-೧ (ಅ,ಬ) ನೆಱೆದೊಡೆ. ೨ (ಅ,ಬ) ಳ. ೩ (ಅ) ಪ್ರ. ೪-೪ (ಅII,ಚ) ಚಕ್ರಿಚಕ್ರಂ. ೫-೫ (ಚ) ಕಂಡುಮದಂ. ೬ (ಚ) ನಿ. ೭-೭ (ಅ) ಧರೆಯೊಳ್.

ಯ್ಯಾರ್ವಿಬ್ಭ್ರಾಂತದವಾನಳ-
ನಾವನ ಚತುರಂಗಬಲಮನಿಂ[1] ಸುಟ್ಟಪುದೋ ||೫||

ಆತಂಗೆ ಚಕ್ರಿ[2]ವೇಟ್ಟುಮೆ[2]
ಪ್ರೋ ತತ್ತಿಱಿದಾಮೆ ಗೆಲ್ವ[3]ಮೆಂದನಿಬರುಮು-|
ತ್ಪಾತಮರುದಾಭಿಘಾತೋ-
ದ್ಭೂ[4]ಳತಪಯೋನಿಧಿಗಳಂತೆ ಮಸಗಿದರಾಗಳ್ ||೬||

ವ|| ಆಪ್ರಸ್ತಾವದೊಳ್ ಚಕ್ರೇಶ್ವರಂಗೆ ಚಕ್ರರತ್ನಸ್ಖಲನಮಂ ಪತಾಕಿ-
ನೀಚಕ್ರಪ್ರಧಾನಪ್ರಭುಗಳಱಿಯೆ ಬಿನ್ನಪಂಗೈದೊಡಸ್ಖಲಿತಗತಿಯಪ್ಪ ಚಕ್ರರತ್ನ-
ಸ್ಖಲನಕ್ಕೆ ನಾಡೆಯುಂ ಮನಸ್ಖಳನಮಾಗೆ ವಿಸ್ಮಯಂಬಟ್ಟು ಪುರೋಹಿತರತ್ನಮಂ
ಬರಿಸಿ,

ಪದಿನಾಲ್ಕುಂ ರತ್ನಕ್ಕಂ
ಮೊದಲೆನಗೀ ಚಕ್ರರತ್ನಮಿದಱಿಂ ಮೇಲಾ- |
ವುದು ದೈವಮೆನಗಯೋಧ್ಯೆಯ-
ನಿದು ಪುಗದೆ ತಱಿಂಬಿ ನಿಂದ ಕಾರಣಮೇನೋ ||೭||

ಆಪೂರ್ವದಕ್ಷಿಣಾಪರ-
ಕೂಪಾರದ ರಜತಗಿರಿಗುಹಾದ್ವಯದೆಡೆಯೊಳ್|
ಪೋಪಂದುಮಣಮೆ ತೊಡಱದು-
ದೀಪುರಗೋಪುರದೊಳೀಕೆ ತೊಡರ್ದುದೊ ಚಕ್ರಂ ||೮||

ಎನಗಮರಾತಿಗಳೊಳರೆಂ-
ಬಿ[5]ನಿತು ಪರಾಭವಮನೀಗಳೀಚಕ್ರಂ ಸೂ-|
ಚನೆಗೈದುದ[6]ನ್ನನಾವಂ[7]
ತನಗಿರಲೆಡೆಮಾಡಿದಪ್ಪನಂತಕಮುಖಮಂ ||೯||

ವ|| ಎಂದು ವೀರರಸೋದಾರಗಂಭೀರವಚನ[8]ರಚನೆಗಳಿ[8]ನನಿತನೆ ಬೆಸಸಿ
ಮಾಣ್ದ ಚಕ್ರವಲ್ಲಭಂಗೆ ಪುರೋಹಿತನಭಿಮುಖನಾಗಿ,

ನೀನಾದಿರಾಜನೈ ನಿನ-
ಗಾನಾಲ್ಕುಂ ರಾಜವಿದ್ಯೆ ಪುಟ್ಟಿದುವದಱಿಂ|

---

೧ (ಅ) ನಿಮ; (ಬ) ನೇಂ. ೨–೨ (ಅ,ಬ) ವೇಟ್ಟುದೊ. ೩ (ಅ,ಬ) ಲ್ವೆ. ೪ (ಅ) ಡ್ಢ. ೫ (ಅ) ಬ. ೬ (ಚ) ದಿ. ೭ (ಅ) ವೊಂ. ೮–೮ (ಅ) ರಚನೆಯಿ; (ಬ) ರಚನೆಯೊ.

ನೀನೆ ಬೆಸಸುವುದು ನಯಮನ–
ದೇನೆಂಬೆಮ್ಮಗರ್ ಜಡರ್ ಬಿನ್ನವಿಪರ್ ॥೧೦॥

ಫಲದಿಂ ಕಲ್ಪದ್ರುಮಮಂ
ಜಲದಿಂ ಜಲನಿಧಿಯುಮುಕ್ತಿಯಿಂ ಸುರಗುರುವಂ।
ಬೆಳಗಿಂ ದಿನಪನನರ್ಚ್ಚಿಪ
ಜಡಮತಿಗಳ ತೆಱನನಾಮುಮನುಕರಿಸಿರೆವೇ[1] ॥೧೧॥

ನಿನ್ನಯ ಮಾಡಿದ ಗೌರವ–
ಮುನ್ನತಿ ನುಡಿಯಿಸುವುದೆನ್ನನದಱಿಂ ಕಿಱಿದಂ।
ಬಿನ್ನವಿಸಿದಪೆಂ ಜೈತ್ರಾ–
ಸ್ತ್ರನ್ನಿಸರ್ಗಚಕ್ರರತ್ನದಿಂ ಪೆಱತುಂಟೇ ॥೧೨॥

ಇದು ಪಗೆವರುಳ್ಳಪದಂ ತೋ–
ಱದಪುದು ನಿನಗರಿನೃಪರ್ಕ್ಕಳಿಲ್ಲಮೊಡಿಂತಿರ್ಪು–।
ದೆ ಮನ್ನಿರೀಕ್ಷ್ಯಮಿನಬಿಂ–
ಬದಂತೆ ಪಜ್ಜಳಿಸಿ ಬಾಗಿಲೊಳ್ ಪುರವರದಾ ॥೧೩॥

ವ್ಯಾದರರಾಜಕಮೆಂಬುದ–
ನೋದುಗಳೊಳ್ ಕೇಳಲಾದುದಲ್ಲದೆ ಕಾಣ–।
ಲ್ಕಾದುದೆ ಲವಣೋದಧಿವೃತ–
ಮೇದಿನಿಯೊಳ್ ದೇವ ನಿನ್ನ ಪೆಸರೆಸೆವೆಡೆಯೊಳ್ ॥೧೪॥

ನಿನಗರಸ ಬಹಿರ್ಮ್ಮಂಡಲ–
ಮನೆ ಸಮಱಲ್ಕಿನಿತು ಬರಿಸಮುಂ ಪೋದವು ಕೇ–।
ಳಿನಿಸಂತರ್ಮ್ಮಂಡಲಸಾ–
ಧನಮುಂಟೆಂದ[2]ಱಿಪಿದುದುಮನಿನ್ನಱಿಪುವೆವೇ[2] ॥೧೫॥

ಪುರುತನಯಂ ತಾನಾಮುಂ
ಪುರುತನಯರೆಮೆಮಗೆ ತಂದೆಯಿತ್ತವನಿತಳಂ।
ಪೊರೆಯುಂಟೆ ತನಗೆ ಭಾಗ್ಯಾ–
ನುರೂಪದಿಂ ಬಾಳ್ವೆಮೆಱಗೆವೆಂಬತಿಮದದಿಂ ॥೧೬॥

೧ (ಅ,ಬ) ಮೆ. ೨–೨ (ಅ) ಮಱಸದದುವ ನಿನ್ನಱಿಪುವೆಮೆ; (ಬ) ಮಱಸದದುವ ನಿನ್ನರಿಸಿದಪೆಂ.

ನಿನ್ನನುಜರನಿಬರುಂ ಮಾ-
ನೋನ್ನತರಣಮೆಱಗರವರೊಳಗ್ಗಳಪದಟಂ।
ತನ್ನಭಿಮಾನದ ಭುಜಬಲ-
ದುನ್ನತಿ[೧]ಯನ್[೧] ಮೆಱೆ[೭]ವ ಬಾಹುಬಲಿ ಮುನ್ನೆಱಗಂ ॥೧೭॥

ಆದಿ[೨]ಬ್ರಹ್ಮರ[೨] ಕೊಟ್ಟೀ-
ಮೇದಿನಿನಿಗಾನೊಡೆಯನಾತನರಸಿನಿವಿರಿದೊಂ[೩]।
ದಾದೊಡಮೇನೆನಗೆಂಬ ಮ-
ದೋದಯ[೪]ದೊಳ್[೪] ದೇವ ಬಾಹುಬಲಿ[೫]ಬಲಿದಿರ್ದ್ದಂ[೫] ॥೧೮॥

ನಿನಗೇನಂ[೬] ಪೇೞ್ದನಾತಂ[೬] ಸುಭಟಸಮರಸಂಘಟ್ಟದೋರ್ಗ್ಗರ್ವ್ವವಿಧ್ವಂ-
ಸನಕೇಳೀದೋಹಳಂ ವಿದ್ವಿಷದಿಭರದನಸ್ತಂಭಲೀಲಾಸಮುತ್ಪಾ-।
ಟನಕಾಂಕ್ಷಾದುರ್ಮ್ಮದಂ ದುರ್ಜ್ಜಯರಿಪುನೃಪಶೌರ್ಯ್ಯೋನ್ನಮನ್ಮಸ್ತಕಾಪ-
ರ್ಜ್ಜನವಾಂಛಾಮದುರ್ದ್ಧರಂ ದುರ್ಲ್ಲಲಿತಚರಿತಸಂಕೇತಗೋಷ್ಠೀನಿಕೇತಂ ॥೧೯॥

ರಾಜವತಿಯಕ್ಕುಮಲ್ಲದೆ
ರಾಜನ್ವತಿಯಾಗದಲ್ತೆ ಧರೆ ಮತ್ತೊರ್ವ್ವಂ ।
ತೇಜಸ್ವಿ ಪೊಡರ್ಪೊಡದಱಿಂ
ರಾಜನ್ವತಿ ಮಾಡು ಧರಣಿಯಂ ಧರಣಿಪತೀ ॥೨೦॥

ಭರತೇಶ್ವರ ನಿನ್ನ ಪದಾಂ-
ಬುರುಹಕ್ಕವರೆಱಗಿ ಸುಖಮನನುಭವಿಸುಗೆ ಮೇಣ್।
ಪುರುಪರಮೇಶ್ವರನ ಪದಾಂ-
ಬುರುಹಕ್ಕವರೆಱಗಿ ತಪಮನನುಭವಿಸುಗೆ ಮೇಣ್ ॥೨೧॥

ಬಗೆಯೊಳಗೆ ಬಳೆದ ಭೀತಿಯೆ
ಮಿಗೆ ಭವದಾಸ್ಥಾನಭೂಮಿಯಂ ಪುಗುಗೆ ವನಂ।
ಬುಗುಗಲ್ಲದಂದು ಪೆ[ಱ]ಿತೆಡೆ
ಪುಗುವೆಡೆಯಿಲ್ಲವರ್ಗೆ ಬೆಸಸು ಶಾಸನಹರರಂ ॥೨೨॥

ಎನೆ ಬಳೆದ ಮುನಿಸಿನೊಳ್ ಕೆ-
ಚ್ಚನಾದ ಕಣ್ದೆಸೆಗೆ ಕೆಂಪನೊದವಿಸಿದುದು ದಿ-।

೧-೧ (ಆ) ಯುಂ. ೨-೨ (ಅ) ಬ್ರಹ್ಮಂ. ೩ (ಜ) ದಿಂ. ೪-೪ (ಅ,ಬ) ದಿಂ.
೫-೫ (ಬ) ಮುಂನೆರೆಗಂ. ೬-೬ (ಅ) ಪೇೞ್ದದಾತಂ. ೭ (ಜ,ಅ,ಬ) ಱಿ.

ಗ್ಗನಿತೆಯರ್ಗೆ ರಕ್ತಬಲಿಯುಂ
ಮನಕ್ಕೆವರೆ ಬಳಿವ ಮುನ್ನಿ[1]ಸೆ ಕುಡುವಂತಾಗಳ್ ||೨೩||

ವಿಕಸಿತನಾಸಾಪುಟನಿ[2]ತ-
ವಿಕಂಪಿತಾತಾಮ್ರದಶನವಸನಂ ಒಷ್ಟ-
ಭ್ರುಕುಟಿಪುಟಂ ಭರತೇಶ್ವರ-
ನಕಾಲಯಮರಾಜಲೀಲೆಯುಂ ಕೈಕೊಂಡಂ ||೨೪||

ಏನೇನೋ[3] ಮದಮುಜರೆನ-
ಗಾಸತರಣಮಾಗದಿರ್ದ್ದರಾಮದಮವರ್ಗಂ[4]-|
ತೇ[4]ನೇತಜಿಕೊಕ್ಕಾಯ್ತು[5]ದನಿನಿ-
ಸಾಸಂ ಬೇಗಮೊಳೆ ಕಳದು ತೋಱಿನೆ ರಣದೊಳ್ ||೨೫||

ವೀರಭಟರುದ್ಭಟಾರಭ-
ಟೀ[6]ರಸರಿವರವರದೆನ್ನರುಂ[6] ಸೆಣಸುವೊಡೇ-|
ಕಾರಣಮೊ ಚಕ್ರಮೇವುದೊ
ವಾರಣಘಟೆ ದಂಡರತ್ನಮೇಗೆಯ್ವುದೋ ||೨೬||

ಕೊಲಿಗೆಯ್ದೆ ವೆಂತುಮೆಂಬೀ-
ಬಲಮುಕ್ಕುಮವಂದಿರಂ ಪಳಂಚಲಿದಪ್ಪುದಿಂ|
ಕೊಲಿಗೆಯ್ದೊಡೇನೆಯ್ದರೆ
ಕಲಹದೊಳೆನ್ನಿಂ ಪರಾಭವಂಗಳನವರ್ಗಳ್ ||೨೭||

ಎನಿಬರರಸುಗಳುಮೆಱಗಿದೊ-
ಡೆನಗೇವಂದಪುದೊ ಬಾಹುಬಲಿ ಪೊಱಗನೆ ಪೇ-|
ೞಿನಿತುಂ ಪುರಮೇವುದೊ ಪೌ
ದನಪುರಮೆನ್ನಾಳ್ಕೆಗಿಂತು ಪೊಱಗೆನಿಪಾಗಳ್ ||೨೮||

ಏವನೆಮಗೆಂಬ ಶೌರ್ಯಮ-
ದಾವಷ್ಟಂಭದೊಳವಂದಿರಿಂತುಱದಿರೆ ಪೇ-|
ೞಾವುದೊ ಬಾಯ್ಕೇಳಿಸಿಯುಮಿ-
ದೇವುದೊ ಷಟ್ಖಂಡಮಂಡಿತಂ ಭೂವಳಯಂ ||೨೯||

೧ (ಬ) ಳಿ. ೨ (ಅ) ವ. ೩ (ಅ) ನೂ; (ಬ) ನು. ೪-೪ (ಚ) ಗೇನೇ. ೫ (ಬ) ಯ್ತಿ; (ಚ) ಡು. ೬-೬ (ಅ) ರೆಸರಿವರೆವರಂನರುಂ; (ಬ) ರೆಸರವರೆಂನರುಂ.

ಎಂದೊಡೆ ಪುರೋಹಿತಂ ನಿಸ-
ತೊಂದೋಲಿಗೆ ತೀರ್ವುದೊಂದು ಮನೆವಾರ್ತೆಗಿದೇ-।
ನೆಂದರಸ ಬಳೆಯೆ ನುಡಿವಪೆ-
ಯೆಂದಟ್ಟಲಿವೇಟ್ಟ್ರನವರ್ಗೆ ಶಾಸನಹರರಂ ॥೩೦॥

ವ॥ ಆಗಳ್ ಭರತೇಶ್ವರಚಕ್ರವರ್ತಿಯಟ್ಟಿದ ದೂತರ್ ಪುರುಪರಮೇಶ್ವರ-
ತನೂಜರಲ್ಲಿಗೆ ಪೋಗಿ,

ಎನಗೊರ್ವಂಗುಪಭೋಗ್ಯಮಲ್ತು ವಸುಧಾಸಾಮ್ರಾಜ್ಯಮೋರಂತೆ ನಿ-
ಮ್ಮನಿಜರ್ಗಂ ಪಿರಿಯಣ್ಣನೇಂ ಜನಕನೇನೆಂಬೊಂದು ಕೊಂಡಾಟದಿಂ।
ವಿನಯಂ ಸಾಲ್ಕುದು ತಾಮುಮಾಮುಮೊಡನಿರ್ಪಂ ಬರ್ಪುದೆಂ[೧]ಬೀಶ[೧]ಶಾ-
ಸನಮಂ ನೆತ್ತಿಯೊಳಾಂತು ಬನ್ನಿಮೆಱಗಿಂ ಚಕ್ರೇಶಪಾದಾಬ್ಜದೊಳ್ ॥೩೧॥

ವ॥ ಎಂದು ನುಡಿದ ದೂತನ ನುಡಿಯುಮಂ ರಾಜಾದೇಶಮುಮನವಧಾ-
ರಿಸಿ ಬಂದ ದೂತನಂ ಮನ್ನಿಸಿ ಸಂತೋಷಂಬಡಿಸಿ ಪೋಗಲ್ವೇಟ್ಟು,

ಪಿರಿಯಣ್ಣಂ ಗುರು ತಂದೆಯೆಂದೆಱಗುವಂ ಮುನ್ನೆಲ್ಲ[೨]ಮಿನ್ನೀ[೨]ಗಳಾ-
ಳರಸೆಂಬೊಂದು ವಿಭೇದಮಾದೊಡೆಱಗಂ ಚೀಃ ಕಷ್ಟಮಲ್ತೇ ವಸುಂ-।
ಧರೆಗಯ್ಯಂ ಪಯೆಗೆಯ್ಯೆ ಮುಂ ಪಡೆದುದಕ್ಕಿಂತೀತನೊಳ್ ತೊಟ್ಟ ಕಿಂ-
ಕರಭಾವಂ ನಮಗಕ್ಕೆಗೊಟ್ಟ ಮಡ[೩]ಗೂಟಱುಣ್ಬಂದಮಂ ಪೋಲದೇ ॥೩೨॥

ವ॥ ಎಂದು ತಮ್ಮೊಳನಿಬರುಂ ಪರಿಚ್ಛೇದಿಸಿ;

ಕುಲಿಶಾಸ್ತ್ರೋತ್ತಂಸಿತಪದ-
ನಲಿನಂಗೆ ತನುಜರಾಗಿ ಪುರುಷಾರ್ಥಮನು-।
ಜ್ಜಳಿಸದೆ ಮಾಣ್ಬುಮೆ ನಮಗಿದು
ಪಲಾಲಭಾರಂ[೪]ಬೋಲೀ[೪]ಮಹೀತಲಭಾರಂ ॥೩೩॥

ವ॥ ಎಂದು ಪರಿತ್ಯಕ್ತನಿಜರಾಜ್ಯಪರಿಚ್ಛೇದರಾಗಿ,

ತಳರ್ದಪುವು ರತ್ನಶಿಖರಾ-
ವಳಿವಿಳಸಿತಕನಕಗಿರಿಗಳೆನೆ ತನುರುಚಿಗಳ್।
ಬೆಳಗೆ ಕುಮಾರರ್ ಸೂರ್ವ್ವರು-
ಮೊಳಪೊಕ್ಕರ್ ಸಮವಸರಣಭೂಮಂಡಲಮಂ ॥೩೪॥

೧-೧ (ಅ) ದೀವ. ೨-೨ (ಚ) ಮಿಂತೀ. ೩ (ಅ,ಬ) ಡೆ. ೪-೪ (ಅ,ಬ) ಬಲಂ.

ಒಳಪುಗುವುದುಮುಪಚಿತಜಗ-
ತ್ತ್ರಿಳಕನ ಮುಖಚಂದ್ರಕಿರಣದಿಂ ಕರಕಮಳಾ-
ವಳಿಯುಂ ತದೀಯನಯನೋ-
ತ್ಪಲವನಮುಂ ಮುಗಿದುವಲರ್ದುವೊಡನೊಡನಾಗಳ್ ॥೩೫॥

ವ॥ ಅಂತು,

ಪೊಡೆವಟ್ಟು ದೇವ ನೀಂ ಕುಡೆ
ಪಡೆದವಿಳಾತಳಮನೊಡನೆ ಪೃಟ್ಟಿದ ಮೋಕ್ಷ-
ಕ್ಷಿತಿಗೆಱಗಿಮೆಂದು ಭರತಂ
ಜಡಿವಂ ನಿನಗೆಱಗಿ ಪರಮ ಪೆಱರ್ಗೆಱಗುವೆವೇ ॥೩೬॥

ಭವದಂಘ್ರಿಕಮಳರಜದಿಂ
ಪವಿತ್ರಮಾದೆಮ್ಮ ಮಕುಟಮೆಱಗದು ಪೆಱರ್ಗಂ।
ಭವಭಯಹರ ಭರತನನೆಗ-
ಗವಯುವದೆಱಗಿಸುವ ತಪಮನೀಗಳೆ ದಯೆಗೈ ॥೩೭॥

ದುರಿತಘನತಿಮಿರದರಶತ-
ಕಿರಣಮತಿಪ್ರೀತಿಕರಣಮಖಿಳವಿನೇಯೋ-
ದ್ಧರಣಮೆಮಗಭವ ಭವಭಯ-
ಹರಣಂ ಭವದೀಯ ಸಮವಸರಣಂ ಶರಣಂ ॥೩೮॥

ವ॥ ಎಂದು ಪರಮನಿರ್ವೇಗಪರಾಯಣರಾಗಿ,

ಭರತಂಗೆಱಗುವರೆಂತಿಱದೆ
ಪರಿಭವಮೆಮಗಿಂತು ಮಾನಭಂಗಂ ಬರೆ ಬ-।
ರ್ಪರಸೇವುದೆಂತು ಪೊಣ್ದರ್
ಪರಮತಪೋಭರಮನನಿಬರುಂ ಪುರುತನಯರ್ ॥೩೯॥

ವ॥ ಅಂತಾ ಕುಮಾರರನಿಬರುಮಾದಿತೀರ್ಥಂಕರಸಮವಸರಣಸರೋವರ-ರಾಜಹಂಸರಾದ ವ್ಯತಿಕರಮಂ ಭರತೇಶ್ವರಂ ಕೇಳ್ದು.

ಅವಲಂಬಿಸಿ ನೆಗಟ್ದಿಕ್ಷ್ವಾ-
ಕುವಂಶಮೊಂದನೆ ಪುರಾಣಪುರುಷರವೋಲಿಂ-।

೧ (ಅ) ಮೆ. ೨-೨ (ಅ) ಬುದೆ; (ಬ) ಬೀ.

¹ತವಿಹತಗತಿಯಿಂ ಮುನ್ನ-¹
ನ್ನವಾಯಭೂಧರದ ಶಿಖರಮಂ ಮುಟ್ಟಿದರಾರ್ ||೪೦||

ವ|| ಎಂದು ವಿಸ್ಮಿತಾಂತಃಕರಣನಾಗಿ ಮನದೊಳೆ ಮೆಚ್ಚಿ,

ಎಸಗಸುಜರಾಗಿಯುಂ ಜಲ-
ಜೆಸಗೆಱಗದೆ ಪೋಗಿ ²ಭುವನ²ಗುರುಗೆಱಗಿದರಂ-।
ತನಿಬರುಮವಱಿಂದಗ್ಗಳ-
ಮೆನೆ ನೆಗಟ್ದಾ ಬಾಹುಬಲಿಯನೆಂತೆಱಗಿಸುವೆಂ ||೪೧||

ಖರಕಿರಣಸ್ಫುರಿತಕ್ಕಿದಿ-
ರುರಿವಂತಿರೆ ಸೂರ್ಯ್ಯಕಾಂತಮೆನ್ನಿಂತೇಜ-।
ಸ್ಫುರಿತಕ್ಕೆ ಸೆಣಸಿನೊಳ್ ಮಾ-
ಱುರಿಗುಂ ಸೈರಿಸದು ತೇಜವಾಭುಜಬಲಿಯಾ ||೪೨||

ಅದಱಿಂದಮಾತನಂ ಸಾ-
ಮದಿಂದಮೞವಡಿಸಿ ನೋಡುವೆಂ ಸಾಮದೊಳಂ।
ಪದವಡ³ದೊಡೆ ಬೞಿಕಿರ್ದ್ದ-
ಪ್ಪುದಲ್ತೆ ಪದವಡಿಸಲೆನ್ನ ಬಯಕೆಯ ದಂಡಂ ||೪೩||

ವ|| ಎಂದು ಮಂತ್ರಿವರ್ಗದೊಡನೆ ನಿರಾಕುಲಕಲಿತಕಾರ್ಯ್ಯಪರ್ಯ್ಯವಸಾನನಾಗಿ ಬಾಹುಬಲಿಕುಮಾರಂಗೆ ಲೇಖಮುಮನುಸ್ಮಯೂಖರತ್ನಾಭರಣ⁴ಪ್ರಾಭೃತ⁴ಸಮೇತಮಸಟ್ಟುವಂತು ಮಹಾಸಂಧಿವಿಗ್ರಹಿಗೆ ಬೆಸಸಿದೊಡಾ⁵[ಗಳಾತಂ ಜನಪದಸಮ⁵]ಭಿಜಾತನುಮನ್ವಯಾಗತನುಮಭಿರೂಪನುಂ ಪ್ರತ್ಯುತ್ಪನ್ನಪ್ರತಿಭನುಂ ವಕ್ರೋಕ್ತಿನಿಪುಣನುಮಾಧೇಯವಚನನುಮನುದ್ಧತವೇಷನುಂ ಪರಿಚಿತಾಶೇಷದೇಶಭಾಷನುಂ ವಯೋವೃದ್ಧನುಂ⁶ ಬುದ್ಧಿವೃದ್ಧನುಂ⁶ ಪ್ರಸಿದ್ಧನುಮಪ್ಪ ಮಹತ್ತರನ ಕೈಯೊಳ್ ಸನ್ಮಾನದಾನಪುರಸ್ಸರಮಾಗೆ ಕೊಟ್ಟು ವಿಜಯಕಾರ್ಯ್ಯಸಿದ್ಧಿಯಕ್ಕೆಂದು ಪೋಗಲ್ವೇೞ್ವುದುಮಾತನುಂ ಕತಿಪಯಪ್ರಯಾಣಂಗಳಿಂದಂ ಪೌದನಪುರಮನೆಯ್ದಿ ಪುರಶ್ರೀಯನರ್ಥಿವಟ್ಟು ನೋಡಿ ಮೆಚ್ಚುತುಂ ಬಂದು ಲೀಲೋತ್ತಾರಿತರಿಪುನೃಪಾಲಸಾಮಂತಸೀಮಂತಿನೀಸೀಮಂತರಪ್ಪ ಮಹಾಸಾಮಂತರಿಂದಮಧರಿತಾನೇಕರಿಪುನೃಪಾನೇಕ⁷ಪಾನಿಕ⁷ರಣಂಗಳಪ್ಪ ವಾರಣಂಗಳಿಂದಂ, ಹೇ-

೧-೧ (ಅ) ತವಿಗತಹತಿಯಿಂಮನ್ನ. ೨-೨ (ಅ) ಕ್ಷ್ಮೆ. ೩-೩ (ಅ) ಪರಮ. ೪ (ಜ) ಡೆ. ೫-೫ (ಜ) ಪ್ರಭೂತ. ೬-೬ (ಅ) ಡಾಗಳಾತಂ ಜ್ಞಾತಪಥನುಮ; (ಬ) ಡಾಗಳಾತಂ ಜನಪದನುಮ; (ಜ) ಡಾತಂ ಜನಪದಸಮ. ೭-೭ (ಜ) ಪ್ರತಿಯಲ್ಲಿಲ್ಲ. ೮-೮ (ಜ) ಪ್ರತಿಯಲ್ಲಿಲ್ಲ.

ಲೋಲ್ಲಂಘಿತಮಹಾವಾಹಿನೀಘೂರ್ಣಿಪ್ರೈರಾಜಿಗಳಪ್ಪ ವಾಜಿಗಳಿಂದಮುಪಹೃತವಿ-ಕ್ರಾಂತವಿಷ್ಕ್ರಿಷ್ಟವಿಕ್ರಮಸಂಪತ್ತಿಗಳಪ್ಪ ಪತ್ತಿಗಳಿಂದಂ ವಿರಾಜಮಾನಮಪ್ಪ ರಾ-ಜಮಂದಿರಮಂ ನೆಯ್ದಿ ದೌವಾರಿಕನಿವೇದಿತಾತ್ಮೀಯವೃತ್ತಾಂತನಾಸ್ಥಾನಮಂಡಪ-ಮಂ ಪೊಕ್ಕು ಲಲಾಟತಟಸಂಘಟ್ಟಿತಸಭಾಕುಟ್ಟಿಮನಾಗಿ,

ಮರಕತನಗಂ ಬಿಸ್ಸಂ ಮತ್ತ್ಯೋತ್ತಮಾಕೃತಿಯಿಂ ಮನಂ
ಬೆರಚಿಸಿದನಿಂತಾಯಿತ್ತಲ್ತೆ ಹರಿಸ್ಮರನಿರ್ಮಾಣನಂ।
ನೆರೆಮಿದಿವು ಮೇಣ್ ಕ್ಷಾತ್ರಂ ತೇಜಂ ಧರಾಧಿಪರೂಪದಿಂ
ಧರೆಗೆನುತುಮಾನೂತಂ ಕಣ್ಣಳ್ಕೆ ನೋಡಿ ಕುಮಾರನಂ ॥೪೪॥

ಪುರುಪರಮೇಶ್ವರಪುತ್ರಂ
ಭರತೇಶ್ವರಚಕ್ರವರ್ತಿಗನುಜನೆನಲ್ ಸಂ-।
ದರರೂಪನೀಕುಮಾರನೆ
ದೊರೆ ಚಕ್ರಿಗಮೆಸೆಯುಗಿದನಿತುಗತೇಜಸ್ಸ್ಫುರಿತಂ ॥೪೫॥

ವ॥ ಎಂದು ಮನದೊಳೆ ಬಗೆದು ವಿಸ್ಮಯಂಬಟ್ಟು ಭರತನಾಥದೂತನಾತ್ಮ-ಪಾರ್ಶ್ವಚರಕರತಳದಿನುಪಾಯನರತ್ನಕರಂಡಕಮಂ ಕೊಂಡು ದೇವ ಭವದೀಯಾಗ್ರಜಂ ರಾಜಾಧಿರಾಜಂ ನಿಮಗಟ್ಟಿದ ಮಹಾಪ್ರಸಾದಂ ಬಿನ್ನಪವೆಂದು ಮುಂದಿಟ್ಟು ಮಹತ್ತರಂ ಮಹತ್ತರಯೋಗ್ಯಮಹೀನಿಹಿತಾಸನದೊ[2]ಳಿರ್ಪ್ಪು-ದುಂ[2]; ಆದಂ[3]ಸಂಧಿ[3]ವಿಗ್ರಹಿ ಕೊಂಡಪನೀತಮುದ್ರೆಯಂ ಮಾಡಿ ತದಂತಸ್ಥಿ-ತಂಗಳಪ್ಪ ರತ್ನಾಭರಣಂ[4]ಗಳಂ[4] ತೋಱಿ ಕೋಶಾಧ್ಯಕ್ಷಹಸ್ತನ್ಯಸ್ತಂಗಳ್ ಮಾಡಿ ದೇವ, ಲೇಖಮಿದೆಂಬು,

ಭೂವಲ್ಲಭ ಸೋತ್ಕ್ಷೇಪ-
ಭ್ರೂವಿಲಸಿತದತ್ತವಾಚನಾದೇಶಮಿದಂ।
ಭಾವಿಸಿಮೆಂಪತಿಮಧುರೋ-
ದ್ಭಾವಿತಗಂಭೀರನಾದದಿಂ ಬಾಜಿಸಿದಂ ॥೪೬॥

ವ॥ ಸ್ವಸ್ತಿ ಸಮಸ್ತವಿಶ್ವಪಾಥೀಶ್ವರಪುರುಪರಮೇಶ್ವರಚರಣಸರಸಿಜರ-ಜೋರಂಜಿತಮಣಿಕಿರೀಟಮಕರಿಕಾಚಕ್ರಂ ಚಕ್ರರತ್ನಪ್ರಭಾಪ್ರಸಾದಿತ[5]ದಿಕ್ಚ-ಕ್ರಂ[5] ಭರತೇಶ್ವರಚಕ್ರವರ್ತಿ ನಿಜಪ್ರಿಯಾನುಜನಂ[6] ಬಾಹುಬಲಿಕುಮಾರನಂ ಪರಮಾಶೀರ್ವಾದದಿಂ ಪರಸಿ ಕನಕಪತ್ರಾಂಕಿತಕಾಮ್ರ್ಮಕಲತಾಲಂಬನಂಗಳುಂ

---

೧–೧ (ಅ) ದಿಂತು; (ಬ) ದಿನಿಸು. ೨–೨ (ಬ) ಳ್ಕುಳ್ಳಿರ್ಪುದುಂ. ೩–೩ (ಚ) ಮಹಾಸಂಧಿ. ೪–೪ (ಅ) ಗಳೆಲ್ಲಮಂ. ೫–೫ (ಚ) ನಿಖಿಲದಿಕ್ಚಕ್ರಂ. ೬ (ಚ) ಪ್ರತಿಯಲ್ಲಿಲ್ಲ.

ವಿಜಯೋತ್ಸವತೋರಣಸ್ತಂಭಂಗಳುಂ ವೀರಶ್ರೀಭುಜಂಗೀಸಮಾಶ್ರಯಶ್ರೀಖಂಡಕಾಂಡಂಗಳುಮಪ್ಪ ದೋರ್ದ್ದಂಡಂಗಳಿಂದಮತಿನಿಬಿಡಾಲಿಂಗನಂಗೆಯ್ದು ಕಾರ್ಯಮುಂ [೧]ಬೆಸಸಿಕ್ಕರ್ಗಂ[೧],

ಮತ್ತಪ್ಪುದೆನಲೊಡಂ ಮಾಣ್
ಮತ್ತತ್ರಣ ಕಾರ್ಯ್ಯಮಱಿಯ[೨]ಲಾದುದು ಪೇೞ್ ಭೂ[೨]।
ಪೋತ್ತಮನಿರ್ದ್ದನೆ ಸುಖದಿನು-
ದಾತ್ತಯಶಂ ನೆಗೞ್ತೆ ನೆಗೞ್ದಯೋಧ್ಯಾಪುರದೊಳ್ ॥೪೭॥

ಎಂತಾನುಂ ನೆನೆದಂ ಬಹು-
ಚಿಂತಂ ಚಕ್ರೇಶನೆಮ್ಮ[೩] ದಿಗ್ವಿಜಯಮುಮಾ-।
ಪಂತೆ[೩]ಡಱಿದೆಯ್ದೆ [೪]ನಡೆದುದೆ[೪]
ಸಂತಮೆ ದಕ್ಷಿಣಭುಜಕ್ಕೆ ಭೂವಲ್ಲಭನಾ ॥೪೮॥

ಅರಸುಗಳೆಲ್ಲಂ ಬಾಯ್ಕೇ-
ೞ್ದರೆಂದುಮಾಶಾಂತರಂಗಳಳ್ಕಿದುವೆಂದುಂ।
ಧರಣಿತಳಂ ಕೀರ್ತ್ತಿಸೆ ಕೇ-
ಳ್ದ ರಾಗಿಸುತ್ತಿರ್ಪೆವಿನ್ನುಮೇಂ ತೊಡಳುಂಟೇ ॥೪೯॥

ಇಲ್ಲಿಯೊ ಪೇೞೆಂದು ಮಹೀ-
ವಲ್ಲಭದೂತಂಗೆ ನುಡಿದು ದಶನಾಂಶುಗಳಂ।
ಮೆಲ್ಲನೆ ದಶನಚ್ಛದಮೃದು-
ಪಲ್ಲವದಿಂ[೫] ಮಱಸಿಮಾಣೆ ದೂತಂ ನುಡಿವಂ ॥೫೦॥

ಭವದಗ್ರಜದಿಗ್ವಿಜಯೋ-
ತ್ಸವಮಧಿಕ ಮಹೋತ್ಸವಂ [೬]ವಲಂ ನಿನಗಾದಂ।
ಶ್ರವಣಸುಖಮೆಂದೆ ದಿಙ್ಮಾ-
ತ್ರವರ್ಣ್ಣನಂಗೆಯ್ವನುಂತದೇನೆನ್ನಳವೇ ॥೫೧॥

ವ॥ ಅದೆಂತೆಂದೊಡೆ ಮುನ್ನಂ ತ್ರೈಲೋಕ್ಯಸಾಮ್ರಾಜ್ಯಹೇತುಭೂತಮೆನಿಸಿದ ಪುರುಪರ[೭]ಮೇಶ್ವರನ ಕೇವಲಜ್ಞಾನಪೂಜೆಯುಮಂ[೭] ಪ್ರಾಜ್ಯಸಾಮ್ರಾಜ್ಯಪ್ರಕಾಶನಕರಮಪ್ಪ ಚಕ್ರಪೂಜೆಯುಮಂ ನಿರ್ವ್ವರ್ತ್ತಿಸಿ,

---

೧-೧ (ಅ) ಬೆಸಪ್ಪರ್ಗನು. ೨-೨ (ಅ) ಲಾಯ್ತೆಂದುಂ. ಭೂ. ೩-೩ (ಅ) ದಿಗ್ವಿಜಯಮದೋರಂತೆ; (ಬ) ನೆಂದಿನ ನಯಮೋರಂತೆ. ೪-೪ (ಅ) ಸಂದುದೆ. ೫ (ಅ) ದೊಳ್. ೬ (ಅ,ಬ) ಬ. ೭-೭ (ಅ,ಬ) ಮೇಶ್ವರಪೂಜೆಯುಮಂ.

ನೆಗಳ್ದಿಕ್ಷ್ವಾಕುಕುಲಾಂಬರೇಂದು ಭರತಂ ನಿನ್ನಗ್ರಜಂ ಸಾಹಸಂ
ಮುಗಿಲಂ ಮುಟ್ಟಿ ನಿಜಪ್ರತಾಪದಳವಂ ತೋಱಲ್ಕೆ ಮಾಱಾಂಪ ಜ-|
ಟ್ಟಿಗರಾರಪ್ಪೊಡಮಿಲ್ಲದಂತು ಸಕಳಾರಾಚಕ್ರಮಂ ಚಕ್ರಮೊಂ-
ದೆ ಗೆಲಲ್ ಸಾಲ್ದಿ[೧]ರೆ ದಿಗ್ಜಯಕ್ಕೆ ಪೊಱಮಟ್ಟಾಸೆಂಬ ಸಾಮರ್ಥ್ಯಮೇ ||೫೨||

ವ|| ಅಂತು ಪೊಱಮಟ್ಟನೇಕ[೨]ಕರಿಕರಟ[೨]ಕಟಕಷೀಕರಣನಿಶ್ಶೇಷಿತಾರಾತಿವ-
ನಮಾರ್ಗ್ಗಮುಮುದಗ್ರಮದಾಂಧಸಿಂಧುರಪ್ರತಿಗಜಶಂಕಾಸ್ಫಾಲಿತಗಂಡಶೈಲವಿಘ-
ಟಿತಗಿರಿಮಾರ್ಗ್ಗ[೩]ಮುಮಂತಃಪ್ರಪತತಿ[೩]ಸ್ಫಾರಸಮುದ್ರೋಷ್ಮಸಂತಪ್ತಜ[೪]ಲಪ್ರತ್ಯೇಕ-
ಚುಳುಕಪಾನಮಾತ್ರಜಾನುದಘ್ನೀಕೃತಜಲಮಾರ್ಗ್ಗಮುಮಾಗಿ ನಡೆದು,

ಒಳ[೫]ಸಂಪನ್ನ[೫]ಕ್ಷೇತ್ರಪ್ರಕರಕರಿಕುಳ[೬]ಗ್ರೈವ[೬]ಸಂಘಟ್ಟಭಂಗಂ-
ಗಳನೆಂದುಂ ಕಾಣದಿತ್ತಂ [೭]ಕಳೆಯೆ ಬಳೆದ[೭] ವೇಳಾವನಸ್ಥೂಳತಾಳಂ-|
ಗಳೊಳಾದಿಬ್ರಹ್ಮಪುತ್ರಂ ನಿಜವಿಜಯಗಜೇಂದ್ರಂಗಳಂ ಕಟ್ಟಿ ನೀಳಾ-
ಚಳಸಂಘಾತಂಗಳಿಂ ಸುತ್ತಿಱಿದವೊಲೆಸೆದತ್ತು ಸಮುದ್ರೋಪಕಂಠಂ ||೫೩||

ವ|| ಅಂತು ಪೂರ್ವದಕ್ಷಿಣಾಪರಪಾರಾವಾರತೀರವರ್ತ್ತಿಗಳಪ್ಪ ಭೂಪಾಳರ-
ನೆಱಗಿಸಿ ಗಂಗಾವೈಜಯಂತೀಸಿಂಧುದ್ವಾರಂಗಳಂ ನಿಜವಿಜಯವರೂಥಮೊಂದ-
ಱೊಳೆ[೮]ನುಗುಳ್ದು[೮] ಲವಣಜಲಧಿಯಂ ಪೊಕ್ಕು,

ಕರಿಮಕರಂ ಪರಿವಂತಿರೆ
ಪರಿವ ರಥಂ ಜಲಧಿಯೊಳಗೆ ಮಾಣ್ದೊಡೆ ಶರದಿಂ-|
ದುರಿಪಿದನಲ್ಲವೆ ತದ್ವ್ಯಂ-
ತರಾಮರಾವಾಸಮನಿತುಮಂ ಭರತೇಶಂ ||೫೪||

ಶರಪಾತಮೆ ದೂತನವೋಲ್
ತರೆ ಮಾಗಧವರತನುಪ್ರಭಾಸಾಮರರಂ |
ಕರುಣಿಸಿ ಬಿಟ್ಟಂ ಕುಲಧನ-
ಪರಿಕರಮಂ ಕಯ್ಗೆ ಮಾಡಿ ಮನುಕುಲತಿಲಕಂ ||೫೫||

ವಿಜಯಾರ್ದ್ಧಾದ್ರೀಂದ್ರದೊಳಂ
ವಿಜಯಾರ್ದ್ಧಕುಮಾರನೆಂಬ ನೆಗಳ್ದಮರನುಮಂ|
ವಿಜಯಶರವೊಂದೆ ತಂದುದು
ವಿಜಯೋದ್ಘೋಷಣೆಗಳಮರರಿಂ ನೆಗಳ್ದನೆಗಂ ||೫೬||

೧ (ಅ) ದ್ವಿರ್. ೨-೨ (ಅ) ಕರಿಘಟಾ. ೩-೩ (ಚ) ಮುಂ, ಅಂತಸ್ಸ್ಫುರದತಿ. ೪ (ಅ) ಬ. ೫-೫ (ಅ) ವಿಖ್ಯಾತ. ೬-೬ (ಚ) ಗ್ರಾಮ. ೭-೭ (ಚ) ಬಳೆಯೆ ಕಳೆದ. ೮-೮ (ಅ,ಬ) ನುಸುಳ್ದು.

ಕೃತಮಾಳಾಮರನಗಿದಾ-
ಸತನಾಗೆ ತಮಿಸ್ರಗುಹೆಯ ವಜ್ರದ ಪಡಿ ತ-|
ತ್ಕ್ಷಿತಿಧರದೆರ್ದೆಯಂತೆ ಚಮೂ-
ಪತಿಯಿಂ ತೆಱೆದತ್ತು ಚಕ್ರಿಗರಿಯವುವೊಳವೇ ||೫೭||

ವ|| ಅಂತು ತಮಿಸ್ರಗುಹೆಯೊಳಗನೆ ಕಾಕಿಣೀ[೧]ರತ್ನದೊಳ್ ಬ[೧]ರೆದ ಚಂದ್ರಾದಿತ್ಯರ ಬೆಳಗುಗಳೊಳ್ ನಿಜ ವಿಜಯಕಟಕಂ ನಡೆಯೆ ವಿಜಯಾರ್ದ್ಧಾಚಲಮಂ ಪೆಱಗಿಕ್ಕಿ ಶಬರಖಂಡಂಗಳಂ ಸೇನಾನಾಯಕನೆ ಬಾಯ್ಕ್ಕೇಳಿಸಿ ಬರೆ,

ಮುಸಗಿ ಚಿ[೨]ಲಾಕಾವರ್ತ್ತರ
ಬೆಸದಿಂದಂ ಬಂದ ಮೇಘಮುಖರಂ ತೂಳ್ದೋ-|
ಡಿಸೆ ಜಯನೊರ್ವ್ವನೆ ಚಕ್ರಿಗೆ
ಬೆಸಕೆಯ್ದತ್ತುತ್ತರಾರ್ದ್ಧಮಧ್ಯಮಖಂಡಂ ||೫೮||

ವ|| ಮತ್ತಂ ಸಿಂಧುಪ್ರಪಾತಸಿಂಧುದೇವಿಯಿಂದಮಭಿಷಿಕ್ತನಾಗಿ ಪೋಗಿ,

[೩]ಹಿಮಗಿರಿಯ[೩] ಮಧ್ಯಕೂಟದ
ಹಿಮವದ್ದಿವಿಜನುಮನೊತ್ತಿ ಕಪ್ಪಂಗೊಂಡಾ-|
ಹಿಮಶೈಳದೊಳಮಲಂಪಿಂ
ಹಿಮವತ್ತೇಜಮನುದಾತ್ತತೇಜಂ ಮೆಱೆವಂ ||೫೯||

ವ|| ಅಂತು ಬಂದು ವೃಷಭಾಚಲ[೪]ನಿಕಟಂಗಳೊಳಂ ಅ[೪]ಪ್ರತಿಹತದಿಗ್ವಿಜಯಪ್ರಶಸ್ತಿಯಂ ಟಂಕೋತ್ಕೀರ್ಣ್ಣಂ ಮಾಡಿ ಗಂಗಾದೇವಿಯೋಲಗಿಸಿದನರ್ಘ್ಯರತ್ನಂಗಳಂ ಕೈಗೆಮಾಡಿ ನಮಿವಿನಮಿಗಳ್ ಮೊದಲಾಗಿ [೫]ದಕ್ಷಿಣೋತ್ತರಶ್ರೇಢಿ[೬]ಗಳ ವಿದ್ಯಾಧರರಾಜರನಾಜ್ಞಾವಿಧೇಯರ್ ಮಾಡಿ ಕಾಂಡಕಪ್ರಪಾತಗುಹೆಯ ವಜ್ರಕವಾಟಂಗಳಂ ತೆಱೆದು ಪೊಱಮಟ್ಟು ಸಿದ್ಧದಿಗ್ವಿಜಯನಾದನಿಂತು,

ಆರಜತಾದ್ರಿಮುದ್ರಿತಮಹೀತಳಮಂ ಬೆಸಕೆಯ್ಸಿ ತದ್ಗುಹಾ-
ದ್ವಾರಮನುರ್ಚ್ಚಿ ಪೋಗಿ ವಿಜಿತೋತ್ತರಭೂತಳನಾದನಲ್ತೆ ಢ-|
ಕ್ಕಾರವರಮ್ಯ[೭]ದಿಗ್ವಳಯ[೭]ಕುಂಜರಕುಂಭವಿಲಗ್ನಸಾಂದ್ರಸಿಂ-
ದೂರರಜಃಪಟಾವೃತದಿಶಾವಳಯಂ ಭರತಕ್ಷಿತೀಶ್ವರಂ ||೬೦||

೧-೧ (ಆ,ಬ) ರತ್ನಂಗಳೊಳ್ ಬ. ೨ (ಜ) ಬ. ೩-೩ (ಬ) ಹಿಮವನ್ಮಧ್ಯದ. ೪-೪ (ಆ,ಬ) ವಿಕಟಂಕದೊಳ. ೫ (ಬ) ದ; (ಜ) ಗೆ. ೬ (ಆ,ಬ) ಣಿ. ೭-೭ (ಅ) ದಿಗ್ವಿಜಯ.

ನೃಪಸುರಾಸುರಖೇಚರರಂ
ಬೆಸಕೆಯ್ಸುವನೆಡಱುವಟಿತರುಂ ಚಕ್ರಮೆ ಸಾ-।
ಧಿಸಿದಪ್ಪುದು ನವನಿಧಿಗಳ್
ಪೊಸಯಿಸಿದಪ್ಪುವು ವಿಭೂತಿಯುಂ ಪುರುಸುತನಾ ॥೬೧॥

ಎನ್ನಣುಗವನ್ನಿಸಿಲ್ಲದ
ಬಿನ್ನಣಿ ಸಾಮ್ರಾಜ್ಯಮಿಸಿತುವಣರೆ ಬೆಕಸುವು-।
ತ್ತುನ್ನತಿಯುಮ್ಮಿಸಗಾತಂ
ಮುನ್ನೆಜಗಮೊಡೆಂದು ಬೆಸಸಿಯುಟ್ಟಿದಿಸನ್ನಂ ॥೬೨॥

ಒಸೆಯಲ್ ಸಹಜಂ ಕ್ಷತ್ರಿಯ-
ನೆಸಿಪವಳಿವನ್ ಪೇೞ್ವೆನ್ ಪೇೞ್ ವಿಷ್ವಜ್ಞಸಮಂ।
ಮಾನಸಿಗೊಳಿಸುವುದಿದೆಂದುಂ
ನಿಸಗೊಳವಾರಾರ ಮನಮುಮಂ ರಂಜಿಸವೇ ॥೬೩॥

ವ॥ ಎಂಬುದುಂ ಬಾಹುಬಲಿಕುಮಾರಂ ದೂತವಚನಾಕರ್ಣನೋದೀರ್ಣಕ್ರೋಧೋದ್ಗಚ್ಛದಚ್ಛೇದಸ್ವೇದಜಲಧಾರಾಸಾರಭೀಕರಲೋಹಿತಕಪೋಲತಲಮುಮುದ್ದೀಪನಪಿಂಡಪ್ರದೀಪ್ತಕಪೋಲೋಜ್ಜ್ವಲದತುಚ್ಛಮದಜಲಚ್ಛಟಾಟೋಪಭೀಷಣಾರುಣಗಂಡಸ್ಥಲಮುಮಪ್ಪ ಗಂಧಸಿಂಧುರೇಂದ್ರಮನನುಕರಿಸಿ ಕೋಪಗದ್ಗದಸ್ಮಿತಂ ಬೆರಸು,

ಮುನ್ನಂ ಸಾಮಮನೆಮ್ಮಮ-
ನನ್ನೋಡಲ್ ನುಡಿದು ಭೇದಮುಂ ದಂಡಮುಮಂ।
ನಿನ್ನಱಿವನಿತಂ ನುಡಿದೆಯ-
ದೇನ್ನುಡಿಗಳೊ ಸಮಱಿಕೊಂಡ ನುಡಿಗಳೊ ನಿನ್ನಾ ॥೬೪॥

ಇನಿತೊಂದು ನುಡಿದ ಬಲ್ಮೆಯೆ
ನಿನಗಿಲ್ಲದೊಡೇಕೆ ನಿನ್ನನಾಳ್ದಂ ನಿನ್ನಂ।
ಮನವೊಲ್ದು ನಚ್ಚಿಯಟ್ಟಿದ-
ನನಾಕುಳಂ ದೂತನಿಂತು ನುಡಿಯಲ್ವೇೞ್ಕುಂ ॥೬೫॥

೧ (ಚ) ಳ್. ೨ (ಚ) ದೆ. ೩-೩ (ಅ) ನೀಗಳ್. ೪ (ಚ) ಮ. ೫-೫ (ಅ) ಗೊಳಿಸಿದವೆ.

ನೀನ್ನಿನ್ನ ನೃಪನ ದಿಗ್ವಿಜ-
ಯೋನ್ನತಿಯಂ ಪೊಗೞ್ದು [೧]ಮೂರ್ಛೆವೋಪೈ ಪೊಗೞ್ದಂ[೧] |
[೨]ನೀನ್ನಿ[೨]ನ್ನ ಮನದೊ[೩]ಳಿಂತಿದು[೩]
ಬನ್ನಮನೆತ್ತು ಪವ್ರೊಲಾಯ್ತು ನಿನ್ನವನಿಪನಾ ||೧೬||

ಮುಂದಿಟ್ಟು ಚಕ್ರಮಂ ತಿರಿ-
ತಂದುದುಮಂ[೪] ಪೊಱದಿರ್ದು ಬಯ್ತಂಗೊಳ್ವಂ[೪]-|
ದಂಪದೆ ಕೊಂಡುದು ಮನದೇ-
ನೆಂದುನ್ನತಿಮಾಡಿ ಪೊಗೞ್ವೆಯೊಳಗಱಿಯದುದೇ ||೧೭||

ಪಸಿದುಣ್ಣ ಪಟ್ಟು ಬಿರ್ದ್ದಿ-
ರ್ದ್ದ ಸಮುದ್ರದ ತಡಿಯೊಳುದಕಮಂತ್ರದ ಬಲದಿಂ|
ನುಸುಳ್ದೊಡೆ ಜಲನಿಧಿಯಂ ಕರು-
ಣಿಸಿ ಕೊಟ್ಟರ್ ಧನಮನಂಜಿ ಕೊಟ್ಟರೆ ದಿವಿಜರ್ ||೧೮||

ಧರೆಯೊಳ್ ಕುಲಾಲಚಕ್ರಂ
ತಿರಿವಂತಿರೆ ತಿರಿಯೆ ಚಕ್ರಮದಱಿಯೆ ಬೞಿಯಿಂ[೫]|
ತಿರಿತಿರಿದು ಮಾಡಿದಂ ಕುಲ-
ಧರಕುಲದೊಳ್ ಪಿಱಿದು [೬]ಮಹಿಮೆಯಂ[೬] ನಿಮ್ಮರಸಂ ||೧೯||

ಉತ್ತರಭರತದೊಳಾದಾ-
ಪತ್ತಂ ನೀನಱಿಯೆಯಕ್ಕುಮನಿತುಂ ಬಲಮುಂ|
ಮುತ್ತಿ ಚಿಲಾಕಾವರ್ತರ್
ಸುತ್ತಲುಮೇಸಾಡಿ ಪಿರಿದು ತಿಣಿಕಂ ತಂದರ್ ||೨೦||

ಮೇಘಮುಖರೆನಿಸಿ ಸಂ[೭]ದರ-
ಘೌಘದಿನಂದೋಘಮೇಘಮಾದೊಡೆ ಮೞೆ ಶಾ-|
ರ್ಯ್ಯಾಘಾತಂ ನೆಗೞೆ ಬಲ-
ವ್ಯಾಘಾತಂ ನಿನ್ನಪತಿಗದಾದುದು ಪುಸಿಯೇ ||೨೧||

ಬೇಡವಡೆ ಮುಸಱಿಕೊಂಡೇ-
ಸಾಡೆ ಸುರುಳ್ಗಿದು ಕೊಡೆಯ ಚರ್ಮದ ಮಱೆಯೊಳ್ |

---

೧–೧ (ಅ) ಮುಬ್ಬಿ ಪೋಗಲೆ ಪೊಗಳ್ವೈ; (ಬ) ಮೂರ್ಛಿತನಾದೀ. ೨–೨ (ಅ) ನಿಂನ ಯೊ; (ಬ) ನಿಂನಂನ. ೩–೩ (ಅ) ಳಮಂತದು. ೪–೪ (ಅ) ಪಾಳಮಿರ್ದ್ದು ಬೈಕಂಗೊಳ್ವಂ. ೫ (ಅ) ಯೊಳ್. ೬–೬ (ಅ) ಮಯಸಮಂ. ೭ (ಅ,ಬ) ದು.

ಗೂಡುಗೊಳುತಿರ್ದ್ದಶೌರ್ಯ-
ಕ್ರೀಡೆಯ ದಿಗ್ವಿಜಯಮೆಸೆವುದೆಮ್ಮಗ್ರಜನಾ ||೭೨||

ಒರೆಯಿಸಿದಂ ಪೂರ್ವಮಹೀ-
ಶ್ವರನಾಮಮನೆಯ್ದೆ ಕಳೆದು ವೃಷಭಾಚಳದೊಳ್|
ಭರತಂ ನಿಜನಾಮಮನೆನೆ
[೧]ಪರಿಹಸಿತಂ ಬುಧ[೧]ಜನಕ್ಕಮಲ್ಲದೆ ಪೆಱತೇಂ ||೭೩||

ಧನಮೆಂಬುದು ವಿಭುಗೆ ಯಶೋ-
ಧನಮದನಿಂತಳಿಪಿ ಕಳಿಪಿ ಕಿಡೆ ಮಾಡಿದ್ದಾರ್-|
ತನ ಪಡೆವ ಧನಮದೇತಱ
ಧನಮದಱಿಂ ನಿಧನಮೆಯ್ದಿದರ್ ಪಲರರಸರ್ ||೭೪||

ಪಿರಿಯಣ್ಣಂಗೆಱಗುವುದೇಂ
ಪರಿಭವಮೇ ಕೇಱಾ ನೆತ್ತಿಯೊಳ್ ಬಾಳಂ ನಿ-|
ರ್ನ್ನೆರಮೊಱಾ ಚಲದಿನೆಱಗಿಸ-
ಲಿರೆ ಭರತಂಗೆಱಗುವೆಱಕಮಂಜಮೆಯಲ್ತೇ ||೭೫||

ವಿನಯಮುಮೆಱಕಮುಮುಪ್ಪುದು
ಸನಾಭಿಗಳ್ ಸಂಗತಂಗಳಪ್ಪೊಡೆ ಪೆಸರ್ಗೊಂ-
ಡನಿತಱೊಳೆನ್ನಂ ಸೈರಿಸ-
ನೆನ ಭರತಂಗೆಱಗಿ ಲೋಕದಿಂ ನಗಿಸುವೆನೇ ||೭೬||

ಭರತಂ ಷಟ್ಖಂಡಭೂವಲ್ಲಭನೆನೆ ಸಿರಿಯಂ ಗೆಂಟಱೊಳ್ ಕೇಳ್ದು ರಾಗಂ
ಬೆರಸಿರ್ಪ್ಪೆನಣ್ಣಂ ಸಾಲ್ಗುಂ ಕರೆದೊಡೆ ಬೆಸನೇನೆಂಬ ಜೀಯೆಂಬ ದೇವಂ-|
ಬರಸೆಂಬಾಳೆಂಬ ದೈನ್ಯಕ್ಕೆಲವೊ ತನುವನಾನೊಡ್ಡುವಂ ತಾದಿದೇವಂ
ಪುರುದೇವಂ ದೇವದೇವಂ ಕುಡೆ ಪಡೆದ ನೆಲಕ್ಕಾರೊಳಂ ಪಂಥಮುಂಟೇ ||೭೭||

ಧರೆಯಂ ಕುಡುವಂದೆನಗಂ
ಗುರು ತನಗಂ ರಾಜನಾಮಮಂ ಕೊಟ್ಟೊಡೆ ನೋ-|
ಡಿರೆ ತನಗೀಗಳ್ ರಾಜಾ-
ಧಿರಾಜನೆಂದಿಟ್ಟುಕೊಂಡನಡಕಿಲ್ಪೆಸರಂ ||೭೮||

೧-೧ (ಆ,ಬ) ಪರಿಹಸನೆಂಬುದು.

ಚಕ್ರಂ ಪುಟ್ಟಿದೊಡೀಗಳ್
ಚಕ್ರೇಶ್ವರನೆಂಬ ಪೆಸರುಮಾಯ್ತುಕ್ಕವು ತಾಂ।
ಚಕ್ರೇಶನಾದೊಡಂ ತ-
ನ್ನಾಕ್ರಮಣಮನೆನ್ನೊಳೇಕೆ ಕೆಮ್ಮನೆ ತೋರ್ಪ್ಪಂ ॥೭೯॥

ದೊರೆಯಲ್ಲದಂಗೆ ನುಡಿವುದು
ಪುರುಳಿಲ್ಲದ ಮಾತನೆಮ್ಮೊಳಂ ನುಡಿವುದೆ ಪೇಟ್।
ಎಲೆಗೆ ಪಾಡುವ ಗೋರಿಯು-
ಸರಣ್ಯದೊಳ್ ಮೃಗವಿರೋಧಿಗಂ ಪಾಡುವುದೇ ॥೮೦॥

ಪುರುತನಯರ್ ಭುಜಬಲಿಯುಂ
ಭರತನುಮೆನೆ ದೊರೆಗೆವಂದೊಡಾರೞವುಮನೀ-।
ಧರೆಯಱಿಯಲೊಡಂ ತೂಗಲ್
ಧರೆಗೆ ತುಲಾದಂಡಮಲ್ತೆ ಮದ್ಭುಜದಂಡಂ ॥೮೧॥

ವ॥ ಅವಲ್ಲದೆಯುಮುದಾರವೀರಚರಿತನಿರತಕದನಕರ್ಕ್ಕಶಕ್ಷತ್ರಿಯಂಗೆ ವಿ-
ಪಕ್ಷಕ್ಷತ್ರಿಯಪರಾಕ್ರಮಾಕರ್ಣ್ಣನೋದೀರ್ಣ್ಣಕ್ರೋಧದೊಳಳೀಕಭ್ರುಕುಟಿಯುಮ-
ನರ್ಥಕಲಲಾಟತ್ರಿಪತಾಕೆಯುಮಪಾರ್ಥವಿಲೋಹಿತವಿಲೋಚನರುಚಿಯುಂ ನಿರ-
ರ್ಥಕನಿಷ್ಠುರೋಷ್ಠಪುಟಸಂದಂಶಮುಂ ನಿಷ್ಪ್ರಯೋಜನಸ್ವೇದಜಲೋದ್ಗಮಮುಂ
೧ನಿಷ್ಪಂದ೧ನಾಸಾಸ್ಫುರಿತಮುಂ ನಿಷ್ಕಾರಣಕಾಯಕಂಪನಮುಂ ನಿರಾಲಂಬನ-
ವಾಗಾಡಂಬರಮುಂ ತಕ್ಕುದಲ್ತು,

ನೆಗೞ್ದೀಷಟ್ಖಂಡಭೂಮಂಡಲಮನನಿತುಮಂ ಗೆಲ್ದಖಂಡಪ್ರತಾಪಂ
ನೆಗೞ್ದಂತಾಱುಂ ಬಲಂಗಳ್ಪೆರಸೊದವಿದ ಸಂಗ್ರಾಮಸಂರಂಭದಿಂದಂ।
ಬಗೆಯಂ ಪ್ರಾಣಪ್ರಿಯಸ್ತ್ರೀಜನತನಯಧನವ್ರಾತದೊಳ್ ಮಾಡದಾರ್ತಾ-
ಜಿಗೆ ಬಂದೊಡ್ಡಲ್ಕೆ ಪೇೞ್ ಸಂಗರನಿಕಷದೊಳೆಮ್ಮಂದಮಂ ನೀನೆ ಕಾಣ್ಬೈ ॥೮೨॥

ವ॥ ಎಂದು ಮನುನರೇಂದ್ರವೃಂದಾರಕಶಿಖಂಡಮಂಡನಮಣಿಯೆನಿಸಿದ
ಬಾಹುಬಲಿಕುಮಾರಂ ಭರತೇಶ್ವರಚಕ್ರವರ್ತ್ತಿಯ ದೂತನಂ ಪೋಗಲ್ವೇೞ್ದಾಗಳ-
ನೇಕರಾಜನ್ಯಕಮಕುಟಸಂಘಟ್ಟೋಚ್ಚಲನ್ಮಣಿಮರೀಚಿಗಳ್ ವಿಲಯಾನಲವಿಸ್ಫು-
ಲಿಂಗಂಗಳಂತೆ ದೆಸೆದೆಸೆಗೆ ಕೆದಱೆ,

೧-೧ (ಅ) ನೀಫಲ.

[೧]ಪೊಸಸಂಜೆವೆರಸು ಕೞ್ತಲೆ
ಪಸರಿಸಿರ್ಪುದೆನಿಸಿ ಕಣ್ಣ ಕೆಂಪುಂ ಭ್ರುಕುಟೀ-|
ಪ್ರಸರಾಂಧಕಾರಮುಂ ದೆಸೆ-
ದೆಸೆಗೆಸೆದುವು[೨] ಬಾಹುಬಲಿನೃಪಾಸ್ಯಾಯಿಕೆಯೊಳ್ ॥೮೩॥

ವ॥ ಅನ್ನೆಗಂ ಚಕ್ರವರ್ತಿಯ ದೂತಂ ಸಾಕೇತಪುರಮನೆಯ್ದಿ ಬಂದಾಸ್ಥಾನಮಂಟಪದೊಳಿರ್ದ್ದ ಚಕ್ರವರ್ತಿಯಂ ಕಂಡು ಪೊಡೆವಟ್ಟು,

ನಿನಗೀಷಟ್ಖಂಡಭೂಮಂಡಲಮೆಱಗಿದುದೇಂ ಸಾಲದೇ ಬೇಡಮು[೩]ದ್ವೃ-
ತ್ತನೊಳಿನ್ನೇನೆಂದು ದೇವರ್ ಕಡೆಗಣಿಸಿರೆ ಸೌಂದರ್ಯ್ಯಮುಂ ಕಾದ ಪೆಂಪೀ-|
ವನಧಿದ್ವೀಪಾಂತರಾಳಕ್ಷಿತಿಯೊಳೆಸೆಗುಮಾಕ್ಷೇಪ[೪]ಮುಂ ಮಾಣ[೪] ನೀಂ ಕ್ರೋ-
ಧನನಾಗಲ್ ನಿನ್ನ ತಮ್ಮಂ ನಿನಗೆಱಗನಿದಂ ನಂಬು ರಾಜಾಧಿರಾಜಾ ॥೮೪॥

ವ॥ ಅದಲ್ಲದೆಯುಂ ವಿಜಗೀಷುಬಳಾನಕಾನೀಕನಿನದಮನೆ ನಿಜಭುಜವಿಕ್ರಮೋತ್ಸವಕೋಲಾಹಲಮೆಂದುಂ ವಿದ್ವಿಷ್ಟಚಮೂಚಕ್ರಪಾಂಶುಪಟಲಮನೆ ನಿಜವಿಜಯಲಕ್ಷ್ಮೀಪರಿಣಯನೋತ್ಸವಪ್ರಾರಂಭಪಿಷ್ಟಾತಕಚೂರ್ಣ್ನಮೆಂದುಂ ವಿರೋಧಿಸಿಂಧುರಧ್ವಜಪಟಚ್ಛಾಯಾಪ್ರತಾನಮನೆ ನಿಜವೀರಪಟ್ಟಬಂಧೋತ್ಸವಸಮುಚ್ಛ್ರಿತಚ್ಛತ್ರಚ್ಛಾಯಾಮಂಡಲಮೆಂದುಂ ವಿಪಕ್ಷವಿಶಿಖಮೋಕ್ಷಹೂಂಕಾರಮನೆ [೫]ಜಗದುದಗ್ರನಿಜವೀರ[೫]ಶ್ರೀಗ್ರಹಸ್ತೋಭನಾಕ್ಷರಮೆಂದುಂ ಬಗೆವ ಬಾಹುಬಲಿಕುಮಾರಂ ವಿಜಗೀಷುವಿಜಯಯಾತ್ರಾಪಟಹಧ್ವಾಟೋಪನಿರ್ಭರಚರಿತಶ್ರವಣವಿವರನಾ[೬]ಗಿ ವಿಕ್ರಾಂತಕ್ಷತ್ರಚರಿತ್ರಂಗಳಂ [೭]ಕೇಳದವರ[೭] ಗಣನೆಯೊಳಂ ವಿರೋಧಿಧ್ವಜಿನೀಧೂಳೀಪಟಲಪಿಹಿತದೃಷ್ಟಿಗಳಾಗಿ ವೀರನರೇಂದ್ರಮಾರ್ಗ್ಗಮಂ ಕಾಣದ ವಿದ್ವಿಷ್ಟರ್[೮]ಸಭಾವನಿಯೊಳ[೮]ಮಹಿತಮತಂಗಜವಿಜಯಕದಲೀಕಾನನಬಹುಲಚ್ಛಾಯಾಚ್ಛನ್ನರಾಗಿ ಕುಲಕ್ರಮಾಯಾತಪ್ರತಾಪೋಷ್ಮಮಂ ಪತ್ತುವಿಡುವರಾತಿಗಳ ಸಂಖ್ಯೆಯೊಳಂ ವಿಪಕ್ಷಶರಾಸಾರಮೋಕ್ಷಹೂಂಕಾರಸ್ತಂಭನಾಕ್ಷರ[೯]ಸ್ತಂಭಿತ[೯]ಹೃದಯರಾಗಿ ರಾಜಪ್ರಸೂತವಿಜಯಯಶಶ್ಶರೀರಮಂ ಮೆಱೆವ ರಿಪುಗಳ ರೇಖೆಯೊಳಂ ಬಗೆಯದೆ ನಿಮ್ಮ ಬಗೆವ ಕಾರ್ಯ್ಯಮಂ ಬಗೆಯಿಹೆಂದು ಬಿನ್ನಪಂಗೆಯ್ದಾಗಳ್,

೧ (ಚ) ಕಿ. ೨ (ಆ,ಬ) ಪು. ೩ (ಅ) ಮು. ೪-೪ (ಆ,ಬ) ದಿಂ ಬೇಡ. ೫-೫ (ಚ) ನಿಜವಿಜಯಲಕ್ಷ್ಮೀಯುದಗ್ರ. ೬ (ಆ,ಬ) ರಾ. ೭-೭ (ಅ) ಕೇಳದವಶಾತ್ರವರರ. ೮-೮ (ಬ) ಸಭಾವನೆಯೊಳ. ೯-೯ (ಅII) ಸ್ಥಾಪಿತ.

ತುದಿಯೆಯ್ದಿತ್ತಿಸ್ಮ್ರ[೧] ವಿಶ್ವಕ್ಷಿತಿತಳಜಯಮಿಂತೆಮ್ಕ್ರ[೨] ದಾಯಾದಸಂ ಕೋ-
ಪದಿನೆನ್ನೊಳ್ ಕಾದಲೆಂದುಬ್ಬರಿಸಿದ ಸಮರಾಟೋಪದಿಂ ನಿಂದೊಡಂ[೩] ಮ್ಯಾ-
ಣ್ಬುದು ಸೂಟಿಲ್ಲಿವ್ಕ್ರ ಸಾಪತ್ನಸ ಭುಜಬಲಮಂ ನೋಟ್ಪೆಮೆಂದಾಗಳಾಸ್ಥಾ-
ನದಿನೆೞ್ದಂ ಚಕ್ರಿ ರಾಜನ್ಯಕಮಕುಟಮಣಿಪ್ರೋಜ್ಜ್ವಲದ್ವ್ಯೋಮಚಕ್ರಂ ||೮೫||

ವ|| ಆಗಳ್ದ್ದ ತಾಲಾಪವಿಲಯಸಮೀರಪ್ರೇರಿತಪ್ರಲಯಜಲನಿಧಿಪ್ರಧ್ವಾನಾ-
ನುಕಾರಿಯಾಗಿ,

ಭುವನೇಶಂ ಕ್ಷತ್ರಪುತ್ರಾಗ್ರಣಿಯ ಭರತನಕ್ಷೋಹಿಣೀವೀರಕಂಠೀ-
ರವಸಂದೋಹಕ್ಕೆ ರೋಮಾಂಚಮನೆ ಕವಚಮಂ ಮಾಡುತುಂ ವೀರಪತ್ನೀ|
ನಿವಹಕ್ಕಾನಂದಬಾಷ್ಪಾವಳಿಯನೆ ಕುಚದೊಳ್ ಹಾರಮಂ ಮಾಡುತುಂ ಭೂ-
ಭುವನಾಂತರ್ಭಾಗಮಂ ಪರ್ವಿದುದು ಸಮರಸನ್ನಾಹಭೇರೀನಿನಾದಂ ||೮೬||

ವ|| ಆಸಮರಸನ್ನಾಹಭೇರೀನಿನಾದಮಂಭೋಭಾರಗಂಭೀರಾಂಭೋಧ-
ರಸ್ತನಿತಬಹುಸ್ನಿಗ್ಧಂಗಳಪ್ಪ ಮದಸ್ತಂಬೇರಮಬೃಂಹಿತಂಗಳಿಂದಂ ಯುಗಪದಾ-
ಸ್ಫಾಲಿತಾನೇಕದುಂದುಭಿಧ್ವನಿಮಧುರಗೀತಂಗಳಪ್ಪ ಹಯಹೇಷಿತಂಗಳಿಂದಂ
ಸಂದಣಿಸಿ ಘೂರ್ಣ್ಣ[೪]ಮಾನಾನೇ[೪]ಕಾರ್ಣ್ಣವಘೋಷಮಂ ಗೆಲ್ದು ಪೆರ್ಚ್ಚುವಂತೆ
ಪೆರ್ಚ್ಚೆ ವಿಜಯಪರ್ವತಗಜೇಂದ್ರದ ಬೆಂಗೆವಂದು,

ಗಿರಿರಾಜೋದಗ್ರ ಸಿಂದೂರಿತಕರಟಘಟಾಟೋಪಮಂ ಕುಂಕುಮಾಂಭ-
ಶ್ಛುರಿತಾಂಗೋತ್ತುಂಗವಲ್ಗತ್ತುರಗಬಲಮದೋ[೫]ದ್ದಾಮಮಂ ಚಿತ್ರನೇತ್ರಾಂ-|
ಬರನಾನಾಹೇತಿಹಸ್ತೋದ್ಭಟ[೬]ಭಟಪೃತ[೬]ನಾ[೭]ಜಾಳಮಂ[೭] ಚಿತ್ತದೊಳ್ ವೀ-
ರರಸಂ ಕೈಗಣ್ಮಿ ಪೊಣ್ಮುತ್ತಿರೆ ನಿಜಬಲಮಂ ನೋಡಿದಂ ಸಾರ್ವಭೌಮಂ ||೮೭||

ವ|| ಅಂತು ನೋಡಿ ಪೌದನಪುರಾಭಿಮುಖನಾಗಿ ನಡೆವಲ್ಲಿ,

ಪದಧೂಳಿಕ್ಷೋಭದಿಂ ದಿಗ್ಯುವತಿವದನಮಂ ಶಾಮಲಂ ಮಾಡಿ ಮಾಣ್ದಿ-
ರ್ದ್ದುದೆ ಕೋಪೋದ್ಭಿನ್ನಗಂಡಸ್ಥಲಕರಟಘಟಾವ್ಯೂಹನೀಲಾಂಬುದಾಟೋ-|
ಪದಿನತ್ಯುಗ್ರಾಸ್ತ್ರಶಸ್ತ್ರಪ್ರಕರಕಿರಣಸಂಘಾತತೀವ್ರಾತಪೋದ್ಯೋ-
ತದಿನರ್ದ್ಧಶ್ಯಾಮಲಂ ಮಾಡಿದುದು ದಿನಮುಮಂ ಕೂಡೆ ರಾಜೇಂದ್ರಸೈನ್ಯಂ||೮೮||

ವ|| ಅಂತು ಬಂದು,

೧ (ಅ) ನ್ನ. ೨ (ಅ) ನ್ನ. ೩ (ಅ) ಡಿಂ. ೪-೪ (ಚ) ಮಾನೈ. ೫ (ಅ) ನು.
೬-೬ (ಅ) ಪೃಥು. ೭-೭ (ಅ) ಚೇಲಮಂ.

ರಜಮುಂ ದಿಗ್ಧೂಮಮುಂ ಸಂದಣಿಸೆ ಪರುಷವಾತಾಹತಿಪ್ರೋಚ್ಚಲತ್ಸಾ-
ಮಜಸೇನಾಕುಂಭಸಿಂದೂರಮುಮೊಡವಿಡೆ ದಿಗ್ದಾಹಮುಂ ಕೂಡೆ ಭೂರಿ-|
ಧ್ವಜಿನೀಸಂಕ್ಷೋಭಭೂ[೧]ಕಂಪಮುಮಶುಭಮಹೀಕಂಪಮುಂ ತನ್ನೊಳೊಂದಾ-
ಗೆ ಜಗ[೨]ಕ್ಕೇನಿಲ್ಲಿ[೨] ಪೇೞಾದಪುದೆನೆ ದೆಸೆ ಬಪ್ಪಂತೆ ಬಂದೊಡ್ಡಿ ನಿಂದಂ ||೮೯||

ವ|| ತನ್ನೆಗಮಿತ್ತ ಬಾಹುಬಲಿಕುಮಾರನ ವಿಜಯಸೈನ್ಯದೊಳ್,

ಪುಸಿಯಿಪ ರಕ್ತಕೋಟಿ ಸಮುಕಟ್ಟುವ ಸನ್ನಣಮುಟ್ಟಿಯಿಂದಮು-
ಚ್ಚಿಸುವ ತುರಂಗದಂತಿರಥಸಂಕುಳಮೇೞುವ ಪಬ್ಬಿಶಯ್ಯೆ ಪೂ-|
ಜಿಸುವ ಜಿನೇಂದ್ರಬಿಂಬಮೆಸೆವುಗ್ರರಣಾನಕರಾಪ್ರಘೋಷಮೋ-
[೩]ವ್ರ್ಯಸನ[೩]ಮನುಂಟುಮಾಡಿದುದು ಪಂದೆಗಮುಂದಿನ ವೀರಗೋಷ್ಠಿ-
ಯೊಳ್ ||೯೦||

ವ|| ಆಗಳಾಬಾಹುಬಲಿಕುಮಾರನುಂ ಸಂಗ್ರಾಮರಂಗಾಗ್ರೇಸರನಾಗಲ್ ಬಗೆದು ವಿಜಯಕನ್ಯಕಾಸ್ವಯಂವರೋತ್ಪಲಮಾಲಾನುಕಾರಿನಾರಾಚಂಗಳಿಂದಂ ವಿಜಯರಾಜಮುಹಿಷೀಮಯೂರಾತಪತ್ರಶಂಕಾವಹಸಂಕುಳಂಗಳಿಂದಂ ವಿಜಯಲಕ್ಷ್ಮೀಕರವಲಯವಿಭ್ರಮಕರಚಕ್ರಂಗಳಿಂದಂ ತೀವಿದ [೪]ಸಿಬಿಗೆ[೪]ಯೊಳೆಸೆವ ವಿಜಯಾಂಗನಾರ್ಚನೋಚಿತಪ್ಯಗಮದಮುಂ ನಿಜಭುಜವಿಜಯಲಕ್ಷ್ಮೀಪರಿರಂಭಣಪ್ರಕಟನದಕ್ಷದಕ್ಷಿಣವಿಷಾಣವಿನ್ಯಸ್ತಹಸ್ತಮುಂ ದಾನಪ್ರಮೋದವಾಚಾಲಷಟ್ಚರಣಚಾರಣಗಣೋಚ್ಚಾರಝುಂಕಾರಜಯಾಶೀರ್ಘೋಷಮುಮಪ್ಪ ವಿಜಯಗಜೇಂದ್ರದ ಬೆಂಗೆವಂದು,

[೫]ನೆರೆ[೫]ದೆಂಟುಂ ದಿಗ್ಗಜಂಗಳ್ ನೆಱೆ[೩]ದಿದಿರಿದಿರೊಳ್ ತಾಗೆಯುಂ ಮಂದರಕ್ಷ್ಮಾ-
ಧರದೊಳ್ ಕೆಯ್ಗೂಡೆ [೬]ಗೋತ್ರಾದ್ರಿಗಳೆ ಗಜಘಟಾರೂಪದಿಂ ತಾಗೆಯುಂ ಮು-
ತ್ಕರಿ ತಾಂಗಲ್ ತಾನೆ ನಾಲ್ಕುಂ [೭]ಮನುಜ[೭]ಗಜಘಟಾಬಂಧಮೇ[೮]ಭಂಡ[೮]ಮೆಂ-
ಬೊಂ-
ದುರಣೋತ್ಸಾಹಂ ಮನಕ್ಕುಬ್ಬರಿಸಿರೆ ಸಮರೋತ್ಸಾಹಸಂಪನ್ನನಾದಂ ||೯೧||

ವ|| ಅಂತು ಕದನಲಕ್ಷ್ಮೀಕನ್ಯಕಾಪ್ರದಾನಸಮಯಪ್ರಥಮಪ್ರಸರದೋಂಕಾರಶಂಕಾಕಾರವಿಜಯಪ್ರಸ್ಥಾನನಾಂದೀ[೯]ನಿನದಾ[೯]ನಂದಿತದಿಕ್ಪಾಲಚಕ್ರನುಂ--

೧ (ಚ) ಮಾ. ೨-೨ (ಅ) ಕ್ಕೇನೆಲ್ಲಿ; (ಬ) ಕ್ಕಿಂನೆಲ್ಲಿ. ೩-೩ (ಚ) ವ್ರ್ಯಸಕ. ೪-೪ (ಅ,ಬ) ಬಿಸುಗೆ. ೫-೫ (ಚ) ಇರ. ೬ (ಬ,ಚ) ಡಿ. ೭-೭ (ಬ) ವನಜ. ೮-೮ (ಚ) ಬಂಧ. ೯-೯ (ಚ) ಸಮಯನಿನದಾ.

ನಿಜವಿಜಯಶ್ರೀ[೧]ಪತಿಂವರಾ[೧]ಪರಿಣಯನೋತ್ಸವಾಲೋಕನಕುತೂಹಲಪ್ರಚ—
ಲಿತಸಮಸ್ತಸಾಮಂತಚಕ್ರನುಂ, ನಿಷ್ಕಂಟಕೀಕೃತಾಶೇಷಜಗದಕಾಂಡೋತ್ಥಿತ-
ಪ್ರಚಣ್ಡವಿಪಕ್ಷೋತ್ಪಾತಪ್ರಶಮನಶಾನ್ತ್ಯುದಕಧಾರಾಕಾರತತ್ಕ್ಷಣಕ್ಷರದಜಸ್ರ—
[೨]ದಾನಜಲ[೨]ಧಾರಾಭಿರಾಮಕರಟಿಘಟಾಚಕ್ರನುಂ, ನಿಜವಿಜಯಪ್ರಯಾಣಪ್ರಾ-
ರಂಭಸಂಭೂತೋತ್ಸವಭೂವೇಪತಾಶ್ಚರ್ಯ್ಯವಿಕೀರ್ಯ್ಯಮಾಣಪಿಷ್ಟಾತಕಪಾಂ-
ಸುಪಟಲ[೩]ವಿಭ್ರಮನುಂ,[೩] ಕರಿತುರಗಖುರ[೪]ಶಿಖರೋತ್ಖಾತ[೪] [೫]ಧೂಳೀಸ್ಥಲೀ-
ಕೃತ[೫]ಗಗನಚಕ್ರನುಂ, [೬]ಜಗತ್ಕಂಪಿತಾರಾತಿ[೬]ದರ್ಪ್ಪತ್ವರಿತವಿಧ್ವಂಸ[೭]ನೋದ್ಭೂ-
ತ[೭]ಭೂಕಂಪಶಂಕಾವಹಮಹಾ[೮]ಪದಾತಿ[೮]ಪಾದಕ್ಷೋಭಾಂದೋಲಿತಮೇದಿನೀ-
ಚಕ್ರನುಮಾಗಿ ಚಕ್ರವರ್ತ್ತಿಯ ಬಲಮನಿದಿರ್ಚ್ಚಲೆಂದು ಮೇಲೆತ್ತಿ ಬರ್ಪ್ಪಾಗಳ್,

ನರಪಾಲವ್ರಜವರ್ಮ್ಮಜಾಲವಿಲಸನ್ಮಾಣಿಕ್ಯಮಾಲಾಂಶುಪಿಂ-
ಜರಿತಂ [೯]ಪ್ರೇಂಖದಸಂಖ್ಯ[೯]ವಾಜಿವಿಲಸದ್ವೀಚೀಚಯಂ ಮತ್ತಕುಂ-।
ಜರಕುಂಭೀರಕುಲಂ ಚಲತ್ಪಲಿಕಾಮಾಲಾ[೧೦]ಝುಷಾನೀಕಮು-
ಜ್ಜರಿಯಂ ಬಾಹುಬಲೀಶ್ವರಂಗೆ ಪಡೆದತ್ತಾತ್ಮೀಯಸೈನ್ಯಾರ್ಣ್ಣವಂ ॥೯೨॥

ವ॥ ಅಂತು ಯುದ್ಧಭೂಮಿಗಭಿಮುಖನಾಗಿ ಬರ್ಪ್ಪಾಗಳ್,

ಕದನಕ್ರೀಡಾರಸಪ್ರಸ್ಫುಟಮುದಿತಭಟಾವಿರ್ಬ್ಭವತ್ಸಿಂಹನಾದೋ-
ನ್ಮದಮುದ್ದಾಮಾಶ್ವಹೇಷಾವಿಗಳಿತನಿಗಳಂ ದಂತಿಸಂಘಟ್ಟಘಂಟಾ-।
[೧೧]ನದಿತಸ್ವಚ್ಛಂದಮಾಯೋಧನಪಟಹರವೋ[೧೨]ಜ್ಜೃಂಭಿತಂ[೧೨]ಶ್ರೋತ್ರಮಂ
ಮು-
ಷ್ಟಿಮದೆತ್ತಂ[೧೩]ಚಕ್ರನಾಥ[೧೩]ಪ್ರಬಲಬಲಪಯೋರಾಶಿಗಂಭೀರನಾದಂ ॥೯೩॥

ವ॥ ಆಗಳಿದು ವಿಪಕ್ಷಬಲಮೆಂದಱಿ[೧೪]ದತ್ತಿ[೧೪] ಕ್ಷುಭಿತಚಿತ್ತನಾಗಿ ಬಾಹುಬ
ಲಿಕುಮಾರನುಭಯ[೧೫]ಪಾರ್ಶ್ವಾನದ್ಧ[೧೫]ಶರಧಿಸಾರಿಕಾ[೧೬]ಮಧ್ಯಸ್ಥಿಭೂತ[೧೬]ಬ-
ದ್ಧಗೋಧಾಂ[೧೭]ಗುಳಿತ್ರಾಣ[೧೮]ಯೋಧಸಿಂಧುರಘಟಾ[೧೯]ಸಂಕಟಮುಂ[೧೯] ನಿ—
ಬಿಡನಿಪೀಡಿತಪ್ರಾಸಮುಷ್ಟಿ[೨೦]ದುರ್ವ್ವಾರಾ[೨೦]ಶ್ವಾರೋಹತುರಂಗಬಲಾವಗಾಢ—
ಮುಂ ವಿವಿಧಾಯುಧಕರಾರಭಟೀ[೨೧]ರಭಸೋ[೨೧]ದ್ಭಟಸುಭಟವ್ಯಾಕೀರ್ಣ್ಣಮು—
ಮುದ್ಧೂಯಮಾನಪ್ರಕೀರ್ಣ್ಣಕೋ[೨೨]ಪಲಕ್ಷಿತಕ್ಷತ್ರಪುತ್ರನಿರಂತರಮುಮಪ್ಪ ನಿ—
ಜಬಲಂಬೆರಸು ಭರತೇಶ್ವರಚಕ್ರವರ್ತ್ತಿಯ ಸೈನ್ಯಕ್ಕೆ ಮುಟ್ಟಿವರೆ,

---

೧-೧ (ಚ) ಪರಿವಾರ. ೨-೨ (ಚ) ದಾನಪ್ರವೇಾಪಜಲ. ೩-೩ (ಬ) ವಿಭ್ರಮುಕರ. ೪-೪ (ಬ) ಮುಖೋತ್ಖಾತ. ೫-೫ (ಬ) ಧೂಲೀಕೃತ. ೬-೬ (ಬ) ಜಗತ್ಕಂಪಕಾಲಾರಾತಿ. ೭-೭ (ಚ)ನೋದ್ಭೂತಭಟಾನೀಕಾರಾತಿ. ೮-೮ (ಅ) ಪಾದಾತ. ೯-೯ (ಚ) ಪ್ರೇಂಖಳಶಂಖ. ೧೦ (ಚ) ಳಂ. ೧೧ (ಚ) ರು. ೧೨-೧೨ (ಬ) ಜ್ರುಂಖಲಂ. ೧೩-೧೩ (ಚ) ರಾಜರಾಜ. ೧೪-೧೪ (ಚ) ದು. ೧೫-೧೫ (ಅ) ಪಾರ್ಶ್ವೋನ್ನದ್ಧ; (ಬ) ಪಾರ್ಶ್ವಸನ್ನದ್ಧ. ೧೬-೧೬ (ಚ) ಮಾದ್ಯೋತ. ೧೭ (ಬ) ಲಾ. ೧೮ (ಚ) ಣಾ. ೧೯-೧೯ (ಚ) ಸಂಘಟ್ಟಮುಂ. ೨೦-೨೦ (ಬ) ದುರಾ; (ಚ) ದುರ್ಧರಾ. ೨೧-೨೧ (ಅ) ರಸೋ. ೨೨ (ಚ) ಚಾ.

ಕಿವಿಯಂ ಮುಟ್ಟಿತ್ತು ಮುನ್ನಂ ವಿವಿಧಬಲಯುಗಾತಿಪ್ರೋಚ್ಚಲ-
ತ್ಕಾಹಳಾಘಾ-
ರವಮುಕ್ಕಿಂ ಪಿಂತೆ ಘೂರ್ಣತ್ಪಟಲಪಟಹಕೇತುದ್ವಿಪಾನೀಕಘಂಟಾ- |
ನಿವಹಸ್ವಾಪಾರಮುಕ್ಕಿಂ ಬಳಿಕ ಹಯಖುರಧ್ವಾನಮುಕ್ಕಿಂ [೧]ಬಿಬಟಾಕ್ಷ್ಮಾ[೧]-
ಹವರಾಗೋತ್ತಾಪಹೇತುಂ ಚಪ್ಪಟಿಜಯಜಯಾರಾ[೩]ವಸ್ಫಾಲಿತ[೩]ಕ್ಷ್ಮೋಣಿಘೋಷಂ ॥೯೪॥

ವ॥ ಅಂತುಭಯಬಲದ ಸಿಂಗಿಗಳ ಕೊಂಡಂಬಂ ಮುಟ್ಟುವಿನಿಮತ್ತ ರಾಜಾಧಿರಾಜನುಮಿತ್ತ ಯುವರಾಜನುಂ ನಿಂದಾಗಳ್,

ರವಿ ಪತ್ತಿತ್ತೆತ್ತಮಾಕಾರಮೋ ನಿಜ ಬಪಂ ಧಾರುಣೀಚಕ್ರದೊಳ್ ಕಾ-
ಲಸಗೊಂಡತ್ತೆಂಬಿನಂ ಮುಂದೆಯಿಸಿ ನಿಜಪರಾಭೋಗಸನ್ಯಗ್ರಪೃಷ್ಠ-
ಪ್ರಸರಕ್ಷ್ಮೋಣೀತ್ರಿಮಾರ್ಗಂ ಕುಳಿರಿನಿಶಿಲಾಘಾತವಿಬಾಣಂಗಳುಂ ಧೀ-
ವಿನಪಿಂ ಬಂತಾಪತ್ತುತಿಕ್ಷೋಭವಿನುಭಯಬಲಕ್ಷೋಭಘೂರ್ಣಪ್ರತಾನಂ ॥೯೫॥

ವ॥ ಅಂತು ನೆಗೆದ ಧೂಳೀಪ್ರತಾನಮನ್ಯೋನ್ಯಘಂಟಾಟಂಕಾರಶ್ರವಣದ್ವಿಗುಣಿತರಣರಭಸಕ್ಷೋಭ[೪]ಸಮುದ್ಭೇದ[೫]ಸಂಭೂತಭೂರಿಮದಾಂಬುಪ್ರವಾಹಸಹಸ್ರಂಗಳಿಂದಮಿತರೇತರತೇಜಾರವಾಕರ್ಣನೋದೀರ್ಣರೋಷಹಯಹೂಂಕಾರನಿಷ್ಠ್ಯೂತವದನಗ್ರಾಹಮುಖಲಾಯಿತಮಿಳಿತಸಂಘಟ್ಟಸ್ಯಂದಮಾನಫೇನಸಲಿಲಸ್ರೋತಸ್ತರಂಗಳಿಂದಮಾಕುಲಾಕುಲಸಯಸರಾಜತನೂಜಸಮಾಜವದನಾಭಿಮುಖಚಟುಲಸಂಚಾರ್ಯಮಾಣಚಾಮರನಿಚಯವಿಚಲದವಿರಲಾನಿಲಂಗಳಿಂದಂ ವಿರಳವಿರಳಮಾದಾಗಳ್,

ಬಲಧೂಳೀವ್ರಾತಮೇಘಪ್ರಕರತಿಮಿರದೊಳ್ ಶಸ್ತ್ರಜಾಲಾಂಶುವಿದ್ಯುತ್-
ಕುಲವಿದ್ಯೋತಂಗಳಿಂದಂ ಬಲನಿವಹರಜಸ್ಸಂತತಿಧ್ವಾನದೊಳ್ ಭೂ- |
ತಲನಾಥಾನೀಕವರ್ಮೋತ್ಕರಖಚಿತಮಣಿಶ್ರೇಣಿರತ್ನಪ್ರದೀಪಾ-
ವಲಿದೀಪ್ತಿವ್ರಾತದಿಂದಂ ದಿಟಮುಭಯಬಲಂ ಕಂಡುವೊಂ[೭]ದೊಂದನಾಗಳ್ ॥೯೬॥

ರೋಧೋಂತಂ ಕೂಡೆ ರತ್ನಜ್ವಲಗಿರಿಕುಲದಿಂ ತೂಂತನಿಟ್ಟಂತೆ ನೀಲಾಂ-
ಭೋದಂಗಳ್ ಕೂಡೆ ವಿದ್ಯುದ್ವಳಯಮನೊಳಕೊಂಡಂತೆ ಪಾಠೀನಚಕ್ರ- |
ಕ್ಷೋದಪ್ರಕ್ಷೋಭಿತಂ ವಾರಿಧಿಯೆ ಗಗನಮಂ ಮುಟ್ಟೆ [೮]ನಿಂದಂತೆ[೮] ಗುರ್ವಿಂ-
ದಾದಂ ಚೆಲ್ವಾಯ್ತು ಚಕ್ರಿದ್ವಿಪಘಟೆ ನಿಶಿತಾಸ್ತ್ರಾಂಶುಜಾಲಾವಲೀಢಂ ॥೯೭॥

ವ॥ ಅಂತೊಡ್ಡಿದ ಗಜಘಟಾಟೋಪದ ನಡುವೆ,

---

೧ (ಚ) ಗ. ೨-೨ (ಚ) ಬಟಾಕ್ಷ್ಮಾಳ್ ಕಾ (ಛಂದೋಭಂಗ). ೩-೩ (ಅ) ಣಸ್ಫಾಟಿತ; (ಬ) ಣಾಸ್ಫೋಟಿತ. ೪ (ಅ) ಜಿ. ೫ (ಚ) ಖಾ. ೬-೬ (ಚ) ಸಂಹಾರವ. ೭ (ಚ) ದೊಂ. ೮-೮ (ಅ,ಬ) ನಿಂದತ್ತು.

ಘನಮಾರ್ಗವ್ಯಾಪಿ ಜೈತ್ರಧ್ವಜವಿಜಯ[1]ಗಜಾ[1]ರೂಢನುಗ್ರಾರಿವಿತ್ರಾ-
ಸನಸಂಗ್ರಾಮಾನಕೌಘಧ್ವನಿಬಧಿರಿತದಿಕ್ಚಕ್ರನುದ್ವಂಶವಿಂಧ್ಯಾ- ।
ಪನಿಘ್ನಸ್ಫೂರ್ಜದ್ದಿರೂಢದ್ವಿಪಜ[2]ಯುದ ರವಂ ರಾಜಕಂಠೀರವಂ ತ್ರಾ-
ಸನೆ ವೀರಕ್ಷತ್ರಚೂಡಾಮಣಿಭರತನೃಪಂ ನೋಂಕಲುದ್ಯುಕ್ತನಾದಂ ॥೯೮॥

ವ॥ ಅನ್ನೆಗಮಿತ್ತ ಯುವರಾಜನಾವಿಜಿಗೀಷುಬಲಾನಕಾನೀಕನಿನದಮನೆ ನಿಜಭುಜವಿಕ್ರಮೋತ್ಸವಕೋಳಾಹಳಮೆಂದುಂ, ವಿದ್ಯುಚ್ಚಮೂಚಕ್ರಪಾಂಶುಪಟಲಮನೆ ನಿಜವಿಜಯಲಕ್ಷ್ಮೀಪರಿಣಯನೋತ್ಸವಪ್ರಾರಂಭಪಿಷ್ಟಾತಕಚೂರ್ಣಮೆಂದುಂ, ವಿರೋಧಿಸಿಂ[3]ಧುರಧ್ವಜಪಟಲಛಾಯಾಪ್ರತಾನಮನೆ ನಿಜವೀರಪಟ್ಟ[4]ಬಂಧೋ[4]ತ್ಸವಸಮುಚ್ಛ್ರಿತಚ್ಛತ್ರಚ್ಛಾಯಾಮಂಡಲಮೆಂದುಂ, ವಿಪಕ್ಷವಿಶಿಖಮೋಕ್ಷ ಟಂ[5]ಕಾರಮನೆ ಜಗಮುದಗ್ರನಿಜವೀರಗ್ರಹಸ್ತೋಭನಾಕ್ಷರಮೆಂದುಂ, ಬಗೆದಭಿನಿಷಾದಿಯುಮಂ ಪಶ್ಚಿಮನಿಷಾದಿಯುಮಂ ನಿಜವಿಜಯಸಿಂಧುರಮುಮಂ ತಿಣ್ಣಂ [6]ನೊಂಕಲು[6]ಮುಪುಂಕಲುಂ ಬೆಸಸಿ ವಿಜಯಲಕ್ಷ್ಮೀವಿಲಾಸಿನೀಭ್ರೂಲತಾವಿಭ್ರಮಾನುಕಾರಿಯೆನಿಪುದಂ ಮಧ್ಯಮನಿಷಾದಿಯ ಕೈಯಂ ಕೊಂಡು,

ವನಧಿದ್ವೀಪಸಮೀಪವರ್ತಿನಸುಧಾಂತರ್ವರ್ತಿಯಾಗಿರ್ದರಾ-
ತಿನಿಕಾಯಕ್ಕಿದು ಯಾಮಿನೀಸಮುದಿತಂ ದೇವೇಂದ್ರಚಾಪಂ ದಲೆಂ- ।
ಬಿನೆಗಂ ಬಾಹುಬಲೀಶನೇಱಿಸಿದನಾ[7]ನಮ್ರಾವನೀನಾಥ[7]ಸಂ-
ಜನಿತಾರಾತಿಕುಲಾಂಗನಾಜನಮನಸ್ಸಂತಾಪಮಂ ಚಾಪಮಂ ॥೯೯॥

ವ॥ ಆ ಪ್ರಸ್ತಾವದೊಳ್,

ಇಸಲೆಂದಿರ್ದ ಧನುರ್ಧರಲಂ ಪೊಳೆವ ಬಾಳುಳ್ಳಂಗಳಂ ಪೋಲೆ ಪಾ-
ಯಿಸಲೆಂದಿರ್ದಳವಂ ಪೊಡಟ್ಟಿಸೆಯೆ[8] ಚಕ್ರಾರಾವಮೋರಂತೆ ಚೋ- ।
ದಿಸಲೆಂದಿರ್ದ ರಥಂ ಕನಲ್ದು ಮುಳಿಸಿಂ ಮಾರಾನಲೆಂದಿರ್ದ ಖ-
ಳ್ಗಿ ಸಮಂತೊರ್ಮೆಯೆ ನೋಂಕಲಿರ್ದ ಘಟೆ ನೋಟಕ್ಕೇನಗುರ್ವಾ-
ದುದೋ ॥೧೦೦॥

ವ॥ ಆಗಳುಭಯಬಲಮನ್ತ್ರಿಮುಖ್ಯರುಮಿವರಿರ್ವರರಸುಗಳಪ್ಪೊಡೆ ಚರಮದೇಹಧಾರಿಗಳಿವರ ಯುದ್ಧಮೆಂಬುದತಿಕ್ರೂರಗ್ರಹಯುದ್ಧದಂತೆ ಸಕಳಪ್ರ-

೧-೧ (ಅII) ಘಟಾ. ೨ (ಅ) ಭ. ೩ (ಅ) ಬ. ೪-೪ (ಚ) ಬದ್ಧೋ. ೫ (ಅ) ಹೂಂ. ೬-೬ (ಅ) ಗೆಯ್ದು. ೭-೭ (ಚ) ನಮ್ರಾಟನೀನಾದ. ೮ (ಚ) ವ.

ಜಾವಿನಾಶಕರಮಲ್ಲದೆ ಪೆಱತಲ್ತು; ಚತುರಂಗಬಲಯುದ್ಧದೊಳಲ್ಲದೆ ಗೆಲ್ಲಸೋಲ-ಮೆಂಬುದಿಲ್ಲ; ಸಮಸ್ತಜನಸಂಹರಣಕಾರಣಮಪ್ಪ ರಣದೊಳೇವಂದಪುದೆಂದು ಧರ್ಮ್ಮಯುದ್ಧಮನೆ ತಮ್ಮೊಳ್ ಸಮಕಟ್ಟಿ ಮುನ್ನಂ ಭರತೇಶ್ವರಚಕ್ರವರ್ತ್ತಿಯು-ಲಿಗೆ ವಂದು.

ಜಯಮಂ ಕೈಕೊಳ್ವುದು ದೃ-
ಷ್ಟಿಯುದ್ಧ ಜಲಯುದ್ಧ ಮಲ್ಲಯುದ್ಧದೊಳೆ ಜನ-।
ಕ್ಷಯಕರಣದೊಳೇಂ ಸಾಹಸಮು-
ಮಯಶಮುಮಕ್ಕುನಿತೆ ದೇವ ಕಡೆಗಣಿಪುದಿದಂ ॥೧೦೧॥

ಉಱುವುದು ಭುಜಬಲದಳವಂ
ಘಟಿಯಿಸೆ ಕೊಳೆ ಹೀನಬಲನಧಿಕಬಲಂ ತೊ-।
ತ್ತುಱುಮಱಿದನೆಂಬ ಲೋಕದ
ಪಱು ಪೊರ್ದ್ದದೆ ಮಾಣ್ಗೆ ಧರ್ಮಯುದ್ಧದೊಳಸಗಂ ॥೧೦೨॥

ವ॥ ಎನೆ ಭರತೇಶ್ವರಚಕ್ರವರ್ತ್ತಿಯಿಂತಾದೊಡೆಮಗೆ ಬಾಹುಬಲಿಯ ಸ-ಮರಸಂಘಟ್ಟಮೋಹಳವಿದು [1]ದರಿದ್ರಂಗೆ[1] ಹೀನಗರ್ಭ್ಯದೋಹಳವಂತಾದುದೆಂದು ರಾಜ್ಯಲಕ್ಷ್ಮೀಲೀಲಾಲಂಬನಮೆನಿಸಿದ ಬಿಸುಗೆಯ ಮತ್ತಾಲಂಬನಮನವಳಂಬಿಸಿ ಸಿಂಧುರಸ್ಕಂಧಪೀಠದೊಳ್ ಸುಖಾಸೀನನಾಗಿರ್ದ್ದಾಗಳ್ ಬಾಹುಬಲಿಕುಮಾರನ-ಲ್ಲಿಗೆ ಮನ್ತ್ರಿಗಳ್ ಬಂದು ಪೂರ್ವ್ವೋಕ್ತಕ್ರಮದೊಳೆ ಧರ್ಮಯುದ್ಧವ್ಯತಿಕರಮಂ ಬಿನ್ನಪಂಗೆಯ್ದಾಗಳ್,

ಎನ್ನ ಚತುರಂಗಬಲಮನಿ-
[3]ದನ್ನರರಾರಾಂಪರೆಂಬ[3] ನಿಮ್ಮರಸನಗ-।
ರ್ವ್ವೋನ್ನತಿಯುಡುಕುಮನಿನಿಸಾ-
ಸನ್ನೋಡಿಂ ಧರ್ಮ್ಮಯುದ್ಧಮಕ್ಕೆಮ ಬಱಿಯಂ ॥೧೦೩॥

ವ॥ ಎಂದು ನಿಜಭುಜದಂಡೋಚ್ಚಂಡಚಾಪದಂಡಟಂಕಾರಮಂ ಭರತ-ರಾಜಸೈನ್ಯಕ್ಕೆ ಕುಪಿತಕೃತಾಂತಹೂಂಕಾರಶಂಕಾವಹಂ ಮಾಡಲ್ವಡೆಯುದೆಯು-ಮನ್ಯದುರ್ದ್ಧರನಿಜಧನುರ್ದ್ದಂಡಮಂ ತದ್ಧ್ವಜಿನಿಗೆ ಕೋಪಕುಟಿಲ[4]ಕಾಲ[4]ಡಿಕ್ಪಾ-ಲಭ್ರುಕುಟೀವಿಭ್ರಮಮಂ ಮಾಡಲ್ಪಡೆಯುದೆಯುಮನವರತಪ್ರಮುಚ್ಯಮಾನಪ್ರಚು

೧-೧ (ಬ) ಧರಿತ್ರಿಗೆ. ೨ (ಅ) ನ. ೩-೩ (ಜ) ದನ್ನರರಾಂಪನ್ನರೆಂಬ (ಛಂದೋ-ಭಂಗ). ೪-೪ (ಚ) ದಕ್ಷಿಣ.

ರನಿಜನಾರಾಚರಾಜಿಯಿಂದಮವಿರಲಮದಜಲತೈಲಪಾಕದುರಾಲೋಕಂಗಳಪ್ಪ-ಶ್ರವ್ಯಲ[೧]ಕರಟಕಟಂಗಳನ[೧]ಲ್ಪತುಚ್ಛಚ್ಛಿದ್ರಂಗಳ್ ಮಾಡಲ್ಪಡೆಯದೆಯುಮಾಕ-ರ್ಣ್ಣಾಕೃಷ್ಟೋತ್ಸೃಷ್ಟನಿಜವಿಕೀರ್ಣ್ಣಟಂಕಂಗಳಿಂದಂ ತತ್ಪತಾಕಿನೀಕುಂಜರಶಿರಶ್ಶಿ-ಲಾಪಟ್ಟಕಂಗಳ್ ನಿಶ್ಛಿದ್ರಂಗಳ್ ಮಾಡಲ್ಪಡೆಯದೆಯುಂ, ನಿಜವಿಜಯಗಜಕರೋನ್ಮು-ಕ್ತಂಗಳಪ್ಪ ಮುಕ್ತಾಮುಕ್ತವಿನಿರ್ದ್ದಲಿತವೀರಯೋಧರುಧಿರವಾರಾಶೀಕರಂಗಳಿ-ನುದಗ್ರ[೩]ಕೋಪಾನಲನ[೩]ನಾಱಿಸಲ್ಪಡೆಯದೆಯುಮೀಷದ್ವಿಷಣ್ಣವದನನಾಗಿರ್ದ್ದ ಬಾಹುಬಲಿಕುಮಾರನಂ ಮನ್ತ್ರಿಪುಂಗವರ್ ನೋಡಿ,

ಬಿಸುಡುವುದನಮಾಗ್ರಹಮಂ
ಪ್ರಸನ್ನಗಂಭೀರಚಿತ್ತದಿಂದಿದನವಧಾ- ।
ರಿಸುವುದು ಯುವರಾಜ ಮನಂ
ಬಸಮೊರ್ಮ್ಮೆಗೆ ಸಲಿಪುದೆಮ್ಮ ಮುದುಗಣ್ತನಮಂ ॥೧೦೪॥

ವ॥ ಎಂದು ನುಡಿಪೊಡಂಬಡಿಸಿ ಧರ್ಮ್ಮಯುದ್ಧಮನುಭಯಬಲಂಗಳೊಳ-ಮಾನಂದಭೇರಿಯಂ[೪] ಪೊಯಿಸಿ ಘೋಷಿಸಲ್ವೇೞ್ದು ಬಾಹುಬಲಿಕುಮಾರನ ಭರ-ತೇಶ್ವರನ[೫] ಪಕ್ಷದ [೬]ರಾಜಲೋಕಮು[೬]ನೆರಡುಂ ದೆಸೆಯೊಳಂ ಮಧ್ಯಸ್ಥರಾ[೭]ಗಿ ಮಿಡುಕದೆ ನೋಡುತ್ತಿರ್ಪ್ಪಂತು ನಿಯಮಿಸಿದಾಗಳಿರ್ವ್ವರುಂ ನೀಲನಿಷಧಗಿರಿಗ-ಳೊಂದೊಂದರೊಳ್ ಬಂದು [೮]ಪೊಣರ್ವ್ವಂತೆ[೮] ನಿಂದೊರ್ವ್ವರೊರ್ವ್ವರ್[೯] ಮೆಯಿ-ಕ್ಕದೆ ನೋಡುವಲ್ಲಿ,

ಲಲಿತಮುಖಸರಸಿಜಂ ನಿ-
ಶ್ಚಲಪಕ್ಷ್ಮಂ ಸ್ತಿಮಿತತಾರಕಂ ಭುಜಬಲಿ ಕ- ।
[೧೦]ಣ್ಗಳೊಳ್[೧೦]ತವೆ ಪೀರ್ವ್ವ[೧೧]ವೊಲ್ನಿ[೧೧]-
ಶ್ಚಳತನು ನಡೆನೋಡೆ ಭರತರಾಜಂ ಸೋಲ್ತಂ ॥೧೦೫॥

ವ॥ ಅಂತು ಬಾಹುಬಲಿ[೧೨]ತೇಜಃಪುಂಜಮು[೧೨] ಕಣ್ಣೊಳುಳ್ಕುವಂತೆ ಸ್ಫುರಿ-ಸದೆಮೆಯಿಕ್ಕಿ ದೃಷ್ಟಿಯುದ್ಧದೊಳ್ ಸೋಲೆ ಮತ್ತಮೀರ್ವ್ವರುಂ ಬಂದು,

ಕರಿಯೂಥಪತಿಗಳೆರಡುಂ
[೧೩]ಸರಸೀಜಲಮಂ[೧೩] ವಿಳಾಸದಿಂ ಪುಗುವವೊಲಾ- ।

೧-೧ (ಅ) ಕರಟಕಟಾಪಾಂಗಳನ; (ಬ) ಕರಟಕಟಂ ಕಟಾಹಂಗಳಂ. ೨ (ಅ) ಜೃಂ. ೩-೩ (ಅ,ಬ) ಕೋಪತಾಪಮು. ೪ (ಅ) ಗಳಂ. ೫ (ಅ) ಚಕ್ರವರ್ತ್ತಿಯ. ೬-೬ (ಅ) ರಾಜಕಮು; (ಬ) ರಾಜನ್ಯಕಮು. ೭ (ಅ) ಮಾ. ೮-೮ (ಬ) ಪೊಣರ್ವ್ವಂತೆ ಪೊಣರ್ದ್ದು; (ಚ) ಪೊಣರ್ದ್ದು ನಿಲ್ವಂತೆ. ೯ (ಅ) ರನೆ. ೧೦-೧೦ (ಚ) ಣ್ಣೊಳ್. ೧೧-೧೧ (ಚ) ಲೇ ನಿ. ೧೨-೧೨ (ಅ) ತೇಜಸ್ಫುರಿತಮೆ. ೧೩-೧೩ (ಅ) ಸರಸಿಜವನಮಂ.

ಕನಕಾಚಲಮಂ [1]ಪೋಲ್ತುದು[1]
ಘನಮರಕತಶೈಲಮೆನಿಸಿ ಭುಜಬಲಿ ಸಕಳಾ- ।
ವನಿತಲವಲ್ಲಭನಂ ಭೋಂ-
ಕೆನೆತ್ತಿ ಪೊತ್ತಿರ್ದ್ದನಿಕ್ಕಲೊಲ್ಲದೆ ನೆಲದೊಳ್ ॥೧೧೧॥

ಭರತಾವನೀಶ್ವರಂ ಗುರು
ಪಿರಿಯಣ್ಣಂ ಚಕ್ರವರ್ತ್ತಿ ಮಹಿಮಾಕರನೀ- ।
ದೊರೆಯ[2]ನು[2]ಮಳವಱಿಯೆ ವಸುಂ-
ಧರೆಯೊಳ್ ತಂದಿಕ್ಕಿ ಭಂಗಮಂ ಮಾಡುವೆನೇ ॥೧೧೨॥

ಎಂದೊಯ್ಯನಿೞಿಪೆ ನೆಲದೊಳ್
ದುಂದುಭಿರವದೊಡನೆ ವಿಜಯಘೋಷಣೆ ನೆಗೞ್ದು- ।
ತ್ತಂದು ಭುಜಬಲಿಯ ಬಲದೊಳ್
ಕುಂದು ಕಱಂ ಪಿಱಿದುಮಾಯ್ತು ಭರತನ ಬಲದೊಳ್ ॥೧೧೩॥

ಚರಮತನುಸಾರ್ವ್ವಭೌಮಂ
ಪುರುಪರಮೇಶ್ವರತನೂಜ[3]ನಂತುಂ[3] ಭಂಗಂ ।
ದೊರೆಕೊಂಡುದಿಂತು[4] ಭರತೇ-
ಶ್ವರಂಗೆ ಹುಂಡಾವಸರ್ಪ್ಪಿಣೀವಿಳಸನದಿಂ ॥೧೧೪॥

ನೆರೆದೆರಡುಂ ಬಲದರಸುಗ-
ಳಿರೆ ಪರಿಭವಮಂತು ತನಗೆ ಬರೆ ಮುಳಿಸಿನ ವ- ।
ಳ್ಳುರಿಗಳನುಗುೞುತ್ತುಂ ಚ-
ಕ್ರರತ್ನಮಂ ಬಗೆದು ಬೆಸಸಿದಂ ಭರತೇಶಂ ॥೧೧೫॥

ವ॥ ಆಗಳಾ ಪುರುಪರಮೇಶ್ವರತನೂಭವರ ಯುದ್ಧಾಡಂಬರೋಪಸರ್ಗ್ಗ-ದೊಳಾ[5]ಕುಲವ್ಯಾಕುಲರಾಗಿ ತತ್ಪ್ರಶಮನಪ್ರತೀಕಾರಮಾಗೆ ನಾಕಲೋಕಸೌಂದ-ರಿಯರೊಡನೆ,

ಅನಿಮೇಷರ್ ನೂತನಪ್ರಸ್ತುತಸುರಭಿಸುಧಾಕ್ಷೀರಧಾರಾಭಿಷೇಕಾ-
ರ್ಚ್ಚನೆಯಂ ಸದ್ಯಸ್ತನಾಖಂಡಳವನಸುಮನೋಮಾಲಿಕಾಲಂಬಲೀಲಾ- ।
ರ್ಚ್ಚನೆಯಂ ಪ್ರತ್ಯಗ್ರಚಿಂತಾಮಣಿಮಯರಚನಾಶ್ಚರ್ಯ್ಯನಿಶ್ಶೇಷಭೂಷಾ-
ರ್ಚ್ಚನೆಯಂ ಸರ್ವ್ವಜ್ಞಬಿಂಬಾವಳಿಗೆ ಪರಿಸಿದರ್ ಮಸ್ತಕನ್ಯಸ್ತಹಸ್ತರ್ ॥೧೧೬॥

---

೧-೧ (ಜ) ಪೊತ್ತುದು. ೨-೨ (ಅ,ಬ) ನನ. ೩-೩ (ಅII,ಬ) ನುಂತುಂ; (ಚ) ನಂತತಿ
೪ (ಜ) ದು. ೫ (ಜ) ಳಮೂ.

ವ॥ ಆ ಪ್ರಸ್ತಾವದೊಳ್,

ಬೆಸಸಿಮೊದಲು ಮಾರ್ಕೊಳ್ವುದೆ
ಬೆಸನಂ ಬಲವಂದು ಬಾಹುಬಲಿಯುರಮಂ ಪೊ-
[೧]ದ್ದಿಸಲಾಱದುದಱಿನಿದ್ದುದು[೧]
ಮುಸುಕ್ಕಿ ಸಕಂಗೆಟ್ಟು ಬಳಿದ ಮುಬ್ಬುವ ಕೆಲದೊಳ್ ॥೧೧೭॥

ವ॥ ಆಗಳ್,

ಧರೆಯುಂ [೨]ಪನ್ನಿರ್ಪ್ಪ್ಪದರ್ಪ್ಪ[೨]ದಿಂ ಬಾಹುಬಲಿಸ್ವಾಮಿಯುಂ ಕೋಪದಿಂ ದುಃಖಿತ್ವಾಸ-
ಮೆಂಬಂ-
ತಿರೆ [೩]ದೇವಾನೀಕಿನೀ[೩]ದಿಂ ದುಃಖಿತವಮಾನಸ್ಯಂದಮಾಂಗಲ್ಯಗೇಯ- ।
ಸ್ವರದೊಳ್ [೪]ಕೈಗೂಡಿ[೪] ಪ್ರೋಣ್ಮೃತ್ತಿರೆ ಮುದಿತಸುರಾನಂದಬಾಷ್ಪೋದಬಿಂದೂ-
ತ್ಕರಮೆಂಬಂತಾಗೆ ತಂದತ್ತುರಲ ಮಣಿಗಳಂ ಪುಷ್ಪವರ್ಷಪ್ರತಾನಂ ॥೧೧೮॥

ತನಗಲ್ಲದುದಂ ಮಾಡಿದ
[೫]ನಿನಿತಂ[೫] ಚಕ್ರೇಶನೆಂಬ ಕುಲವೃದ್ಧರ ಭೂ-
ವನಿತಾಧೀಶರ ನುಡಿಗ-
[೬]ಳ್ಗೆ[೬] ನಾಣ್ಚಿದಂ ಭರತರಾಜನವನತಮುಕುಟಂ ॥೧೧೯॥

ಬಾಹುಬಲಿ ತನ್ನ ದಕ್ಷಿಣ-
ಬಾಹುವ ಕೆಲದಲ್ಲಿ ನಿಂದ ಚಕ್ರಮನಾಗಳ್ ।
ಸಾಹಸರಸಿಕಂ ಕಂಡೀ-
ಸಾಹಸಮಂ ನೆಗಟ್ದನೆನ್ನೊಳಂ ಭರತೇಶಂ ॥೧೨೦॥

ಕಳೆದಿಡುವುದೆ ಕಷ್ಟಂ ಭೂ-
ತಳರಾಜ್ಯವಿಮೋಹಮುಚಿರರುಚಿಸಂಚಳಮಿಂ- ।
ತಳವುಗಿಡಿಸಿದುದು ಮನುಕುಲ-
ತಿಳಕನುಮಂ ಬಳಮಹೀಶರುಬೀದವರಳವೇ ॥೧೨೧॥

ಸೋದರರೊಳ್ ಸೋದರರಂ
ಕಾದಿಸುವುದು ಸುತನ ತಂದೆಯೆಡೆಯೊಳ್ ಬಿಡದು- ।
ತ್ಪಾದಿಸುವುದು ಕೋಪಮನಳ-
ವೀದೊರೆತೆನೆ ತೊಡರ್ವುದೆಂತು ರಾಜ್ಯಶ್ರೀಯೊಳ್ ॥೧೨೩॥

೧-೧ (ಆ) ಲಾಱದೆ ನೆಲಸಿದ್ದುದು. ೨-೨ (ಅ) ದೀಗಳ್ಭುಜಬಲಿಯು. ೩-೩ (ಅ) ದೇವ್ಯಾನೀಕದಿಂ. ೪-೪ (ಅ) ಕೈಗಣ್ಣ. ೫-೫ (ಚ) ನಿನಸಂ. ೬-೬ (ಅ) ಇಳೆ ಧಿಕ್, ಚೀ.

ವ|| ಅದಲ್ಲದೆಯುಮಶೇಷವಿದ್ಯಾನದೀಶೋಷಣಗ್ರೀಷ್ಮಾಂಶುಮಾಲಿಯುಮಯೂಖಮಾಲೆಯುಮುಪಶಮಾಂಭೋರಾಶಿಪ್ರಲಯಬಾಡಬಾನಲಜ್ವಾಲೆಯುಂ ವಿನಯಾಮೃತಮರೀಚಿಸಂಛಾದನಾಂಭೋದಸಂತತಿಯುಮುಭಯಲೋಕವಿವೇಕವಿರೋಚನಾಸ್ತಮಯವೇಳೆಯುಂ ಧರ್ಮ್ಮದ್ರುಮಚ್ಛೇದಪರಶುಧಾರೆಯುಂ ವಿಷಯವಿಷದ್ರುಮಕಂದಳಿಯುಮಿಂದ್ರಿಯಲುಬ್ಧಕಸ್ವಚ್ಛಂದವಿಹಾರಗಹನಭೂಮಿಯುಂ ದುರ್ಯ್ಯಶಃಪಾಂಶುಪ್ರಸರಮಹಾವಾತ್ಯೆಯುಮಪ್ಪ,

ಪಾತಕಿಯೊಳ್ ಲಕ್ಷ್ಮಿಯೊಳತಿ-
ಕಾತರಕಾಪುರುಷಗಣನ[೧]ಯೊಳ್[೧] ನೆರೆಯಲ್ಕಿಂ- |
ತೀತನೆ ಬಗೆಗಾಂ ಪುರುತನು-
ಜಾತರ ಬಗೆದುದನೆ ಬಗೆವೆನಳಿಪಂ ಬಗೆಯೆಂ ||೧೨೩||

ವಿಷಧಿಗಳೊಳಗೊಯ್ದದ್ದ್ದಪ
ವಿಷಮರಣಾಂಗಣಮ[೨]ನಿರದೆ[೨] ಪುಗಿಸುವ ನಾನಾ- |
ವಿಷಯಂಗಳಂ [೩]ತೊಡಚ್ಚುವ[೩]
ವಿಷಯಸುಖಂಗಳೊಳ್ ತೊಡರ್ದ್ದು [೪]ಬಿದ್ದಪುದು[೪] ಜಗಂ ||೧೨೪||

[೫]ಇನಿಯವು[೫]ವೊಲೊಳ್ ನಂಜಿನ
[೬]ಪನಿವೊಲ್[೬] ಬಟಿಕೆಯ್ದೆ ಮುಳಿ[೭]ದು ಕೊಂದಿಕ್ಕುವುವಿಂ- |
ತೆನೆಯೆನೆ ವಿಷಯ[೮]ವಿಷಾ[೮]ಸ್ವಾ-
ದನದೊಳ್ ಲಂಪಟರಿದೇಕೆಯೋ ನರಪಶುಗಳ್ ||೧೨೫||

ಕಿವಿ ಮೆಯ್ ಕಣ್ ನಾಲಗೆ ಮೂ-
ಗಿವು ಶಬ್ದಸ್ಪರ್ಶರೂಪರಸಗಂಧಸಮು- |
ದ್ಭವಸುಖದೊಳ್ ತೊಡರ್ಪ್ಪುದೆ ಸುಖ-
ಮವಿಲ್ಲದಂದಿಲ್ಲದಕ್ಕೆತೀಂದ್ರಿಯಮೆ ಸುಖಂ ||೧೨೬||

ಕಿಡುವೊಡಲ ಕಿಡುವ ರಾಜ್ಯದ
ಪಡೆಮಾತುಗೊಳಲ್ಕಮೆನ್ನ ಮೆಯ್ಯಾಗಿದಪುದೀ- |
ಗಡೆ ಜೈನದೀಕ್ಷೆಯಂ ಕೊಂ-
ಡಡಿಗೆಱಗಿಸುವೆಂ ಸಮಸ್ತಸುರಸಮುದಯಮಂ ||೧೨೭||

---

೧-೧ (ಅ) ಯಿಂ. ೨-೨ (ಅ) ನೆಯ್ದೆ. ೩-೩ (ಅ) ತೊಳಲ್ಚುವ. ೪-೪ (ಅ,ಬ) ಬಿದ್ದಿರ್ದುದು. ೫-೫ (ಅ,ಬ) ಇನಿಯವುಮುಂ. ೬-೬ (ಅ,ಬ) ಸವಿಯೊಲ್. ೭ (ಅ,ಬ) ಒ. ೮-೮ (ಅ) ಸುಖಾ.

ಷ್ಪಜಲೌಘಂಗಳಿನಂದು ಬಾಹುಬಲಿ ತನ್ನಿಂದಂ ನಿಧೀಶಂಗೆ ಪಂ
ಕಜರಾಜ್ಯಾಭಿಷವೋತ್ಸವಂ ನೆಗಟ್ಟುದೆಂಬಾಶಂಕೆಯುಂ ಮಾಡಿದಂ ॥೧೩೩॥

ವ॥ ಅಂತು ೧ಭರತೇಶ್ವರನಂ೧ ಬಾಹುಬಲಿಕುಮಾರನೆಂತಾನುಮೊಡಂಬಡಿಸಿ ಮಹಾಬಲಿಯೆಂಬ ನಿಜತನೂಜನನಾತ್ಮೀಯಪದವಿಯೊಳ್೨ ನಿಱಿಸಿ,

ಕ್ಷಿತಿ೩ತಲಮಂ ಗೆಲ್ದಿರ್ದ್ದ೩-
ಪ್ರತಿಮಲ್ಲನನಿಕ್ಕಿ ಮುಯ್ಯನಣಮಾಸದ ದ- ।
ರ್ಪ್ಪಿತಮುರಿತಮಲ್ಲಮುಮಸುಡಿ-
ವ ತಕ್ಕಿನಿಂ ಸಭೆಗೆ ನಡೆವನಿಂಪ್ರಾರ್ಚಿತನಾ ॥೧೩೪॥

ವ॥ ಅಂತು ನಡೆಯೆ,

ಮಂ೪ದಾರವರ್ಷನವಮಕ-
ರಂದರಜೋಗಂಧಬಂಧುವಿವಿಧಪತಾಕಾ- ।
ಸಂದೋಹಾಂದೋಲನಪಟು
ಬಂದಾಱಿಸಿದತ್ತು ಸಮವಸರಣಸಮೀರಂ ॥೧೩೫॥

ದಿವಿಜನಿಕಾಯದ ಜಯಜಯ
ರವದಿಂದಂ ದುರಿತವಿಜಯಮುಮಂ ತನಗೆ ಮಹೋ- ।
ತ್ಸವದಿನಮಱಿಪುತ್ತುಮಿದಿರ್ಗೊ-
ಳ್ವವೊಲೆಸೆದುದು ಸಮವಸರಣದುಂದುಭಿನಿನದಂ ॥೧೩೬॥

ವ॥ ಅಂತು ಭಗವದಾ೫ಸ್ಥಾನಾ೫ರವಿಂದಿನಿಯಂ ರಾಜಹಂಸನಂತಳಂಕರಿಸುತ್ತುಂ ಬಂದು ಭಗವತ್ಪಾದಪೀಠೋಪಕಂಠದೊಳ್ ಸರ್ವಾಂಗೋಪನತನಾಗಿ ನಿಂದಾಗಳ್,

ಪುರುಪರಮೇಶ್ವರ ಮುಖಚಂ-
ದ್ರರಶ್ಮಿಯಿಂ ೬ಪೆಱತು ಚೋದ್ಯಮಿಲ್ಲೆಂ೬ಬಿನೆಗಂ ।
ಕರವದನಹೃದಯಕಮಲದೊ-
ಳಿರಡಲರ್ದುವದೊಂದು ಮುಗಿದುದಾಭುಜಬಲಿಯಾ ॥೧೩೭॥

ವ॥ ಅಂತುನಿಟಿಲತಟಘಟಿತಕರಕುಶೇಶಯಕುಟ್ಮಲನಾಗಿ,

೧-೧ (ಅ) ಭರತೇಶ್ವರಚಕ್ರವರ್ತಿಯುಂ; (ಬ) ಭರತಚಕ್ರೇಶ್ವರಂ. ೨ (ಅ) ಳ್. ೩-೩ (ಚ) ಕ್ಷಿತಿ ತಳದೊಳ್ ನೆಗಟ್ಟಿರ್ದ. ೪ (ಚ) ಮ. ೫-೫ (ಅ,ಬ) ಸ್ಥಾನಸಮನ. ೬-೬ (ಚ) ಚೋದ್ಯಮಿನ್ನವಿಲ್ಲಂ.

ಬೇಡಲೊಳ್ ದೇವರ್[1]ಗೆ ದಯೆಗೆ-
ಯ್ದುದತ್ತ್ರಿ ಯುವರಾಜಪದವಿಯೆನಗೀಗಳುದ- ।
ಭ್ಯುದಯಕರಪ್ರವ್ರಜ್ಯದ
ಪದವಿಯ ಯುವರಾಜಪದವಿಯಂ [2]ದಯೆಗೆಯ್ವಂದು[2] ॥೧೩೮॥

ಗುರುಪದಪದ್ಮಾಂತಿಕದೊಳ್
ಪರಮೇಶ್ವರದೀಕ್ಷೆಯಂ ಮನಂಬಿದೆ ಕೊಂಡೀ-
ಧರೆಯಂ ಪೊಗೞಿಸಿದನಿದೇಂ
ಪುರುಪರಮೇಶ್ವರಸುತರ್ ಪರಿಚ್ಛೇದಿಗಳೋ ॥೧೩೯॥

ವ॥ ಅಂತು ಜೈನದೀಕ್ಷೆಯಂ ಕೈಕೊಂಡು ಗುರುವಿನನುಮತದಿಂ ದ್ವಾದಶಾಂಗಚತುರ್ದ್ದಶಪೂರ್ವ್ವಂಗಳಂ ಕಲ್ತು ತದನುಮತದೊಳ್ ಬೞಿಯಮೇಕವಿಹಾರಿಯಾಗಿ ಸಂವತ್ಸರಾವಧಿವರಂ ಪ್ರತಿಮಾಯೋಗ[3]ದೊಳ್ ನಿಲ್ವೆ[3]

ಅಡಿವಿಡಿದಿಟ್ಟ ಪುತ್ತುಗಳ ನೆತ್ತಿಗಳಿಂ ನಿಮಿರ್ದಿರ್ದ್ದ ಬಳ್ಳಿಗ-
ಳ್ವಿಡಿದು ವಿಷೋರಗಪ್ರತತಿ [4]ನೋೞ್ಪ್ಪುಡಗುರ್ವ್ವಿಸೆ[4] ಸುಯ್ಯ ಸುಯ್ಗಳಿಂ ।
ಕಿಡಿ ಪೊಱಪೊಣ್ಮೆ ಬಾಹುಬಲಿಯೋಗಿಯ ಘೋರತಪೋಮಹಾ[5]ಗ್ನಿಯಿಂ
[6]ಸಿಡಿಸಿಡಿ[6]ದುಣ್ಮುತಿರ್ಪ್ಪ ಕಿಡಿಗಳ್ಗೆಣೆಯಾದುವು ತತ್ಪ್ರದೇಶದೊಳ್ ॥೧೪೦॥

ವಿಜಯಶರಾಸನಗುಣಘಾ-
ತಜಾತ[7]ಕಾಳಿಕೆಯನೆತ್ತ[7]ಮಗ್ಗಳಿಸಿದುದಾ- ।
ಭುಜಬಲಿಯ ಭುಜದ್ವಯದೊಳ್
ಭುಜಂಗನಿಶ್ವಾಸಧೂಮವೇಣೀನಿಕರಂ ॥೧೪೧॥

ಬಳೆದ ಜಡೆ ನಿಮಿರ್ದ ಬಳ್ಳಿಗ-
ಳೊಳೆ ಪೆಣೆದು ವಿಷೋರ[8]ಗಾನನಾನಳನಿಂದಂ[8] ।
ಮಿಳಿರ್ದುವು ಮುನಿಪಧ್ಯಾನಾ-
ನಳನಿರ್ಯ್ಯದ್ಧೂಮವೇಣಿಕಾನಿಕರದ ವೋಲ್ ॥೧೪೨॥

ಪರಮಮುನಿತನುವನಡರ್ವ್ವಡೆ[9]
ಸುರದ್ರುಮಂಗೆತ್ತ ಯುವತಿ ರೂಪದಿನೆಂವಾ- ।

೧ (ಅ) ರ್. ೨-೨ (ಚ) ದಯೆಗೆಯ್ಯಿಸಿಂ. ೩-೩ (ಅ) ದೊಳಿರೆ. ೪-೪ (ಅ) ನೋೞ್ಪುಡುಗುರ್ವ್ವಿಸೆ; (ಬ) ನೋೞ್ಪ್ಪಡಗುರ್ವ್ವಿಸೆ. ೫ (ಅ) ಯಾ. ೬-೬ (ಚ) ಸುಡೆಸುೞಿ ೭-೭ (ಅ) ಕಾಳಿಕೆಯುವೆತ್ತ. ೮-೮ (ಚ) ಗಾನಳಾರ್ಚಿಗಳಿಂದಂ. ೯ (ಚ) ದು.

ಡರದಿಂ ಬಿಡಿಸಿವರೆನಘನ-
ನಿರದಡರ್ಪ ಲತಾಪ್ರತಾನಮಂ ಖೇಚರಿಯರ್ ||೧೪೩||

ವ|| ಅಂತುಗ್ರೋಗ್ರ ತಪದೊಳಮಾಬಾಹುಬಲಿಮುನೀಂ[೧]ದ್ರಂಗೆ[೧] ಕೇವಲ-ಜ್ಞಾನಾವಾಪ್ತಿಯಾಗದುದರ್ಕೆ ಭರತೇಶ್ವರಂ ವಿಸ್ಮಯಮುತ್ತು ಪೋಗಿ ವೃಷಭ-ಸಾಥನಂ ಬೆಸಗೊಳೆ ತಪದೊಳ್ ನಿಂದುಂ ನಿನ್ನ ನೆಲದೊಳ್ ನಿಂದೆವೆಂಬ ಮಾನಕ-ಷಾಯಮುವರ್ಗಿಸ್ನಂ ಪತ್ತುವಿಟ್ಟುದಲ್ತದಱಿಂ ಕೇವಲ[೨]ಜ್ಞಾನೋತ್ಪತ್ತಿ[೨]ಯಾಗ-ದಿರ್ದುದು. ನೀಂ ಪೋಗಿ ಕಾಲ್ಗೆಱಗಲೊ[೩]ಡಂ ಕೇವಲ ಜ್ಞಾನಮಕ್ಕು[೩]ಮೆಂದು ಬೆಸಸಿದೊಡೆ ಲಬ್ಧೋಪದೇಶನಾಗಿ ವಿವಿಧಾರ್ಚನಾಸಮಗ್ರಪರಿಜನಪರಿ[೪]ವೃತಂ[೪] ರಾಜರಾಜಂ ಮುನಿರಾಜಚರಣಾಂಭೋಜದೊಳ್ ಬಂದೆಱಗಿ [೫]ವಿವಿಧಾರ್ಚನೆಗ-ಳಿಂದಮರ್ಚಿಸಿ[೫],

ನಿನ್ನ ಪಡಗೊಟ್ಟಿಳೆಯಿಂ ನಾ-
ನೋನ್ನತ ನೀನೀಯೆ ಬಂದುದೆನಗಿದನೆನತೆಂ- |
ದೇನ್ನಿನಗೆ ಬಗೆಯಲಪ್ಪುದೆ
[೬]ನಿನ್ನನೆ[೬] ನೀಂ ಬಗೆಯ ಬಗೆಯದಿರ್ ಪೆಱಪೆಱತಂ ||೧೪೪||

ಎನಲೊಡಮಂತಃಕರಣದೊ-
ಳಿನಿಸಾನುಂ ನಿಂದುದೊಂದು ಮಾನಕಷಾಯಂ |
ಮುನಿಪತಿಗೆ ಪೋಗೆ ಪುಟ್ಟಿದು-
ದನಂತವಸ್ತುಪ್ರಕಾಶಿಕೇವಲಬೋಧಂ ||೧೪೫||

ಆಗಳ್ ದೊರೆಕೊಂಡಿರೆ ದೇ-
ವಾಗಮಮೇಕಾತಪತ್ರಮೆಸೆದಿರೆ ಕರಮಿಂ- |
ಬಾಗಿರೆ ಚಾಮರಯುಗ್ಮಮು-
[೭]ದಾಗಳೆ ನಿಲೆ[೭] ದಿವ್ಯವಿಷ್ಟರಂ ಮಣಿಖಚಿತಂ ||೧೪೬||

ಜಯನಿನದಂ ಸುರದುಂದುಭಿ-
ಚಯನಿನದಂ ಪುಷ್ಪವರ್ಷಮೊರ್ಮ್ಮೆಯೆ ಸಕಲೋ- |
[೮]ರ್ವ್ವಿಯನೆಯ್ದೆ[೮] ಪರ್ವ್ವುತಿರೆ ಚಿ-
ತ್ರೀಯ ಸರಿಯಂತೆಱಗಿ ಪೋದುದಮರಸಮಾಜಂ ||೧೪೭||

೧–೧ (ಅ) ದ್ರಂ. ೨–೨ (ಅ) ಜ್ಞಾನಾವಾಪ್ತಿ. ೩–೩ (ಬ) ಡಮಕ್ಕು. ೪–೪ (ಅ) ವೃತನಾಗಿ ಪೋಗಿ. ೫–೫ (ಆ,ಬ) ಪ್ರತಿಗಳಲ್ಲಿಲ್ಲ. ೬–೬ (ಅ) ನಿನ್ನಂ. ೭–೭ (ಆ,ಬ) ದಾ-ಗಳುಮಿರೆ. ೮–೮ (ಆ,ಬ) ರ್ವ್ವಿಯುಮಂ.

ವ|| ಅಂತು ಬಾಹುಬಲಿಕೇವಲಿಯುಂ ನಾನಾದೇಶವಿಹಾರದೊಳ್ ಭವ್ಯ-[1]ಜನಪದಂ[1] ನಿಜವಚೋಮೃತದಿಂ [2]ಭವ್ಯಜನ[2]ಸಾರ್ಥಮಂ ತಣಿಪಲೆಂದು ಬಂದು ಕೈಲಾಸಶೈಲದೊಳಾದಿದೇವರ[3] ಸನ್ನಿಧಿಯೊಳಿರ್ದ್ದರಂ ಇ[4]ಂತು ಭರತೇಶ್ವರ-ಸುಮಹಾಮುನೀಶ್ವರನಂ ಪೂಜಿಸಿ,

ಪೊಸಗಂ ತೇಜಕ್ಕೆ ನೊಂದೋಜೆ[5]ಗಮುಚಿತಮಾಪಾಳಕರ್ ಬೆಚ್ಚಿ
ಬಾಯ್ವೋ-
ಳಸಿ [6]ಹೈಮಕ್ಷ್ಮಾಧರೇಂದ್ರಂ[6]ಬರೆಗಮಖಿಲಷಟ್ಖಂಡಭೂಭಾಗಮಂ ಷ-
ಷ್ಟಿಸಹಸ್ರಾಬ್ದಂಗಳಿಂ ದಿಗ್ವಿಜಯ[7]ಮೊಳೊಗೆದಾನಂದ ಭೇರೀರವಂ ಘೂ-
ರ್ಣ್ಣಿಸೆ ಸಾಕೇತಕ್ಕೆ ವಂದಂ ಸುಕವಿಜನಮನೋಮಾನಸೋತ್ತಂಸಹಂಸಂ||೧೪೭||

ವ|| ಅಂತು ನಿರ್ವ್ವರ್ತ್ತಿತಾಶೇಷದಿಗ್ವಿಜಯಸಾಹಸಾಶ್ಚರ್ಯ್ಯಾವಲೋಕನನಿರತಪುರಜನಾಶೀರ್ವ್ವಾದಶೇಷಾಕ್ಷತಂಗಳ ನಾಂತು[8],

ವಸಧಿಧ್ವಾನಮನೊಡ್ಡಿಸುತ್ತಿರೆ ನದತ್ಶಂಖಭೇರಭೇರೀಬೃಹ-
ದ್ಧ್ವನಿ ನಾನಾವಿಧಮಂಗಳಾನಕರವಂ ಕೈಗಣ್ಮೆ ಸಂಛನ್ನವಂ-
ದನಮಾಲಾಲಲಿತಾಂಶುಕಧ್ವಜವಿಲಾಸಾಕೀರ್ಣ್ಣಮಂ ಮೆಚ್ಚಿ ಪೊ-
ಕ್ಕನಯೋಧ್ಯಾಪುರಮಂ ಮಹಾವಿಭವದಿಂ ಸಂಸಾರಸಾರೋದಯಂ ||೧೪೮||

ಗ|| ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ-
ಚಂದ್ರನಾಚ್ಚಂದ್ರಿಕಾಪ್ರಸರಪ್ರಸಾದೋದೀರ್ಣ್ಣಸೂಕ್ತಿ-
ಕಲ್ಲೋಲಮಾಲಾಕೀರ್ಣ್ಣಕವಿತಾಗುಣಾರ್ಣ್ಣವ-
ಪ್ರಣೀತಮಪ್ಪಾದಿಪುರಾಣದೊಳ್
ದಿಗ್ವಿಜಯಧ್ವಜಾರೋಹಣಂ
ಚತುರ್ದಶಾಶ್ವಾಸಂ
ಸಂಪೂರ್ಣಂ

---

೧-೧ (ಅ) ಜನಂಗಳಂ. ೨-೨ (ಅ,ಬ) ಭವ್ಯ. ೩ (ಅ) ನ. ೪ (ಅ) ಅ. ೫ (ಅ) ಲೆ. ೬-೬ (ಅ) ಹೈಮ್ಯಕ್ಷ್ಮಾಧರೇಂದ್ರಂ; (ಬ) ಹಮ್ಯಾರ್ಕ್ಷ್ಮಾಚಲೇಂದ್ರಂ. ೭-೭ (ಅ) ದೆ ಕಳೆದಾನಂದ; (ಬ) ದೊಳೆಸೆದಾನಂದ. ೮-೮ (ಅ) ನಾಂತುಕೊಂಡು.

# ಪಂಚದಶಾಶ್ವಾಸಂ

ಶ್ರೀದಯಿತಂ ಮನುಕುಲಗಗ-
ನಾದಿತ್ಯಂ ಹಿಮಮನೆಯ್ದೆ ಷಟ್ಖಂಡಮುಮಂ ।
ಸಾಧಿಸಿ ಜಿತದಿಙ್ಮಂಡಲ-
ನಾದ ಮಹಾತ್ಮಂ ಸರಸ್ವತೀಮಣಿಹಾರಂ ||೧||

ವ|| ತದನಂತರಮೆ [1]ಮಾಗಧಾಮರವರತನು[1] ಪ್ರಭಾಸಾಮರವಿಜಯಾರ್ಧಕುಮಾರಕೃತಮಾಲಾನಾಟ್ಯ[2] ಮಾಲಾಹಿಮವತ್ಕುಮಾರದಿವಿಜರಿಂದಂ ಗಂಗಾಸಿಂಧುದೇವೀಪ್ರಮುಖದೇವೀನಿವಹದಿಂದಂ ಲವಣಜಲಧಿಗಂಗಾಸಿಂಧುನದ್ಯಾದಿತೀರ್ಥಜಲಪರಿಪೂರಿತವಿವಿಧೌಷಧಿರತ್ನಗರ್ಭಮಂಗಲಭೃಂಗಾರಜಲಂಗ[3]ಳೊಳ್[3] ಭಿಷಿಕ್ತನಾದಾಗಳ್,

ಗಣಬದ್ಧಾಮರಖೇಚರ-
ಗಣಭೂಚರ[4]ನಿಕರ[4] ಮಾಗಧಾದ್ಯಮರಶಿರೋ- ।
ಮಣಿರುಚಿ ಪುದಿಯೆಯುಮಿನಿಸುಂ
ಮಣಿಯದೆ ಬೆಳಗಿದುವು ಭರತನೃಪನಖರುಚಿಗಳ್ ||೨||

ವ|| ಅಂತು ಚಕ್ರಾಭಿಷೇಕೋತ್ಸವಾನಂತರಂ,

ಮನುಕುಲತಿಲಕಂ ವೃಷಭಾ-
ಗ್ರನಂದನಂ ರಾಜರಾಜನಧಿರಾಜಂ ಚ- ।
ಕ್ರನಿಧೀಶನಾದಿಭೂಭುಜ-
ನೆನೆ ನೆಗಟ್ದಂ ಭರತಚಕ್ರಿ ವಿಶ್ವಂಭರೆಯೊಳ್ ||೩||

ವ|| ಅಂತು ಷಟ್ಖಂಡ ಭರತಮಂಡಲಮನುಂಡಿಗೆಸಾಧ್ಯಂಮಾಡಿ ಪದಿನೆಂಟುಕೋಟಿ ಜಾತ್ಯಶ್ವಂಗಳುಮೆಂಭತ್ತುನಾಲ್ಕುಲಕ್ಕೆ ಗಂಧ[5]ಸಿಂಧುರಂ[5]ಗಳುಮೆಂಭತ್ತುನಾ[6]ಲ್ಕುಲಕ್ಕೆ[6] ರಥಂಗಳುಮೆಂಭತ್ತುನಾಲ್ಕುಕೋಟಿವೀರಭಟನಿಕರಮುಂ ಮೂವತ್ತಿಚ್ಛಾಸಿರಮಕುಟಬದ್ಧರುಂ ಮೂವತ್ತಿಚ್ಛಾಸಿರ್ವರ್ ಮೆಯ್ಗಾಪಿನ ಗಣಬದ್ಧದೇವರುಂ ಮೂವತ್ತಿಚ್ಛಾಸಿರ್ವರುಭಯಕುಲವಿಶುದ್ಧಮಕುಟ[7]ಬದ್ಧ[7]ತನೂಜೆಯರಪ್ಪ [8]ಕುಲಲಲನೆಯರುಂ[8] ಮೂವತ್ತಿಚ್ಛಾಸಿರ್ವರ್ ಪ್ರತ್ಯಂತರಾಜತನೂಜೆಯರುಂ ಮೂವತ್ತಿಚ್ಛಾಸಿರ್ವರವರೋಧವಧೂನಿವಹಮುಮಂತು ತೊಂಭತ್ತಾಱುಸಾಸಿರಮಂತಃ[9]ಪುರಮುಂ[9], ಮೂವತ್ತಿ—

---

೧-೧ (ಅ) ಮಾಗಧವರತನು; (ಜ) ಮಾಗಧಾಮರತನು. ೨ (ಜ) ದ್ಯ. ೩-೩ (ಅ) ಳಿಂದಮು. ೪-೪ (ಅ) ನಿಚಯ. ೫-೫ (ಅ) ಹಸ್ತಿ; (ಜ) ಸಿಂಧುರಂಗಳಪ್ಪ ಭದ್ರಹಸ್ತಿ. ೬-೬ (ಜ) ನಾಲ್ಕುಲಕ್ಕೆ ಸಮರಸನ್ನಾಹ ಯೋಗ್ಯಂಗಳಪ್ಪ. ೭-೭ (ಜ) ಬದ್ಧರ. ೮-೮ (ಅ) ಕುಲಾಂಗನೆಯರುಂ. ೯-೯ (ಜ) ಪುರಮುಂ ಮೂಱುಕೋಟಿಯುವತಿಬಂಧುವರ್ಗಮುಂ.

ಚ್ಛಾ[೧]ಸಿರಿನಿರಂತರ[೧]ಸಂಗೀತಕಸಂಗತನಾಟ್ಯಶಾಲೆಗಳುಂ, ಮತ್ತಂ ಲೌಕಿಕ-[೨]ಶಾಸ್ತ್ರನಿವರ್ತನಂ[೨] ಬೆಳಸು ಪಲವುಂ ತೆಱದ ಪಱೆಗಳುಂ, ಷಟ್ತ್ರಿಂಶತ್ಸಾಧನ-ದ್ರವ್ಯಂಗಳುಂ, ದಿವ್ಯರಮ್ಯಾಸನಶಯನಾಸನಂಗಳುಂ, ಶಾಲಿವ್ರೀಹಿಯವಗೋ-ಧೂಮಾದಿಧಾನ್ಯನಿಚಯಮುಮೊಡನನೇಕಧಾನ್ಯ[೩]ದ್ರವ್ಯಂ[೩]ಗಳುಂ, ಕ್ಷೌಮದುಕೂ-ಲಾದಿವಿವಿಧವಸನನಿಧಿಪಾತ್ರ ಸಂಚಾರಿಗಳುಂ, ನೀತಿ[೪]ಶಾಸ್ತ್ರಂಗಳೊ[೪]ಡನನೇ-ಕಶಾಸ್ತ್ರಂಗಳುಂ, ಸ್ತ್ರೀಪುರುಷಯೋಗ್ಯಮಣಿಮುಕ್ತಾಭರಣಂಗಳುಂ, ಚಕ್ರವರ್ತ್ತಿ-ಯಾಜ್ಞೆಯಿಂದಂ ನೀನಿಲ್ಲಿಂ ಒಂದು ಕೋಟ್ಯಂ [೫]ತವದ[೫] ಕನಕರಾಶಿಯುಂ, ಮರಕತಪದ್ಮರಾಗವಜ್ರವೈಡೂರ್ಯಮುಕ್ತಾಫಲಾದಿ[೬]ನವರತ್ನಂ[೬]ಗಳುಮನುಕ್ರ-ಮದಿಂದಂ ಶ್ರೀಗೃಹದೊಳ್ ಪುಟ್ಟಿದ ಕಾಲಮಹಾಕಾಲನೈಸರ್ಪ್ಪಪಾಂಡುಕಪದ್ಮ-ಪಿಂಗಳಮಾಣವಕಶಂಖಸರ್ವ್ವರತ್ನಂ[೭]ಗಳೆಂಬ ನವನಿಧಿಗಳುಮಾ[೭] [೮]ಯುಧಾಗಾರ-ದೊಳ್ ಪು[೮]ಟ್ಟಿದ ಚಕ್ರಾಸಿದಂಡಚ್ಛತ್ರರತ್ನಂಗಳುಂ, ಶ್ರೀಗೃಹದೊಳ್ ಪುಟ್ಟಿದ ಸಿ-ಥಿಮಣಿಚರ್ಮ್ಮಕಾಕಿಣೀರತ್ನಂಗಳುಂ, ವಿಜಯಾರ್ಧಪರ್ವ್ವತದೊಳ್ ಪುಟ್ಟಿದ ಗಜಾಶ್ವಸ್ತ್ರೀರತ್ನಂಗಳುಂ, ಸಾಕೇತನಗರದೊಳ್ ಪುಟ್ಟಿದ ಸೇನಾನಾಯಕಪು—ರೋಹಿತಗೃಹಪತಿತಕ್ಷಕ[೯]ರತ್ನಂಗಳುಮಂತು[೯] ಪದಿನಾಲ್ಕುಂ ತೆಱದ ಜೀವಾಜೀವರತ್ನಂಗಳುಂ ಕ್ಷಿತಿಸಾಗರಮೆಂಬ ಪ್ರಾಕಾರಮುಮಂ ಸರ್ವ್ವತೋಭದ್ರಮೆಂಬ ಗೋಪುರಮುಮಂ ಕೂಡಿದ ವೈಜಯಂತಿಯೆಂಬ ದಿವ್ಯಪ್ರಾಸಾದಮುಂ, ದಿಕ್ಸ್ವಸ್ತಿಕ-ಮೆಂಬ ಸಭಾಭೂಮಿಯುಂ, ನಂದ್ಯಾವರ್ತ್ತಮೆಂಬ ಶಿಬಿರನಿವೇಶಮುಂ, ಗಿರಿಕೂ-ಟಮೆಂಬ ದಿಗವಲೋಕನಗೃಹಮುಂ, ವರ್ಧಮಾನಮೆಂಬೀಕ್ಷಣಪ್ರಿಯಪ್ರೇಕ್ಷಾ-ಗೃಹಮುಂ, ಮಹಾಘರ್ಮ್ಮಾಂತಮೆಂಬ ಧಾರಾಗೃಹಮುಂ, ಗೃಹಕೂಟಮೆಂಬ ವರ್ಷಾವಾಸಮುಂ, ಪುಷ್ಕಲಾ[೧೦]ವತಿಯೆಂಬ ಶಯನಸದನಮುಂ, ಕುಬೇರಕಾಂತಮೆಂಬ ತವದ ಭಂಡಾರಮುಂ, [೧೧]ವಸುಧಾರಕ[೧೧]ಮೆಂಬ ಕೋಷ್ಠಾ[೧೨]ಗಾರ—ಮುಂ, ಜೀಮೂತಮೆಂಬ ಮಜ್ಜನಗೃಹಮುಮವತಂಸಿಕೆಯೆಂಬ ರತ್ನಮಾಲೆಯುಂ [೧೩]ದೇವರಮ್ಯ[೧೩]ಮೆಂಬ ಪಟಕುಟಿಯುಂ ಸಿಂಹವಿಧೃತಮಪ್ಪ ಸಿಂಹವಾಹಿನಿ-ಯೆಂಬ ಮೃದುಶಯ್ಯೆಯುಂ [೧೪]ಅನುತ್ತರೆಯೆಂಬ[೧೪] ಸಿಂಹಾಸನಮುಂ, ಯಕ್ಷ-

---

೧-೧ (ಚ) ಸಿರಿ. ೨-೨ (ಅ) ಶಾಸ್ತ್ರವರ್ತ್ತನನಿವರ್ತ್ತನಂ; (ಬ) ಸೂತ್ರವರ್ತ್ತನಂ. ೩-೩ (ಚ) ಸದನ. ೪-೪ (ಅ,ಬ) ಶಾಸ್ತ್ರದೊ. ೫-೫ (ಅ) ತವಯುವದ. ೬-೬ (ಅ,ಬ) ರತ್ನ. ೭-೭ (ಅ) ಮೆಂಬೊಂಭತ್ತು ನಿಧಿಗಳು. ೮-೮ (ಅ,ಬ) ಯುಧಶಾಲೆಯೊಳ್ ಪು. ೯-೯ (ಅ) ರತ್ನಂಗಳುಂ ಬೆರಸಂತು. ೧೦ (ಚ) ಳಾ. ೧೧-೧೧ (ಅ) ವಸುಂಧಾರಿಕ. ೧೨ (ಚ) ಶಾ. ೧೩-೧೩ (ಬ) ದೇವರಮಣ. ೧೪-೧೪ (ಚ) ಮೇರುಕಂಠೋಪಮುಮೆಂಬ

ಕರವಿಧೂಯಮಾನಪುಷ್ಪಸುಪವುಮಂಗಳವೆಂಬ ಮೂವತ್ತೆರಡು ಚಾಮರಂಗಳುಂ, ಸೂರ್ಯಪ್ರಭವೆಂಬಾತಪತ್ರಮುಂ, ವಿದ್ಯುತ್ಪ್ರ[೧]ಭಂಗಳೆಂಬ[೧] ಮಣಿ[೨]ಕುಂಡಲಂಗಳುಂ[೨], ವಿಷಮೋಚಿಕೆಗಳೆಂಬ ಪಾವುಗೆಗಳುಮಭೇದ್ಯವೆಂಬ ಕವಚಮುಮಜಿತಂಜಯವೆಂಬ ರತ್ನರಥಮುಂ, ವಜ್ರಕಾಂಡವೆಂಬ ಬಿಲ್ಲುಮಮೋಘವೆಂಬ ಶರನಿಕರಮುಂ, ವಜ್ರತುಂ[೩]ಡವೆಂಬ ಶಕ್ತಿಯುಂ, ಸಿಂಹಾಟಕವೆಂಬ ಕೊಂ[೪]ತಮುಂ ಲೋಹವಾಹಿನಿಯೆಂಬ ಸುರಿಗೆಯುಂ, ಮನೋವೇಗವೆಂಬ ಕಣೆಯುಂ[೪], ಸೌನಂದಕವೆಂಬ ಬಾಳುಂ, ಭೂತಮುಖವೆಂಬ ಖೇಟಕಮುಂ, ಸುದರ್ಶನವೆಂಬ ಚಕ್ರರತ್ನಮುಂ ಚೂಡಾಮಣಿಯೆಂಬ ಮಣಿರತ್ನಮುಂ, ಚಿಂತಾಮಣಿಯೆಂಬ ಕಾಕಿಣೀರತ್ನಮುಮಯೋಧ್ಯನೆಂಬ ದಂಡನಾಯಕನುಂ, ಬುದ್ಧಿಸಾಗರನೆಂಬ ಪುರೋಹಿತನುಂ, ಕಾಮವೃಷ್ಟಿಯೆಂಬ ಭಂಡಾರಿಗನುಂ, ಭದ್ರಮುಖನೆಂಬ ತಕ್ಷಕಪತಿಯುಂ, ವಿಜಯಾರ್ಧಪರ್ವತವೆಂಬ ಯಾನ[೫]ಹಸ್ತಿಯುಂ, ಪವನಂಜಯವೆಂಬ ತುರಗರತ್ನಮುಂ, ಸುಭದ್ರೆಯೆಂಬ ಸ್ತ್ರೀರತ್ನಮುಂ, ದ್ವಾದಶಯೋಜನಸಂಸರ್ಪನಿ[೬]ನಾದಂಗಳಪ್ಪಾನಂದಿಗಳೆಂಬ ಪನ್ನೆರಡುಂ ಮಹಾಭೇರಿಗಳುಂ, ವಿಜಯಘೋಷಂಗಳೆಂಬ ಪನ್ನೆರಡುಂ ಪಟಹಂಗಳುಂ, ಪುಣ್ಯಾಬ್ಧಿಸಂಭವಂಗಳಾಗಿ ಗಂಭೀರಾವರ್ತಂ[೭]ಗಳೆಂ[೭]ಬಿರ್ಪತ್ತುನಾಲ್ಕುಂ ಶಂಖಂಗಳುಂ, ನಾಲ್ವತ್ತೆಂಟುಕೋಟಿ ಪತಾಕೆಗಳುಂ, ತಟಿದ್ವಲಯವಿಲಸಿತಂಗಳಾಗಿ ನಿಜಪ್ರಕೋಷ್ಠನಿಷ್ಠಿತಂಗಳಪ್ಪ ವೀರಾಂಗದಂಗಳೆಂಬ ಕಟಕಂಗಳುಂ, ಮಹಾಕಲ್ಯಾಣಕಾರವೆಂಬ ದಿವ್ಯಹಾರಮುಮಮೃತಗರ್ಭಂಗಳೆಂಬ[೮]ಭಕ್ಷ್ಯರೂಪಂಗಳುಮ[೮]ಮೃತ[೯]ಕಲ್ಪವೆಂಬ[೯] [೧೦]ಸ್ವಾದ್ಯಮುಂ[೧೦] [೧೧]ಮಮೃತ ರಸಾಯನವೆಂಬ[೧೧] ಪಾನಮುಂ, ಮತ್ತಂ ಮೂವತ್ತಿರ್ಚ್ಛಾಸಿರವಿಷಯಂಗಳುಮೆಪ್ಪತ್ತಿರ್ಚ್ಛಾಸಿರಪೊೞಲ್ಗಳುಂ, ತೊಂಭತ್ತಾಱುಕೋಟಿ ಗ್ರಾಮಂಗಳುಂ, ತೊಂಭತ್ತೈಸಾಸಿರದ್ರೋಣಾಮುಖಂಗಳುಂ, ನಾಲ್ವತ್ತೆಣ್ಚಾಸಿರ ಪಟ್ಟಣಂಗಳುಂ, ಪದಿನಾಱು[೧೨]ಸಾಸಿರ[೧೨] ಖೇಡಂಗಳುಂ [೧೩]ಪದಿನಾಱುಸಾಸಿರ[೧೩] ಸಂವಾಹನಂಗಳುಮೈವತ್ತಾಱಂತರದ್ವೀಪಂಗಳುಮೇಕಕೋಟಿಪ್ರಮಾಣಸ್ಥಾಯಿ[೧೪]ಗಳುಂ, ಶತಸಹಸ್ರಕೋಟಿ[೧೫]ಹಲಂಗಳುಂ[೧೫] ಮೂರುಕೋಟಿ ಗೋಮಂಡಳಮುಂ [೧೬]ಪ್ರತ್ಯಂತನಿವಾಸಿ[೧೬]ಗಳಪ್ಪೇ[೧೭]ೞ್ನೂಱು ಕುಕ್ಷಿ[೧೭]ನಿವಾಸಿಗಳು[೧೮]ಮೆಪ್ಪತ್ತಿರ್ಚ್ಛಾಸಿರ[೧೮]ದುರ್ಗಾಟವಿಗಳುಂ

೧-೧ (ಚ) ಭವೆಂಬ. ೨-೨ (ಚ) ಕುಂಡಲಯುಗಳಂಗಳುಂ. ೩ (ಚ) ಡಂ. ೪ (ಚ) ಕುಂ. ೫ (ಆ,ಬ) ಗ. ೬ (ಚ) ನ್ನಿ. ೭-೭ (ಅ) ಮೆಂ. ೮-೮ (ಚ) ಸದ್ಯೋಪ್ರತಮುಂ ಅ. ೯-೯ (ಚ) ಪರಿಮಳಾಮೋದ. ೧೦-೧೦ (ಚ) ದಧಿಯುಂ ಅ. ೧೧-೧೧ (ಆ,ಬ) ಮಮೃತಮೆಂಬ. ೧೨-೧೨ (ಅ) ಸಹಸ್ರ. ೧೩-೧೩ (ಅ) ಪದಿನೆಣ್ಚಾಸಿರ; (ಬ) ಪದಿನಾಲ್ಚಾಸಿರ. ೧೪ (ಅ,ಬ) ಲಿ. ೧೫-೧೫ (ಆII,ಬ) ಹ್ರದಂಗಳುಂ. ೧೬-೧೬ (ಚ) ಪ್ರತ್ಯಂಗವಾಸಿ. ೧೭-೧೭ (ಅ) ಏೞ್ನೂಱುಕೋಟಿಕುಕ್ಷಿ. ೧೮-೧೮ (ಅ) ಮಿಪ್ಪತ್ತೆಣ್ಚಾಸಿರ.

ಧರಣೀಶಂ ಕೆವಱಿಸಿದಂ
ನಿರಂತರಂ ರಾಜಗೇಹದೊಳಗಂ ಪೊಱಗಂ ||೭||

ಕೆವಱಿಸಿ ಬೞಿಯುಂ ಬರವೇ-
ೞ್ಪುದುಮಲ್ಲಿ ಕೆಲರ್ ವಿವೇಕರಹಿತರ್ [೧]ಬಂದೊರ್[೧] |
ಮೊದಲೊಳೆ ಪೊಕ್ಕರ್ ವ್ರತಮಿ-
ಲ್ಲದಿವರ್ ತುೞಿಯುತ್ತುಮಂಕುರಂಗಳನಾಗಳ್ ||೮||

ಸಾವದ್ಯಭೀರುಗಳ್ ಕೆಲ-
ರಾವಿವಿಧಫಲಪ್ರಸೂನಪಲ್ಲವತತಿಯಿಂ |
ತೀವಿದ ರಾಜಾಂಗಣಮನಿ-
ಳಾವಂದ್ಯರ್ ಮೆಟ್ಟಲೊಲ್ಲದಲ್ಲಿಯೆ ನಿಂದರ್ ||೯||

ನಿಲಲೊಡಮನಿಬರುಮಂ ಭೂ-
ತಲಪತಿ ಬೞಿಯಟ್ಟಿ ಬರಿಸೆ ಪೆಱತೊಂದೆಡೆಯೊಳ್ |
ಮಲರಹಿತರ್ ಬಂದು ಧರಾ-
ಲಲನಾಧೀಶಂಗೆ ವಿನತಮಸ್ತಕರಾದರ್ ||೧೦||

ವ|| ಆಗಳ್ ಭರತೇಶ್ವರಚಕ್ರವರ್ತ್ತಿ ನೀಮಿನಿಬರುಮಿವರ[೨] ಬಂದ ಮಾ-ರ್ಗ್ಗದೊಳ್[೩] ಬಾರದೆ ಪೆಱತೊಂದು ಮಾರ್ಗ್ಗದೊ[೪]ಳೇಕೆ ಬಂದಿರೆಂದು[೪]ಬೆಸಗೊಳೆ,

ಫಳಕುಸುಮಪ್ರವಾಳಹರಿತಾಂಕುರರಾಜಿಯೊಳ[೫]ಲ್ಲಿ ಜೀವಸಂ-
ಕುಳಮಳವಲ್ಲದುಂಟವಱಿನಾಗದು ಪರ್ವ್ವದಿನಂಗಳೊಳ್ ವ್ರತಂ- |
ಗಳನೊಡಗೂಡಿ ನಿಂದೆಮಗೆ ಮೆಟ್ಟಲಿಳೇಶ್ವರ ಕೇಳ್ದವಾವಿದಂ
ತಿಳಿಯೆ ಗಣಾಧಿಪರ್ ಬೆಸಸೆ ಮುಂಪ್ರಜಿನೇಂದ್ರಸಭಾಂತರಾಳದೊಳ್ ||೧೧||

ವ|| ಅದಱಿಂ ಪ್ರವಾಳಪತ್ರಪುಷ್ಪಾಂಕುರಂಗಳಿಂದಂ ಸಂಕೀರ್ಣ್ಣಮಪ್ಪ ರಾಜಾಂಗಣಮಂ ಮೆಟ್ಟದೆ [೬]ಪೆಱತೊಂದು[೬] ಬಟ್ಟೆಯೊಳ್ ಬಂದೆವೆಂಬುದುಂ ನಾ-ಭಿನಂದನನಂದನನವರ ದೃಢವ್ರತಕ್ಕೆ ಮೆಚ್ಚಿ ದಾನಸನ್ಮಾನ[೭]ಯೋಗ್ಯರಪ್ಪರೆಂದು[೭] ಪದ್ಮನಿಧಿಯೆಂಬ ನಿಧಿಯಂ ತರಿಸಿ [೮]ತಪನೀಯ[೮]ಸೂತ್ರದೊಳೇಕಾ[೯]ದ್ಯೇಕೋತ್ತರದಶಾಂತ[೯]ಬರಮ[೧೦]ವರವ[೧೦] ನೆಲೆಗಳೊಳ್ ಬ್ರಹ್ಮಸೂತ್ರಾಭಿಧಾನಯಜ್ಞೋ-ಪವೀತದಿಂ ಪವಿತ್ರ[೧೧]ಗಾತ್ರರ್ ಮಾಡಿ[೧೧],

೧-೧ (ಚ) ದರ್. ೨ (ಚ) ರ್. ೩ (ಚ) ಳ್. ೪-೪ (ಅ) ಳೆ ಬಂದ ಕಾರಣಮೇ-ನೆಂದು. ೫ (ಅ,ಬ) ಳಿ. ೬-೬ (ಅ,ಬ) ಪೆಱತು. ೭-೭ (ಅ) ಯೋಗ್ಯರೆಂದು; (ಬ) ಯೋಗ್ಯರಿವರೆಂದು. ೮-೮ (ಅ) ಪದ್ಮ. ೯-೯ (ಅ) ದ್ಯೇಕಾದಶಾಂತಂ; (ಬ) ಳೇಕಾದಶಾಂ; ೧೦-೧೦ (ಅ,ಬ) ವರ. ೧೧-೧೧ (ಅ) ಗಾತ್ರಂ ಮಾಡಿ.

ರತ್ನಾದಿಗಳಂ ಕುಡುವ ಸಮದತ್ತಿಯುಂ ಪರಮತಪಶ್ಚರಣನಿರತಯತಿಸಮಿತಿಗೆಲ್ಲಂ ಪ್ರತಿಗ್ರಹಾದಿಪುರಸ್ಸರಂ ನಿರವದ್ಯಾಹಾರಾದಿವಿತರಣರೂಪಪಾತ್ರದತ್ತಿಯುಂ ನಿಜಾನ್ವಯೋದ್ಧರಣಸಮರ್ಥನಪ್ಪಗ್ರತನುಭವಂಗಾತ್ಮೀಯಧರ್ಮ್ಮಾರ್ಥಧನಬಂಧುಗಳಂ ಸಮರ್ಪಿಸುವ ಸಕಳದತ್ತಿಯುಂ ಬೆರಸು ಚತುರ್ವಿಧಮಪ್ಪ ದತ್ತಿಯುಮುಪಾಸಕಾಧ್ಯಯನಾಧ್ಯಾಪನಾನಂತರಂ ಸಕಳಶಾಸ್ತ್ರಂಗಳನೋದುವೋದಿಸುವ ನೆನೆವ ಬರೆವ [೧]ಪರಮ[೧]ಸ್ವಾಧ್ಯಾಯಮುಮಂ ಪಂಚಾಣುವ್ರತಾದಿಪ್ರವರ್ತ್ತನಸ್ವಭಾವಸಂಯಮಮುಮನಶನವೃತ್ತ್ಯಾದಿತಪೋನುಷ್ಠಾನಮುಮಂ ಬೆರಸಾರ್ಯ್ಯಷಟ್ಕರ್ಮ್ಮಂಗಳಂ ನಿಮಗಿವು ಕುಲಾಚಾರಂಗಳೆಂದಱಿಯೆ ಪೇೞ್ದು ಕೈಕೊಳಿಸಿ,

ಅಱುಂ ವೃತ್ತಿಗಳಿನಿವಂ
ಮಿಱುವರಲ್ಲರ್ ದ್ವಿಜನ್ಮರೀವೃತ್ತಿಗಳಿಂ ।
ಬೇಱಾದವರ್ ದ್ವಿಜರುಮಂತೇಂ
ಬೇಱುಂಟೆ ಮನುಷ್ಯಜಾತಿ ತಾನೊಂದೆ ವಲಂ ॥೧೪॥

ವ್ರತಸಂಸ್ಕಾರದಿನಾದವರ್
ವಿತತಗುಣರ್ ಬ್ರಾಹ್ಮಣರ್ ಕ್ರಿಯಾಸಂತತಿಸಂ- ।
ಯುತರುಚಿತಸತ್ಕ್ರಿಯಾವಿರ-
ಹಿತನಾತಂ ನಾಮಧಾರಕಂ ದ್ವಿಜನಲ್ಲಂ ॥೧೫॥

ವ॥ ಎಂದವರನಾತ್ಮೀಯಾನ್ವಯೋಚಿತವ್ರತಂಗಳೊಳ್ ದೃಢವ್ರತರಂ ಮಾಡಿ ಮತ್ತಂ ದ್ವಾದಶಾಂ[೨]ಗದೊಳ್[೨] ಪೇೞ್ದ ದಾನಪ್ರೀತಿಸುಪ್ರೀತಿಧೃತಿಮೋಪ್ರಿಯೋದ್ಭವನಾಮಕರ್ಮ್ಮಬಹಿರ್ಯ್ಯಾನನಿಷದ್ಯಾನ್ನ[೩]ಪ್ರಾಶನ[೩]ವ್ಯುಷ್ಟಿಕೇಶಾವಾಪಲಿಪಿಸಂಖ್ಯಾನಸಂಗ್ರಹೋಪನಯನವ್ರತಚರ್ಯ್ಯಾವ್ರತಾವತರಣವಿವಾಹವರ್ಣ್ಣಲಾಭ[೪]ಕುಲಚರ್ಯ್ಯಾ[೪]ಗೃಹೀಶಿತ್ವಪ್ರಶಾಂತಿಗೃಹತ್ಯಾಗದೀಕ್ಷಾಜಿನರೂಪಮೌನಾಧ್ಯಯನವೃತ್ತತ್ವತೀರ್ಥಕೃದ್ಭಾವನಾಗುರುಸ್ಥಾನಾಭ್ಯುಪಗಮಗಣೋಪಗ್ರಹಣಸ್ವಗುರು[೫]ಸ್ಥಾನಸಂಕ್ರಾಂತಿನಿಸ್ಸಂಗತ್ವಾತ್ಮಭಾವನಾಯೋಗನಿರ್ವ್ವಾಣಸಂಪ್ರಾಪ್ತಿಯೋಗನಿರ್ವ್ವಾಣಸಾಧನೇಂದ್ರೋಪಪಾದಾ[೬]ಭಿಷೇಕ[೭]ವಿಧಿದಾನ[೭]ಸುಖೋದಯೇಂದ್ರತ್ಯಾಗಾವತಾರಹಿರಣ್ಯಗರ್ಭೋತ್ಕೃಷ್ಟಜನ್ಮ[೮]ಮಂದರಾದ್ರೀಂದ್ರಾ[೮]ಭಿಷೇಕಗುರುಪೂಜೋಪ[೯]ಲಂಭನ[೯] [೧೦]ಯೌವರಾಜ್ಯಸ್ವರಾಜ್ಯ[೧೦]ಚಕ್ರಲಾಭದಿಗ್ವಿಜಯಚಕ್ರಾಭಿಷೇಕಸಾಮ್ರಾಜ್ಯಪರಿನಿಷ್ಕ್ರಮಣಯೋಗಸಮ್ಮಹಾರ್ಹಂತ್ಯವಿಹಾರಯೋಗ್ಯತ್ಯಾಗನಿರ್ವೃತಿಯೆಂಬಯ್ವತ್ತಮೂಱು ಗರ್ಭಾದಿನಿರ್ವ್ವಾಣಪರ್ಯ್ಯಂತಂಗಳಪ್ಪಗರ್ಭಾನ್ವಯ*ಕ್ರಿಯೆಗಳುಂ,

೧-೧ (ಅ) ಪ್ರತಿಯಲ್ಲಿ ಈ ಪದವಿಲ್ಲ. ೨-೨ (ಚ) ಗಂಗಳೊಳ್ ೩-೩ (ಚ) ಪ್ರಸಾದನ. ೪-೪ (ಚ) ತುಲಾಚಾರ್ಯ್ಯ. ೫ (ಚ) ಣ. ೬ (ಚ) ತಾ. ೭-೭ (ಚ) ವಿಧಿ. ೮-೮ (ಅ) ಮಂದರೇಂದ್ರಾ. ೯-೯ (ಚ) ಲಾಭ. ೧೦-೧೦ (ಚ) ಯುವರಾಜ್ಯ.

* ಗರ್ಭಾನ್ವಯಕ್ರಿಯೆಗಳು ಪೂ. ಪು. ೩೮-೫೫ ರಿಂದ ೬೩ರಲ್ಲಿ ಹೇಳಲಾಗಿವೆ.

ತ್ಸರರಹಿತಂಗಸಹಾಯಂ-
ಗರಾತಿಬಲಜಯಮು[1]ನಳವೆ[1] ದೊರೆಕೊಳಿಸುವವೋಲ್ ॥೧೭॥

ಅವಱಿಂ[2] ಸಕಲಕಲಾಗಮ[2]-
[3]ವಿದರಿಂ ವಂ[3] ತಪ್ಪದಂತು ನೆಗೞ್ದಿಂ ನೆಗೞ್ದಂ- ।
ಮುದಿತೋದಿತಪರಮಸುಖಾ-
ಸ್ಪದಕ್ಕೆ ಬಗೆವಂತೆ ನೀಮೆ ಮೊದಲಿಗರಪ್ಪಿರ್ ॥೧೮॥

ಇವನಾದಿಪ್ರಭವಂ ಭವಭ್ರಮಣದುಃಖೋಗ್ರಾಗ್ನಿಯೊಳ್ ಮಗ್ಗಿದ-
ಪ್ಪುವ ಜೀವಂಗಳನೆಂಬಿನಂ ಬಳೆಸದೀಮಿಥ್ಯಾತ್ವಬಂಧಂ ಕಳ- ।
ಲ್ದುದಿದುತ್ತಿರ್ಪಿನೆಗಂ ಚತುರ್ದಶಗುಣಸ್ಥಾನಂಗಳಂ ನಂಬಿ ಪೊ-
ರ್ದಿದವರ್ [4]ಪೊರ್ದುವವರಲ್ತೆ[4] ಮುಕ್ತಿವನಿತಾಕಾಂಚೀಗುಣಸ್ಥಾನಮಂ ॥೧೯॥

ಎಂದಿಂತು ನಾಭಿನಂದನ-
ನಂದನನಾನಂದದಿಂದಮುಂದವರಂ ತ- ।
ನ್ನಂದಂದದಿಂದೆ ನಡೆಯಿಸಿ-
ದಂ ದಾನಂಗುಡುವವೊಂದಲಂಪಿನ ಪೆಂಪಿಂ ॥೨೦॥

ಪರಮಬ್ರಹ್ಮತನೂಭವರ್ ದ್ವಿಜವರರ್ ವರ್ಣೋತ್ತಮರ್ ಲೋಕಪೂ-
ಜ್ಯರಿಳಾ[5]ವಂದಿತ[5]ಮಾನ್ಯರುನ್ನತಗುಣರ್ ಚಾರಿತ್ರಶುದ್ಧರ್ ಧರಾ- ।
ಮರರೀಬ್ರಾಹ್ಮಣರೆಂದು ಕೊಂಡುಕೊನೆದಾಷಟ್ಖಂಡಭೂಮಂಡಲೇ-
ಶ್ವರನೋರಂತೆ ನೆಗೞ್ಚಿ ಕೂಡೆ ನೆಗೞ್ದತ್ತಿತ್ತಂ ದ್ವಿಜನ್ಮಾನ್ವಯಂ ॥೨೧॥

ವ॥ ಅಂತು ಭರತೇಶ್ವರಂ ಭರತಕ್ಷೇತ್ರದೊಳ್ ತಾನೆ ಮಾಡಿದ ತನ್ನ ಕೊಂಡಾಟದಿನತಿಪ್ರಸಿದ್ಧಮಾಗಿ[6] ವಿಪ್ರಸಂತತಿ ಕೆಲವುಕಾಲಂ ನಡೆವನ್ನೆಗಮೊಂದು ದಿವಸಂ ತ್ರಿಯಾಮಾವಿರಾಮದೊಳಾಶ್ಚರ್ಯಭೂತಂಗಳುಂ ದೂರಾನಿ[7]ಷ್ಟಫಲಸೂಚಕಂಗಳುಮಪ್ಪ ಸ್ವಪ್ನಂಗಳಂ ಕಂಡು ಬೆಚ್ಚಿದಂತಿರ್ದುವೀಗಳೆನ್ನ ಕಂಡ ಕನಸುಗಳೀಯುಗದ ಕಡೆಯೊಳ್ ಪ್ರಜೆಗಳ್ಗೆ ವಿವಿಧೋಪಪ್ಲ[8]ವಸೂಚಕಂಗಳಾಗಿ ತೋರ್ಕುಮೆಂದನುಮಾನದಿನಸ್ಪಷ್ಟರೂಪದಿನೆಱದು ಭಗವದರ್ಹತ್ಸಮೀಪಕ್ಕೆ ಪೋಗಿ ಯುಗಪತ್ಸಕಲಪದಾರ್ಥಯಥಾರ್ಥಾವಭಾಸಿಯಪ್ಪ ಕೇವಲಜ್ಞಾನದಿಂ ವಿಶೇಷನಿಶ್ಚಯಮಂ ಮಾಡುವೆನೆಂದು ಸಕಲಪ್ರಾಭಾತಿಕಕ್ರಿಯೆಯಂ ನಿರ್ವರ್ತಿಸಿ

೧-೧ (ಅ) ನಡುವೆ; (ಚ) ನಳವು. ೨-೨ (ಚ) ವಂ ಸಕಳಾಗಮ. ೩-೩ (ಚ) ವಿದರಿದನಿಂ. ೪-೪ (ಚ) ಪೊರ್ದಿದವರಲ್ತೆ. ೫-೫ (ಚ) ವಲ್ಲಭ. ೬ (ಚ) ದ. ೭ (ಚ) ರಿ. ೮ (ಚ) ದ್ರ.

ಮಕುಟಬದ್ಧಪರಿವೃತನಾಗಿ ಬಂದು ಕೈಲಾಸಗಿರೀಂದ್ರಸ್ಥಿತಸಮವಸೃತಿಯುಂ ಸಂಸ್ಕೃತಿಲತಾವಿಚ್ಛೇದಿಯುಂ ಪ್ರೋತ್ತುಂಗಧರ್ಮಕುಟಿಯುಂ ಮೂಱುಸುತ್ತುಬಳಸಂದು ದೇವಮಾನವಗಂಧರ್ವವಿದ್ಯಾಧರೋರಗಾಧ್ಯರಂ ವೃಷಭನಾಥನನಸಾಧಾರಣಗುಣಾಷ್ಟೋತ್ತರಸಹಸ್ರನಾಮಾಂಕಿತಸ್ತುತಿಗಳಿಂ ಸ್ತುತಿಯಿಸಿ ದಿವ್ಯಾರ್ಚನೆಗಳಿಂದರ್ಚಿಸಿ ಗಣಧರಾದಿಯತಿಸಮಿತಿಗೆಱಗಿ ನಿಜೋಚಿತಸ್ಥಾನದೊಳ್ ಕುಳ್ಳಿರ್ದಾಗಳ್,

ಪರಿಣಾಮಶುದ್ಧಿ ಮೊರೆಕೊಳೆ
ಪುರುಪರಮೇಶ್ವರಪದಾಬ್ಜಭಕ್ತಿಯುಧರದಿಂ
ಭರತಂಗೆ ರಾಜ್ಯಲಕ್ಷ್ಮೀ-
ಪರಿಕರದಿಂ ತೊಟ್ಟನವಧಿ ಪುಟ್ಟಿತ್ತಾಗಳ್ ||೨೨||

ವ|| ಅಂತುತ್ಪನ್ನಾವಧಿಬೋಧಂ ಧರ್ಮಾನ್ವಿತಾತ್ಮದಮನನಾಗಿ ಕಿಱ-ಱು ಪೊತ್ತು ನಿರ್ದು ನಿಜಮನೋಗತಕಾರ್ಯವಿಜ್ಞಾಪನಾಭಿಮುಖನಾಗಿ,

ಆದಿಬ್ರಹ್ಮನೆನಲ್ ಪೊಸ
ಶ್ರಾಮಣಜಂ ದೇವ ಮಾಡ್ಪ್ಪ ನೀನಿರ್ದ್ದಂತಾ-
ನಾದ ಮಹುತ್ತನದಿಂ ಮ-
ತ್ತ್ರಾದಿಸಿದೆಂ ವ್ರತಸಮೇತವಿಪ್ರಾನ್ವಯಮಂ

ಗುಣಭೂಮಿವಿಭಾಗದೊಳಾ-
ವಣಿಕೆಯೊಳೊಂದಾದಿಯಾಗೆ ಪನ್ನೊಂದುಮನಂ ।
ಗುಣವದ್ವ್ರತಚಿಹ್ನಂ ಗುಣ-
ಮಣಿಭೂಷಣಸೂತ್ರಮುಮದೆನವರ್ಗೆನ್ನಿಂದಂ ||೨೪||

ಇದಱೊಳ್ ಗುಣಮೋ ದೋಷಮೊ
ಪೊದಱ್ದು ನಿಂದಪ್ಪುದಯುಕ್ತಮೋ ಯುಕ್ತಮೊ ಪೇ- ।
ೞಿದು ಹಾನಿಯೊ ವೃದ್ಧಿಯೊ ತಾ-
ನದಾವುದಂ ಪೊರ್ದ್ದಿ ನಿಲ್ಕುಮಘವಿಘಟನಪಟೂ ||೨೫||

ವ|| ಅದಲ್ಲದೆಯುಂ[೧-೧]ಮುಂದಿನ[೧] ಬೆಳಗಪ್ಪ ಜಾವದೊಳ್ ಪದಿನಾಱು ಕನಸುಗಳಂ ಕಂಡೆನಾ ಕನಸುಗಳನಿಷ್ಟಫಲಸೂಚಕಂಗಳೆಂಬುದಂ ನಾನಾ-

೧-೧ (ಚ) ಮುಂದಿನ ದಿನಂ.

ಸ್ಯಾದಿನುಪಲಕ್ಷಿಸಿದೆನವಱ [೧]ಫಲಂಗಳುಮಂ[೧] ನೆನಗಱಿಯೆ ಬೆಸಸಿಮೆಂದವಧಿಜ್ಞಾನ-ದಿಂ ತಾನಾಕನಸುಗಳನಱಿವನಾಗಿಯುಂ ಸಭಾಜನಕ್ಕಮಱಿಪಲೆಂದು ಬೆಸ-ಗೊಟ್ಟಿಮಂ ಪ್ರಶ್ನಾನುಕ್ರಮದಿಂ ತ್ರಿಲೋಕಗುರುವಿಂತೆಂದು ಬೆಸಸಿದಂ ನೀನಾ-ದ್ವಿಜನ್ಮಜಾತಿಯುಂ ಒಳ್ಕಿತ್ತಿ ಮಾಡಿದೆಯಾದೊಡಂ,

ಧರೆಯೊಳ್ ಧರ್ಮಾರ್ಥದಿಂ ನೀಂ ಸೃಜಿಯಿಸಿ ನೆಗೞ್ದೀವಿಪ್ರಸಂತಾನದೊಂದಾ-
ಚರಣಂ ನೀನೆಂದ ಪಾಂಗಿಂ ಕೃತಯುಗದೊಳೆ ದಲ್ಲಲ್ಲ ಮಿನ್ನತ್ತ ನಷ್ಟಾ- |
ಚರಣಂ ಸನ್ಮಾರ್ಗ್ಗದೊಳ್ ಮಚ್ಚರಿಸಿ ಕಲಿಯುಗಾಭ್ಯರ್ಣದೊಳ್ ದ್ರವ್ಯಲೋಭಾ-
ತುರರುನ್ಮಾರ್ಗ್ಗೋಪದೇಶೋದ್ಯತಮತಿಗಳತಿಕ್ರೂರರಪ್ಪರ್ ದ್ವಿಜನ್ಮರ್ ||೨೬||

ಮಧುಮದ್ಯಮಾಂಸಲೋಲುಪ-
ರಧಾರ್ಮ್ಮಿಕರ್ ಪರವಧೂರತಿಪ್ರಿಯರಧಮರ್ |
ವಧನಿರತರ್ ಪಾಪಿಗಳನ್ಯ-
ತಧನರ್ ದ್ವಿಜರಿನ್ನರಪ್ಪರಾಕಲಿಯುಗದೊಳ್ ||೨೭||

ವ|| ಆದೊಡಮೀಗಳವರ್ ಸದಾಚಾರರಪ್ಪುದಱಿಂ ಅವರನಾಪಾಟಿಕ್ಕಿ-ಯೊಳೆ ನಡೆಯಲೀಯದೆ ಮಾಡಿ ಕಿಡಿಸಿದೊಡೆ ನಿನಗೆ [೨]ಪಿರಿದುಮೊಂದು[೨] ದೂಱ-ಕ್ಕುಮೆಂದು ಪೇೞ್ದು ಮತ್ತಮಾತನ ಕಂಡ ಷೋಡಶಸ್ವಪ್ನಸೂಚಿತ[೩]ಫಲಂಗಳು-ಮ[೩]ನಿಂತೆಂದು ಬೆಸಸಿದರ್,

ಭರತಮಹೀತಳಮನಳಂ-
ಕರಿಸಿರ್ದ್ದಿರ್ಪ್ಪತ್ತು[೪]ಮೂ*ಱು[೪] ಕೇಸರಿಗಳನಾ- |
ವರದಿಂ ಕಂಡುದಱಿಂದನಿ-
ಬರೆ ತೀರ್ಥಕರರ್ಕ್ಕಳಪ್ಪರವರ ವಿಹಾರಂ ||೨೮||

ಧರೆಯೊಳ್ ಸಲೆ ಪಾಷಂಡಿಗ-
ಳರೆಬರ್ ಪುಟ್ಟಿಯುಮಡಂಗುವರ್ ಮತ್ತಂ ಕೇ- |
ಸರಿಗಳ ಬಳಸಿಯುಮನುಕೂ-
ಲರೂಪದಾಡುವ ಮೃಗಂಗಳಿಂ ಕಂಡುದಱಿಂ ||೨೯||

ಪರಮ ಜಿನತೀರ್ಥದೊಳ್ ಪಲ-
ಬರುಮಾಗಿಯು[೫]ಮೇಂ ಕುಲಿಂಗಿಗಳ್[೫] ವಿಕೃತಿಗಳಿಂ |

---

೧-೧ (ಚ) ಫಲಮುಮ. ೨-೨ (ಚ) ಪಿರಿದುಂ. ೩-೩ (ಚ) ಫಲಂಗಳ. ೪-೪ (ಚ) ನಾಲ್ಕು. ೫-೫ (ಚ) ಮೇಕಲಿಂಗಿಗಳ್.

---

* ಪೂರ್ವಪುರಾಣ ೪೧-೬೩.

ಕರಿಪತಿಯನೇಱಿ ಕೋಡಗ-
ಮಿರೆ ಕಂಡುದಱಿಂದಮಾದಿಭೂಪರ್ ಕಿಡೆ ಬೇ- ।
ಹರುಮಕುಲೀನರುಮತಿದು-
ಶ್ಚರಿತ್ರರುಂ ಭೂಪರಪ್ಪರನ್ಯಾಯಪರರ್ ॥೩೭॥

ಕಾಗೆಗಳಿಂದಂ ಬಳಸಿದ
ಗೂಗೆಗಳಂ ಕಂಡೆಯಪ್ಪ ಕಾರಣದಿಂ ಜೈ- ।
ನಾಗಮವಿದರಂ ಸಾರದೆ
ಪೋಗಿ ಕುಲಿಂಗಿಗಳನೀಜನಂ ಸೇವಿಸುಗುಂ ॥೩೮॥

ಆಡುವ ಮರುಳ್ಗಳಂ ನಡೆ
ನೋಡಿದುದಱಿನಿಂತು ಕನಸಿನೊಳ್ ಮಕ್ಕಳ್ಗಂ ।
ಕೂಡೆ ಪೆಸರಿಟ್ಟು ಸಲೆ ಕೊಂ-
ೞಡಾಡಿದಪರ್ ವ್ಯಂತರರ್ಕಳಂ ಜಡಮತಿಗಳ್ ॥೩೯॥

ಕಡೆವಿಡಿದು ಬಳಸಿ ನೀರಿರೆ
ನಡುಬತ್ತಿದ ಕೆಱೆಯನಿಂತು ಕಂಡುದಱಿಂದಂ ।
ನಡು ನಾಡೊಳಱಿಂ ನೆಲಸದೆ
ಕಡೆಯೊಳ್ ನೆಲೆಗೊಳ್ಗುಮಿಲ್ಲಿ ಸಂದೆಯಮುಂಟೇ

ಧೂಳೀಧೂಸರರವರರ-
ತ್ನಾಳಿಗಳಂ ಕಂಡ ದೂಸಱಿಂದಂ ಧರಣೀ- ।
ಪಾಲಕಮುನಿಪರ್ ಪಂಚಮ-
ಕಾಲದೊಳಣಮಾಗರಲ್ತೆ ಋದ್ಧಿಪ್ರಾಪ್ತರ್ ॥೪೧

ಕೊರಲೊಳ್ ಕಟ್ಟಿದ ಮಾಲೆಯ
ಸಿರಿಖಂಡದ ತಳ್ಕ್ರ್ಯವೆರಸು ಬಿಡುನಾಯ್ಬೆರಸಾ-।
ದರದಿಂದನರ್ಘ್ಯಮಣಿವಿ-
ಷ್ಟರದೊಳ್ ಕುಳ್ಳಿರ್ದ್ದ ಸರುಗನುಣೆ ಕಂಡುದಱಿಂ ॥೪೨।

ವ್ರತಹೀನರ್ ಸನ್ಮಾರ್ಗ್ಗ-
ಪ್ರತಿಕೂಲರ್ ವ್ಯಸನವಶಗತರ್ ಪಾಪಿಗಳಿಂ ।

೧-೧ (ಅ) ಡಾಡದಿರವ್ಯಂತರ.

ವ|| ಅಂತು ಪುರುಪರಮೇಶ್ವರಂಗೆಱಗಿ ಬಂದಯೋಧ್ಯಾಪುರಮಂ[೧] ಪೊಕ್ಕು ದುಸ್ಸ್ವಪ್ನದರ್ಶನಸಂಘ[೧]ರ್ಷಣಾರ್ಥಮಾಗಿ ಕಲ್ಪವೃಕ್ಷಮಹಾ[೨][ಮಹಿಮಾ][೨] ಪುರಸ್ಸರಂ ಭಗವದರ್ಹದಭಿಷೇಕಮುನಿಪೂಜನಸತ್ಪಾತ್ರದಾನಪ್ರಣಯಿಪ್ರೀಣನಮಹಾದಾನಾದಿವಿತರಣಗೋದೋಹಪ್ಲಾವನೀತಲಸಂತರ್ಪಣಾದಿಶಾಂತಿಕಕ್ರಿಯೆಗಳಂ ನೆಗಳ್ದು,

ವಿವಿಧದ್ವೀಪಂಗಳೊಳ್ ಮಂದರಗಿರಿತಟದೊಳ್ ಜ್ಯೋತಿರಾವಾಸದೊಳ್ ದೇ-|
ವವಿಮಾನಾನೀಕದೊಳ್ ಶೋಭಿಸುವ ಜಿನಗೃಹವ್ರಾತಮಂ ಗೆಲ್ದು ರತ್ನ-|
ಚ್ಛವಿಯಿಂ ದಿಗ್ಭಿತ್ತಿಯಂ ಚಿತ್ರಿಸುವ ಜಿನನಿಕೇತಂಗಳಂ ಮಾಡಿಸುತ್ತುಂ
ದಿವಿಜೇಂದ್ರಸ್ತುತ್ಯನಾದಂ ಸುಕವಿಜನಮನೋಮಾನಸೋತ್ತಂಸಹಂಸಂ ||೪೯||

ವ|| ಅಂತಯೋಧ್ಯಾಪುರೋಪಾಂತಕಾಂತಪ್ರದೇಶಂಗಳೊಳಂ[೩] ಕೈಲಾಸಾಚಲಾಗ್ರ[೩]ಕೂಟಂಗಳೊಳಂ ಷಟ್ಖಂಡಮಂಡಳಪ್ರಸಿದ್ಧರಾಜಧಾನಿಗಳೊಳಂ,

ದೆಸೆಗಳ್ ಪೆರ್ಚ್ಚದೆ ಪೊಟ್ಟನಾದುವಗಲಕ್ಕೆಂಬನ್ನೆಗಂ ನೀಳಮಾ-
ಗಸದೊಳ್ ಕಾಳಸೆಗೊಂಡುದೆಂಬಿನೆಗಮದ್ರೀಂದ್ರಂಗಳಂ ತಂದು ಕೀ-|
ಲಿಸಿದಂ ನಿಶ್ಚಲಮಪ್ಪಿನಂ ವಸುಧೆಗಾಕಲ್ಪಾಂತಮೆಂಬಂತು ಮಾ-
ಡಿಸಿದಂ ಜೈನಗೃಹಂಗಳಂ ಪಲವುಮಂ ಸಂಸಾರಸಾರೋದಯಂ ||೫೦||

ಗ|| ಇದು ದೇವೇಂದ್ರಮುನೀಂದ್ರವಂದ್ಯಪರಮಜಿನೇಂದ್ರಮುಖ-
ಚಂದ್ರನಾಕ್ಷಂದ್ರಿಕಾಪ್ರಸರಪ್ರಸಾದೋದೀರ್ಣ್ಣಸೂಕ್ತಿ-
ಕಲ್ಲೋಲಮಾಲಾಕೀರ್ಣ್ಣಕವಿತಾಗುಣಾರ್ಣ್ಣವ-
ಪ್ರಣೀತಮಪ್ಪಾದಿಪುರಾಣದೊಳುಪಾಸ-
ಕಾಧ್ಯಯನವರ್ಣ್ಣನಂ ನಾಮ
ಪಂಚದಶಾಶ್ವಾಸಂ
ಸಂಪೂರ್ಣ್ಣಂ

೧-೧ (ಚ) ಕ. ೨-೨ (ಅ,ಬ) ಮಹಿಮ. ೩-೩ (ಚ) ಕೈಳಾಸೋದಗ್ರ.

# ಷೋಡಶಾಶ್ವಾಸಂ

ಶ್ರೀರಮಣೀನಾಯಜಿನಾ-
ಗಾರಂಗಳ್ ತನ್ನ ಜನನವೊಲ್ ಪಸುಘೆಗಳಂ ।
ಕಾರಂಗಳಾಗೆ ಪೂರ್ಣ್ಣಮ-
ನೋರಥನಾದಂ ಸರಸ್ವತೀಮಣಿಪಾಲಂ ॥೧॥

ವ॥ ಅಂತು ತನ್ನ ಮಾಡಿಸಿದ ಚೈತ್ಯಾಲಯಂಗಳೊಳಾವಿಘಟ್ಟಾಂಕರಾದಿ-ಯಾಗಿ ಭವಿಷ್ಯತ್ತೀರ್ಥಕರಪ್ರತಿಕೃತಿಗಳಂ[1] ಪಂಚರತ್ನಮಯಂಗಳಂ ಮಾಡಿಸಿ ಮಾಣಿಕ್ಯಪೀಠದೊಳು ಕೇಣಮಾಡಿ ರತ್ನಬಾಕರಾಕೃತಿ ಬಾಸರಂಗಳೊಳಪಾ-ಸಿತತನಪರಿಮಿತಾಪ್ರಭ್ಯ ಮಾಣಿಕ್ಯದ ರ್ಯೇತನವಕಾರತ್ನಾಗ್ನಿಫಲಕೃಂತಿಸ್ಥ್ರೀಕ್ಷ್ಯರಸಂಗ-ಳಿಂದಂ ಗೊರಿಂಗಮಿಂಬದಸಕ್ಷ್ಯ ದಹರ ದಸರಥಗಂಧೋದಕಗಳಿಂದಮಭಿ-ಷೇಕಂಗೆಯ್ದು,

ಘನಮಾನ್ ದೇವೇಂದ್ರನುದ್ಯಾನದ ಪಿರಿಫಳದಿಂ ಪ್ರಾಗಣೋಳ್ ಕಲ್ಪವೃಕ್ಷಾಂ-
ಗಳ್ ಪ್ರಾಗದ್ ಪೆರ್ಚಿದೋಳ್ ಪನ್ನಗಪತಿಯ ಫಣಾರತ್ನದೀಪಂ ವಿತಾನಾ-
ವಳಿಯೊಳ್ ದಿವ್ಯಂ ವಿತಾನಂ ತುಱುಗಿ ಮುಮಡರ್ದಿಂ ಪ್ರಾರ್ಚನಕ್ಕಿಂತಿದಾದ್ಯು-
ಗ್ಗಳಮೊಂದಂತಾಗೆ ದಿವ್ಯಾರ್ಚನೆಯೊಳ್ ಮೆಱೆದಂ ಭಕ್ತಿಯಿಂ ಚಕ್ರನಾಥಂ ॥೨॥

ವ॥ ಅಂತರ್ಚಿಸಿ ನಿಷ್ಕಾರಪ್ರಣಾಮಾಂಜಲಿಪ್ರಣಯೀಕೃತೋತ್ತಮಾಂಗ-ನಾಗಿ,

ಕಮಲಾಲಂಕೃತಮಪ್ಪ ಹೇಮಕಮಲಂ ಮಾಣಿಕ್ಯಭಟ್ಟಾರಕ-
ಪ್ರಿಯಮಣಿಜ್ಯೋತಿಯನೊಯ್ಯನಪ್ಪಳಿರ್ದವೊಲ್ ಚೆಲ್ವಿಂ ಬಿಸಂ ಭವ್ಯತ್ವ- ।
ತ್ತ್ವಮಳಕ್ಕಂ ಮುದಮಂ ಜಪಾಪ್ರಸವರಕ್ತಾಶೋಕಬಂಧೂಕಶೋ-
ಣಮಣಿಜ್ಯೋತಿರ್ಗಳಿಕ್ಕೆಯಿಂ ಕುಡೆ ಜಯಂ ಭದ್ರಂ ಶುಭಂ ಮಂಗಳಂ ॥೩॥

ಕಣಿ ರತ್ನತ್ರಿತಯಕ್ಕಿದೇಂ ಪಿರಿದೆನಲ್ ರತ್ನಾಕರಂ ರತ್ನತೋ-
ರಣರತ್ನಾಸನರತ್ನವಿಭ್ರಮಣರತ್ನಾಲೋಕರತ್ನಪ್ರಭಾ- ।
ಮಣಿರತ್ನಾತಪವಾರಣತ್ರಿತಯದಿಂ ತ್ರೈಲೋಕ್ಯಸಾಮ್ರಾಜ್ಯಭೂ-
ಷಣಮಾಣಿಕ್ಯಜಿನೇಂದ್ರಬಿಂಬಮೆ ಜಯಂ ಭದ್ರಂ ಶುಭಂ ಮಂಗಳಂ ॥೪॥

ಪರಿಪೂರ್ಣೋಜ್ಜ್ವಲಚಂದ್ರಬಿಂಬರುಚಿಯಿಂ ಚಂದ್ರಪ್ರಭಂ[೫] ಪುಷ್ಪದಂ-
ತನೆನಲ್ ಗಾರುಡನೀಲಶೋಣಮಣಿಹೇಮಚ್ಛಾಯೆಯಿಂ ವಿಸ್ಫುರತಿ- ।

---

೧-೧ (ಅ) ಪ್ರತಿಮೆಗಳಂ. ೨ (ಅ) ಯೀ. ೪-೪ (ಅ) ದ್ಯೋತಿ; (ಬ) ಚ್ಛಾಯಿ.
೫ (ಜ) ಭಾ.

ವಿಕಸಿತ (೩-೭೩ ವ)— ಅಮಿತಮತಿ ಸಚಿವನ ಪುತ್ರ. ಪ್ರಹಸಿತನ ಸಹಚರನು. ಯುಗಂಧರ ಯತಿವರರ ಮೊದಲ ಭವದ ಹೆಸರು.

ವಿಜಯ (೬-೨೧ವ)— ಶಾರ್ದೂಲಾರ್ಯ ಸುರವರದತ್ತಚರಸಾಮಾನಿಕನು ವಜ್ರಸೇನ ಶ್ರೀಕಾಂತೆಯರಿಗೆ ಮಗನಾಗಿ ವಜ್ರನಾಭಿಯ ತಮ್ಮನಾದನು. ಇದು ಆತನ ಏಳನೆಯ ಭವ. ಭವಾವಳಿ:— (೧) ಉಗ್ರಸೇನ (೨) (೨) ಪುಲಿ (ಶಾರ್ದೂಲ) (೩) ಭೋಗಭೂಮಿಜ (೪) ಚಿತ್ರಾಂಗದ (೫) ವರದತ್ತ (೬) ಸಾಮಾನಿಕದೇವ (೭) ವಿಜಯ.

ವಿಜಯಪುರ (೫-೧೬ ವ.)— ಅಚ್ಯುತವೀರ್ಯನ ಮೊದಲ ಭವದೊಳಗಿನ ಹರಿಕಾಂತನ ರಾಜಧಾನಿ.

ವಿಜಯಾಖ್ಯಮುನಿ (೩-೫೮ವ)— ವಾಸವನಿಗೆ ದೀಕ್ಷೆಕೊಟ್ಟ ಮುನಿ.

ವಿಜಯೆ (೨-೧೧ ವ)— ಅರವಿಂದನ ಪತ್ನಿ. ಹರಿಶ್ಚಂದ್ರಕುರುವಿಂದರ ತಾಯಿ. ಅರವಿಂದನು ನರಕಗಾಮಿ.

ವಿಜಯೆ ೧— (೭-೩ವ)—ಪುರುಜಿನೋತ್ಸವದಲ್ಲಿ ಮಂಗಳಾಷ್ಟಕಗಳಲ್ಲಿ ಒಂದು 'ಭೃಂಗಾರು' ವನ್ನು ಹಿಡಿಯಲು ನಿಯುಕ್ತಳಾದವಳು. ೨— (೭-೩ ವ)— ಪುರುಜಿನಾಂಬಿಕೆಯ ಗರ್ಭಶೋಧನೆಗೆ ನೇಮಕಳಾದ ವಿದ್ಯುತ್ಕುಮಾರಿಪುರಂಧ್ರಿ.

ವಿದ್ಯುಲ್ಲತೆ (೨-೬೯ ವ)— ಲಲಿತಾಂಗನ ಮಹಾದೇವಿ.

ವಿನಯಂಧರಯೋಗಿ (೩-೫೮ ವ)— ಮಹೀಧರನು ವಿನಯಂಧರರ ಪರಿನಿರ್ವಾಣಪೂಜೆ ಮಾಡಿದನು.

ವಿಭೀಷಣ (೩-೫೦ ವ)—ವಜ್ರದಂತನ ಮೂರನೆಯ ಭವದ ಶ್ರೀವರ್ಮನ ತಮ್ಮನು. ಆ ಕಾಲದ ವಾಸುದೇವ. ೨—(೬-೩ ವ)— ಸುವಿಧಿರಾಜನ ಮಂಡಳಿಕನು. ಪತ್ನಿ ಪ್ರಿಯದತ್ತೆ. ಮಗನು ಶಾರ್ದೂಲಚರನಾದ ಚಿತ್ರಾಂಗದೇವನು ದೇವಲೋಕದಿಂದ ವತರಿಸಿ ವರದತ್ತನೆಂಬವನಾದನು.

ವಿಮಳವಾಹನ (೬-೫೮ ವ)— ಏಳನೆಯ ಮನು. ಆನೆ, ಕುದುರೆ ಮುಂತಾದ ವಾಹನಗಳನ್ನು ಪ್ರಚುರಗೊಳಿಸಿದನು.

ವಿಮಳವಾಹನಜಿನ (೬-೪ ವ)—ಅಭಯಘೋಷ ಚಕ್ರವರ್ತಿಯು ಇವರ ಪಾದದ ಬಳಿಯಲ್ಲಿ ದೀಕ್ಷೆಗೊಂಡನು.

ವೀರ ೧—(೬-೨೧ ವ)—ವಜ್ರಜಂಘನ ಸೇನಾಧಿಪತಿ ಅಕಂಪನನು ವಜ್ರ

ಸೇನ ಶ್ರೀಕಾಂತೆಯರಿಗೆ ವೀರ ನೆಂಬ ಪುತ್ರನಾದನು. ವಜ್ರ ನಾಭಿಯ ತಮ್ಮನು. ಇವನ ದು ಏಳನೆಯ ಭವ. ೨-(೧೬-೫೮ವ)-ಆದಿನಾಥತೀರ್ಥಂಕರರ ಪುತ್ರ. ಇವನ ಭವಾವಳಿ:- (೧) ವಾನರಾರ್ಯ (೨) ಮನೋಹರಾಮರ (೩) ಚಿತ್ರಾಂಗದೇವನೃಪ (೪) ಅಚ್ಯುತ ಸಾಮಾನಿಕ (೫) ಅಪರಾಜಿತ ನೃಪ (೬) ಸರ್ವಾರ್ಥಸಿದ್ಧಿ ಅಹಮಿಂದ್ರ (೭) ವೀರ.

ವೀರಬಾಹು (೪-೬೭ ವ) ಶ್ರೀಮತಿ ವಜ್ರಬಾಹುಗಳ ಮಗನು. ಯಮಧರಮುನಿಗಳ ಬಳಿ ವಜ್ರಬಾಹುವಿನೊಡನೆ ದೀಕ್ಷೆಗೊಂಡನು.

ವೃಷಭಸೇನ (೧೬--೫೮ ವ)— ಆದಿನಾಥತೀರ್ಥಂಕರರ ಪ್ರಥಮ ಗಣಧರರು. ಆದಿನಾಥರ ಮಕ್ಕಳು. ಭರತೇಶನ ತಮ್ಮಂದಿರು. ಇವರ ಭವಾವಳಿ:— (೧) ದಿವಿಜ (೨) ಪ್ರೀತಿವರ್ಧನ ಮಂತ್ರಿ (೩) ಭೋಗಭೂಮಿಜ (೪) ಕನಕಪ್ರಭಾಮರ (೫) ಆನಂದ (೬) ಅಧೋಗ್ರೈವೇಯಕಾಹಮಿಂದ್ರ (೭) ಪೀಠ (೮) ಸರ್ವಾರ್ಥಸಿದ್ಧೀಶ (೯) ವೃಷಭಸೇನ.

ವೃಷಭಸ್ವಾಮಿ (೭-೧೨೬ ವ)- ನಾಭಿರಾಜ ಮರುದೇವಿಯರು ತಮ್ಮ ಪುತ್ರ ಆದಿನಾಥರಿಗೆ ಇಟ್ಟ ಹೆಸರು.

ವೈಜಯಂತ (೬-೨೧ ವ)- ವರಾಹಾರ್ಯ ದಿವಿಜ ವರಸೇನ ಚರಸಾಮಾನಿಕದೇವನು ವಜ್ರಸೇನಶ್ರೀಕಾಂತೆಯರ ಮಗನು ವೈಜಯಂತನಾದನು. ಆತನು ವಜ್ರನಾಭಿಯ ತಮ್ಮ. ಇದು ಆತನ ಏಳನೆಯ ಭವ. ಭವಾವಳಿ: (೧) ಹರಿಕಾಂತ (೨) ವರಾಹ (೩) ಭೋಗಭೂಮಿಜ (೪) ಮಣಿಕುಂಡಲ (೫) ವರಸೇನ (೬) ಸಾಮಾನಿಕದೇವ (೭) ವೈಜಯಂತ.

ವೈಜಯಂತೆ (೭-೩ ವ)- ಪುರುಜಿನೋತ್ಸವದಲ್ಲಿ ಮಂಗಳಾಷ್ಟಕಗಳಲ್ಲಿ ಒಂದು ಭೃಂಗಾರುವನ್ನು ಹಿಡಿಯಲು ನಿಯುಕ್ತಳು. ೨-(೭-೩ ವ)— ಪುರುಜಿನಾಂಬಿಕೆಯ ಗರ್ಭಶೋಧನೆಗೆ ನೇಮಕಳಾದ ವಿದ್ಯುತ್ಕುಮಾರಿ ಪುರಂಧ್ರಿ.

ಶಚಿ (೭-೪೨ ವ)-ಸೌಧರ್ಮೇಂದ್ರನ ಪತ್ನಿ. ಜನ್ಮಕಲ್ಯಾಣದಲ್ಲಿ ಪ್ರಸೂತಿಗೃಹವನ್ನು ಪ್ರವೇಶಿಸಿ ತೀರ್ಥಂಕರಕುಮಾರನನ್ನು ಎತ್ತಿಕೊಂಡು ಹೋಗುತ್ತಾಳೆ. ಗಲಭೆ ನಿಲ್ಲಿಸಲು ತೀರ್ಥಂಕರ ತಾಯಿಗೆ ಮಾಯಾನಿದ್ರೆಯನ್ನು ಒರಿಸಿ ಮಾಯಾಕುಮಾರ

ನನ್ನು ಮಗ್ಗುಲಲ್ಲಿ ಮಲಗಿಸಿ ಹೋಗುತ್ತಾಳೆ.

ಶತಬಳ (೨-೧೯ ವ)– ಸಹಸ್ರಬಳನ ಮಗನು. ಮಹಾಬಳನ ಅಜ್ಜನು.

ಶತಮತಿ (೨-೭ ವ)– ಮಹಾಬಳ ಖಚರನ ಅಮಾತ್ಯ ಮಾಧ್ಯಮಿಕ ಅಥವಾ ಶೂನ್ಯವಾದಕಾರಿಯಾದ ಬೌದ್ಧಮತಾನುಯಾಯಿ. ಸ್ವಯಂಬುದ್ಧನಿಂದ ತತ್ವವಾದದಲ್ಲಿ ಪರಾಜಿತನಾದನು.

ಶಾಂತಮದನ (೬-೩ ವ)– ನಕುಳಾರ್ಯ್ಯಚರನಾದ ಮನೋರಥಕಲ್ಪಜನು ಮುಂದಿನ ಭವದಲ್ಲಿ ಶಾಂತಮದನನಾದನು. ಆತನ ತಂದೆ ಪ್ರಂಭಜನ. ತಾಯಿ ಚಿತ್ರಮಾಲೆ.

ಶಾರ್ದೂಲ (೫-೨ ವ)— ಅನಂತವೀರ್ಯ್ಯನ ಎರಡನೆಯ ಭವ.

ಶ್ರೀ ೧—(೭-೩ ವ)—ಜಿನಜನನಿ ಮರುದೇವಿಯನ್ನು ಅಲಂಕರಿಸಲು ನಿಯುಕ್ತೆಯಾದ ದೇವಿ. ೨—(೭-೩ ವ)— "ಅಲಂಬೂಷೆ" ನೋಡಿ.

ಶ್ರೀಕಾಂತೆ ೧—(೩-೩೩ ವ)— ನಾಗದತ್ತನ ಮಕ್ಕಳಲ್ಲಿ ಎಳಸೆಯವಳು. ೨—(೬-೨೧ ವ)- ವಜ್ರನಾಭಿಯ ತಾಯಿ. ಇವಳ ಪತಿ ವಜ್ರಸೇನ.

ಶ್ರೀಧರದೇವ (೫-೭೦ ವ)—ವಜ್ರಜಂಘನು ಮರುಭವದಲ್ಲಿ ಶ್ರೀಧರದೇವನಾದನು.

ಶ್ರೀಮತಿ ೧—(೩-೧೮ ವ)– ವಜ್ರದಂತಲಕ್ಷ್ಮೀಮತಿಯರ ಮಗಳು. ವಜ್ರಜಂಘನ ಪತ್ನಿ ಭವಾವಳಿ:— (೧) ಧನಶ್ರೀ (೨) ನಿರ್ನಾಮಿಕೆ (೩) ಸ್ವಯಂಪ್ರಭೆ (೪) ಶ್ರೀಮತಿ (೫) ಶ್ರೀಧರನಿಗೆ ಸಾಮಾನಿಕದೇವ ಸ್ವಯಂಪ್ರಭದೇವ. ೨—(೫-೧೩ ವ)— ಭರತೇಶನ ಐದನೆಯ ಭವದ ಮತಿವರನು ವಜ್ರಜಂಘನ ಮಂತ್ರಿಯಾಗಿದ್ದನು. ಆ ಮತಿವರನ ತಾಯಿ ಶ್ರೀಮತಿ; ತಂದೆ ಮತಿಸಾಗರನು

ಶ್ರೀವರ್ಮ ೧- (೨-೩೭ ವ)—ಶ್ರೀಷೇಣಸೌಂದರಿಯರ ಮಗನು. ಹಿರಿಯನಾದ ಜಯವರ್ಮನನ್ನು ಹಿಂದಿರಿಸಿ ಶ್ರೀಷೇಣನು ಇವನಿಗೇ ರಾಜ್ಯವನ್ನು ಕೊಟ್ಟನು. ೨— (೩-೫೦ ವ.) ವಜ್ರದಂತನ ಮೂರನೆಯ ಭವದ ಹೆಸರು. ತನ್ನಕಾಲದ ಬಲದೇವನು. ತನ್ನ ತಮ್ಮ ವಿಭೀಷಣನು ಗತಿಸಲು ದುಃಖಿತನಾಗಿದ್ದನು. ಆಗ ಆತನ ಜನನೀಚರನಾದ ಲಲಿತಾಂಗನು ಬಂದು ಪ್ರತಿಬೋಧಿಸಲು ಯುಗಂಧರ ಮುನೀಶ್ವರರ ಹತ್ತಿರ ದೀಕ್ಷೆಗೊಂಡನು.

ಶ್ರುತಕೀರ್ತಿ (೫-೧೩ ವ )- ಆದಿನಾಥ ಪುತ್ರ. ವೃಷಭಸೇನನ ನಾಲ್ಕನೆಯ ಭವದ ಆನಂದನು ವಜ್ರಜಂಘನ ಪುರೋಹಿತನಾಗಿದ್ದನು. ಆತನ ತಂದೆ ಶ್ರುತಿಕೀರ್ತಿ; ತಾಯಿ ಅನಂತಮತಿ.

ಶ್ರೇಯಾಂಸ (೧೬-೫೮ ವ )- ಆದಿನಾಥನಿಗೆ ಇಕ್ಷುರಸದಾನ ಮಾಡಿದ ಪ್ರಥಮ ಆಹಾರದಾನಿ. ಈತನ ಭವಾವಳಿ:— (೧) ಧನಶ್ರೀ (೨) ನಿರ್ನಾಮಿಕೆ (೩) ಸ್ವಯಂಪ್ರಭೆ (೪) ಶ್ರೀಮತಿ (೫) ಸ್ವಯಂಪ್ರಭದೇವ (೬) ಕೇಶವ ಮಹೀಶ (೭) ಅಚ್ಯುತಪ್ರತೀಂದ್ರ (೮) ಧನದತ್ತ (೯) ಅಹಮಿಂದ್ರ (೧೦) ಶ್ರೆಯಾಂಸ

ಸತ್ಯಭಾವೆ (೩-೭೩ ವ )- ಅಮಿತಗತಿಯ ಪತ್ನಿ.

ಸನ್ಮತಿ (೬-೫೩ ವ )— ಎರಡನೆಯ ಮನು.

ಸಂಭಿನ್ನಮತಿ ( ೨-೭ವ )- ಮಹಾಬಳ ಖಚರನ ಅಮಾತ್ಯ. ಯೋಗಾಚಾರ ಅಥವಾ ವಿಜ್ಞಾನವಾದಕಾರಿಯಾದ ಬೌದ್ಧಮತಾನುಯಾಯಿ. ಸ್ವಯಂಬುದ್ಧನಿಂದ ತತ್ತ್ವವಾದದಲ್ಲಿ ಪರಾಜಿತನಾದನು.

ಸಮಾಧಿಗುಪ್ತ ೧- (೩-೩೮ ವ )-ಇವರಿಗೆ ಧನಶ್ರೀಯಿಂದ ಅಧ್ಯಯನಾಂತರಾಯವಾಯಿತು. (ಧನಶ್ರೀ ನೋಡಿ). ೨— ( ೩-೭೭ ವ )— ಮಹಾಬಳನಿಗೆ ದೀಕ್ಷೆಕೊಟ್ಟ ಜಿನಮುನಿಗಳು.

ಸಹಸ್ರಬಳ ( ೨-೧೮ ವ. )— ಮಹಾಬಳನ ಮುತ್ತಜ್ಜನು.

ಸಾಗರಸೇನ ( ೪-೯೫ ವ )—ಚಾರಣ ಋಷಿಗಳು. ಇವರಿಗೆ ವಜ್ರಜಂಘನು ಸರೋವರದ ಬಳಿ ಆಹಾರದಾನ ಮಾಡಿದನು.

ಸೀತೆ (೭-೩ ವ. )— ' ಇಳಾದೇವಿ ' ನೋಡಿ.

ಸಿಂಹಪುರ ( ೨-೩೫ ವ )-ಜಂಬೂದ್ವೀಪದ ಪರವಿದೇಹದೊಳಗಣ ಗಂಧಿಳವಿಷಯದ ರಾಜಧಾನಿ. ಅದಕ್ಕೆ ಅರಸನು ಶ್ರೀಷೇಣನು.

ಸೀಮಂಕರ ( ೬-೫೭ ವ )- ಐದನೆಯ ಮನು. ಭೋಗಭೂಮಿಜರು ಸೀಮಾವಿವಾದದಲ್ಲಿ ತೊಡಗಿರಲು ಅದನ್ನು ದೂರ ಮಾಡಿದನು.

ಸೀಮಂಧರ ( ೬-೫೭ ವ )—ಆರನೆಯ ಮನು.

ಸೀಮಂಧರಜಿನೇಶ ( ೩-೭೮ ವ. )— ಯುಗಂಧರಯತಿವರರ ಐದನೆಯ ಭವದ ಜಯಸೇನನಿಗೆ ದೀಕ್ಷೆಕೊಟ್ಟರು.

ಸುದೃಷ್ಟಿ ( ೫-೯ ವ )—ಜಂಬೂದ್ವೀಪದ ಪೂರ್ವವಿದೇಹದ ವತ್ಸ

ಕಾವತೀವಿಷಯದ ರಾಜಧಾನಿ. ಅಲ್ಲಿಯ ಅರಸು ಸುದೃಷ್ಟಿ. ಪತ್ನಿ ಸೌಂದರಸುನಂದಾ ಮಹಾದೇವಿ. ಪುತ್ರನು ಸುವಿಧಿ ರಾಜನು.

ಸುನಂದಾಮಹಾದೇವಿ (೮-೧೫ ವ)— ವೃಷಭಸ್ವಾಮಿಯ ಪತ್ನಿ. ಕಚ್ಛಮಹಾಕಚ್ಛರ ತಂಗಿ. ಬಾಹುಬಲಿಯ ತಾಯಿ.

ಸುಪ್ರಣಿಧಿ (೭-೩. ವ)— 'ಸುಪ್ರತಿಷ್ಠಿತೆ' ನೋಡಿ.

ಸುಪ್ರತಿಷ್ಠಪುರ (೫-೧೮ ವ)—ಸುವೀರನ ಮೊದಲನೆಯ ಭವದ ಕಲ್ಲುರಿಗನ ಊರು.

ಸುಪ್ರತಿಷ್ಠಿತೆ (೭-೩ ವ)— ಪುರುಜಿನ ಜನನಿಮರುದೇವಿಗೆ ಮಣಿ ದರ್ಪಣವನ್ನು ಹಿಡಿಯಲು ನಿಯುಕ್ತೆಯಾದ ದಿಗಂಗನೆ.

ಸುಪ್ರಬುದ್ಧೆ (೭-೩ ವ.)— 'ಸುಪ್ರತಿಷ್ಠಿತೆ' ನೋಡಿ.

ಸುಪ್ರಭೆ (೩-೬೫ ವ)—ಜಯವರ್ಮನ ಪತ್ನಿ. ಅಜಿತಂಜಯನ ತಾಯಿ. ಇವಳು ಸುದರ್ಶನ ನಾಮಗಣಿನಿಯ ಸಮಕ್ಷದಲ್ಲಿ ರತ್ನಾವಳಿಯನ್ನು ನೋಂತು ಅಚ್ಯುತಕಲ್ಪದಲ್ಲಿ ಅಚ್ಯುತಾಮರನಾದಳು.

ಸುಬಾಹು (೬-೨೧ ವ.)— ವಜ್ರಜಂಘನ ಮಂತ್ರಿ ಮತಿವರನು ತನ್ನ ಏಳನೆಯ ಭವದಲ್ಲಿ ವಜ್ರಸೇನ ಶ್ರೀಕಾಂತೆಯರಿಗೆ ಸುಬಾಹುವೆಂಬ ಮಗನಾದನು. ಆತನು ವಜ್ರಬಾಹುವಿನ ತಮ್ಮ. ಭವಾವಳಿ:— (೧) ಅತಿಗೃದ್ಧ (೨) ಪಂಕಪ್ರಭನಾರಕ (೩) ಪುಲಿ (೪) ಈಶಾನಕಲ್ಪ ದಿವಾಕರಪ್ರಭ (೫) ಮತಿವರ (೬) ಅಧೋಗ್ರೈವೇಯಕಾಹಮಿಂದ್ರ (೭) ಸುಬಾಹು.

ಸುರದೇವಿ (೭-೩ ವ.)— 'ಮಾಳಿಕೆ' ನೋಡಿ.

ಸುರಾದೇವಿ (೭-೩ ವ)— 'ಇಳಾದೇವಿ' ನೋಡಿ.

ಸುವಿಧಿ (೫-೧೦೦ ವ.)— ಜಂಬೂದ್ವೀಪದ ವತ್ಸಕಾವತೀವಿಷಯದ ಸುಸೀಮಾನಗರದ ಅರಸು ಸುದೃಷ್ಟಿ ಮಹೀಪಾಳನ ಮಗನು. ತಾಯಿ ಸೌಂದರ ಸುನಂದಾಮಹಾದೇವಿ. ಆದಿನಾಥ ತೀರ್ಥಂಕರರ ಏಳನೆಯ ಭವ. ಪತ್ನಿ ಮನೋರಮೆ. ಪುತ್ರ ಶ್ರೀಮತಿಚರ ಸ್ವಯಂಪ್ರಭದೇವನು ಕೇಶವಾಂಕನು.

ಸುವೀರ (೧೬-೫೮ ವ)— ಆದಿನಾಥ ತೀರ್ಥಂಕರರ ಪುತ್ರನು. ತದ್ಭವ ಮೋಕ್ಷಗಾಮಿ. ಇವನ ಭವಾವಳಿ:— (೧) ನಕುಲಾರ್ಯ (೨) ಮನೋರಥದೇವ

(೩) ಶಾಂತಮದನ (೪) ಅಚ್ಯುತಸಾಮಾನಿಕ (೫) ಅಪರಾಜಿತನೃಪ (೬) ಸರ್ವಾರ್ಥಸಿದ್ಧಿ ಅಹಮಿಂದ್ರ (೭) ಸುವೀರ.

ಸುಸೀಮಾನಗರ (೫-೯ ವ) - ಜಂಬೂದ್ವೀಪದ ಪೂರ್ವವಿದೇಹದ ವತ್ಸಕಾವತೀವಿಷಯದ ರಾಜಧಾನಿ. ಇಲ್ಲಿಯ ಸುದೃಷ್ಟಿ ರಾಜ.

ಸೂತ್ರಾಮಣಿ— (೭-೩ ವ.)—'ಚಿತ್ರೆ' ನೋಡಿ.

ಸೌಂದರಸುನಂದಾಮಹಾದೇವಿ (೫-೯ ವ)—ಜಂಬೂದ್ವೀಪದ ವತ್ಸಕಾವತೀವಿಷಯದ ಸುಸೀಮಾನಗರದ ಅರಸು ಸುದೃಷ್ಟಿ ಮಹೀಪಾಳನ ಪತ್ನಿ. ಪುತ್ರನು ಸುವಿಧಿಮಹಾರಾಜ.

ಸೌಂದರಿ ೧—(೨-೧೪ ವ)— ಅಳಕಾಪುರದ ಅರಸು ದಂಡಕನ ಅರಸಿ. ಆ ದಂಡಕನು ಲೋಭವಶನಾಗಿ ದುರ್ವ್ಯಾಪಾರದಿಂದ ಗಳಿಸಿದ ಹಣವನ್ನು ಹುಗಿದು ಸತ್ತು ಅಜಗರನಾಗಿದ್ದನು. ೨— (೨-೩೬ ವ)-ಶ್ರೀಷೇಣ ರಾಜನ ಪತ್ನಿ; ಮಕ್ಕಳು ಜಯವರ್ಮ ಶ್ರೀವರ್ಮರು. ೩—(೫-೪೮ ವ)- ಪುಂಡರೀಕಿಣಿಯ ಅರಸು ಪ್ರಿಯಸೇನ ರಾಜನ ಪತ್ನಿ; ಪ್ರೀತಿಂಕರನ ತಾಯಿ. ೪—(೫-೯೬ ವ)—ರತ್ನಸಂಚಯಪುರದ ಅರಸು ಮಹೀಧರನ ಪತ್ನಿ. ಮಗನು ಜಯಸೇನ

ಸ್ವಯಂಪ್ರಭ (೨-೩೯ ವ)—ಆದಿನಾಥರ ಪ್ರಥಮ ಭವದ ಜಯವರ್ಮನಿಗೆ ದೀಕ್ಷೆಕೊಟ್ಟ ಗುರುಗಳು.

ಸ್ವಯಂಪ್ರಭೆ (೩-೪೦ ವ)- ಲಲಿತಾಂಗದೇವನ ಮಹಾದೇವಿ.

ಸ್ವಯಂಬುದ್ಧ (೨-೫ ವ)— ಮಹಾಬಳಖಚರನ ಅಮಾತ್ಯ. ಜಿನಧರ್ಮಪಂಡಿತನು. ಮಹಾಮತಿಸಂಭಿನ್ನಮತಿಶತಮತಿಗಳೆಂಬ ಅಮಾತ್ಯರನ್ನು ತತ್ತ್ವವಾದದಲ್ಲಿ ಗೆದ್ದು ಮಹಾಬಳಖಚರನಿಂದ ಜಯಪತ್ರವನ್ನು ಪಡೆದನು.

ಹರಿಕಾಂತ (೫-೧೬ ವ)— ಅಚ್ಯುತವೀರ್ಯನ ಮೊದಲ ಭವದೊಳಗಿನ ಹೆಸರು. ತಂದೆ ಆನಂದನೃಪತಿ; ತಾಯಿ ವಸಂತಸೇನೆ. ಅಪ್ರತ್ಯಾಖ್ಯಾನಮಾನದಿಂದ ತಂದೆಗೆ ಅವಿನೀತನಾಗಿ ವರ್ತಿಸುತ್ತಿದ್ದನು. ತನ್ನ ತಲೆಯನ್ನು ಶಿಲೆಯ ಮೇಲೆ ಅಪ್ಪಳಿಸಿಕೊಂಡು ಮಡಿದು 'ವರಾಹ'ನಾದನು.

ಹರಿಶ್ಚಂದ್ರ (೩-೧೧ ವ.)— ಅರವಿಂದ ವಿಜಯೆಯರ ಹಿರಿಯ ಮಗನು. ಅರವಿಂದನು ದಾಹ ಶಾಂತಿಗೆ ತನ್ನನ್ನು ಹರಿಶ್ಚಂದ್ರನು ತನ್ನ ಗಗನಗಾಮಿನೀ ವಿದ್ಯೆಯಿಂದ ಉತ್ತರಕುರುವಿಗೆ ಒಯ್ಯಬೇಕೆಂದು ಬಯಸಲು ಆತನು ನರಕಗಾಮಿಯಾದುದರಿಂದ ಆ ವಿದ್ಯೆ ಹಾಗೆ ಮಾಡಲು ಒಪ್ಪಲಿಲ್ಲ.

ಹ್ರೀ ೧—(೭-೩ ವ)—ಪುರುಜಿನಜನನಿ ಮರುದೇವಿಯನ್ನು ಅಲಂಕರಿಸಲು ನಿಯುಕ್ತೆಯಾದ ದೇವಿ.
೨— (೭-೩ ವ)—'ಅಂಲಬೂಷೆ' ನೋಡಿ.

## ಅನುಬಂಧ ೨

# ಆದಿಪುರಾಣದೊಳಗಿನ ಜೈನಪಾರಿಭಾಷಿಕ

## ಶಬ್ದಕೋಶ.

ಅಕೃತ್ರಿಮ ಚೈತ್ಯಾಲಯ (೨-೩೨ ವ.)—ಮೇರು ಮುಂತಾದ ದೊಡ್ಡ ಪರ್ವತಗಳ ಮೇಲಿರುವ ಜಿನಮಂದಿರಗಳು ಬಹಳ ದೊಡ್ಡವೂ ಅಕೃತ್ರಿಮಗಳೂ ಆಗಿರುತ್ತವೆ.

ಅಕ್ಷಯದಾನ (೧೦-೬)— ಮುನಿಗಳಿಗೆ ಆಹಾರ ಕೊಟ್ಟ ಮೇಲೆ ಅವರು "ಅಕ್ಷಯದಾನಮಸ್ತು" ಎಂದು ಆಶೀರ್ವಾದ ಕೊಟ್ಟು ತಪಸ್ಸಿಗಾಗಿ ವನಕ್ಕೆ ಹೋಗುತ್ತಾರೆ.

ಅಕ್ಷೀಣಾಭಿದಾನ (೬-೩೩ ವ.)— ಇದು ಪ್ರಾಪ್ತವಾಗಿರುವ ಮುನಿಗಳು ಯಾವ ಶ್ರಾವಕರ ಮನೆಯಲ್ಲಿ ಆಹಾರ ತೆಗೆದುಕೊಳ್ಳುತ್ತಾರೋ ಅವರ ಮನೆಯೊಳಗಿನ ಆಹಾರವನ್ನು ಚಕ್ರವರ್ತಿಯ ಸೈನ್ಯಕ್ಕೆ ಉಣಬಡಿಸಿದರೂ ಅದು ತೀರುವದಿಲ್ಲ.

ಅಗುರುಲಘು (೧೬-೪೯ ವ.)—ಈ ಕರ್ಮದ ಉದಯದಿಂದ ಶರೀರವು ಕಬ್ಬಿಣದ ಹಾಗೆ ಜಡವೂ ಅರಳೆಯ ಹಾಗೆ ಹಗುರೂ ಆಗುವುದಿಲ್ಲ.

ಅಗುರುಲಘುತಾ (೧೬-೪೯)— ಗೋತ್ರಕರ್ಮದ ನಾಶದಿಂದ ಆತ್ಮನಲ್ಲಿರುವ ಉಚ್ಚ ನೀಚ ಭಾವಗಳು ನಾಶವಾಗುತ್ತವೆ. ಅದು.

ಅಘಾತಿತ್ರಯ (೧೬-೪೯ ವ.)— ನಾಮಕರ್ಮ ಗೋತ್ರಕರ್ಮ ವೇದನೀಯ ಕರ್ಮ ಇವುಗಳಿಗೆ ಅಘಾತಿತ್ರಯವೆನ್ನುವರು.

ಅಚ್ಯುತ (೧೬-೬೫)— ಹದಿನಾರನೆಯ ಸ್ವರ್ಗ.

ಅಚ್ಯುತ ಕಲ್ಪ (೩-೮)— ಹದಿನಾರನೆಯ ಸ್ವರ್ಗದ ಹೆಸರು.

ಅಚ್ಯುತೇಂದ್ರ (೨-೭೭ ವ.)— ಹದಿನಾರನೆಯ ಸ್ವರ್ಗದ ಒಡೆಯ.

ಅಜಿತಂಜಯ (೧೫-೩ ವ.)— ಭರತ ಚಕ್ರವರ್ತಿಯ ರತ್ನಖಚಿತವಾದ ರಥ.

ಅಜೀವ ತತ್ವ (೧೦-೬೩ ವ.)— ಚೈತನ್ಯಜ್ಞಾನದರ್ಶನರಹಿತ ಪದಾರ್ಥಗಳು. ಇದರಲ್ಲಿ ಧರ್ಮ, ಅಧರ್ಮ, ಆಕಾಶ, ಕಾಲ, ಮತ್ತು ಪುದ್ಗಲ ಎಂದು ಐದು ಭೇದಗಳಿವೆ.

ಅಣಿಮಾದ್ಯಷ್ಟಗುಣ (೬-೪೧ ವ.)– ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ-ಇವು ಎಂಟು ಸಿದ್ಧಿಗುಣಗಳು.

ಅಣುವ್ರತ (೩–೫೦ ವ.)— ಅಹಿಂಸೆ, ಸತ್ಯ, ಅಚೌರ್ಯ, ಬ್ರಹ್ಮಚರ್ಯ, ಪರಿಗ್ರಹಪರಿಮಾಣ ಇವು ಐದು ಅಣುವ್ರತಗಳು.

ಅತಿದುಃಷಮ (೬–೪೮ ವ.)— ಇದು ಆರನೆಯ ಕಾಲ. ಇದರ ಪರಿಮಿತಿ ಇಪ್ಪತ್ತೊಂದು ಸಾವಿರ ವರ್ಷ.

ಅಧರ್ಮ (೧) (೧೦–೬೩ ವ.)— ಜೀವ ಮತ್ತು ಪುದ್ಗಲಗಳ ಸ್ಥಿತಿಗೆ ಸಹಾಯ ಮಾಡುವದು ಅಧರ್ಮ.

ಅಧರ್ಮ (೨) (೫–೭೭)— ಮಿಥ್ಯಾದರ್ಶನ, ಮಿಥ್ಯಾಜ್ಞಾನ, ಮಿಥ್ಯಾ-ಚಾರಿತ್ರಗಳು. ಇವು ಸಂಸಾರಕ್ಕೆ ಕಾರಣಗಳಾಗುತ್ತವೆ.

ಅಧೋಗ್ರೈವೇಯಕ (೬–೨೧ ವ.)— ಗ್ರೈವೇಯಕ ಸ್ವರ್ಗಗಳು ಒಂಬತ್ತು; ಅವುಗಳಲ್ಲಿ ಮೊದಲಿನ ಮೂರಕ್ಕೆ ಅಧೋಗ್ರೈವೇಯಕವೆನ್ನುತ್ತಾರೆ.

ಅಧೋಭೂಮಿ (೫–೬೩)— ಅಧೋಲೋಕ.

ಅಧೋಲೋಕ (೧–೫೦)— ಇದರೊಳಗೆ ರತ್ನಪ್ರಭೆ ಮುಂತಾದ ಏಳು ನರಕಗಳುಂಟು. ಇದರಲ್ಲಿ ಪಾಪಿ ಜೀವಿಗಳು ಹುಟ್ಟಿ ಅವರ ಆಯುಷ್ಯ ತೀರುವವರೆಗೆ ಅನೇಕ ದುಃಖಗಳನ್ನು ಭೋಗಿಸುತ್ತಾರೆ.

ಅಧಃಪ್ರವೃತ್ತಿಕರಣ (೧೦–೧೪ ವ.)— ಪರಿಣಾಮಸಮೂಹದಲ್ಲಿ ಮೇಲಿನ ಸಮಯಗಳ ಪರಿಣಾಮವು ಕೆಳಗಿನ ಸಮಯಗಳೊಳಗಿನ ಪರಿಣಾಮಗಳೊಂದಿಗೆ ಸಮಾನ ಅಥವಾ ವಿಸದೃಶವಿರುವ ಕರಣವು ಅಧಃಪ್ರವೃತ್ತಿಕರಣಪರಿಣಾಮವು.

ಅಧ್ಯಯನ (೮–೭೩ ವ.)— ಬ್ರಾಹ್ಮಣಬಾಲಕನ ಎಂಟನೆಯ ವರ್ಷದಲ್ಲಿ ಮೌಂಜೀಬಂಧನವಾದ ಮೇಲೆ ಅವನು ಜೈನ ಶಾಸ್ತ್ರದ ಅಭ್ಯಾಸ ಮಾಡಬೇಕು. ಅದಕ್ಕೆ ಅಧ್ಯಯನವೆನ್ನುತ್ತಾರೆ.

ಅಧ್ಯಯನಾಂತರಾಯ (೩–೩೮ ವ.)— ಸ್ವಾಧ್ಯಾಯದ ಸ್ಥಳವು ರಕ್ತ, ಮಾಂಸ ಪಂಚೇಂದ್ರಿಯಪ್ರಾಣಿಗಳ ಪ್ರೇತ ಮುಂತಾದವುಗಳಿಂದ ಅಶುದ್ಧವಾಗಿದ್ದರೆ ಅಲ್ಲಿ ಸ್ವಾಧ್ಯಾಯ ಮಾಡಬಾರದು. ಇದು ಸ್ವಾಧ್ಯಾಯದ ಅಂತರಾಯವು.

ಅಧ್ಯಾಪನ (೮–೭೩ ವ.)— ಜೈನಧರ್ಮದ ಶಾಸ್ತ್ರವನ್ನು ಕಲಿಸುವದು.

ಅನಗಾರಕೇವಲಿ (೧೫–೧೬ ವ.)— ತೀರ್ಥಂಕರರನ್ನು ಮತ್ತು ಗಣಧರರನ್ನು ಬಿಟ್ಟು ಮಿಕ್ಕ ಸಾಮಾನ್ಯ ಮುನಿಗಳಿಗೆ ಕೇವಲಜ್ಞಾನವುಂಟಾದಾಗ ಅವರಿಗೆ ಈ ಹೆಸರು ಬರುತ್ತದೆ. ಇವರಿಗೆ ಸಾಮಾನ್ಯಕೇವಲಿ ಎಂಬ ಹೆಸರೂ ಉಂಟು.

ಅನಂತಚತುಷ್ಟಯ (೧೦–೧೫)— ಅನಂತಜ್ಞಾನ, ಅನಂತದರ್ಶನ, ಅನಂತ ಸುಖ ಮತ್ತು ಅನಂತವೀರ್ಯ.

ಅನಂತಜ್ಞಾನಾದಿಗುಣಸಂಪೂರ್ಣ (೨–೧೦ ವ.)— ಆತ್ಮನ ಜ್ಞಾನ, ದರ್ಶನ, ಸುಖ ಮತ್ತು ಶಕ್ತಿ ಮುಂತಾದ ಗುಣಗಳನ್ನು ಪ್ರಕಟಗೊಳಿಸಗೊಡದ ಕರ್ಮಗಳು ನಷ್ಟವಾದ ಮೇಲೆ ಆತನಲ್ಲಿ ಅನಂತಜ್ಞಾನ, ಅನಂತ ದರ್ಶನ, ಅನಂತಸುಖ ಮತ್ತು ಅನಂತವೀರ್ಯ ಮುಂತಾದ ಗುಣಗಳು ಪ್ರಕಟವಾಗುತ್ತಿವೆ. ಆದುದರಿಂದ ಆತ್ಮನು ಅನಂತಜ್ಞಾನಾದಿ ಗುಣಸಂಪೂರ್ಣನು.

ಅನಂತವೀರ್ಯ (೧೬–೨೯)— ದಾನಾಂತರಾಯ ಮುಂತಾದ ಐದು ಅಂತರಾಯ ಕರ್ಮಗಳ ಸಂಪೂರ್ಣ ನಾಶನಾದ ಮೇಲೆ ಸಿದ್ಧಪರಮೇಷ್ಠಿ ಆಗುವ ಮುಂಚೆ ಅನಂತವೀರ್ಯಗುಣವು ಪ್ರಕಟವಾಗುತ್ತದೆ.

ಅನಂತಾನುಬಂಧಿವಿಸಂಯೋಜನ (೧೦–೧೪ ವ.) — ಮೂರು ಕರಣಗಳ ಕಾಲವು ಅಂತರ್ಮುಹೂರ್ತವು. ಅನಿವೃತ್ತಿಕರಣದ ಕೊನೆಯ ಸಮಯದಲ್ಲಿ ಅನಂತಾನುಬಂಧಿ ಕ್ರೋಧ, ಮಾನ, ಮಾಯಾ, ಲೋಭ ಈ ನಾಲ್ಕು ಕಷಾಯಗಳ ವಿಸಂಯೋಜನವಾಗುತ್ತದೆ. ಅಂದರೆ ಈ ನಾಲ್ಕು ಕಷಾಯಗಳು ಅಪ್ರತ್ಯಾಖ್ಯಾನಾದಿ ಹನ್ನೆರಡು ಕಷಾಯ ರೂಪಗಳನ್ನು ಅಥವಾ ನೋಕಷಾಯ ರೂಪಗಳನ್ನು ಹೊಂದುತ್ತವೆ. ಹೀಗೆ ವಿಸಂಯೋಜನವಾದ ಮೇಲೆ ಜೀವನು ಅಂತರ್ಮುಹೂರ್ತದ ವರೆಗೆ ವಿಶ್ರಮಿಸುತ್ತಾನೆ.

ಅನವಧ್ಯವಸಾಯ (೧೦–೬೩ ವ.)— ಇದು ಏನಾದರೂ ಇರುತ್ತದೆ ಎಂಬ ಜ್ಞಾನವುಂಟಾಗುವುದು. ಉದಾ:– ದಾರಿ ಹಿಡಿದು ಹೋಗುವಾಗ ಕಾಲಿಗೆ ಹುಲ್ಲಿನ ಸ್ಪರ್ಶವಾಯಿತೆಂದರೆ ಅದು ಏನೋ ಇರುತ್ತದೆ ಎಂದು ಉಂಟಾಗುವ ಜ್ಞಾನ.

ಅನಶನ (೨–೧೭ ವ.)— ಸಂಯಮಸಿದ್ಧಿಯಾಗಬೇಕು, ರಾಗನಾಶವಾಗಬೇಕು, ಕರ್ಮನಾಶವಾಗಬೇಕು, ಸ್ವಾಧ್ಯಾಯಸಿದ್ಧಿಯಾಗಬೇಕು ಎಂದು ನಾಲ್ಕು ತರದ ಆಹಾರವನ್ನು ತ್ಯಾಗ ಮಾಡುವುದಕ್ಕೆ ಅನಶನವೆನ್ನುತ್ತಾರೆ. ಇದು ಒಂದು ತಪ.

ಅನಶನವಿಧಾನ (೨–೧೭ ವ.)— ನಾಲ್ಕು ತರದ ಆಹಾರಗಳನ್ನು ಪರಿಮಿತ ಕಾಲದ ವರೆಗೆ ಅಥವಾ ಯಾವಜ್ಜೀವ ತ್ಯಾಗ ಮಾಡುವುದಕ್ಕೆ ಅನಶನ ವಿಧಾನವೆನ್ನುತ್ತಾರೆ.

ಅನಾಗತಮತಿ (೫–೭)— ಭವಿಷ್ಯತ್‌ಕಾಲದ ವಿಚಾರ ಮಾಡುವ ಬುದ್ಧಿ.

ಅನಾದ್ಯನಿಧನಸ್ವಭಾವ (೨-೧೦ ವ.)— ಆತ್ಮಾ, ಪುದ್ಗಲ, ಧರ್ಮ ಮುಂತಾದ ದ್ರವ್ಯಗಳು ಅನಾದಿ ಮತ್ತು ಅವಿನಾಶಿಗಳಾಗಿವೆ. ಇವು ಘಟಪಟಾದಿಗಳಂತೆ ಉತ್ಪನ್ನವಾಗುವ ಕಾರಣಗಳಿಂದ ಹುಟ್ಟುವುದಿಲ್ಲ. ಅವುಗಳ ಪರ್ಯಾಯಗಳು ಬದಲಾಗುತ್ತವೆ. ಆದರೆ ಆತ್ಮನು ಆತ್ಮನೇ ಇರುತ್ತಾನೆ. ಪುದ್ಗಲವು ಪುದ್ಗಲವೇ ಇರುತ್ತದೆ. ದ್ರವ್ಯಾರ್ಥಿಕನಯದಿಂದ ಆತ್ಮನು ಅನಾದಿ, ಅನಿಧನನು. ಪರ್ಯಾಯಾರ್ಥಿಕನಯದಿಂದ ಅವನು ಪೂರ್ವಾವಸ್ಥೆಯನ್ನು ಬಿಟ್ಟು ಉತ್ತರಾವಸ್ಥೆಯನ್ನು ಧರಿಸುತ್ತಾನೆ.

ಅನಾದೇಯ (೧೬-೪೯ ವ.)— ಈ ಕರ್ಮದ ಉದಯದಿಂದ ನಿಷ್ಪ್ರಭಶರೀರ ಉಂಟಾಗುತ್ತದೆ.

ಅನಿತ್ಯಾನುಪ್ರೇಕ್ಷೆ (೬-೩೪ ವ.)—ಶರೀರ, ಇಂದ್ರಿಯಗಳು, ವೈಭವ ಮುಂತಾದವುಗಳು ವಿನಾಶಿಗಳು ಎಂದು ಭಾವಿಸುವದು.

ಅನಿವೃತ್ತಬಾದರಸಾಂಪರಾಯಗುಣಸ್ಥಾನ (೧೦-೧೪ ವ.) — ಇದರ ಅಂತರ್ಮುಹೂರ್ತಕಾಲದಲ್ಲಿ ಒಂಬತ್ತು ವಿಭಾಗಗಳಿವೆ. ಮೊದಲನೆಯ ಭಾಗದಲ್ಲಿ ನಿದ್ರಾನಿದ್ರಾ, ಪ್ರಚಲಾಪ್ರಚಲಾ, ಸ್ತ್ಯಾನಗೃದ್ಧಿ, ನರಕಗತಿ, ತಿರ್ಯಗ್ಗತಿ, ಏಕೇಂದ್ರಿಯ ಜಾತಿ, ದ್ವೀಂದ್ರಿಯ ಜಾತಿ, ತ್ರೀಂದ್ರಿಯ ಜಾತಿ, ಚತುರಿಂದ್ರಿಯ ಜಾತಿ, ನರಕಗತಿಪ್ರಾಯೋಗ್ಯಾನುಪೂರ್ವಿ, ತಿರ್ಯಕ್‌ಗತಿಪ್ರಾಯೋಗ್ಯಾನುಪೂರ್ವಿ, ಆತಪ, ಉದ್ಯೋತ, ಸ್ಥಾವರ, ಸೂಕ್ಷ್ಮ, ಸಾಧಾರಣ ಎಂಬ ಹದಿನಾರು ಪ್ರಕೃತಿಗಳ ನಾಶವಾಗುತ್ತದೆ. ಇದೇ ಗುಣಸ್ಥಾನದ ಎರಡನೆಯ ವಿಭಾಗದಲ್ಲಿ ಪ್ರತ್ಯಾಖ್ಯಾನದ ನಾಲ್ಕು ಕಷಾಯಗಳು ಮತ್ತು ಅಪ್ರತ್ಯಾಖ್ಯಾನದ ನಾಲ್ಕು ಕಷಾಯಗಳು ನಾಶವಾಗುತ್ತವೆ. ಇದರ ಮೂರನೆಯ ನಾಲ್ಕನೆಯ ವಿಭಾಗಗಳಲ್ಲಿ ನಪುಂಸಕ ಸ್ತ್ರೀ ವೇದಗಳು ನಾಶವಾಗುತ್ತವೆ. ಆರನೆಯ ವಿಭಾಗದಲ್ಲಿ ಪುರುಷವೇದವು ನಾಶವಾಗುತ್ತದೆ. ಏಳು ಎಂಟು, ಒಂಬತ್ತನೆಯ ವಿಭಾಗಗಳಲ್ಲಿ ಸಂಜ್ವಲನಕಷಾಯಗಳು ನಾಶವಾಗುತ್ತವೆ.

ಅನಿವೃತ್ತಿಕರಣ (೧೦-೧೪ ವ.)—ಭಿನ್ನಸಮಯವರ್ತಿ ಜೀವನ ಪರಿಣಾಮಗಳು ವಿಸದೃಶವಾಗಿರುವ ಮತ್ತು ಸದೃಶ ಸಮಯವರ್ತಿ ಜೀವನ ಪರಿಣಾಮಗಳು ಸದೃಶವಾಗಿರುವ ಕರಣಗಳು.

ಅನಿವೃತ್ತಿಕರಣಕ್ಷಪಕ (೧೦-೧೪ ವ.)—ಅನಿವೃತ್ತಿಕರಣವೆಂಬ ಗುಣಸ್ಥಾನದಲ್ಲಿ ಸಂಜ್ವಲನ, ಕ್ರೋಧ, ಮಾನ, ಮಾಯಾ, ಇವುಗಳ ನಾಶವಾಗುವುದು.

ಅನಿವೃತ್ತಿಕರಣಪರಿಣಾಮ (೧೦–೧೪ ವ.)—ಇವರೊಳಗೆ ಭಿನ್ನಸಮಯವರ್ತಿ ಜೀವಗಳಪರಿಣಾಮಗಳು ಭಿನ್ನವಾಗಿರುತ್ತವೆ ಮತ್ತು ಏಕಸಮಯ ವರ್ತಿ ಜೀವಗಳ ಪರಿಣಾಮಗಳು ಸಮಾನವಾಗಿರುತ್ತವೆ.

ಅನುತ್ತರೆ (೧೫–೩ ವ.)— ಭರತ ಚಕ್ರವರ್ತಿಯ ಸಿಂಹಾಸನ.

ಅನುದಿಶ (೧೬–೬೬)— ಒಂಬತ್ತು ಗ್ರೈವೇಯಕಗಳಾದ ಮೇಲೆ ಎಷ್ಟೋ ಯೋಜನಗಳ ಮೇಲ್ಭಾಗದಲ್ಲಿ ಅನುದಿಶವಿಮಾನಗಳ ಒಂದು ವಿಸ್ತಾರವಾದ ಗುಂಪುವಿದೆ.

ಅನುಪಮ (೧೫–೩ ವ.)— ಭರತ ಚಕ್ರವರ್ತಿಯ ಚವರಿಗಳು.

ಅನುಪ್ರೇಕ್ಷೆ (೨–೫೭)— ಅಧ್ರುವಾದಿ ಹನ್ನೆರಡು ಅನುಪ್ರೇಕ್ಷೆಗಳು.

ಅನುಭಾಗ (೧೦–೧೪ ವ.)— ಆತ್ಮನಿಗೆ ಕರ್ಮಗಳ ಫಲಕೊಡುವ ಶಕ್ತಿ.

ಅನುಭೂತಕಥಾ (೨–೧೧ ವ.)— ತಾನು ಅನುಭವಿಸಿದ ಕಥೆಯ ವರ್ಣನೆ.

ಅನುಯೋಗ (೧–೧೦)— ಜೈನ ಶಾಸ್ತ್ರದ ಅಂಗೋಪಾಂಗಗಳನ್ನು ವಿವರಿಸುವ ಆಗಮಕ್ಕೆ ಅನುಯೋಗವೆನ್ನುತ್ತಾರೆ.

ಅನೇಕಾಂತಿಕ (೨–೧೦ ವ.)— ಪಕ್ಷ, ಸಪಕ್ಷ ಮತ್ತು ವಿಪಕ್ಷಗಳಲ್ಲಿರುವ ಹೇತುವಿಗೆ ಅನೇಕಾಂತಿಕ ಅಥವಾ ವ್ಯಭಿಚಾರಿಹೇತ್ವಾಭಾಸವೆನ್ನುತ್ತಾರೆ. ಉದಾ:— ಈ ಕೋಣೆಯಲ್ಲಿ ಹೊಗೆ ಇದೆ. ಯಾಕೆಂದರೆ ಇಲ್ಲಿ ಬೆಂಕಿ ಇರುತ್ತದೆ. ಇಲ್ಲಿ ಅಗ್ನಿತ್ವ ಹೇತುವು ಪಕ್ಷ, ಸಪಕ್ಷ ಮತ್ತು ವಿಪಕ್ಷ ಈ ಮೂರರಲ್ಲಿ ವ್ಯಾಪಕವಾಗಿರುವದರಿಂದ ಅನೇಕಾಂತಿಕ ಹೇತ್ವಾಭಾಸವು.

ಅಂತರಾಯಪಂಚಕ (೧೦–೧೪ ವ.)— ದಾನಾಂತರಾಯ, ಲಾಭಾಂತರಾಯ, ಭೋಗಾಂತರಾಯ, ಉಪಭೋಗಾಂತರಾಯ ಮತ್ತು ವೀರ್ಯಾಂತರಾಯ.

ಅಂತರ್ದ್ವೀಪ (೧೦–೧೦ ವ.)— ಲವಣೋದಧಿ ಮತ್ತು ಕಾಲೋದಧಿ ಈ ಸಮುದ್ರಗಳಲ್ಲಿ ೯೬ ಅಂತರ್ದ್ವೀಪಗಳಿರುತ್ತವೆ. ಅವುಗಳಲ್ಲಿ ಕುಮಾನುಷರು ಅಂದರೆ ಕುಭೋಗಭೂಮಿಜರು ಇರುತ್ತಾರೆ.

ಅಂತರ್ಮುಹೂರ್ತ (೫–೮೩ ವ.)— ಆವಲಿಯ ಮೇಲೆ ಮತ್ತು ಮುಹೂರ್ತದ ಒಳಗೆ ಇರುವ ಸಮಯ. ಇದು ೪೮ ಮಿನಿಟಿನದು. ಒಂದು ಸೇಕಂದಿನಿಂದ ನಾಲ್ವತ್ತೇಳು ಮಿನಿಟಿನ ವರೆಗಿನ ಕಾಲಕ್ಕೆ ಅಂತರ್ಮುಹೂರ್ತವೆನ್ನುತ್ತಾರೆ.

ಅಪಚಯ ( ೬–೪೮ ವ. )— ಆಯುಷ್ಯ, ಬಲ, ಶರೀರ, ವೈಭವ ಮುಂತಾದವುಗಳು ಕಡಿಮೆಯಾಗುವುದು.

ಅಪರವಿದೇಹ ( ೨–೩೫ ವ. )…. ಪಶ್ಚಿಮವಿದೇಹ.

ಅಪಾಯವಿಚಯ (೧೦–೧೪ ವ.)–ಮಿಥ್ಯಾದೃಷ್ಟಿಗಳು ಜನ್ಮಾಂಧರಂತೆ ಮೋಕ್ಷಮಾರ್ಗವನ್ನು ಬಿಟ್ಟು ದೂರ ಹೋಗುತ್ತಿರುವರು. ಅವರು ಸನ್ಮಾರ್ಗವನ್ನು ಸ್ಥಿರವಾಗಿ ಹೇಗೆ ಹಿಡಿಯಬಹುದು ? ಎಂದು ವಿಚಾರ ಮಾಡುತ್ತಿರುವುದು ಎರಡನೆಯ ಧರ್ಮಧ್ಯಾನ.

ಅಪೂರ್ವಕರಣಸ್ಪರ್ಧಕಾಭಿಘಾತ (೧೦–೧೪ ವ. ) — ಅಪೂರ್ವಕರಣದೊಳಗೆ ಇರುವ ಸ್ಪರ್ಧಕಗಳಿಗೆ ಬಾದರಕೃಷ್ಟಿರೂಪ ಕೊಡುವುದು. ಅಂದರೆ ಅವುಗಳಲ್ಲಿರುವ ಫಲಕೊಡುವ ಸಾಮರ್ಥ್ಯವನ್ನು ಮೊದಲಿಗಿಂತ ಕಡಿಮೆ ಮಾಡುವುದು.

ಅಪೂರ್ವಪ್ರವೃತ್ತಿಕರಣಪರಿಣಾಮ (೧೦–೧೪ ವ.)— ಉತ್ತರೋತ್ತರ ಅಪೂರ್ವ ಅಪೂರ್ವಪರಿಣಾಮವಾಗುವ ಅಂದರೆ ಭಿನ್ನಸಮಯವರ್ತಿ ಜೀವಗಳ ಪರಿಣಾಮವು ಯಾವಾಗಲೂ ವಿಸದೃಶವಾಗಿರುವ ಕರಣವು ಮತ್ತು ಏಕಸಮಯವರ್ತಿ ನಾನಾ ಜೀವಗಳ ಪರಿಣಾಮಗಳಲ್ಲಿ ಸಾದೃಶ್ಯವು ಮತ್ತು ವಿಸದೃಶತೆಯೂ ಇರುವ ಕರಣವು ಅಪೂರ್ವಪ್ರವೃತ್ತಿಕರಣ ಪರಿಣಾಮವು.

ಅಪ್ರತ್ಯಾಖ್ಯಾನಕ್ರೋಧ (೫–೧೪ ವ.)– ಅಪ್ರತ್ಯಾಖ್ಯಾನಾವರಣೀಯ ಕ್ರೋಧದ ಉದಯದಿಂದ ಜೀವನು ಅಹಿಂಸಾದಿ ವ್ರತಗಳನ್ನು ಸ್ವಲ್ಪ ಸಹ ಆಚರಿಸಲಾರನು. ಅದರ ಕ್ಷಯೋಪಶಮವಾದರೆ ಶ್ರಾವಕವ್ರತಗಳನ್ನು ಅಥವಾ ಆರ್ಯಿಕೆಯ ವ್ರತಗಳನ್ನು ಜೀವನು ಸ್ವೀಕರಿಸಬಲ್ಲನು. ಅಪ್ರತ್ಯಾಖ್ಯಾನವೆಂದರೆ ಸ್ವಲ್ಪ ತ್ಯಾಗ. ದೇಶವ್ರತಗಳಿಗೆ ಆವರಣ ಹಾಕುವ ಈ ಕಷಾಯವು ಯಾವ ಜೀವನಲ್ಲಿ ಉದಯವಾಗುತ್ತಿದೆಯೋ ಆವನಿಗೆ ತಿರ್ಯಗಾಯುವಿನ ಬಂಧವಾಗುತ್ತದೆ.

ಅಪ್ರತ್ಯಾಖ್ಯಾನಮಾನ ( ೫–೧೬ ವ. )— ಅಪ್ರತ್ಯಾಖಾನಕ್ರೋಧ ನೋಡಿ.

ಅಪ್ರತ್ಯಾಖ್ಯಾನ ಮಾಯೆ ( ೫–೧೭ ವ. )— ಅಪ್ರತ್ಯಾಖ್ಯಾನಕ್ರೋಧ ನೋಡಿ.

ಅಪ್ರತ್ಯಾಖ್ಯಾನ ಲೋಭ ( ೫–೧೮ ವ. )— ಅಪ್ರತ್ಯಾಖ್ಯಾನಕ್ರೋಧ ನೋಡಿ.

ಅಪ್ರಮತ್ತಗುಣಸ್ಥಾನ ( ೧೦–೧೪ ವ. )— ಸಂಜ್ವಲನಕಷಾಯ ಮತ್ತು ನೋಕಷಾಯ ಇವುಗಳ ಉದಯವು ಮಂದಮಂದವಾಗುತ್ತ ಹೋಗಿ ಮುನಿಗಳಲ್ಲಿ ಪ್ರಮಾದಗಳು ಉಳಿಯುವುದಿಲ್ಲ. ಇಂಥ ಮುನಿಗಳು ಅಪ್ರಮತ್ತ

ಗುಣಸ್ಥಾನವನ್ನು ಪ್ರವೇಶಿಸುತ್ತಾರೆ. ಇದರಲ್ಲಿ ಸ್ವಸ್ಥಾನ ಅಪ್ರಮತ್ತ ಗುಣಸ್ಥಾನ ಮತ್ತು ಸಾತಿಶಯ ಅಪ್ರಮತ್ತಗುಣಸ್ಥಾನ ಎಂದು ಎರಡು ಭೇದಗಳಿವೆ. ಅಪ್ರಮತ್ತಗುಣಸ್ಥಾನಿ ಜೀವನು ಪ್ರತಿಸಮಯದಲ್ಲಿ ಅನಂತಗುಣಿಪರಿಣಾಮಶುದ್ಧಿಯನ್ನು ಧರಿಸುತ್ತಾನೆ. ಹೀಗೆ ಪರಿಣಾಮಶುದ್ಧಿಯಾದ ಮೇಲೆ ಅಪೂರ್ವಕರಣಗುಣಸ್ಥಾನವನ್ನು ಏರುತ್ತಾನೆ.

ಅಪ್ರಾಸುಕ (೫–೧೦)— ಜೀವಗಳು ಉತ್ಪನ್ನವಾಗಿರುವ ಹೂವು, ಹಣ್ಣು, ನೀರು ಮುಂತಾದ ಪದಾರ್ಥಗಳು.

ಅಭಯದಾನ (೧೦–೯)— ತನ್ನ ಮೇಲೆ ಬಂದ ಸಂಕಟಗಳಿಂದ ಅಂಜಿಕೊಂಡಿರುವ ವ್ಯಕ್ತಿಯ ಸಂಕಟಗಳನ್ನು ದೂರ ಮಾಡಿ ಆತನನ್ನು ನಿರ್ಭಯಗೊಳಿಸುವುದು.

ಅಭವ್ಯ (೨–೩೪) — ಸಮ್ಯಕ್‌ಜ್ಞಾನ - ಸಮ್ಯಕ್‌ದರ್ಶನ - ಸಮ್ಯಕ್‌ಚಾರಿತ್ರಗಳಿಂದ ಪರಿಣತನಾಗದವನು. ಅಭವ್ಯನಿಗೆ ಮೋಕ್ಷವಾಗುವದಿಲ್ಲ.

ಅಭಿಜಿನ್ ಮುಹೂರ್ತ (೧೬–೫೧ ವ.)—ಅಭಿಜಿತ್ ಎಂಬ ಹೆಸರಿನ ಇಪ್ಪತ್ತೆಂಟನೆಯ ನಕ್ಷತ್ರವಿರುತ್ತದೆ. ಆ ನಕ್ಷತ್ರದ ಮುಹೂರ್ತವು.

ಅಭೇದ್ಯ (೧೫-೩ ವ.)— ಭರತಚಕ್ರವರ್ತಿಯ ಕವಚ.

ಅಯಶಸ್ಕೀರ್ತಿ (೧೬–೪೯ ವ.)— ಈ ಕರ್ಮದ ಉದಯದಿಂದ ದೋಷಗಳು ಪ್ರಕಟವಾಗುತ್ತವೆ.

ಅಯೋಗಗುಣಸ್ಥಾನ (೧೬–೪೯ ವ.)— ಇದು ಹದಿನಾಲ್ಕನೆಯ ಗುಣಸ್ಥಾನದ ಹೆಸರು. ಈ ಗುಣಸ್ಥಾನವಲ್ಲಿ ಸೂಕ್ಷ್ಮಮನೋವಾಕ್ಕಾಯಯೋಗಗಳ ಮುಖಾಂತರವಾಗಿ ಆತ್ಮಪ್ರದೇಶಗಳಲ್ಲುಂಟಾಗುವ ಸ್ಪಂದ (ಚಲನ) ಕ್ರಿಯೆಯು ಇಲ್ಲದಂತಾಗುತ್ತದೆ. ಈ ಗುಣಸ್ಥಾನದಲ್ಲಿ ಎಲ್ಲ ಆಸ್ರವಗಳ ನಿರೋಧವಾಗುತ್ತದೆ. ಮತ್ತು ಎಲ್ಲ ಅಘಾತಿಕರ್ಮಗಳ ನಾಶವಾಗುತ್ತದೆ. ಪರಿಪೂರ್ಣ–ಯಥಾಖ್ಯಾತಚಾರಿತ್ರ–ಸಮ್ಯಕ್‌ಜ್ಞಾನದರ್ಶನಗಳುಂಟಾಗುತ್ತವೆ; ಸಾಂಸಾರಿಕ ದುಃಖಗಳೆಲ್ಲ ನಾಶವಾಗುತ್ತವೆ ಮತ್ತು ಈ ಅಯೋಗಕೇವಲಿಗಳು ಮೋಕ್ಷಕ್ಕೆ ಹೋಗುತ್ತಾರೆ.

ಅರಿಷ್ಟಪುರ (೨–೩೩ ವ.)— ಮಹಾಕಚ್ಛದೇಶದೊಳಗಿನ ಇದೊಂದು ಮೂಲ ನಗರವು.

ಅರ್ಹದ್ರೂಪ (೧೦—೬೫ ವ.)— ಜಿನೇಶ್ವರನಂತೆ ನಿರ್ಗ್ರಂಥರೂಪಧಾರಣ ಮಾಡುವುದು.

ಅವಗಾಹ (೧೬–೪೯ ವ.)—ನಾಮಕರ್ಮದ ನಾಶದಿಂದ ಈ ಗುಣವು ಪ್ರಾಪ್ತವಾಗುತ್ತದೆ.

ಅವತಂಸಿಕೆ (೧೫-೩ ವ.)— ಭರತಚಕ್ರವರ್ತಿಯ ರತ್ನಮಾಲೆ.

ಅವತಾರ (೧೫-೧೫ ವ.)— ಇಂದ್ರನು ಸ್ವರ್ಗದಿಂದ ಅವತರಿಸುವ ಸಮಯದಲ್ಲಿ ತನಗೆ ಮನುಷ್ಯ ಜನ್ಮವು ಪ್ರಾಪ್ತವಾಗಿ ಬೇಗನೆ ಸಿದ್ಧಿದೊರೆಯಬೇಕೆಂದು ತನ್ನ ಮನಸ್ಸನ್ನು ಸಿದ್ಧನಮಸ್ಕಾರದಲ್ಲಿಯೇ ತೊಡಗಿಸುತ್ತಾನೆ. ಮತ್ತು ಹದಿನಾರು ಸ್ವಪ್ನಗಳ ಮುಖಾಂತರವಾಗಿ ತನ್ನ ಜನ್ಮವನ್ನು ಸೂಚಿಸಿ ಆತನು ಸ್ವರ್ಗತ್ಯಾಗ ಮಾಡುತ್ತಾನೆ.

ಅವತಾರಲಾಭ (೧೫-೧೬ ವ.)— ಭವ್ಯನು ಗುರುಚರಣದಲ್ಲಿ ವ್ರತಗಳನ್ನು ಸ್ವೀಕರಿಸುತ್ತಾನೆ. ಇದು ಆತನಿಗೆ ಧರ್ಮರೂಪದ ಜನ್ಮವು. ಮಿಥ್ಯಾತ್ವ ಪರ್ಯಾಯದ ತ್ಯಾಗವು ಆತನ ಮರಣವು. ಗುರುಧರ್ಮನಿರೂಪಣೆಯಿಂದ ಆತನು ಎರಡನೆಯ ಜನ್ಮವನ್ನು ಪಡೆದಂತೆ ಆಗುತ್ತದೆ. ಇದು ಅವತಾರಲಾಭ.

ಅವಧಿ (೩-೨೯)— ಅವಧಿಜ್ಞಾನ ನೋಡಿ.

ಅವಧಿಜ್ಞಾನ (೨-೧೫)— ಅವಧಿಜ್ಞಾನದ ಕ್ಷಯೋಪಶಮ ಆದ ಮೇಲೆ ದ್ರವ್ಯ, ಕ್ಷೇತ್ರ, ಕಾಲ, ಮತ್ತು ಭಾವ ಇವುಗಳಿಂದ ಮರ್ಯಾದಿತವಾದ ಪದಾರ್ಥಗಳನ್ನು ಮತ್ತು ಕರ್ಮಬದ್ಧ ಜೀವಗಳ ಅನೇಕ ಭವಗಳನ್ನು ತಿಳಿದುಕೊಳ್ಳುವ ಜ್ಞಾನವು.

ಅವಧಿಬೋಧ (೫-೨ ವ.)— ಅವಧಿಜ್ಞಾನ ನೋಡಿ

ಅವಧಿಲೋಚನ (೩-೨೯ ವ.)— ಅವಧಿಜ್ಞಾನರೂಪದ ದೃಷ್ಟಿ.

ಅವಮೋದರ್ಯ (೨-೧೯ ವ)— ಸಂಯಮದಲ್ಲಿ ಸಾವಧಾನತೆ ಬರಬೇಕು. ವಾತಾದಿ ದೋಷಗಳು ಉಪಶಮಗೊಳ್ಳಬೇಕು. ಜ್ಞಾನಧ್ಯಾನಗಳ ಸಿದ್ಧಿಯಾಗಬೇಕು ಎಂದು ಕೀರ ತುಸು ಊಟ ಮಾಡುವ ವ್ರತ. ಆಹಾರವು ೩೨ ತುತ್ತುಗಳುಳ್ಳದ್ದು. ಅದರಲ್ಲಿ ೩೧, ೩೦ ಹೀಗೆ ತುತ್ತುಗಳನ್ನು ಕಡಿಮೆ ಮಾಡುತ್ತ ಒಂದರ ವರೆಗೆ ಬರುವುದಕ್ಕೆ ಅವಮೋದರ್ಯವೆನ್ನುತ್ತಾರೆ.

ಅವಸರ್ಪಿಣಿ (೬-೪೮ ವ.)— ಯಾವ ಕಾಲದಲ್ಲಿ ಭೋಗೋಪಭೋಗ, ಆಯುಷ್ಯ, ಶರೀರದ ನಿಲುವಿಕೆ ಇವು ಕಡಿಮೆಯಾಗುತ್ತ ಹೋಗುತ್ತವೆಯೋ ಅದು.

ಅವಿಪಾಕನಿರ್ಜರೆ (೧೦-೬೩ ವ.)— ಕರ್ಮವು ಉದಯವಾಗಿ ಫಲಕೊಡುತ್ತಿದ್ದರೂ ರಾಗದ್ವೇಷರಹಿತನಾದ ಆತ್ಮನಿಗೆ ಹೊಸ ಕರ್ಮಗಳ ಬಂಧವಾಗುವುದಿಲ್ಲ; ಮತ್ತು ಪೂರ್ವಬದ್ಧ ಕರ್ಮಗಳು ಉದುರಿ ಹೋಗುತ್ತವೆ. ಇದು ಅವಿಪಾಕನಿರ್ಜರೆ.

ಅವ್ಯಾಬಾಧ (೧೬-೪೯ ಪ.)— ವೇದನೀಯ ಕರ್ಮದ ನಾಶದಿಂದ ಈ ಗುಣವು ಉದಯವಾಗುತ್ತದೆ.

ಅಶುಭ (೧೬-೪೯ ಪ.)— ಈ ಕರ್ಮದ ಉದಯದಿಂದ ಕುರೂಪಿ ಶರೀರವು ಪ್ರಾಪ್ತವಾಗುತ್ತದೆ.

ಅಶುಭಪರಿಣಾಮ (೫-೮೩ ಪ.]—ಹಿಂಸೆ, ಚೌರ್ಯ, ಅಸತ್ಯ, ಅಬ್ರಹ್ಮಚರ್ಯ, ಅತಿಪರಿಗ್ರಹಸಂಚಯ ಮಾಡುವ ಪರಿಣಾಮ.

ಅಷ್ಟಮಂಗಲ (೭-೭೩ ಪ.)—(೧) ಛತ್ರ (೨) ಧ್ವಜ (೩) ಚಾಮರ (೪) ಕಲಶ (೫) ಸುಪ್ರತೀಕ (೬) ಭೃಂಗಾರ (೭) ತಾಲ (೮) ದರ್ಪಣ ಇವು ಅಷ್ಟಮಂಗಲಗಳು.

ಅಷ್ಟಮಹಾಪ್ರಾತಿಹಾರ್ಯ (೩-೪೦ ಪ.)— (೧) ಅಶೋಕ ವೃಕ್ಷ, (೨) ಸುರ ಪುಷ್ಪವೃಷ್ಟಿ (೩) ದಿವ್ಯಧ್ವನಿ (೪) ಚತುಷ್ಷಷ್ಟಿ ಚಾಮರ (೫) ರತ್ನ ಜಡಿತ ಸುವರ್ಣಸಿಂಹಾಸನ (೬) ಪ್ರಭಾವಲಯ (೭) ದೇವದುಂದುಭಿ (೮) ಛತ್ರತ್ರಯ.

ಅಷ್ಟಾಹ್ನಿಕ (೧೫-೧೩ ಪ.)— ಎಲ್ಲ ಶ್ರಾವಕರು ಕೂಡಿ ಮಾಡುವ ಜಿನಪೂಜೆ. ಇದನ್ನು ಅಷ್ಟಮಿಯಿಂದ ಹುಣ್ಣಿವೆಯ ವರೆಗೆ ಮಾಡುತ್ತಾರೆ. ಇದರಲ್ಲಿ ನಂದೀಶ್ವರ ದ್ವೀಪದೊಳಗಿನ ಜಿನಮಂದಿರಗಳ ಸಂಕಲ್ಪಮಾಡಿ ಆಷಾಢ, ಕಾರ್ತಿಕ ಮತ್ತು ಫಾಲ್ಗುಣ ಶುದ್ಧ ಅಷ್ಟಮಿಯಿಂದ ಹುಣ್ಣಿವೆಯ ವರೆಗೆ ಪೂಜೆಯು ನಡೆಯುತ್ತದೆ.

ಅಸಂಯುತ (೧೦-೯ ಪ.)— ವ್ರತರಹಿತರು.

ಅಸಿಪತ್ರನಂದನ (೫-೮೮)— ಇದು ನರಕದೊಳಗಿನ ವೈತರಣಿಯ ದಂಡೆಯ ಮೇಲೆ ಇದೆ. ಇದು ಪುಷ್ಪೋದ್ಯಾನವೆಂದು ಭಾವಿಸಿ ದುಃಖಪರಿಹಾರಾರ್ಥವಾಗಿ ಅದನ್ನು ನಾರಕರು ಪ್ರವೇಶಿಸುತ್ತಾರೆ. ಆದರೆ ಅದರೊಳಗಿನ ಕತ್ತಿಯಂತಹ ತೀಕ್ಷ್ಣವಾದ ಎಲೆಗಳು ಅವನ ಮೈಮೇಲೆ ಬಿದ್ದು ಅವನ ಶರೀರವು ತುಂಬಾ ಗಾಯಗೊಳ್ಳುತ್ತದೆ.

ಅಸ್ಥಿರ (೧೬-೪೯ ಪ.)—ಈ ಕರ್ಮದ ಉದಯದಿಂದ ಶರೀರದೊಳಗಿನ ಧಾತುಗಳು ಮತ್ತು ಉಪಧಾತುಗಳು ಅಸ್ಥಿರವಾಗಿ ಉಳಿಯುತ್ತವೆ.

ಅಹಮಿಂದ್ರ (೩-೭೮ ಪ.)—ನವಗ್ರೈವೇಯಕ, ನವ ಅನುದಿಶ ಮತ್ತು ವಿಜಯ, ವೈಜಯಂತ, ಜಯಂತ, ಅಪರಾಜಿತ, ಸರ್ವಾರ್ಥಸಿದ್ಧಿ ಈ ಐದು ಅನುತ್ತರ ವಿಮಾನಗಳಲ್ಲಿ ಇರುವ ಕಲ್ಪಾತೀತ ದೇವರುಗಳಿಗೆ ಅಹಮಿಂದ್ರರೆನ್ನುತ್ತಾರೆ.

ಅಹೋದಾನಿ, ಅಹೋಪಾತ್ರ, ಅಹೋದಾನ, ಅಹೋದೇಯ (೧೦-೪)—ಕಲ್ಪವಾಸಿಗಳು ಸತ್ಪಾತ್ರದಾನಾನಂತರ ಆಹಾರ, ದಾನ, ದೇಯ, ಮತ್ತು ದಾತೃಗಳನ್ನು ಈ ಶಬ್ದಗಳಿಂದ ಸ್ತುತಿಸುತ್ತಾರೆ.

## ಆ

ಆಕಾಶ (೧೦-೬೩ ವ.)— ಜೀವಪುದ್ಗಲಗಳಿಗೆ ಆಶ್ರಯ ಕೊಡುವ ದ್ರವ್ಯ.

ಆಕಿಂಚನ್ಯ (೬-೩೦ ವ.)—ಶರೀರಾದಿಗಳ ಮೇಲಿನ ಮಮತ್ವವನ್ನು ಬಿಡುವದು.

ಆಗಮ (೫-೫೪)— ಜಿನೇಶ್ವರನು ಹೇಳಿದ ಜೀವಾದಿಕಪದಾರ್ಥಗಳ ಸ್ವರೂಪವನ್ನು ಮನಸ್ಸಿನಲ್ಲಿಟ್ಟುಕೊಂಡು ಅವುಗಳನ್ನು ಗಣಧರರು ದ್ವಾದಶಾಂಗದಲ್ಲಿ ವರ್ಣಿಸಿದ್ದಾರೆ. ಆ ವರ್ಣನೆಯು ಆಗಮವು.

ಆಚಾಮ್ಲವರ್ಧನ ತಪ (೩-೬೫ ವ.)-೧ ಆಚಾಮ್ಲ ಒಂದು ಪಾರಣೆ, ೨ ಆಚಾಮ್ಲ ಒಂದು ಪಾರಣೆ, ೩ ಆ. ೧ ಪಾ. ೪ ಆಚಾಮ್ಲ ೧ ಪಾರಣೆ ಹೀಗೆ ಕ್ರಮವಾಗಿ ಹತ್ತರ ವರೆಗೆ ಆಚಾಮ್ಲಗಳನ್ನೂ ಒಂದೊಂದು ಪಾರಣೆಯನ್ನೂ ಮಾಡಬೇಕು. ಆ ತರುವಾಯ ೯, ೮, ೭ ಹೀಗೆ ಒಂದರ ವರೆಗೆ ಆಚಾಮ್ಲಗಳನ್ನೂ ಒಂದೊಂದು ಪಾರಣೆಯನ್ನೂ ಮಾಡಬೇಕು. ಈ ವ್ರತದಲ್ಲಿ ೧೦೦ ಆಚಾಮ್ಲಗಳು ೧೯ ಪಾರಣೆಗಳು ಆಗುತ್ತವೆ.

ಆಚಾರ್ಯ (೧-೩)— ಪಂಚಾಚಾರವನ್ನು ಆಚರಿಸುವವರೂ, ಶಿಷ್ಯರಿಗೆ ಅವುಗಳನ್ನು ಆಚರಿಸುವಂತೆ ಉಪದೇಶಿಸಿ ಅವುಗಳನ್ನು ಅವರು ಆಚರಿಸುವಂತೆ ಮಾಡುವವರೂ ಆಚಾರ್ಯರು. ಅವರು ಎಲ್ಲ ಶಾಸ್ತ್ರವಿಶಾರದರೂ, ಧೈರ್ಯವುಳ್ಳವರೂ ಆಗಿರುತ್ತಾರೆ.

ಆಜ್ಞಾವಿಚಯ (೧೦-೧೪ ವ)— ಧರ್ಮಧ್ಯಾನದ ಮೊದಲನೆಯ ಭೇದವು. ಯಥಾರ್ಥ ಉಪದೇಶಕರು ಇಲ್ಲದಿರುವಾಗ ಮತ್ತು ತಮ್ಮ ಜ್ಞಾನವು ಮಂದವಾಗಿರುವಾಗ ಪದಾರ್ಥ ನಿರ್ಣಯವಾಗಲಾರದು. ಇಂಥ ಸಮಯದಲ್ಲಿ ಎಲ್ಲ ಶಾಸ್ತ್ರಗಳು ಪ್ರಮಾಣವೆಂದು ನಂಬಿ ಶಾಸ್ತ್ರಗಳು ಹೇಳಿದಂತೆ ವಸ್ತುವಿನ ಸೂಕ್ಷ್ಮ ಸ್ವರೂಪದ ಪ್ರಮಾಣವನ್ನು ಒಪ್ಪಿಕೊಳ್ಳುವದು, ಅದರ ಮೇಲೆ ವಿಶ್ವಾಸವಿಡುವದು ಮತ್ತು ಮೇಲಿಂದ ಮೇಲೆ ಅದರ ಚಿಂತನೆ ಮಾಡುವದು ಆಜ್ಞಾವಿಚಯಧರ್ಮಧ್ಯಾನವು.

ಆತ್ಮಭಾವನಾಯೋಗ (೧೫-೧೫ ವ.)— ಆತ್ಮಭಾವನೆಯ ಸಂಸ್ಕಾರವನ್ನು ತನ್ನ ಮೇಲೆ ಮಾಡಿಕೊಂಡು ಅದರಿಂದ ಸಲ್ಲೇಖನ ವ್ರತಕ್ಕೆ ಸಿದ್ಧನಾಗಬೇಕು.

ಆತ್ಮೋಪಾತ್ತಶರೀರಪ್ರಮಾಣ (೨-೧೦ ವ.)— ಆತ್ಮನು ವ್ಯಾಪಕನೂ ಅಲ್ಲ; ಆಲದ ಬೀಜದಂತೆ ಸೂಕ್ಷ್ಮನೂ ಅಲ್ಲ. ಅವನಿಗೆ ಶರೀರವು ದೊರೆತಂತೆ ಆತನು ಸಣ್ಣವನೂ ದೊಡ್ಡವನೂ ಆಗುತ್ತಾನೆ.

ಆದಿಬ್ರಹ್ಮ (೧-೧)— ವರ್ತಮಾನಕಾಲದ ೨೪ ತೀರ್ಥಂಕರರಲ್ಲಿ ಮೊದಲನೆ ಯವರಾದ ಶ್ರೀ ವೃಷಭಜಿನೇಶ್ವರರು. ಇವರಿಗೆ ಭರತ, ಬಾಹುಬಲಿ, ವೃಷಭಸೇನ, ಅನಂತವೀರ್ಯ ಮುಂತಾದ ನೂರು ಜನ ಮಕ್ಕಳು. ಬ್ರಹ್ಮ ಶಬ್ದಕ್ಕೆ ಆತ್ಮ, ಮೋಕ್ಷ, ಜ್ಞಾನ, ಚಾರಿತ್ರ ಮತ್ತು ಭರತ ರಾಜನ ತಂದೆ ಆದಿಜಿನ ಎಂಬ ಅರ್ಥಗಳಿವೆ. ಈ ವಿಷಯವಾಗಿ ಯಶಸ್ತಿ ಲಕಚಂಪು ಗ್ರಂಥದ ಉತ್ತರಾರ್ಧದಲ್ಲಿ ಈ ಪದ್ಯವಿದೆ—

ಆತ್ಮನಿ ಮೋಕ್ಷೇ ಜ್ಞಾನೇ ವೃತ್ತೇ ತಾತೇ ಚ ಭರತರಾಜಸ್ಯ
ಬ್ರಹ್ಮೇತಿ ಗೀಃ ಪ್ರಗೀತಾ ನ ಚಾಪರೋ ವಿದ್ಯತೇ ಬ್ರಹ್ಮಾ ||

ಆನತ (೧೬-೬೫)— ಹದಿಮೂರನೆಯ ಸ್ವರ್ಗ.

ಆಪ್ತ (೫-೫೪)— ಕ್ಷುಧಾ, ತೃಷೆ ಮುಂತಾದ ಹದಿನೆಂಟು ದೋಷಗಳು ನಾಶ ವಾಗಿ ಸರ್ವಜ್ಞತ್ವವನ್ನು ಪಡೆದ ಮತ್ತು ಆಗಮಗಳನ್ನು ರಚಿಸಿದ ಜಿನೇಶ್ವರನು ಆಪ್ತನು. ಆವನಿಗೆ ಅರ್ಹತ್, ಸರ್ವಜ್ಞ ಎಂಬ ಹೆಸರು ಗಳಿವೆ.

ಆಮ್ನಾಯ (೨-೨೦)— ಕಂಠ, ತಾಲು, ಓಷ್ಠ ಮುಂತಾದ ಎಂಟು ಸ್ಥಳ ಗಳಿಂದ ಶಬ್ದೋಚ್ಚಾರವನ್ನು ಶುದ್ಧಮಾಡಿ ಮತ್ತೆ ಶಾಸ್ತ್ರದ ಆವೃತ್ತಿ ಮಾಡುವುದು, ಆತ್ಮಹಿತಕ್ಕೆಂದು ಸ್ವಾಧ್ಯಾಯಮಾಡುವುದು ಆಮ್ನಾ ಯವು. ಗುರುಪರಂಪರೆಗೂ ಆಮ್ನಾಯವೆನ್ನುತ್ತಾರೆ. ಗುರುಪರಂಪರೆಯ ಅನುಸಾರವಾಗಿ ಆಗಮಸೂತ್ರಗಳ ಅರ್ಥಮಾಡುವುದೂ ಆಮ್ನಾಯವು.

ಆಯುಃಕರ್ಮ (೧೦-೧೪ ಪ.)— ಇದು ಜೀವನನ್ನು ಒಂದು ಶರೀರದಲ್ಲಿ ಕೆಲವು ಕಾಲದ ವರೆಗೆ ನಿಲ್ಲಿಸುತ್ತದೆ.

ಆರಂಭ (೫-೪)—ಪ್ರಾಣಿಗಳಿಗೆ ಉಪದ್ರವವುಂಟಾಗುವಂತಹ ಕಾರ್ಯಗಳನ್ನು ಮಾಡುವುದು.

ಆರ್ಜವ (೬-೩೦ ಪ.)— ನಿಷ್ಕಪಟ ಪ್ರವೃತ್ತಿ.

ಆರ್ತಧ್ಯಾನ (೨-೧೫ ಪ.)— ಅನಿಷ್ಟಪದಾರ್ಥಗಳ ಸಂಯೋಗ, ಇಷ್ಟಪದಾರ್ಥ ಗಳ ವಿಯೋಗ, ರೋಗಗಳಿಂದುಟಾಗುವ ಸಂಕಟ, ಭಾವಿಸುಖ ಮುಂತಾದವು ಈ ಧ್ಯಾನಕ್ಕೆ ವಿಷಯಗಳು. ಅನಿಷ್ಟಪದಾರ್ಥಗಳ ಸಂಯೋಗವು ಹೇಗೆ ಕಳೆದು ಹೋದೀತು ! ಇಷ್ಟ ಪದಾರ್ಥಗಳು ಹೇಗೆ ದೊರೆತಾವು ! ರೋಗಾದಿಗಳು ಎಂದು ವಾಸಿಯಾದಾವು ! ಇಂದ್ರ ಪದಾದಿಗಳು ಎಂದು ದೊರೆಯಬಹುದು ! ಇವೇ ಮುಂತಾದ ಚಿಂತನೆ ಗಳು ಇದರಲ್ಲಿ ನಡೆಯುತ್ತವೆ.

ಆರ್ಯಷಟ್‌ಕರ್ಮ (೧೫-೧೩ ವ.)— ಅಸಿ, ಮಷಿ, ಕೃಷಿ, ವಾಣಿಜ್ಯ, ವಿದ್ಯಾ ಮತ್ತು ಶಿಲ್ಪ ಇವು ಆರ್ಯರ ಉದರನಿರ್ವಾಹದ ಸಾಧನಗಳು.

ಆರ್ಹಂತ್ಯವಿಹಾರ (೧೫--೧೫ ವ.)— ಸಮವಸರಣವು ವಿಹರಿಸುತ್ತಿರುವಾಗ ಧರ್ಮಚಕ್ರವು ಮುಂದೆ ಸಾಗುತ್ತದೆ. ಅವರ ಹಿಂದೆ ಅರ್ಹಂತ ಪರಮೇಶ್ವರರು ವಿಹಾರ ಮಾಡುತ್ತಾರೆ.

ಆವಲಿ (೬-೪೮ ವ.)—ಅಸಂಖ್ಯಾತ ಸಮಯಗಳಿಂದ ಒಂದು ಆವಲಿ ಆಗುತ್ತದೆ.

ಆವಶ್ಯಕ (೧-೫)— (೧) ಸಾಮಾಯಿಕ, (೨) ೨೪ ತೀರ್ಥಂಕರರ ಸ್ತುತಿ, (೩) ಒಬ್ಬರು ತೀರ್ಥಂಕರರ ಸ್ತುತಿ (ವಂದನೆ), (೪) ಪ್ರತಿಕ್ರಮಣ, (೫) ಆಗಾಮಿದೋಷಗಳ ತ್ಯಾಗ, (೬) ಶರೀರದ ಮೇಲಿನ ಮಮತ್ವ ತ್ಯಾಗ (ಕಾಯೋತ್ಸರ್ಗ) ಇವು ಆರು ಆವಶ್ಯಕಗಳು. ಇವುಗಳನ್ನು ಮುನಿಗಳು ಯೋಗ್ಯ ಕಾಲದಲ್ಲಿ ಅವಶ್ಯವಾಗಿ ಆಚರಿಸಬೇಕಾದುದರಿಂದ ಇವುಗಳಿಗೆ ಆವಶ್ಯಕವೆನ್ನುತ್ತಾರೆ.

ಆಸನಕಂಪ (೭-೪೨)— ಜಿನಜನ್ಮಕಾಲದಲ್ಲಿ ದೇವತೆಗಳ ಆಸನವು ಕಂಪನಗೊಳ್ಳುತ್ತದೆ ಮತ್ತು ಅವರ ಕಿರೀಟವು ತನ್ನಿಂದ ತಾನೇ ನಮ್ರವಾಗುತ್ತದೆ. ಅದರಿಂದ ಜಿನಜನ್ಮನಾಯಿತೆಂದು ತಿಳಿದು ಎಲ್ಲ ದೇವತೆಗಳು ಜನ್ಮಕಲ್ಯಾಣಕ್ಕಾಗಿ ಸ್ವರ್ಗದಿಂದ ಬರುತ್ತಾರೆ.

ಆಸನ್ನಭವ್ಯ (೨-೩೫ ವ.)— ತುಸು ಜನ್ಮಗಳನ್ನು ಧರಿಸಿ ಮುಕ್ತಿ ಪಡೆಯುವ ಭವ್ಯನು.

ಆಸ್ರವ (೧೦-೬೩ ವ)— ಜೀವನಲ್ಲಿ ಶುಭಾಶುಭಕರ್ಮಗಳ ಆಗಮನವು ಉಂಟಾಗುವುದು.

ಆಹಾರದಾನ (೬-೯)— ಸಮ್ಯಕ್‌ದೃಷ್ಟಿ, ಅಣುವ್ರತಿ ಮತ್ತು ಮಹಾವ್ರತಿಗಳಿಗೆ ಭಕ್ತಿಯಿಂದ ವಿಧಿಪೂರ್ವಕವಾಗಿ ಅವರ ರತ್ನತ್ರಯದ ಬೆಳವಣಿಗೆ ಆಗಬೇಕೆಂದು ಅನ್ನದಾನ ಮಾಡುವುದು.

ಆಹಾರಪರ್ಯಾಪ್ತಿ (೫-೮೩ ವ)— ಮೊದಲಿನ ಶರೀರಗಳನ್ನು ಬಿಟ್ಟು ಹೊಸ ಶರೀರಕ್ಕೆ ಕಾರಣವಾಗುವ ನೋಕರ್ಮಗಳಿಗೆ ಕಾರಣವಾಗುವ ಜೀವನ ಶಕ್ತಿಯು ಪೂರ್ಣವಾಗುವುದು.

## ಇ

ಇಂದ್ರಕ (೫-೮೩ ವ.)—ನರಕಬಿಲವು ಇಂದ್ರದಂತೆ ಮಧ್ಯಭಾಗದಲ್ಲಿ ಇರುತ್ತದೆ. ಅದು ಇಂದ್ರಕವು.

ಇಂದ್ರತ್ಯಾಗಾವತಾರ (೧೫-೧೫ ವ.)— ತನ್ನ ಆಯುಷ್ಯವು ತುಸು ಉಳಿದಿದೆ ಎಂದು ತಿಳಿದುಕೊಂಡು ಇಂದ್ರನು ತನ್ನ ಭೋಗಾಭಿಲಾಷೆಯನ್ನು

ಬಿಟ್ಟು ತನ್ನ ಇಂದ್ರಪದವನ್ನು ಮುಂದೆ ಬರುವ ಇಂದ್ರನಿಗಾಗಿ ತ್ಯಾಗ ಮಾಡುತ್ತಾನೆ. ಆಗ ಅವನ ಮನಸ್ಸಿನಲ್ಲಿ ಎಳ್ಳಷ್ಟು ದುಃಖವಾಗುವುದಿಲ್ಲ.

ಇಂದ್ರಧ್ವಜ ( ೧೫-೧೩ ವ )— ಇಂದ್ರರು ಮಾಡುವ ಜಿನಪೂಜೆ.

ಇಂದ್ರಿಯಪರ್ಯಾಪ್ತಿ (೫-೬೩ವ.)—ಶರೀರಕ್ಕೆ ದ್ರವ್ಯೇಂದ್ರಿಯಗಳ ರೂಪಕೊಡುವ ಜೀವನ ಶಕ್ತಿಯು ಪೂರ್ಣವಾಗುವುದು.

ಇಂದ್ರೋಪಪಾದ ( ೧೫-೧೫ ವ. )—ಸ್ವರ್ಗದೊಳಗಿನ ದಿವ್ಯ ಉಪಪಾತ ತಲ್ಪದ ಮೇಲೆ ಹುಟ್ಟಿದ ಇಂದ್ರನಿಗೆ ಆ ಕ್ಷಣದಲ್ಲಿಯೇ ತಾರುಣ್ಯಪ್ರಾಪ್ತ ವಾಗುತ್ತದೆ. ಕೂಡಲೆ ಅವನಿಗೆ ಅವಧಿಜ್ಞಾನವು ಉಂಟಾಗುತ್ತದೆ.

## ಈ

ಈಶಾನಕಲ್ಪ ( ೨-೬೧ ವ. )— ಹದಿನಾರು ಸ್ವರ್ಗಗಳಲ್ಲಿ ಎರಡನೆಯದು.

## ಉ

ಉಚ್ಚೈರ್ಗೋತ್ರ ( ೧೬-೪೯ ವ. )— ಈ ಕರ್ಮದ ಉದಯದಿಂದ ಲೋಕದಲ್ಲಿ ಗಣ್ಯವಾದ ಇಕ್ಷ್ವಾಕು ಮುಂತಾದ ವಂಶಗಳಲ್ಲಿ ಜನ್ಮ ಉಂಟಾಗುತ್ತದೆ.

ಉಚ್ಛ್ವಾಸ (೧) ( ೬--೪೮ ವ. )— ಸಂಖ್ಯಾತ ಆವಲಿಗಳಿಂದ ಒಂದು ಉಚ್ಛ್ವಾಸವು. (೨) ( ೧೬-೪೯ ವ. )— ಈ ಕರ್ಮದ ಉದಯದಿಂದ ಉಚ್ಛ್ವಾಸ ಉಂಟಾಗುತ್ತದೆ.

ಉಚ್ಛ್ವಾಸಪರ್ಯಾಪ್ತಿ ( ೫-೬೩ ವ. ) — ಕೆಲವು ನೋಕರ್ಮಸ್ಕಂಧಗಳಿಗೆ ಶ್ವಾಸೋಚ್ಛ್ವಾಸಪರಿಣತಗೊಳಿಸುವ ಜೀವನ ಶಕ್ತಿಯು ಪೂರ್ಣವಾಗುವುದು.

ಉತ್ಕೃಷ್ಟಚಾರಿತ್ರ ( ೬-೧೧ ವ. )— ಗೃಹಸ್ಥನ ಉತ್ಕೃಷ್ಟದೇಶಚಾರಿತ್ರವು.

ಉತ್ತಮಕ್ಷಮಾ ( ೬-೩೦ ವ. )— ದುಷ್ಟ ಜನರು ಅಸಹ್ಯವಾಗಿ ಬೈದರೆ ಅಥವಾ ಹೊಡೆದರೆ ಸಿಟ್ಟು ಬರಗೊಡದೆ ಇರುವುದು ಉತ್ತಮ ಕ್ಷಮೆಯು.

ಉತ್ತಮತಪ ( ೧-೫೩ )— ಐಹಿಕಸುಖಕೀರ್ತಿಗಳನ್ನು ಬಯಸದೆ ಸಂಯಮ ಪ್ರಾಪ್ತಿ — ರಾಗವಿನಾಶ — ಕರ್ಮನಾಶ — ಶಾಸ್ತ್ರಾಭ್ಯಾಸಗಳಿಗಾಗಿ ಮಾಡುವ ತಪಸ್ಸು ಉತ್ತಮತಪಸ್ಸು.

ಉತ್ತರಕುರು ( ೨-೧೪ ವ. )— ವಿದೇಹಕ್ಷೇತ್ರದಲ್ಲಿ ಮೇರುಪರ್ವತದ ಉತ್ತರ ದಿಕ್ಕಿನಲ್ಲಿ ಇರುವ ಉತ್ತಮಭೋಗಭೂಮಿಯು.

ಉತ್ತರಗುಣ ( ೬-೨೮ ವ. )— ಇವು ಹಿಂಸಾದಿ ೮೪ ಗುಣಗಳಾಗುತ್ತವೆ.

ಉತ್ಸರ್ಪಿಣಿ ( ೬–೪೮ ಪ. )— ಭೋಗೋಪಭೋಗ, ಆಯುಷ್ಯ, ಶರೀರದ ನಿಲುವಿಕೆ ಮುಂತಾದವುಗಳು ಯಾವ ಕಾಲದಲ್ಲಿ ಬೆಳೆಯುತ್ತ ಹೋಗುತ್ತವೆಯೋ ಆ ಕಾಲ.

ಉತ್ತಾನಶಯ್ಯೆ ( ೫–೪೧ ಪ )— ಅಂಗಾತ ಮಲಗುವುದು. ಭೋಗಭೂಮಿಜರಾದ ಸ್ತ್ರೀಪುರುಷಯುಗಲವು ಹುಟ್ಟಿದ ಮೇಲೆ ಮೊದಲಿನ ಏಳು ದಿವಸಗಳ ವರೆಗೆ ಹೆಬ್ಬೆರಳನ್ನು ಚೀಪುತ್ತ ಅಂಗಾತ ಮಲಗಿ ಬೆಳೆಯುತ್ತದೆ.

ಉತ್ಪಾದ ( ೨–೧೦ ಪ. )— ಪದಾರ್ಥವು ತನ್ನ ಜಾತಿಯನ್ನು ಬಿಡದೆ ಬೇರೆ ಅವಸ್ಥೆಯನ್ನು ಧರಿಸುವುದಕ್ಕೆ ಉತ್ಪಾದವೆನ್ನುತ್ತಾರೆ. ಪದಾರ್ಥವು ಸಚೇತನವಾಗಿರಲಿ ಅಥವಾ ಅಚೇತನವಾಗಿರಲಿ ತನ್ನ ಜಾತಿಯನ್ನು ಬಿಡದೆ ಬಾಹ್ಯಾಭ್ಯಂತರ ಕಾರಣಗಳ ಮೂಲಕವಾಗಿ ಅದಕ್ಕೆ ಅವಸ್ಥಾಂತರ ಉಂಟಾಗುತ್ತದೆ. ಅದು ಉತ್ಪಾದವು. ಉದಾ.—ಮಣ್ಣು ಅಚೇತನಾವಸ್ಥೆಯನ್ನು ಸ್ಪರ್ಶಾದಿಗಳನ್ನು ಬಿಡದೆ ಘಟರೂಪ ಧಾರಣ ಮಾಡುತ್ತದೆ. ಘಟವು ಮಣ್ಣಿನ ಉತ್ಪಾದ.

ಉತ್ಸನ್ನಶರೀರ ( ೩–೧೭ )— ತ್ಯಾಗ ಮಾಡಿದ ಶರೀರ.

ಉಪಗೂಹನ ( ೫–೫೮ )—ಉತ್ತಮಕ್ಷಮಾದಿಗಳಿಂದ ತನ್ನಲ್ಲಿ ಸದ್ಗುಣಗಳನ್ನು ಬೆಳಸಿ ಸಾಧರ್ಮಿಗಳ ದೋಷಗಳನ್ನು ಮುಚ್ಚುವುದು.

ಉಪಚಯ ( ೬–೪೮ ಪ. )— ಆಯುಷ್ಯ, ಬಲ ಶರೀರ, ವೈಭವ ಮುಂತಾದವುಗಳ ಬೆಳವಣಿಗೆ.

ಉಪಪತ್ತಿ (೨-೨೨ ಪ.)—ಕಾರ್ಯವನ್ನು ಪ್ರಮಾಣಬದ್ಧವಾಗಿ ವರ್ಣಿಸುವುದು.

ಉಪಪಾತತಲ್ಪ ( ೨–೭೨ ಪ. )— ದೇವರೂ ದೇವಿಯರೂ ಹುಟ್ಟುವ ಶಯ್ಯೆ

ಉಪಪಾತಶಯನ ( ೬-೩೭ ಪ. )— ಉಪಪಾತತಲ್ಪ ನೋಡಿ.

ಉಪಯೋಗತ್ವ ( ೧೫-೧೬ ಪ. )— ಇವರಲ್ಲಿ ಭವ್ಯನು ಅಷ್ಟಮೀಚತುರ್ದಶಿಗಳಲ್ಲಿ ಉಪವಾಸ ಮಾಡಿ ಆ ರಾತ್ರಿಗಳಲ್ಲಿ ಧ್ಯಾನಸ್ಥನಾಗಿ ಕುಳಿತುಕೊಂಡು ಅಥವಾ ನಿಂತುಕೊಂಡು ಆತ್ಮಚಿಂತನೆ ಮಾಡುತ್ತ ರಾತ್ರಿಯನ್ನು ಕಳೆಯುತ್ತಾನೆ. ಇದು ಉಪಯೋಗತ್ವ.

ಉಪಶಮ ( ೩–೪೦ )— ಕರ್ಮವು ಉದಯವಾಗದಿರುವಿಕೆ ಮತ್ತು ಅದು ಅಲ್ಲಿಯೇ ನಿಂತು ಹೋಗುವಿಕೆ.

ಉಪಶಮಭಾವ ( ೫–೨ ಪ. )— ದಾನವಿಧಿಯನ್ನು ನೋಡುತ್ತಿರುವಾಗ ಪ್ರಾಣಿಗಳ ಪರಿಣಾಮದೊಳಗಿನ ಕ್ರೂರ ಭಾವವು ನಾಶವಾಗುತ್ತದೆ.

ಆ ಕಾರಣದಿಂದ ಭೋಗಭೂಮಿಜರ ಆಯುರ್ಬಂಧವಾಗುತ್ತದೆ. ಇದು ಉಪಶಮಭಾವದ ಪ್ರಭಾವವು.

ಉಪಶಮಶ್ರೇಣಿ (೬-೩೩ ವ.)— ಚಾರಿತ್ರಮೋಹದ ಇಪ್ಪತ್ತೊಂದು ಪ್ರಕೃತಿಗಳ ಉಪಶಮ ಮಾಡುವುದಕ್ಕೆ ಉಪಶಮಶ್ರೇಣಿ ಎನ್ನುತ್ತಾರೆ. ಇಪ್ಪತ್ತೊಂದು ಶ್ರೇಣಿಗಳು: —ಅಪ್ರತ್ಯಾಖ್ಯಾನ—ಕ್ರೋಧ-ಮಾನ—-ಮಾಯಾ-ಲೋಭ ಇವು ನಾಲ್ಕು, ಪ್ರತ್ಯಾಖ್ಯಾನಕ್ರೋಧ-ಮಾನ--ಮಾಯಾ-ಲೋಭ ಇವು ನಾಲ್ಕು, ಸಂಜ್ವಲನಕ್ರೋಧ-ಮಾನ—-ಮಾಯಾ-ಲೋಭ ಇವು ನಾಲ್ಕು, ಇವು ಹನ್ನೆರಡು ಕಷಾಯಗಳು. ಮತ್ತು ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸೆ, ಸ್ತ್ರೀವೇದ, ಪುಂವೇದ, ನಪುಂಸಕವೇದ, ಇವು ಒಂಬತ್ತು ನೋಕಷಾಯಗಳು ಇವೆಲ್ಲ ಕೂಡಿ ೨೧ ಪ್ರಕೃತಿಗಳು.

ಉಪಾದಾನ (೨-೯ ವ.)— ಸ್ವತಃ ಕಾರ್ಯರೂಪ ಪರಿಣತವಾಗುವ ಪದಾರ್ಥಗಳಿಗೆ ಉಪಾದಾನವೆನ್ನುತ್ತಾರೆ. ಉದಾಹರಣೆ:—ಘಟದ ಉತ್ಪತ್ತಿಯಲ್ಲಿ ಮಣ್ಣು ತಾನೇ ಘಟರೂಪಹೊಂದುತ್ತದೆ. ಆದರಿಂದ ಮಣ್ಣು ಉಪಾದಾನವಾಯಿತು. ಅನಾದಿಕಾಲದಿಂದ ದ್ರವ್ಯಗಳಲ್ಲಿ ಬದಲಾವಣೆಯಾಗುತ್ತಿರುವ ಪ್ರವಾಹವು ನಡೆಯುತ್ತಲೇ ಇದೆ. ಅದರಲ್ಲಿ ಪೂರ್ವಕ್ಷಣವರ್ತಿಪರ್ಯಾಯವು ಅಥವಾ ಬದಲಾವಣೆಯು ಉಪಾದಾನಕಾರಣವಾಗುತ್ತದೆ. ಮತ್ತು ಉತ್ತರಕ್ಷಣವರ್ತಿಪರ್ಯಾಯವು ಕಾರ್ಯವಾಗುತ್ತದೆ.

ಉಪಾದೇಯ (೧) (೧-೪)—ಗ್ರಾಹ್ಯವಾದ ಜ್ಞಾನಾದಿ ಗುಣಗಳಿಗೆ ಉಪಾದೇಯವೆನ್ನುತ್ತಾರೆ. (೨) (೨-೯ ವ.)— ಉಪಾದಾನಕಾರಣದಿಂದ ಉಂಟಾಗುತ್ತಿರುವ ಕಾರ್ಯವು ಉಪಾದೇಯವು. ಉದಾಹರಣೆ:— ಮಣ್ಣಿನ ಮುದ್ದೆಯಿಂದ ಘಟವಾಗುವಲ್ಲಿ ಮಣ್ಣು ಉಪಾದಾನವು ಘಟವು ಉಪಾದೇಯವು.

ಉಪಾಧ್ಯಾಯ (೧-೪)— ಮೋಕ್ಷಪ್ರಾಪ್ತಿಗೆಂದು ಭವ್ಯರು ಇವರ ಕಡೆಗೆ ಬಂದು ಇವರ ಹತ್ತಿರ ಶಿಷ್ಯರಾಗಿ ಶಾಸ್ತ್ರಾಧ್ಯಯನ ಮಾಡುತ್ತಾರೆ. ಈ ಮುನಿಗಳು ಶಿಷ್ಯರಿಗೆ ಶಾಸ್ತ್ರದ ದ್ವಾದಶಾಂಗ ಮುಂತಾದ ಭಾಗಗಳ ಜ್ಞಾನಮಾಡಿಕೊಡುತ್ತಾರೆ. ಇವರು ಲೋಭ ಮುಂತಾದ ಕಷಾಯವಿಲ್ಲದವರಾಗಿ ಶುದ್ಧಮಹಾವ್ರತಗಳನ್ನು ಆಚರಿಸುತ್ತಾರೆ.

ಉಪಾಸಕ (೬-೬)— ವೀತರಾಗ, ದೇವ, ಗುರು ಮತ್ತು ಶಾಸ್ತ್ರಗಳ ಉಪಾಸನೆ ಮಾಡುವ ಗೃಹಸ್ಥ.

ಉಪಾಸಕವ್ರತ (೧) (೨-೧೯ ವ.)—ಶ್ರಾವಕನ ದರ್ಶನಪ್ರತಿಮೆ ವ್ರತಪ್ರತಿಮೆ ಮುಂತಾದ ಹನ್ನೊಂದು ಪ್ರತಿಮೆಗಳ ಆಚರಣಕ್ಕೆ ಉಪಾಸಕವ್ರತವೆನ್ನುತ್ತಾರೆ. (೨) (೧೦-೬೫ ವ.)— ಶ್ರಾವಕರ ಐದು ಅಣುವ್ರತಗಳು ಮೂರು ಗುಣವ್ರತಗಳು ಮತ್ತು ನಾಲ್ಕು ಶಿಕ್ಷಾವ್ರತಗಳು ಕೂಡಿ ಹನ್ನೆರಡು ವ್ರತಗಳಾಗುತ್ತವೆ. ಇವು ಉಪಾಸಕವ್ರತಗಳು.

ಉಪಾಸಕಾಧ್ಯಯನ (೧೫-೧೩ ವ.)—ಇದು ದ್ವಾದಶಾಂಗ-ಶ್ರುತಜ್ಞಾನಗಳಲ್ಲಿ ಏಳನೆಯ ಅಂಗವು. ಇದರಲ್ಲಿ ಶ್ರಾವಕನ ಆಚಾರ ಮತ್ತು ಕ್ರಿಯೆಗಳು ಹೇಳಲಾಗಿವೆ.

## ಊ

ಊರ್ಧ್ವಲೋಕ (೧-೫೦)— ಮೇರುಪರ್ವತದ ಚೂಲಿಕೆಯ ಮೇಲೆ ಎರಡು ಮೈಲಗಳ ಅಂತರದ ಮೇಲೆ ಸೌಧರ್ಮಕಲ್ಪದ ಋತುವೆಂಬ ಹೆಸರಿನ ವಿಮಾನವಿದೆ. ಅಲ್ಲಿಂದ ಊರ್ಧ್ವಲೋಕ ಆರಂಭವಾಗುತ್ತದೆ. ಈ ಲೋಕದಲ್ಲಿ ಸೌಧರ್ಮ ಮುಂತಾದ ಹದಿನಾರು ಸ್ವರ್ಗಗಳಿದ್ದು ಅಲ್ಲಿ ಕಲ್ಪವಾಸಿ ದೇವರು ಇರುತ್ತಾರೆ. ಇವುಗಳ ಮೇಲೆ ಒಂಬತ್ತು ಗ್ರೈವೇಯಕಗಳು ನವಾನುದಿಸೆ ಮತ್ತು ಪಂಚಾಣುತ್ತರೆಗಳು ಉಂಟು. ಇಲ್ಲಿ ಕಲ್ಪಾತೀತ ಅಹಮಿಂದ್ರರು ವಾಸಿಸುತ್ತಾರೆ.

## ಎ

ಎಂಟುಕಷಾಯ-(೧೦-೧೪ವ)— ಅಪ್ರತ್ಯಾಖ್ಯಾನಕ್ರೋಧ, ಮಾನ, ಮಾಯಾ, ಲೋಭ ಮತ್ತು ಪ್ರತ್ಯಾಖ್ಯಾನಕ್ರೋಧ, ಲೋಭ, ಮಾನ, ಮಾಯಾ.

ಎಂಟುಕಿಲ್ಬಿಷ (೧-೨)— ಪಾಪಕ್ಕೆ ಕಿಲ್ಬಿಷವೆನ್ನುತ್ತಾರೆ. ಜ್ಞಾನಾವರಣಾದಿ ಎಂಟು ಕರ್ಮಗಳು ಆತ್ಮನ ಜ್ಞಾನ, ದರ್ಶನ, ಸುಖ, ವೀರ್ಯ ಮುಂತಾದ ಎಂಟು ಗುಣಗಳನ್ನು ನಾಶಮಾಡಿ ಅವನನ್ನು ಪರತಂತ್ರಗೊಳಿಸುತ್ತವೆ. ಆದುದರಿಂದ ಆ ಅಶುಭ ಕರ್ಮಗಳು ಕಿಲ್ಬಿಷರೂಪಗಳು, ಅಂದರೆ ಪಾಪರೂಪಗಳಾಗಿರುತ್ತವೆ. ಆಕಾರಣದಿಂದ ಅವುಗಳಿಗೆ ಎಂಟು ಕಿಲ್ಬಿಷವೆನ್ನುತ್ತಾರೆ. ಬೇಡಿಯು ಬಂಗಾರದ್ದಿರಲಿ ಅಥವಾ ಕಬ್ಬಿಣದ್ದಿರಲಿ ಅದು ಬೇಡಿಯೇ. ಯಾಕೆಂದರೆ ಏಳು ವೇದನೀಯ, ಉಚ್ಚಗೋತ್ರ, ದೇವಾಯು ಮತ್ತು ತೀರ್ಥಂಕರರ ನಾಮ ಮುಂತಾದ ಶುಭಕರ್ಮಗಳು ಸಹ ಜ್ಞಾನಾವರಣಾದಿ ಅಶುಭ ಕರ್ಮಗಳಂತೆಯೇ ಜೀವನನ್ನು ಸಂಸಾರದಲ್ಲಿ ಭ್ರಮಣಗೊಳಿಸ

ಹಚ್ಚುತ್ತವೆ. ಆದರಿಂದ ಎಲ್ಲ ಕರ್ಮಗಳಿಗೆ ಕಿಲ್ಬಿಷ ಎಂದು ಸಂಬೋಧಿಸಲಾಗಿದೆ. ರತ್ನಕರಂಡಕಶ್ರಾವಕಾಚಾರದಲ್ಲಿ ವರ್ಧಮಾನತೀರ್ಥಂಕರರಿಗೆ "ನಿರ್ಧೂತಕಲಿಲಾತ್ಮಾ" ಎನ್ನಲಾಗಿದೆ. ಜ್ಞಾನಾವರಣಾದಿ ಕರ್ಮಗಳಿಗೆ ಕಲಿಲ, ಕಿಲ್ಬಿಷ, ಪಾಪ ಮುಂತಾದ ಹೆಸರುಗಳಿವೆ.

ಎಂಟುಗುಣ (೧) (೧-೩)— ಎಂಟು ಕರ್ಮಗಳ ನಾಶದಿಂದ ಜೀವನು ಶುದ್ಧನಾಗುತ್ತಾನೆ. ಆಗ ಜ್ಞಾನಾವರಣಕರ್ಮನಾಶದಿಂದ ಅನಂತಜ್ಞಾನ— ಕೇವಲಜ್ಞಾನವು ದೊರಕುತ್ತದೆ. ದರ್ಶನಾವರಣಕರ್ಮನಾಶದಿಂದ ಅನಂತದರ್ಶನಗುಣ ಪ್ರಾಪ್ತವಾಗುತ್ತದೆ. ವೇದನೀಯಕರ್ಮನಾಶದಿಂದ ಅವ್ಯಾಬಾಧಗುಣವೂ ಮೋಹನೀಯ ಕರ್ಮನಾಶದಿಂದ ಸಮ್ಯಕ್ತ್ವವೂ ಆಯುಃಕರ್ಮದ ನಾಶದಿಂದ ಅವಗಾಹನಗುಣವೂ ನಾಮಕರ್ಮದ ನಾಶದಿಂದ ಸೂಕ್ಷ್ಮತ್ವಗುಣವೂ ಗೋತ್ರಕರ್ಮ ನಾಶದಿಂದ ಅಗುರುಲಘುತ್ವವೂ ಅಂತರಾಯಕರ್ಮನಾಶದಿಂದ ಅನಂತವೀರ್ಯವೂ ದೊರಕುತ್ತವೆ. ಇವು ಎಂಟು ಸಿದ್ಧರ ಗುಣಗಳು. (೨) (೫—೫೮ ಪ.)— (೧) ಸಂವೇಗ— ಸಂಸಾರದ ಅಂಜಿಕೆ, (೨) ನಿರ್ವೇಗ—ಧರ್ಮಫಲದ ಬಗ್ಗೆ ಉತ್ಸಾಹ, (೩) ನಿಂದಾ—ತನ್ನ ದೋಷಗಳನ್ನು ನಿಂದಿಸುವುದು, (೪) ಗರ್ಹಾ— ಗುರುಗಳ ಮುಂದೆ ತನ್ನ ದೋಷಗಳನ್ನು ತಾನೇ ನಿಂದಿಸಿಕೊಳ್ಳುವುದು, (೫) ಉಪಶಮ— ಕ್ರೋಧ ಮುಂತಾದ ಕಷಾಯಗಳನ್ನು ಹತ್ತಿಕ್ಕುವುದು. (೬) ಭಕ್ತಿ— ಸದ್ಗುಣಗಳ ಮೇಲೆ ಪ್ರೀತಿ, (೭) ಅನುಕಂಪಾ—ಪ್ರಾಣಿಗಳ ಬಗ್ಗೆ ದಯೆ, (೮) ವಾತ್ಸಲ್ಯ— ಸಾಧರ್ಮಿಕರ ಮೇಲೆ ಪ್ರೇಮ.

## ಏ

ಏಕತ್ವವಿತರ್ಕವಿಚಾರ (೧೦-೧೪ ಪ.) — ಇದು ಎರಡನೆಯ ಶುಕ್ಲಧ್ಯಾನ. ಇದರ ಚಿಂತನೆಯಿಂದ ಕೇವಲಜ್ಞಾನ ಉಂಟಾಗುತ್ತದೆ. ಅಂದರೆ ಮೋಹಕರ್ಮಸಹಿತವಾಗಿ ಜ್ಞಾನಾವರಣೀಯ ದರ್ಶನಾವರಣೀಯ ಮತ್ತು ಅಂತರಾಯ ಈ ಮೂರು ಕರ್ಮಗಳ ನಾಶವಾಗಿ ಈ ಧ್ಯಾನದಿಂದ ಕೇವಲಜ್ಞಾನ ಉಂಟಾಗುತ್ತದೆ.

ಏಕಾದಶನಿಳಯ (೬-೧೧)—ಶ್ರಾವಕರ ಹನ್ನೊಂದು ಪ್ರತಿಮೆಗಳು. ಇವುಗಳಲ್ಲಿ ಹಿಂದಿನ ಪ್ರತಿಮೆಗಳಲ್ಲಿನ ಆಚಾರಗಳನ್ನು ಮುಂದಿನ ಪ್ರತಿಮೆಗಳಲ್ಲಿಯೂ ನಡಿಸಬೇಕಾಗುತ್ತದೆ. (೧) ದರ್ಶನಪ್ರತಿಮೆ— ಮದ್ಯ, ಮಾಂಸ, ಮಧು ಇವುಗಳ ತ್ಯಾಗ ಮತ್ತು ಐದು ಔದುಂಬರತ್ಯಾಗಗಳನ್ನು ಅತಿಚಾರ ರಹಿತವಾಗಿ ಮಾಡುವುದು, (೨) ವ್ರತಪ್ರತಿಮೆ—ಅಣುವ್ರತ

ಗುಣವ್ರತ ಮತ್ತು ಶಿಕ್ಷಾವ್ರತಗಳನ್ನು ಸ್ವೀಕರಿಸುವುದು, (೩) ಸಾಮಾಯಿಕ— ಮುಂಜಾನೆ ಮಧ್ಯಾಹ್ನ ಮತ್ತು ಸಂಜೆಯಲ್ಲಿ ಸಾಮಾಯಿಕ ಮಾಡುವುದು. (೪) ಪ್ರೋಷದೋಪವಾಸ–ಅಷ್ಟಮಿ ಚತುರ್ದಶಿ ದಿವಸಗಳಲ್ಲಿ ಉಪವಾಸ ಮಾಡುವುದು, (೫) ಸಚಿತ್ತತ್ಯಾಗ–ಕಾಯಿ, ಪಲ್ಯ, ಹೂವು ಮುಂತಾದವುಗಳನ್ನು ಸೇವಿಸದಿರುವುದು, (೬) ರಾತ್ರಿಭೋಜನತ್ಯಾಗ–ರಾತ್ರಿಯಲ್ಲಿ ನಾಲ್ಕು ತರಹದ ಆಹಾರವನ್ನು ಸೇವಿಸದಿರುವುದು, (೭) ಬ್ರಹ್ಮಚರ್ಯ— ಸ್ತ್ರೀತ್ಯಾಗ ಮಾಡುವುದು, (೮) ಆರಂಭತ್ಯಾಗ–ಕೃಷಿವಾಣಿಜ್ಯ ಮುಂತಾದ ಹಿಂಸಾತ್ಮಕ ವ್ಯಾಪಾರಗಳನ್ನು ಮಾಡದಿರುವುದು, (೯) ಪರಿಗ್ರಹತ್ಯಾಗ— ಮನೆಮಾರುಧನಧಾನ್ಯಗಳ ಮೇಲಿನ ಪ್ರೀತಿಯ ತ್ಯಾಗ, (೧೦) ಅನುಮತಿತ್ಯಾಗ—ಆರಂಭ ಪರಿಗ್ರಹ, ವಿವಾಹ ಮುಂತಾದ ಕಾರ್ಯಗಳಲ್ಲಿ ಆಪ್ತರಿಗೆ ಸಮ್ಮತಿ ಕೊಡದಿರುವುದು, (೧೧) ಉದ್ದಿಷ್ಟಾಹಾರತ್ಯಾಗ—ತಮ್ಮ ದೆಸೆಯಿಂದಲೇ ಮಾಡಿದ ಆಹಾರವನ್ನು ತ್ಯಾಗ ಮಾಡುವುದು. ಇವು ಹನ್ನೊಂದು ಶ್ರಾವಕರ ನಿಲಯಗಳು.

## ಐ

ಐದುಸಮಿತಿ (೬-೨೮)—(೧) ಈರ್ಯಾಸಮಿತಿ–ಸೂರ್ಯೋದಯವಾದ ಮೇಲೆ ತನ್ನ ಮುಂದೆ ನಾಲ್ಕು ಮೊಳದ ವರೆಗೆ ಹಿಂಸೆಯಾಗದಂತೆ ನೋಡಿ ನಡೆದು ಹೋಗುವುದು, (೨) ಭಾಷಾಸಮಿತಿ— ಹಿತಮಿತವಾದ ಮತ್ತು ಸಂಶಯವುಳಿಯದ ಮಾತುಗಳನ್ನಾಡುವುದು, (೩) ಏಷಣಾಸಮಿತಿ—ಶುದ್ಧ ಆಹಾರ ಸ್ವೀಕರಿಸುವುದು, (೪) ಆದಾನನಿಕ್ಷೇಪಣಸಮಿತಿ–ಭೂಮಿಯ ಮೇಲಿನ ಪುಸ್ತಕ ಮುಂತಾದ ವಸ್ತುಗಳನ್ನು ತೆಗೆದುಕೊಳ್ಳುವಾಗ ಅವುಗಳ ಮೇಲೆ ಪಿಂಚಿಯನ್ನಾಡಿಸಿ ತೆಗೆದುಕೊಳ್ಳಬೇಕು. ಅವುಗಳನ್ನು ಇಡಬೇಕಾದಲ್ಲಿಯೂ ಹೀಗೆಯೇ ಪಿಂಚಿಯಾಡಿಸಿ ಇಡಬೇಕು, (೫) ಪ್ರತಿಷ್ಠಾಪನಸಮಿತಿ ( ವ್ಯುತ್ಸರ್ಗಸಮಿತಿ ) — ಜೀವಜಂತುಗಳು ಇಲ್ಲದ ಸ್ಥಳದಲ್ಲಿ ಮಲಮೂತ್ರವಿಸರ್ಜನ ಮಾಡುವುದು.

ಐರಾವತ (೧) (೧–೪೮ ವ.)— ಶಿಖರಿಪರ್ವತ ಮತ್ತು ಪೂರ್ವ ಪಶ್ಚಿಮ ಉತ್ತರ ಸಮುದ್ರಗಳ ನಡುವಿನ ಪ್ರದೇಶವು. ಭರತಕ್ಷೇತ್ರದಂತೆ ಇದರಲ್ಲಿಯೂ ವಿಜಯಾರ್ಧಪರ್ವತ ಮತ್ತು ಗಂಗಾ ಸಿಂಧು ನದಿಗಳಿಂದ ಆರು ಭಾಗಗಳಾಗಿವೆ. ಪ್ರತಿಯೊಂದು ಭಾಗಕ್ಕೆ ಖಂಡವೆನ್ನುತ್ತಾರೆ. (೨) (೭–೪೩ )— ಬಾಲಕನೆಂಬ ಹೆಸರಿನ ಅಭಿಯೋಗ್ಯದೇವರುಗಳ

ಒಡೆಯನು ಆನೆಯ ರೂಪಧಾರಣ ಮಾಡುತ್ತಾನೆ. ಅವನ ಸ್ವರೂಪವು ಹೀಗೆ:— ದ್ವಾತ್ರಿಂಶದಾಸ್ಯಾನಿ ಮುಖೇಽಷ್ಟದಂತಾ ದಂತೇಽಬ್ಧಿರಬ್ಧೌ ಬಿಸಿನೀ ಬಿಸಿನ್ಯಾಂ ||
ದ್ವಾತ್ರಿಂಶದಬ್ಜಾನಿ ದಲಾನಿ ಚಾಬ್ಜೇ ದ್ವಾತ್ರಿಂಶದಿಂಪ್ರ ದ್ವಿರದಸ್ಯ ರೇಜುಃ||

## ಔ

ಔಷಧರ್ಧಿ (೬–೩೩ ವ.)— ಈ ಋದ್ಧಿಯುಳ್ಳ ಮುನಿಗಳ ಶರೀರದ ಮೇಲಿಂದ ಹಾದುಹೋಗುವ ಗಾಳಿಯಿಂದ ನಾನಾತರದ ರೋಗಗಳು ವಾಸಿಯಾಗುತ್ತವೆ.

## ಕ

ಕನಕಗಿರಿ (೧–೪೮ ವ.)— ಪೂರ್ವವಿದೇಹದ ಕ್ಷೇತ್ರದಲ್ಲಿ ಸೀತಾನದಿಯ ಪೂರ್ವ ಪಶ್ಚಿಮ ದಿಕ್ಕುಗಳಲ್ಲಿ ಐದು ಸರೋವರಗಳಿವೆ. ಅವುಗಳ ಪೂರ್ವಪಶ್ಚಿಮ ದಂಡೆಯ ಮೇಲೆ ನೂರು ಯೋಜನ ಎತ್ತರದ ಹತ್ತು ಹತ್ತು ಸುವರ್ಣ ಗಿರಿಗಳಿವೆ. ಅದರಂತೆ ಅಪರವಿದೇಹದಲ್ಲಿಯೂ ಆ ಸರೋವರಗಳ ದಕ್ಷಿಣೋತ್ತರ ದಂಡೆಗಳ ಮೇಲೆ ಹತ್ತು ಹತ್ತು ಪರ್ವತಗಳಿವೆ. ಇದರಂತೆಯೇ ಸೀತೋದಾನದಿಯ ಸಂಬಂಧದಲ್ಲಿಯೂ ನೂರು ಪರ್ವತಗಳಿವೆ. ಈ ಎರಡು ನೂರು ಪರ್ವತಗಳಿಗೆ ಕನಕಗಿರಿ ಎನ್ನುತ್ತಾರೆ.

ಕನಕಾವಳಿತಪ (೩–೬೪ ವ.) ಈ ವ್ರತವು ಒಂದು ವರ್ಷದ ವರೆಗೆ ಸಾಗುತ್ತದೆ. ಇದರಲ್ಲಿ ಪ್ರತಿಯೊಂದು ತಿಂಗಳ ಶುಕ್ಲಪಕ್ಷದಲ್ಲಿ ಪ್ರತಿಪದೆ, ಪಂಚಮಿ, ಮತ್ತು ದಶಮಿ, ಕೃಷ್ಣಪಕ್ಷದಲ್ಲಿ ದ್ವಿತೀಯಾ, ಷಷ್ಠಿ ಮತ್ತು ದ್ವಾದಶಿ ಈ ತಿಥಿಗಳಲ್ಲಿ ಉಪವಾಸ ಮಾಡಬೇಕಾಗುತ್ತದೆ. ಎಲ್ಲ ಉಪವಾಸಗಳ ಸಂ: ೭೨.

ಕಪೋತಲೇಶ್ಯೆ— (೫–೮೩ ವ.)— ಎರಡನೆಯವರ ನಿಂದೆ, ಎರಡನೆಯವರಿಗೆ ದೋಷಾರೋಪಣೆ, ಎರಡನೆಯವರ ಹೊಟ್ಟೆಕಿಚ್ಚು, ಆತ್ಮಪ್ರಶಂಸೆ, ಯುದ್ಧದಲ್ಲಿ ಮರಣ ಬಯಸುವುದು, ಸ್ತುತಿಪ್ರೀತಿ ಇವೇ ಮುಂತಾದವುಗಳು ಕಪೋತಲೇಶ್ಯೆಯ ಪ್ರಭಾವದಿಂದ ಉಂಟಾಗುತ್ತವೆ.

ಕರಣಗಣ (೧೦–೧೪)— ಸ್ಪರ್ಶನಾದಿ ಇಂದ್ರಿಯಗಳ ಸಮೂಹ.

ಕರ್ತ್ರನ್ವಯಕ್ರಿಯೆ (೧೫–೧೬ ವ.)— ಮೋಕ್ಷವು ಬೇಗನೆ ದೊರಕುವ ಭವ್ಯ ಜೀವನಿಗೆ ಪ್ರಾಪ್ತವಾಗುವ ಕ್ರಿಯೆಗಳು.

**ಕರ್ಮ** (೬–೨೪ ವ.)— ಜೀವನನ್ನು ಪರತಂತ್ರಗೊಳಿಸುವ ಪಾಪಪುಣ್ಯಗಳು ಕರ್ಮಗಳು. ಅವು ಜ್ಞಾನಾವರಣೀಯ ಮುಂತಾಗಿ ಎಂಟು ಇರುತ್ತವೆ.

**ಕರ್ಮಬಂಧನ** (೧–೪)— ಹಗ್ಗದಿಂದ ಬಿಗಿಯಾಗಿ ಕಟ್ಟಲ್ಪಟ್ಟ ಮನುಷ್ಯನು ದುಃಖಿಯೂ ಪರತಂತ್ರನೂ ಆಗಿರುವಂತೆ ಜ್ಞಾನಾವರಣ ಮುಂತಾದ ಕರ್ಮಗಳಿಂದ ಬದ್ಧನಾದ ಜೀವನು ದುಃಖಿಯೂ ಪರತಂತ್ರನೂ ಆಗಿರುತ್ತಾನೆ. ಆದುದರಿಂದ ಕರ್ಮಗಳಿಗೆ **ಬಂಧನ**ವೆನ್ನುತ್ತಾರೆ.

**ಕರ್ಮಭೂಮಿಸ್ಥಿತಿ** (೬–೬೨ ವ.)— ಅಸಿಮಷಿ ಆದಿ ಷಟ್‌ಕರ್ಮಗಳಿಂದ ನಿರ್ವಾಹ ಮಾಡಿಕೊಳ್ಳಬೇಕಾಗುತ್ತಿರುವ, ಸರ್ವಾರ್ಥಸಿದ್ಧಿ ಮುಂತಾದ ಕಲ್ಪಸ್ಥಾನವನ್ನು ದೊರಕಿಸಿಕೊಡುವ ಶುಭಕರ್ಮಗಳನ್ನು ಅಥವಾ ಪುಣ್ಯಕರ್ಮಗಳನ್ನು ದೊರಕಿಸಬಹುದಾಗಿರುವ ಅದರಂತೆ ಅಶುಭಕರ್ಮಗಳನ್ನು ದೊರಕಿಸಿಕೊಳ್ಳಬಹುದಾದ ಭರತ ಮತ್ತು ಐರಾವತ ಕ್ಷೇತ್ರಗಳೊಳಗಿನ ಆರ್ಯಖಂಡಕ್ಕೆ ಕರ್ಮಭೂಮಿ ಎನ್ನುತ್ತಾರೆ.

**ಕರ್ಮರಿಪು** (೧–೪೬)—ಜ್ಞಾನಾವರಣಾದಿಕರ್ಮಗಳು ಶತ್ರುಗಳಂತೆ ಜೀವನಿಗೆ ನಾಲ್ಕು ಗತಿಗಳಲ್ಲಿ ನಾನಾದುಃಖಗಳನ್ನುಂಟುಮಾಡುತ್ತವೆ. ಅದರಿಂದ ಅವುಗಳಿಗೆ ಕರ್ಮರಿಪುವೆನ್ನುತ್ತಾರೆ.

**ಕಲಿಲ** (೫–೪೧ ವ.)— ಪಾತಕ.

**ಕಲ್ಪ** (೧೬–೬೪)— ಸ್ವರ್ಗ.

**ಕಲ್ಪಲತೆ** (೨–೧೪ ವ.)— ಭೋಗಭೂಮಿಯಲ್ಲಿ ಹತ್ತು ಕಲ್ಪವೃಕ್ಷಗಳು ಇರುತ್ತವೆ. ಸಮವಸರಣದಲ್ಲಿ ಕಲ್ಪವೃಕ್ಷಗಳ ವನವಿರುತ್ತದೆ. ಅವುಗಳಿಗೆ ಕಲ್ಪಲತೆ, ಸುರತರು ಮುಂತಾದ ಹೆಸರುಗಳು.

**ಕಲ್ಪವೃಕ್ಷ** (೩–೩ ವ.)—ಇಚ್ಛಿತಪದಾರ್ಥಗಳನ್ನು ಕೊಡುವ ಮರ. ಭೋಗಭೂಮಿಯಲ್ಲಿ ಮತ್ತು ಸ್ವರ್ಗಗಳಲ್ಲಿ ಈ ವೃಕ್ಷಗಳಿರುತ್ತವೆ.

**ಕಲ್ಪಾಮರ** (೩–೧)—ಸೌಧರ್ಮಸ್ವರ್ಗದಿಂದ ಅಚ್ಯುತಸ್ವರ್ಗದ ವರೆಗೆ ಇರುವ ಹದಿನಾರು ಸ್ವರ್ಗಗಳೊಳಗಿನ ದೇವರಿಗೆ ಕಲ್ಪಾಮರ ಅಥವಾ ಕಲ್ಪವಾಸಿ, ಕಲ್ಪಜ ಎನ್ನುತ್ತಾರೆ.

**ಕವಾಟಕ್ರಿಯೆ** (೧೬–೪೯ ವ.)— ಕವಾಟಸಮುದ್ಘಾತದಲ್ಲಿ ಆತ್ಮಪ್ರದೇಶಗಳು ಹೆಚ್ಚುಹೆಚ್ಚು ಅಗಲವಾಗುತ್ತವೆ. ಅದು ಧನುಸ್ಸಿನ ಪ್ರಮಾಣದಷ್ಟು ದಪ್ಪವಾಗಿರುತ್ತದೆ. ಕೇವಲಿಯು ಪೂರ್ವಾಭಿಮುಖನಾಗಿದ್ದರೆ ಸಮುದ್ಘಾತವು ದಕ್ಷಿಣೋತ್ತರವಾಗಿರುತ್ತದೆ. ಮತ್ತು ಉತ್ತರಾಭಿಮುಖನಾಗಿದ್ದರೆ ಸಮುದ್ಘಾತವು ಪೂರ್ವಪಶ್ಚಿಮವಾಗಿರುತ್ತದೆ.

ಕಾಕಿಣಿರತ್ನ (೧೧-೩ ವ.)— ಚಕ್ರವರ್ತಿಯ ಸೈನ್ಯವು ವಿಜಯಾರ್ಧಪರ್ವತದ ಗುಹೆಯೊಳಗಿಂದ ಹೋಗುತ್ತಿರುವಾಗ ಅಲ್ಲಿಯ ಕತ್ತಲೆಯನ್ನು ಇದು ಹೋಗಲಾಡಿಸುತ್ತದೆ. ಇದು ವಜ್ರಮಯವಾಗಿರುತ್ತದೆ.

ಕಾಂತಾರಚರ್ಯಾಮಾರ್ಗ (೪–೯೫ ವ.)— 'ಅರಣ್ಯದೊಳಗೆ ಆಹಾರ ಸಿಕ್ಕರೆ ಮಾತ್ರ ಸ್ವೀಕರಿಸುತ್ತೇನೆ' ಎಂದು ಪ್ರತಿಜ್ಞೆ ಮಾಡಿ ಮುನಿಗಳು ಚರಿಗೆಗೆ ಹೊರಡುತ್ತಾರೆ. ಈ ಸಂಕಲ್ಪಕ್ಕೆ ಕಾಂತಾರಚರ್ಯಾಮಾರ್ಗವೆನ್ನುತ್ತಾರೆ.

ಕಾಮವೃಷ್ಟಿ (೧೫–೩ ವ.)— ಭರತಚಕ್ರವರ್ತಿಯ ಕೋಶಾಧ್ಯಕ್ಷ.

ಕಾಯಕ್ಲೇಶ (೬–೩೦ ವ.)— ಜಿನಮಾರ್ಗವನ್ನು ಅನುಸರಿಸಿ ಅನೇಕ ಆಸನಗಳನ್ನು ಹಾಕಿ ತಪಸ್ಸು ಮಾಡುವುದು.

ಕಾಯಪ್ರವೀಚಾರ (೨–೬೯ ವ.)— ಶರೀರದಿಂದ ಮನುಷ್ಯನ ಹಾಗೆ ಮೈಥುನ ಸೇವನ ಮಾಡುವುದು.

ಕಾಯಸ್ಥಿತಿ (೧೦–೪ ವ.)— ಶರೀರದ ಸ್ಥಿತಿಯು ಆಹಾರದಿಂದ ಆಗುವ ಕಾರಣ ಆಹಾರಕ್ಕೆ ಕಾಯಸ್ಥಿತಿಯೆನ್ನುತ್ತಾರೆ.

ಕಾಲ (೧೦–೬೩ ವ.)— ಈ ದ್ರವ್ಯದಿಂದ ಜೀವನ ಹೊಸ ಮತ್ತು ಹಳೆಯ ಪರ್ಯಾಯಗಳು ಉಂಟಾಗುತ್ತವೆ.

ಕಾಲಲಬ್ಧಿ (೫-೧೧ ವ.)— ಕಾರ್ಯವಾಗುವ ಸಮಯ ಉಂಟಾಗುವಿಕೆ.

ಕುಂಡಲಾದ್ರಿ (೧೬-೭೦)— ಕುಂಡಲವರದ್ವೀಪದ ನಟ್ಟನಡುವೆ ಈ ಪರ್ವತವಿರುತ್ತದೆ.

ಕುದೃಷ್ಟಾಂತ (೨–೯ ವ.)— ಸಾಧ್ಯದಲ್ಲಿ ತನ್ನ ಗುಣಧರ್ಮಸಾದೃಶ್ಯಗಳನು ತೋರಿಸಲು ಅಸಮರ್ಥವಾಗಿರುವ ದೃಷ್ಟಾಂತವು ಕುದೃಷ್ಟಾಂತವು,

ಕುದೃಷ್ಟಿ (೫–೪೧ ವ.)— ಮಿಥ್ಯಾತ್ವಕರ್ಮದ ಉದಯದಿಂದ ಅಸತ್ಯಶ್ರದ್ಧಾನವು ಪ್ರಕಟವಾಗುವ ಜೀವಿಯು.

ಕುಬೇರಕಾಂತ (೧೫–೩ ವ.)— ಭರತಚಕ್ರವರ್ತಿಯ ಖಜಾನೆ.

ಕುಮಾನುಷ (೧೦—೧೦ ವ.)— ಅಂತರ್ದ್ವೀಪದಲ್ಲಿ ಹುಟ್ಟಿದ ಮನುಷ್ಯರಿಗೆ ಕುಮಾನುಷರೆನ್ನುತ್ತಾರೆ. ಕುಭೋಗಭೂಮಿಯೊಳಗಿನ ಮನುಷ್ಯರ ಆಕಾರವು ವಿಕಾರವಾಗಿರುತ್ತದೆ. ಕೆಲವರ ಮುಖ ಕುರಿಯ ಮುಖದ ಹಾಗೆ, ಕೆಲವರದು ಆನೆಯ ಮುಖದ ಹಾಗೆ ಇರುತ್ತದೆ. ಇಂಥವರು ಕುಮಾನುಷರು.

ಕುಲಕರ (೬–೭೯)—ಭೋಗಭೂಮಿಯೊಳಗಿನ ಆರ್ಯರ ಕುಲಸಮೂಹಕ್ಕೆ ಉಂಟಾದ ಆಂಜಿಕೆಯನ್ನು ದೂರ ಮಾಡಿದ ಕಾರಣದಿಂದ ಮನುವಿಗೆ ಕುಲಕರನೆಂದು ಹೆಸರಿದೆ.

ಕುಲಧರ (೬–೫೫ ವ.)— ಆರ್ಯಖಂಡದೊಳಗಿನ ಜಘನ್ಯಭೋಗಭೂಮಿಯು ಮುಗಿಯುವ ಹೊತ್ತಿಗೆ ಹದಿನಾಲ್ಕು ಮಂದಿ ಮನುಗಳು ಆದರು. ಅವರಿಗೆ ಕುಲಧರರೆನ್ನುತ್ತಾರೆ. ಭೋಗಭೂಮಿಯೊಳಗಿನ ಕುಲಸಮೂಹವನ್ನು ಸಂಕರದಿಂದ ಮತ್ತು ಭೀತಿಯಿಂದ ಸಂರಕ್ಷಣ ಮಾಡಿದ ಕಾರಣ ಅವರಿಗೆ ಕುಲಧರರೆಂಬ ಹೆಸರು ಬಂದಿತು.

ಕುಲವಿದ್ಯೆ (೯–೧೨೧ ವ.)— ತಂದೆಯ ಕಡೆಯಿಂದ ಬಂದ ವಿದ್ಯೆ.

ಕುಲಿಂಗಿ (೧೫–೩೦) ಮಿಥ್ಯಾತ್ವವಾದಿ, ಪಾಷಂಡಿ ಮುನಿ.

ಕುಹೇತು (೨–೯ ವ.)— ಸಾಧ್ಯಸಿದ್ಧಿ ಮಾಡಲು ಸಮರ್ಥವಲ್ಲದ ಹೇತುವಿಗೆ ಕುಹೇತು ಅಥವಾ ಹೇತ್ವಾಭಾಸವೆನ್ನುತ್ತಾರೆ.

ಕೃಷ್ಟಿರೂಪಗತಚತುಷ್ಕಷಾಯ (೧೦–೧೪ ವ.)— ಸಂಜ್ವಲನಕ್ರೋಧ, ಮಾನ, ಮಾಯಾ, ಲೋಭ ಈ ಕಷಾಯಗಳನ್ನು ಶಕ್ತಿಹೀನಗೊಳಿಸುವದು.

ಕೃಷ್ಣಲೇಶ್ಯಾ (೫–೮೩ ವ.)—ಕ್ರೋಧವೈರಗಳನ್ನು ಬಿಡದಿರುವುದು, ಯಾವಾಗಲೂ ಜಗಳಾಡುವುದು, ಧರ್ಮ ಮತ್ತು ದಯೆ ಇಲ್ಲದಿರುವುದು ಮುಂತಾದ ದುಷ್ಟ ಸ್ವಭಾವಗಳು ಇರುವುದು ಕೃಷ್ಣಲೇಶ್ಯೆ.

ಕೇವಲಜ್ಞಾನ (೬–೨೪ ವ.)— ಸರ್ವಜ್ಞತ್ವ.

ಕೇವಲಜ್ಞಾನೋತ್ಪತ್ತಿ (೩–೨೧ ವ.)— ಕೇವಲಜ್ಞಾನ– ಎಲ್ಲ ಲೋಕಾಲೋಕವನ್ನು ತಿಳಿಯುವ ಅವಿನಾಶಿ ಮತ್ತು ಅನಂತಜ್ಞಾನವು. ಘಾತಿಕರ್ಮಗಳ ನಾಶದಿಂದ ಅದರ ಉತ್ಪತ್ತಿಯಾಗುತ್ತಿದೆ.

ಕೇವಲಬೋಧ (೩–೨೭)— ಕೇವಲಜ್ಞಾನ, ಸರ್ವಜ್ಞತ್ವ.

ಕೇವಲಿ (೧–೮೦ ವ.)— ಜ್ಞಾನಾವರಣಾದಿ ಘಾತಿಕರ್ಮಗಳ ನಾಶದಿಂದ ಲೋಕಾಲೋಕಗಳನ್ನು ತಿಳಿಯುವ ಜ್ಞಾನ ಪಡೆದ ಮಹಾತ್ಮರು.

ಕ್ಷಪಕಶ್ರೇಣಿ (೧೦–೧೪ ವ.)— ದರ್ಶನಮೋಹನೀಯತ್ರಿಕ ನೋಡಿ.

ಕ್ಷಾಯಿಕಸಮ್ಯಕ್ದೃಷ್ಟಿ (೧೨–೧೪ ವ.)— ದರ್ಶನಮೋಹನೀಯತ್ರಿಕದ ನಿರ್ಮೂಲನ ನೋಡಿ.

ಕ್ಷಿತಿಸಾಗರ (೧೫–೩ ವ.)— ಭರತಚಕ್ರವರ್ತಿಯ ಅರಮನೆಯ ಸುತ್ತಲೂ ಇರುವ ಕೋಟೆಗೆ ಕ್ಷಿತಿಸಾಗರನೆಂಬ ಹೆಸರಿಗೆ

ಕ್ಷುತವಿಜೃಂಭಣ (೫-೬೯ ವ.)— ಸೀನು ಮತ್ತು ಆಕಳಿಕೆ. ಭೋಗಭೂಮಿ ಜರು ಸೀತು ಆಕಳಿಸಿ ದೇಹ ಬಿಡುತ್ತಾರೆ. ಅದರಿಂದ ಇವೆರಡು ಅವರ ಮರಣಲಕ್ಷಣಗಳು.

ಕ್ಷೇತ್ರೋದೀರಿತ (೫-೮೮ ವ.)— ನರಕಭೂಮಿಯು ಬಹಳ ಕರ್ಕಶವಾಗಿರು ತ್ತದೆ. ಅಲ್ಲಿ ಅಸಂಖ್ಯ ದುಃಖಗಳುಂಟಾಗುತ್ತವೆ. ಅದಕ್ಕೆ ಕ್ಷೇತ್ರೋ ದೀರಿತದುಃಖವೆನ್ನುತ್ತಾರೆ.

## ಖ

ಖಚರ (೧-೬೮)— ಆಕಾಶಗಾಮಿನಿವಿದ್ಯೆಯ ಸಹಾಯದಿಂದ ಆಕಾಶದಲ್ಲಿ ಸಂಚರಿಸುವ ವಿದ್ಯಾಧರ.

ಖಡ್ಗರತ್ನ (೧೧-೩ ವ.)— ಈ ರತ್ನವು ಚಕ್ರವರ್ತಿಯ ಆಯುಧಶಾಲೆಯಲ್ಲಿ ಹುಟ್ಟುತ್ತದೆ. ಇದು ವಜ್ರಮಯವಾಗಿರುತ್ತದೆ.

## ಗ

ಗಗನಚಾರಣಋದ್ಧಿ (೩-೭೨ ವ.)— ತಪಶ್ಚರ್ಯದಿಂದ ಆಕಾಶದಲ್ಲಿ ಸಂಚಾರ ಮಾಡುವ ಸಾಮರ್ಥ್ಯವುಂಟಾಗುತ್ತದೆ. ಅದು ಗಗನಚಾರಣಋದ್ಧಿ.

ಗಗನವಲ್ಲಭ (೧-೬೨ ವ.)— ವಿಜಯಾರ್ಧಪರ್ವತದ ಉತ್ತರಶ್ರೇಣಿಯ ವಿದ್ಯಾ ಧರರ ರಾಜಧಾನಿ.

ಗಣಗ್ರಹಣ (೧೫-೧೬ ವ.)— ದೀಕ್ಷೆಪಡೆದ ಭವ್ಯನು ತನ್ನ ಮನೆಯೊಳಗಿನ ಮಿಥ್ಯಾದೇವತೆಗಳನ್ನು ಆದರಪೂರ್ವಕವಾಗಿ ಬೀಳ್ಕೊಟ್ಟು ಜಿನಮತದ ಅರ್ಹಂತಾದಿ ಶಾಂತದೇವತೆಗಳನ್ನು ಪೂಜೆಮಾಡುವುದು.

ಗಣಧರ (೬-೩೩ ವ.)— ಯತಿ ಮೊದಲಾದ ಹನ್ನೆರಡು ಗಣಗಳನ್ನು ಮಿಥ್ಯಾ ತ್ವಾದಿಗಳಿಂದ ಬಿಡಿಸಿ ರತ್ನತ್ರಯಗಳಲ್ಲಿ ಸ್ಥಾಪನಮಾಡುವ ಧರ್ಮಾ ಚಾರ್ಯನು. ಇವರು ಸಪ್ತರ್ಧಿಯುಕ್ತರು ಮತ್ತು ತೀರ್ಥಂಕರರ ಮುಖ್ಯ ಶಿಷ್ಯರು.

ಗಣನಾಯಕ (೧-೩೯)— ಮುನಿ, ಆರ್ಯಿಕಾ, ಶ್ರಾವಕ ಮತ್ತು ಶ್ರಾವಿಕಾ ಈ ನಾಲ್ಕು ಸಂಘಗಳ ಅಧಿಪತಿಗೆ ಗಣನಾಯಕನೆನ್ನುತ್ತಾರೆ.

ಗಣಿನಿ (೧೦-೬೫ ವ.)— ಮುಖ್ಯ ಆರ್ಯಿಕೆಯು ಮಿಕ್ಕ ಆರ್ಯಿಕೆಯರಿಗೆ ಆಚರಣದ ಜ್ಞಾನ ಮಾಡಿಕೊಡುತ್ತಾಳೆ. ಅವಳು ಗಣಿನಿ.

ಗಣೋಪಗ್ರಹಣ (೧೫-೧೫ ವ.)— ಸದಾಚಾರಸಂಪನ್ನನಾದ ಶ್ರಾವಕನು ಆರ್ಯಿಕಾಸಂಘ ಶ್ರಾವಿಕಾ ಮತ್ತು ಮುನಿ ಇವರನ್ನು ಸನ್ಮಾರ್ಗದಲ್ಲಿ ಪ್ರವೃತ್ತಗೊಳಿಸಬೇಕು.

ಗಂಧರ್ವಪುರ ( ೩–೫೮ ವ. )— ವಿಜಯಾರ್ಧಪರ್ವತದೊಳಗಿನ ಉತ್ತರಶ್ರೇಣಿಯೊಳಗಿನ ಒಂದು ಪಟ್ಟಣ.

ಗಂಧಿಲವಿಷಯ ( ೧–೫೭ )— ಈ ದೇಶವು ಪಶ್ಚಿಮವಿದೇಹದಲ್ಲಿ ಸೀತೋದಾ ನದಿಯ ಉತ್ತರಕ್ಕೆ ಇರುತ್ತದೆ

ಗಂಧಿಳ ( ೨–೩೫ ವ. )— ಪಶ್ಚಿಮ ವಿದೇಹದೊಳಗಿನ ಒಂದು ದೇಶ.

ಗರ್ಭಶೋಧನ ( ೭–೩ ವ. )— ಇಂದ್ರನ ಆಜ್ಞೆಯಿಂದ ವಿಜಯೆ–ವೈಜಯಂತಿ ಮೊದಲಾದ ವಿದ್ಯುತ್ಕುಮಾರಿಯರು ಜಿನಮಾತೆಯ ಗರ್ಭಶೋಧನೆ ಮಾಡುತ್ತಾರೆ. ಅದರಿಂದ ಕಮಲದ ಎಲೆಯಮೇಲೆ ಜಲಬಿಂದುವು ಇರುವಂತೆ ಜಿನಶಿಶು ಗರ್ಭದಲ್ಲಿ ಮಲಗಳಿಂದ ಅಲಿಪ್ತರಾಗಿರುತ್ತಾರೆ.

ಗರ್ಭಾವತರಣ (೭–೩೨ ವ. )— ಜಿನಮಾತೆಯ ಗರ್ಭದಲ್ಲಿ ಜಿನೇಶನ ಆಗಮನ.

ಗಿರಿಕೂಟಕ ( ೧೫–೩ ವ. )— ಸುತ್ತಲೂ ಬಹಳ ದೂರದ ವರೆಗೆ ನೋಡಲು ಬರುವಂತೆ ಬಹಳ ಎತ್ತರವಾಗಿ ಕಟ್ಟಿದ ಗೋಪುರ.

ಗುಣಂಗಳ್ ( ೬–೨೪ ವ. )— ಗುಣಸಮೂಹ. ಮುನಿಗಳ ಮೂಲಗುಣಗಳು ಇಪ್ಪತ್ತೆಂಟು. ೫ ಮಹಾವ್ರತಗಳು, ೫ ಸಮಿತಿ, ಪಂಚೇಂದ್ರಿಯ ಸಂಯಮ, ಷಡಾವಶ್ಯಕ, ಕೇಶಲೋಚನ, ನಗ್ನತಾ, ಅಸ್ನಾನ, ಅದಂತಧಾವನ, ಭೂಶಯನ, ಸ್ಥಿತಿಭೋಜನ, ಏಕಭೋಜನ.

ಗುಣಮೇಳಿಸ್ (ಸಪ್ತಗುಣ)—(೪–೯೭)–ಶ್ರದ್ಧಾ, ಭಕ್ತಿ, ಸಂತೋಷ, ವಿಜ್ಞಾನ, ನಿರ್ಲೋಭ, ಕ್ಷಮಾ ಮತ್ತು ಸತ್ಯ ಇವು ಏಳು ದಾತೃವಿನ ಗುಣಗಳು.

ಗುಣವ್ರತ ( ೬–೮ )—(೧) ದಿಗ್ವ್ರತ—ಹತ್ತು ದಿಕ್ಕುಗಳನ್ನು ಮರ್ಯಾದೆ ಮಾಡಿಕೊಂಡು, ಲೋಭಾದಿಗಳಿಗೆ ವಶವಾಗಿ ಅವುಗಳ ಹೊರೆಗೆ ಹೋಗದಿರುವುದು. (೨) ಅನರ್ಥದಂಡವ್ರತ— ಪ್ರಯೋಜನದ ಹೊರತು ತಾವು ಮಾಡುವ ಕೆಲಸಗಳ ತ್ಯಾಗ ಮಾಡುವುದು. ಉದಾ;– ಕಾರಣವಿಲ್ಲದೆ ನೀರು ಚೆಲ್ಲುವುದು. ಮುಂ. (೩) ಭೋಗೋಪಭೋಗ ಪರಿಮಾಣ– ಒಮ್ಮೆ ಮಾತ್ರ ಭೋಗಿಸುವದಕ್ಕೆ ಯೋಗ್ಯವಾಗಿರುವ ಪದಾರ್ಥಗಳು ಉದಾ.— ಹಣ್ಣು, ಅನ್ನ, ಮುಂ. ತಿರುತಿರುಗಿ ಭೋಗಿಸಲಿಕ್ಕೆ ಬರುವ ಪದಾರ್ಥಗಳು ಉಪಭೋಗಗಳು. ಉದಾ.— ವಸ್ತ್ರ. ಮುಂ. ಇವುಗಳನ್ನು ಕಾಲಮರ್ಯಾದೆಯಿಂದ ಸೇವಿಸುವುದು ಅಥವಾ ತ್ಯಾಗಮಾಡುವುದು. ಇವು ಮೂರು ಗುಣವ್ರತಗಳು.

ಗುಣಶ್ರೇಣಿನಿರ್ಜರಾ ( ೧೦–೧೪ ವ. )— ಕರ್ಮ ಪುದ್ಗಲಗಳು ಅಸಂಖ್ಯಾತ ಗುಣಿತ ಕ್ರಮದಿಂದ ನಿರ್ಜರೆಯಾಗುವುದು.

ಗುಣಸಂಕ್ರಮಣ (೧೦-೧೪ ವ.)— ಪ್ರತಿಸಮಯದಲ್ಲಿ ಒಂದು ಪ್ರಕೃತಿಯ ಪರಮಾಣುಗಳು ಗುಣಿತರೂಪದಿಂದ ಬದಲಾವಣೆಗೊಂಡು ಅನ್ಯಪ್ರಕೃತಿರೂಪ ಧರಿಸುವುದು.

ಗುಪ್ತಿ (೬-೨೯)— ಸಂಸಾರಕ್ಕೆ ಕಾರಣಗಳಾದ ಮಿಥ್ಯಾತ್ವ, ಅವಿರತಿ, ಪ್ರಮಾದ, ಕಷಾಯ, ಮತ್ತು ಯೋಗ ಇವುಗಳಿಂದ ಆತ್ಮನನ್ನು ರಕ್ಷಿಸುವುದು. ಇದು ಮನೋಗುಪ್ತಿ, ವಾಕ್‌ಗುಪ್ತಿ, ಕಾಯಗುಪ್ತಿ ಎಂದು ಮೂರು ವಿಧವಾಗಿದೆ.

ಗುರುಪಂಚಕ (೩-೧೭)— ಅರ್ಹದಾದಿಪಂಚಪರಮೇಷ್ಠಿಗಳು.

ಗೃಹಕೂಟ (೧೫-೩ ವ.)—ಭರತಚಕ್ರವರ್ತಿಯು ಮಳೆಗಾಲದಲ್ಲಿ ವಾಸಿಸುತ್ತಿದ್ದ ಮನೆ.

ಗೃಹಪತಿರತ್ನ (೬-೨೫)—ಗೃಹಪತಿಯು ಚಕ್ರವರ್ತಿಯ ಆಯವ್ಯಯದ ವ್ಯವಸ್ಥೆ ನೋಡಿಕೊಳ್ಳುತ್ತಾನೆ.

ಗೃಹಮಹೀಜಾತ (೫-೩೭)— ಅರಮನೆಗಳನ್ನು ಒದಗಿಸಿಕೊಡುವ ಕಲ್ಪವೃಕ್ಷ.

ಗ್ರೈವೇಯಕ (೧೬-೬೬)— ಹದಿನಾರನೆಯ ಸ್ವರ್ಗದ ಮೇಲೆ ಒಂಬತ್ತು ಗ್ರೈವೇಯಕಗಳಿರುತ್ತವೆ.

## ಘ

ಘನಾನಿಲ (೧೬-೫೧ ವ.)— ಇದಕ್ಕೆ ಅಂಬುವಾತ ಜಲವಾತ ಎಂಬ ಹೆಸರುಗಳುಂಟು. ಇದಕ್ಕೆ ತನುವಾತವು ಆಧಾರ. ಇದರ ಬಣ್ಣವು ಹಸುರು.

ಘನೋದಧಿ (೧೬-೫೧ ವ.)— ಇದಕ್ಕೆ ಘನವಾತವೆಂದು ಹೆಸರು. ಇದಕ್ಕೆ ಅಂಬುವಾತವು ಆಧಾರವು. ಇದರ ಬಣ್ಣವು ಗೋಮೂತ್ರದ್ದು.

ಘಾತಿ (೩-೪೦)—ಜ್ಞಾನಾದಿಗುಣಗಳನ್ನು ನಾಶಗೊಳಿಸುವ ಕರ್ಮಗಳು. ಅವು ಜ್ಞಾನಾವರಣೀಯ ದರ್ಶನಾವರಣೀಯ ಮೋಹನೀಯ ಮತ್ತು ಅಂತರಾಯ ಎಂದು ನಾಲ್ಕು ವಿಧವಾಗಿವೆ.

ಘಾತಿಚತುಷ್ಕ (೧೬-೪೯ ವ.)—ಜ್ಞಾನಾವರಣ ೫, ದರ್ಶನಾವರಣ ೯, ಮೋಹನೀಯ ೨೮ ಮತ್ತು ಅಂತರಾಯ ೫ ಎಂದು ೪೭ ಉತ್ತರಕರ್ಮಪ್ರಕೃತಿಗಳು ಕೂಡಿ ಘಾತಿಚತುಷ್ಕ.

ಘಾತಿಚತುಷ್ಟಯ (೧-೪೦)— ಜ್ಞಾನ, ದರ್ಶನ, ಸುಖ, ಶಕ್ತಿ ಇತ್ಯಾದಿ ಜೀವನ ಗುಣಗಳನ್ನು ನಾಶಮಾಡುವ ಕರ್ಮಗಳಿಗೆ ಘಾತಿಕರ್ಮಗಳೆನ್ನುತ್ತಾರೆ. ಈ ಕರ್ಮಗಳು ಜ್ಞಾನಾವರಣೀಯ ದರ್ಶನಾವರಣೀಯ ಮೋಹನೀಯ ಮತ್ತು ಅಂತರಾಯ ಎಂದು ನಾಲ್ಕು ಆವೆ.

## ಚ

ಚಕ್ರರತ್ನ (೧೧-೨)— ಈ ರತ್ನವು ಚಕ್ರವರ್ತಿಯ ಆಯುಧಶಾಲೆಯಲ್ಲಿ ಹುಟ್ಟುತ್ತದೆ. ಅದು ಹುಟ್ಟಿದ ಮೇಲೆ ಅದರ ಪೂಜೆಮಾಡಿ ಚಕ್ರವರ್ತಿಯು ದಿಗ್ವಿಜಯ ಮಾಡುತ್ತಾನೆ.

ಚಕ್ರಲಾಭ (೧೫-೧೫ ವ.)— ಪ್ರಭುವಿಗೆ ೧೪ ರತ್ನಗಳು ಮತ್ತು ನವನಿಧಿಗಳು ಆವನ ಕೋಶಾಗಾರದಲ್ಲಿ ಜನಿಸುತ್ತವೆ. ಅವುಗಳಲ್ಲಿ ಚಕ್ರರತ್ನವು ಮೊದಲನೆಯದು.

ಚಕ್ರೇಶ್ವರಿ (೧-೭)— ಆದಿನಾಥರ ಶಾಸನದೇವತೆ.

ಚತುರಿಂದ್ರಿಯ (೧೦-೬೩ ವ.)— ಸ್ಪರ್ಶನ, ರಸನ, ಘ್ರಾಣ, ಚಕ್ಷುರಿಂದ್ರಿಯಗಳುಳ್ಳ ಜೀವಗಳು. ಉದಾ.- ನೊಣ ತುಂಬಿ, ಪತಂಗ ಮುಂ.

ಚತುಃಸಂಜ್ವಲನ (೧೦-೧೪ವ.)-ಸಂಜ್ವಲನಕ್ರೋಧ, ಮಾನ, ಮಾಯಾ ಮತ್ತು ಲೋಭ.

ಚತುರ್ಗತಿ (೧-೪೨ ವ.)— ದೇವಗತಿ, ನಾರಕಗತಿ, ಮನುಷ್ಯಗತಿ ಮತ್ತು ತಿರ್ಯಗ್ಗತಿ ಈ ನಾಲ್ಕು ಗತಿಗಳ ಉದಯದಿಂದ ಜೀವನು ದೇವಾದಿ ಜನ್ಮಪಡೆಯುತ್ತಾನೆ.

ಚತುರ್ಮುಖ (೧೫-೧೩ ವ.)— ಈ ಜಿನಪೂಜೆಯನ್ನು ಮಹಾಮಕುಟಬದ್ಧ ರಾಜರು ಮಾಡುತ್ತಾರೆ. ನಾಲ್ಕು ಬಾಗಿಲುಗಳುಳ್ಳ ಜಿನಮಂದಿರಗಳಲ್ಲಿಯೂ ಇದನ್ನು ಮಾಡುತ್ತಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ.

ಚತುರ್ವಿಧಶುಕ್ಲಧ್ಯಾನ (೬-೩೪ ವ.)— ಪೃಥಕ್ತ್ವವಿತರ್ಕವಿಚಾರ, ಏಕತ್ವವಿತರ್ಕವಿಚಾರ, ಸೂಕ್ಷ್ಮಕ್ರಿಯಾಪ್ರತಿಪಾತಿ ಮತ್ತು ವ್ಯುಪರತಕ್ರಿಯಾವಿವರ್ತಿ ಎಂದು ಶುಕ್ಲಧ್ಯಾನವು ನಾಲ್ಕು ವಿಧವಾಗಿದೆ.

ಚತುರ್ವಿಧಾಹಾರಶರೀರಪ್ರತ್ಯಾಖ್ಯಾನ (೨-೫೧ ವ.)— ನಾಲ್ಕು ತರದ ಆಹಾರ ತ್ಯಾಗಮಾಡಿ ಶರೀರದ ಮೇಲಿನ ಮೋಹವನ್ನು ಬಿಟ್ಟುಬಿಡುವುದು.

ಚತುಸ್ತ್ರಿಂಶದತಿಶಯ (೩-೪೦ ವ.)—ಜಿನೇಶ್ವರರಿಗೆ ಜನ್ಮತಃ ಹತ್ತು ಗುಣಗಳು ದೊರಕುತ್ತವೆ. ಇವು:—(೧) ನಿಃಸ್ವೇದತ್ವ, (೨) ನಿರ್ಮಲತ್ವ, (೩) ಕ್ಷೀರಗೌರರುಧಿರತ್ವ, (೪) ವಜ್ರರ್ಷಭನಾರಾಚಸಂಹನನ, (೫) ಸಮಚತುರಸ್ರಸಂಸ್ಥಾನಯುಕ್ತ ಶರೀರ, (೬) ಸೌಂದರ್ಯ, (೭) ಶರೀರಸುಗಂಧ, (೮) ಶುಭಸಾಮುದ್ರಿಕ ಲಕ್ಷಣ, (೯) ಅನಂತಶಕ್ತಿ, (೧೦) ಪ್ರಿಯಹಿತವಚನ.

ಘಾತಿಕರ್ಮಗಳ ನಾಶವಾದ ಮೇಲೆ ಉದಯವಾಗುವ ಹತ್ತು ಗುಣಗಳುಃ— (೧) ಗವ್ಯೂತಿಚತುಃಶತಸುಭಿಕ್ಷ, (೨) ಆಕಾಶಗಮನ, (೩) ಅಹಿಂಸಾ, (೪) ಅನಶನ, (೫) ಉಪಸರ್ಗರಾಹಿತ್ಯ, (೬) ಚತುರ್ಮುಖ, (೭) ಕೇವಲಜ್ಞತ್ವ, (೮) ನೆರಳು ಇಲ್ಲದಿರೋಣ, (೯) ಅನಿಮಿಷತ್ವ, (೧೦) ಉಗುರುಕೂದಲುಗಳು ಬೆಳೆಯದೆ ಇರುವಿಕೆ.

ದೇವಕೃತ ಚತುರ್ದಶ ಅತಿಶಯಗಳುಃ—(೧) ದಿವ್ಯಧ್ವನಿ, (೨) ಸರ್ವಜನಮೈತ್ರೀಭಾವ, (೩) ಸರ್ವರ್ತುಕ ಫಲಪುಷ್ಪ, (೪) ಪೃಥ್ವಿಯು ಕನ್ನಡಿಯಂತೆ ಸಮವೂ ರತ್ನಮಯವೂ ಆಗಿರುವುದು, (೫) ತೀರ್ಥಂಕರರ ವಿಹಾರಕ್ಕೆ ಅನುಗುಣವಾಗಿ ಗಾಳಿಬೀಸುವುದು, (೬) ಎಲ್ಲರೂ ಆನಂದಿಗಳೂ ಶೋಕರಹಿತರೂ ಆಗಿರುವುದು, (೭) ಒಂದು ಯೋಜನದ ವರೆಗೆ ಗಾಳಿ ಸುಗಂಧವಾಗಿ ಬೀಸುವುದು ಮತ್ತು ಭೂಭಾಗದ ಮೇಲೆ ಧೂಳು, ಮುಳ್ಳು, ಹುಲ್ಲು, ಕಲ್ಲು ಮುಂತಾದವುಗಳು ಇಲ್ಲದಿರುವುದು, (೮) ಮೇಘಕುಮಾರರು ಸುಗಂಧಿತ ಮಳೆಗರೆಯುತ್ತಾರೆ, (೯) ತೀರ್ಥಂಕರರ ಹಿಂದೆ ಏಳು ಮುಂದೆ ಏಳು ಮತ್ತು ಅವರು ಕಾಲಿಡುವ ಸ್ಥಳದಲ್ಲಿ ಒಂದರಂತೆ ಕಮಲಗಳನ್ನು ರಚಿಸುತ್ತಾರೆ, (೧೦) ಪೃಥ್ವಿಯು ಎಲ್ಲ ಧಾನ್ಯಗಳಿಂದ ಪರಿಪೂರ್ಣವಾಗಿರುತ್ತದೆ, (೧೧) ಆಕಾಶವು ನಿರಭ್ರವಾಗಿರುತ್ತದೆ, (೧೨) ಎಲ್ಲ ದಿಕ್ಕುಗಳು ಶುದ್ಧವಾಗಿರುತ್ತವೆ, (೧೩) ಇಂದ್ರನ ಆಜ್ಞೆಯಿಂದ ಎಲ್ಲ ಭವನವಾಸಿದೇವತೆಗಳು ಎಲ್ಲ ದೇವತೆಗಳನ್ನು ಕರೆಯುತ್ತಾರೆ ಮತ್ತು ತೀರ್ಥಂಕರಪ್ರಭುವಿನ ಮುಂದೆ ಧರ್ಮಚಕ್ರವು ನಡೆಯುತ್ತದೆ, (೧೪) ಪ್ರಭುವಿನ ಮುಂದೆ ಅಷ್ಟಮಂಗಲಗಳಿರುತ್ತವೆ.

ಚತ್ವಾರ್ಯೇವತತ್ತ್ವಾನಿ (೨–೧೦ ವ.)— ಪೃಥ್ವಿ, ಆಪ್, ತೇಜ, ವಾಯು ಎಂಬುವು ನಾಲ್ಕು ತತ್ತ್ವಗಳು. ಇವುಗಳಲ್ಲದೆ ಆತ್ಮ ಮುಂತಾದ ತತ್ತ್ವಗಳಿಲ್ಲೆಂದು ಚಾರ್ವಾಕರ ಮತವು.

ಚರಮಗರ್ಭಾವತರಣ (೭–೨ ವ.)— ತೀರ್ಥಂಕರರು ಚರಮಶರೀರಿಗಳಾಗಿರುತ್ತಾರೆ. ಅಂದರೆ ಅವರದು ಅದು ಕೊನೆಯ ಜನ್ಮವು. ಅವರ ಗರ್ಭವಾಸವು ಚರಮಗರ್ಭಕ್ಕೆ ಬರುವುದು.

ಚರಮತನು (೧–೨)— ಚರಮ–ಕೊನೆಯ, ತನು–ಶರೀರ. ತದ್ಭವ ಮೋಕ್ಷಗಾಮಿಯಾದ ಮನುಷ್ಯನ ಶರೀರಕ್ಕೆ ಚರಮತನು, ಚರಮದೇಹ, ಚರಮಶರೀರ ಮುಂತಾದ ಹೆಸರುಗಳಿವೆ.

ಚರಿಗೆ (೫-೭)— ಆಹಾರದ ದೆಸೆಯಿಂದ ಮುನಿಗಳು ಊರೊಳಗೆ ಬರುವುದು.

ಚರ್ಮರತ್ನ (೧೧-೩ ವ.)— ಮಳೆ ಬೀಳುತ್ತಿರುವಾಗ ಚಕ್ರವರ್ತಿಯ ಸೈನ್ಯವು ಇದರ ಮೇಲೆ ನಿಂತುಕೊಳ್ಳುತ್ತದೆ. ಇದು ವಜ್ರಮಯವಾಗಿರುತ್ತದೆ.

ಚಾರಣ (೨-೧೫ ವ.)— ತಪಸ್ಸಿನ ಪ್ರಭಾವದಿಂದ ಆಕಾಶದಲ್ಲಿ ಸಂಚಾರ ಮಾಡುವ ಸಾಮರ್ಥ್ಯವು ಉಂಟಾಗುತ್ತದೆ. ಈ ಸಾಮರ್ಥ್ಯವುಳ್ಳ ಮುನಿ. ಈ ಸಾಮರ್ಥ್ಯಕ್ಕೆ ಚಾರಣರ್ಧಿ ಎನ್ನುತ್ತಾರೆ

ಚಾರಣಯುಗಲ (೨--೩೩ ವ.)— ಆಕಾಶಮಾರ್ಗವಲ್ಲಿ ಸಂಚಾರಮಾಡುವ ಮುನಿಗಳ ಜೋಡು.

ಚೈತ್ಯಗೃಹ (೨-೩೨)— ಬಸದಿ. ಇವು ಕೃತ್ರಿಮ ಅಕೃತ್ರಿಮ ಎಂದು ಎರಡು ವಿಧವಾಗಿವೆ. ಕುಲಪರ್ವತಗಳ ಮೇಲಿರುವ ಬಸದಿಗಳು ಬಹಳ ದೊಡ್ಡವೂ ಅಕೃತ್ರಿಮಗಳೂ ಆಗಿವೆ.

## ಛ

ಛತ್ರರತ್ನ (೧೧-೩ ವ.)— ಇದಾದರೂ ಚಕ್ರವರ್ತಿಯ ಆಯುಧಶಾಲೆಯಲ್ಲಿ ಹುಟ್ಟುತ್ತದೆ. ಇದು ರತ್ನಮಯವಾದ ಬಹು ದೊಡ್ಡ ಕೊಡೆ.

ಛೇದೋಪಸ್ಥಾಪನಾ (೧೦-೧೪ ವ.)—ಪ್ರಮಾದದಿಂದ ಹಿಂಸಾದಿದೋಷಗಳು ಸಂಭವಿಸಿದ್ದರೆ ಆಗಮದಲ್ಲಿ ಹೇಳಿದಂತೆ ಪ್ರಾಯಶ್ಚಿತ್ತತೆಗೆದುಕೊಂಡು ಮತ್ತೆ ಅಹಿಂಸಾದಿವ್ರತಗಳನ್ನು ಸ್ವೀಕರಿಸುವುದು,

## ಜ

ಜಗತ್ತ್ರಯ (೧-೪೭)— ಅಧೋಲೋಕ - ಮಧ್ಯಲೋಕ - ಊರ್ಧ್ವಲೋಕಗಳು.

ಜಘನ್ಯಭೋಗಭೂಮಿಸ್ಥಿತಿ (೬-೪೮ ವ.)— ಮೂರನೆಯ ಕಾಲದ ಆರಂಭದಲ್ಲಿ ಆರ್ಯಾಖಂಡದಲ್ಲಿ ಜಘನ್ಯಭೋಗಭೂಮಿಸ್ಥಿತಿ ಇದ್ದಿತು. ಆಗ ಅಲ್ಲಿಯ ಜನರ ಆಯುಷ್ಯವು ಒಂದು ಪಲ್ಯ, ಶರೀರದ ನಿಳುವಿಕೆ ಒಂದು ಕ್ರೋಶ ಮತ್ತು ಅವರು ಎರಡು ದಿವಸಕ್ಕೊಮ್ಮೆ ಆಹಾರ ತಕ್ಕೊಳ್ಳುತ್ತಿದ್ದರು.

ಜನನೀಚರ (೩-೫೮)— ಹಿಂದಿನ ಜನ್ಮದಲ್ಲಿ ತಾಯಿಯಾಗಿದ್ದ ಜೀವನು ಮುಂದಿನ ಜನ್ಮದಲ್ಲಿ ಪುರುಷಜನ್ಮವೆತ್ತುತ್ತಾನೆ. ಇಂಥ ಉದಾಹರಣೆ ವಜ್ರದಂತ ಚಕ್ರವರ್ತಿಯ ಭವಾವಳಿಯಲ್ಲಿ ಬರುತ್ತದೆ. ಆತನ ತಾಯಿಯಾದ ಜೀವನು ಮುಂದಿನ ಜನ್ಮದಲ್ಲಿ ಲಲಿತಾಂಗದೇವನಾಗುತ್ತಾನೆ. ವಜ್ರ

ದಂತ ಚಕ್ರವರ್ತಿಯು ಅಚ್ಯುತಕಲ್ಪದಲ್ಲಿ ಇಂದ್ರನಾಗಿರುವಾಗ ಆತನನ್ನು ಪೂಜಿಸುತ್ತಾನೆ.

ಜನ್ಮಾಭಿಷವಣ (೭-೭೭ ಪ.)— ಜನ್ಮಾಭಿಷೇಕ ನೋಡಿ.

ಜನ್ಮಾಭಿಷೇಕ (೭-೪೨ ಪ.)—ಸೌಧರ್ಮೇಂದ್ರನು ಎಲ್ಲ ದೇವತೆಗಳನ್ನು ಮತ್ತು ಈಶಾನೇಂದ್ರಾದಿ ಇಂದ್ರರನ್ನು ಕೂಡಿಕೊಂಡು ಬಂದು ಜಿನಬಾಲಕನನ್ನು ಐರಾವತದ ಮೇಲೆ ಕೂಡ್ರಿಸಿಕೊಂಡು ಮೇರುಪರ್ವತಕ್ಕೆ ಹೋಗುತ್ತಾನೆ. ಅಲ್ಲಿ ಜಿನಬಾಲಕನನ್ನು ಪಾಂಡುಕಶಿಲೆಯ ಮೇಲಿನ ಮಧ್ಯ ಶಿಲೆಯ ಮೇಲೆ ಕುಳ್ಳಿರಿಸಿ ಕ್ಷೀರಸಮುದ್ರದ ನೀರಿನಿಂದ ತುಂಬಿದ ಒಂದು ಸಾವಿರದ ಎಂಟು ಕಲಶಗಳಿಂದ ಅಭಿಷೇಕ ಮಾಡಿ ಮೈ ಒರಸಿ ವಸ್ತ್ರಾಲಂಕಾರಗಳಿಂದ ಅಲಂಕರಿಸುತ್ತಾನೆ. ಆಮೇಲೆ ಪ್ರಭುವಿಗೆ ಹೆಸರಿಟ್ಟು ಸ್ತುತಿ ಮಾಡುತ್ತಾರೆ. ಮತ್ತೆ ಅವನನ್ನು ಐರಾವತದ ಮೇಲೆ ಕುಳ್ಳಿರಿಸಿಕೊಂಡು ತಿರುಗಿ ಬಂದು ಜಿನಮಾತೆಯ ತೊಡೆಯ ಮೇಲೆ ಇಡುತ್ತಾರೆ. ಸೌಧರ್ಮೇಂದ್ರನು ಜಿನಮಾತಾಪಿತೃರ ಮುಂದೆ ಆನಂದ ನೃತ್ಯಮಾಡಿ ಸ್ವರ್ಗಕ್ಕೆ ಹೋಗುತ್ತಾನೆ.

ಜನ್ಮಾಭಿಷೇಕಸಿಂಹಾಸನ (೧-೪೯ ಪ.)—ಪಾಂಡುಕವನದಲ್ಲಿ ಈಶಾನ್ಯ ದಿಕ್ಕಿಗೆ ಅರ್ಧಚಂದ್ರಾಕಾರದ ಪಾಂಡುಕಶಿಲೆ ಇದೆ. ಅದರ ಮೇಲೆ ಮೂರು ಸಿಂಹಾಸನಗಳಿವೆ. ನಡುವಿನ ಸಿಂಹಾಸನದ ಮೇಲೆ ಜಿನೇಂದ್ರಬಾಲಕನನ್ನು ಕುಳ್ಳಿರಿಸಿ ಇಂದ್ರನು ಅಭಿಷೇಕ ಮಾಡುತ್ತಾನೆ.

ಜಂಬೂದ್ವೀಪ (೧-೪೯)— ಜಂಬೂವೃಕ್ಷ ಸಹಿತವಾಗಿರುವ ದ್ವೀಪಕ್ಕೆ ಜಂಬೂದ್ವೀಪವೆನ್ನುತ್ತಾರೆ. ಇದರ ವಿಸ್ತಾರ ಒಂದು ಲಕ್ಷ ಯೋಜನ.

ಜಂಬೂವೃಕ್ಷ (೧-೪೯)— ಉತ್ತರಕುರು ಭೋಗಭೂಮಿಯಲ್ಲಿ ಅಕೃತ್ರಿಮ ಮತ್ತು ಪರಿವಾರ ಸಹಿತವಾಗಿ ಜಂಬೂವೃಕ್ಷವಿದೆ.

ಜಾತರೂಪಧರ (೨-೩೯ ಪ.)— ದಿಗಂಬರಮುನಿ.

ಜಾತಿವಿದ್ಯೆ (೯-೧೨೧ ಪ.)— ತಾಯಿಯ ಕಡೆಯಿಂದ ದೊರೆತ ವಿದ್ಯೆ.

ಜಾತಿಸ್ಮರ (೨-೧೫ ಪ.)—ಪೂರ್ವಜನ್ಮದ ನೆನಪು. ಇದು ಮತಿಜ್ಞಾನದ ಒಂದು ಭೇದವು.

ಜಿನಭವನ (೧-೪೯ ಪ. [illegible]

ಜಿನಸಪರ್ಯೆ (೩-೨೮)—ಅಷ್ಟದ್ರವ್ಯಗಳಿಂದ ಜಿನೇಶ್ವರನ ಪೂಜೆ ಮಾಡುವದು.

ಜಿನೇಂದ್ರ (೧-೩೫)— ದರ್ಶನಮೋಹನೀಯ ಕರ್ಮಗಳನ್ನು ಗೆಲ್ಲುವ ಸಮ್ಯಕ್ ದೃಷ್ಟಿ, ಶ್ರಾವಕ, ಮುನಿ ಮತ್ತು ಗಣಧರರಿಗೆ ಜಿನರೆನ್ನುತ್ತಾರೆ ಮತ್ತು ಅವರಲ್ಲಿ ಶ್ರೇಷ್ಠರಾದ ತೀರ್ಥಂಕರರು ಜಿನೇಂದ್ರರು.

ಜಿನೇಂದ್ರಮಹಿಮೆ (೩-೪೦ ವ.)— ಜಿನೇಶ್ವರರ ಪಂಚಕಲ್ಯಾಣಪೂಜೆ.

ಜೀವಾಭಾವ (೨-೭ ವ.)— ಜೀವವೆಂಬ ಹೆಸರಿನ ಪದಾರ್ಥವು ಇಲ್ಲವೆಂಬುವ ವಿಚಾರ. ಹೊರಗೆ ಸೃಷ್ಟಿಯಲ್ಲಿ ಕಾಣುತ್ತಿರುವ ಪೃಥ್ವಿ, ಅಪ್, ತೇಜ, ವಾಯು ಈ ನಾಲ್ಕು ಭೂತಗಳ ಸಂಯೋಗವಾದುದೇ ಸೃಷ್ಟಿಯಲ್ಲಿ ಕಂಡುಬರುತ್ತದೆ.

ಜ್ಯೋತಿರಂಗಕಲ್ಪಕುಜ (೫-೪೦)— ಚಂದ್ರಸೂರ್ಯರಷ್ಟು ಪ್ರಕಾಶವನ್ನು ಕೊಡುವ ಕಲ್ಪವೃಕ್ಷ.

ಜ್ಯೋತಿಶ್ಚೈತ್ಯಗೇಹ (೧೬-೭೧)— ಜ್ಯೋತಿಷ್ಕದೇವರ ವಿಮಾನಗಳಲ್ಲಿ ಅಕೃತ್ರಿಮ ಜಿನಮಂದಿರಗಳಿರುತ್ತವೆ ಅವು.

ಜ್ಯೋತಿಷ್ಕ (೧೦-೧೮ ವ.)— ಜ್ಯೋತಿರ್ವಾಸಿದೇವರು—ಚಂದ್ರ, ಸೂರ್ಯ, ಗ್ರಹ, ನಕ್ಷತ್ರ ಮತ್ತು ಪ್ರಕೀರ್ಣಕ.

ತಕ್ಷಕರತ್ನ (೧೧-೩ ವ.)— ಇದು ಸಜೀವ ರತ್ನವು. ಇವನು ಚಕ್ರವರ್ತಿಯ ಶಿಲ್ಪಿ. ದಿಗ್ವಿಜಯಕಾಲದಲ್ಲಿ ಈತನು ಹೊಳೆಗಳ ಮೇಲೆ ಸಂಕಗಳನ್ನು ಕಟ್ಟುತ್ತಾನೆ.

ತನುವಾತ (೧೬-೫೧ ವ.)— ಇದಕ್ಕೆ ಆಕಾಶವು ಆಧಾರ.

ತಪ (೬-೩೦ ವ.)— ಅನಶನಾದಿ ತಪಗಳನ್ನು ಆಚರಿಸುವುದು

ತಪೋಋದ್ಧಿ (೬-೩೩ ವ.)— ಇದರಿಂದ ತೀವ್ರ ತಪವನ್ನು ಆಚರಿಸುತ್ತಿರುವಾಗ ಉಂಟಾಗುವ ಉಪಸರ್ಗ ಮತ್ತು ಪರೀಷಹಗಳನ್ನು ಸಹನ ಮಾಡುವ ಸಾಮರ್ಥ್ಯ ಬರುತ್ತದೆ.

ತಮಃಪ್ರಭಾ (೫-೮೧ ವ.)— ಆರನೆಯ ನರಕ.

ತಿರ್ಯಗ್‌ಜಾತಿ (೫-೪೧ ವ.)— ಪಶುಪರ್ಯಾಯದೊಳಗಿನ ಜೀವ.

ತಿರ್ಯಗ್‌ಲೋಕ (೧-೪೮)— ಸ್ವಯಂಭೂಸಮುದ್ರದ ವರೆಗೆ ಅಸಂಖ್ಯಾತ ದ್ವೀಪ ಮತ್ತು ಸಮುದ್ರಗಳು ಎಲ್ಲ ಕಡೆಗೆ ಪಸರಿಸಿವೆ. ಅದರಿಂದ ಈ ಮಧ್ಯಮಲೋಕಕ್ಕೆ ತಿರ್ಯಗ್‌ಲೋಕವೆನ್ನುತ್ತಾರೆ

ತೀರ್ಥಂಕರನಾಮಕರ್ಮ (೧೬-೪೯ ವ.)— ಈ ಕರ್ಮದ ಉದಯದಿಂದ ಜೀವನಿಗೆ ಛತ್ರತ್ರಯಾದಿ ಶ್ರೇಷ್ಠವಾದ ಐಶ್ವರ್ಯಗಳು ಪ್ರಾಪ್ತವಾಗುತ್ತವೆ.

ತುರಗರತ್ನ ೧೧-೩ ವ. )— ಇದು ವಿಜಯಾರ್ಧಪರ್ವತದಲ್ಲಿ ಹುಟ್ಟಿದ ಉತ್ಕೃಷ್ಟ ಕುದುರೆ. ಇದು ಸಜೀವರತ್ನ.

ತ್ಯಾಗ (೬-೩೦ ವ. )— ಆಹಾರಾದಿ ದಾನಮಾಡುವುದು.

ತ್ರಸಕಾಯ (೧೦-೬೩ ವ. )— ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಮತ್ತು ಪಂಚೇಂದ್ರಿಯ ಜೀವಗಳಿಗೆ ತ್ರಸಕಾಯವೆಂದೆನ್ನುತ್ತಾರೆ.

ತ್ರಿಕರಣ (೧೦-೧೪ ವ. )— ಅಧಃಕರಣ, ಅಪೂರ್ವಕರಣ ಮತ್ತು ಅನಿವೃತ್ತಿ ಕರಣ ಇವುಗಳಿಗೆ ತ್ರಿಕರಣವೆನ್ನುತ್ತಾರೆ.

ತ್ರಿಗುಪ್ತಿ (೬-೨೪ ವ. )— ಮನೋಗುಪ್ತಿ, ವಚನಗುಪ್ತಿ, ಕಾಯಗುಪ್ತಿ ಎಂದು ಇದು ಮೂರು ವಿಧವಾಗಿದೆ—(೧) ಮನೋಗುಪ್ತಿ—ಮನಸ್ಸಿನೊಳಗಿನ ಶುಭಾಶುಭ ಸಂಕಲ್ಪಗಳನ್ನು ತ್ಯಾಗ ಮಾಡಿ ಅದನ್ನು ಆತ್ಮಸ್ವರೂಪದಲ್ಲಿ ಸ್ಥಿರಗೊಳಿಸುವುದು. (೨) ವಚನಗುಪ್ತಿ— ಶುಭಾಶುಭವಚನಗಳನ್ನು ತ್ಯಾಗಮಾಡಿ ಮೌನ ಧರಿಸುವುದು, (೩) ಕಾಯಗುಪ್ತಿ— ಶರೀರದ ಚಲನವಲನಗಳನ್ನು ನಿಲ್ಲಿಸುವುದು.

ತ್ರಿಜ್ಞಾನಧರ (೭-೧)— ಮತಿ, ಶ್ರುತಿ ಮತ್ತು ಅವಧಿ ಈ ಮೂರು ಜ್ಞಾನಧಾರಕನು. ಜಿನೇಶ್ವರರಿಗೆ ಜನ್ಮತಃ ಈ ಮೂರು ಜ್ಞಾನಗಳಿರುತ್ತವೆ.

ತ್ರಿಪಲ್ಯೋಪಮ (೫-೪೧ ವ. )— ಉತ್ತಮ ಭೋಗಭೂಮಿಜರ ಆಯುಷ್ಯವು ಮೂರು ಪಲ್ಯೋಪಮವಾಗಿರುತ್ತದೆ. ಪಲ್ಯಸಂಖ್ಯೆಯ ವ್ಯಾಖ್ಯೆ ಹೀಗಿದೆ: ಎರಡು ಸಾವಿರಕ್ರೋಶ ಆಳವಾದ ವರ್ತುಲಾಕಾರದ ತಗ್ಗು ತೆಗೆದು ಮುಂದೆ ಕತ್ತರಿಯಿಂದ ಕತ್ತರಿಸಲು ಬಾರದಷ್ಟು ಚೂರು ಮಾಡಿದ ಕುರಿಯ ಕೂದಲುಗಳನ್ನು ಅದರಲ್ಲಿ ತುಂಬಬೇಕು. ಆ ಕೂದಲ ಚೂರುಗಳನ್ನು ನೂರು ವರ್ಷಕ್ಕೆ ಒಂದೊಂದರಂತೆ ಹೊರದೆಗೆಯಬೇಕು. ಆ ಕೂದಲುಗಳೆನ್ನೆಲ್ಲ ಹೊರದೆಗೆಯಲು ಎಷ್ಟು ವರ್ಷಗಳು ಬೇಕಾಗುತ್ತವೆಯೋ ಅಷ್ಟು ಸಮಯಕ್ಕೆ ಒಂದು ವ್ಯವಹಾರಪಲ್ಯವೆನ್ನುತ್ತಾರೆ. ಇದರ ಅಸಂಖ್ಯಾತ ಗುಣಿತವು ಉದ್ಧಾರಪಲ್ಯವು. ಉದ್ಧಾರಪಲ್ಯದ ಅಸಂಖ್ಯಾತ ಗುಣಿತವು ಅದ್ಧಾಪಲ್ಯವು ಅಥವಾ ಪಲ್ಯೋಪಮವು.

ತ್ರಿಲೋಕಶಿಖರಶೇಖರ (೨-೧೦ ವ. )— ತ್ರಿಲೋಕಕ್ಕೆ ಕಿರೀಟದಂತೆ ಇರುವ ಮೋಕ್ಷಸ್ಥಾನಕ್ಕೆ ಭೂಷಣನಾದವನು.

ತ್ರೀಂದ್ರಿಯ ( ೧೦-೬೩. ವ. )— ಸ್ಪರ್ಶನರಸನಘ್ರಾಣೇಂದ್ರಿಯಗಳುಳ್ಳ ಜೀವಗಳು. ಉದಾ.— ಇರುವೆ, ತಿಗಣೆ, ಮುಂ.

ತೂರ್ಯಕ್ಷ್ಮಾಜ (೫-೩೫)—ನಾನಾತರದ ವಾದ್ಯಗಳನ್ನು ಕೊಡುವ ಕಲ್ಪವೃಕ್ಷ.

## ದ

ದಂಡಕ್ರಿಯಾಕಿರಣ (೧೬-೪೯ ವ.)—ದಂಡಸಮುದ್ಘಾತದಲ್ಲಿ ಆತ್ಮನ ಪ್ರವೇಶವು ದಂಡಾಕಾರವಾಗಿ ವಾತವಲಯದ ಅಂತ್ಯದ ವರೆಗೆ ಹೋಗುತ್ತದೆ. ವಾತವಲಯದ ಅಸಂಖ್ಯಾತ ಭಾಗವು ಆತ್ಮಪ್ರದೇಶಕ್ಕೆ ಸ್ಪರ್ಶರಹಿತವಾಗಿರುತ್ತದೆ.

ದಂಡರತ್ನ (೧೧-೩ ವ. )— ಈ ರತ್ನದ ಸಹಾಯದಿಂದ ಚಕ್ರವರ್ತಿಯ ಸೇನಾಪತಿಯು ವಿಜಯಾರ್ಧಪರ್ವತದ ಗುಹೆಯ ಬಾಗಿಲುಗಳನ್ನು ತೆರೆಯುತ್ತಾನೆ.

ದನುಜೋದೀರಿತ ( ೫-೮೮ ವ. )— ಸಂಕ್ಲಿಷ್ಟಪರಿಣಾಮದ ರಾಕ್ಷಸರು ಮೂರು ನರಕಗಳ ವರೆಗೆ ಹೋಗಿ ಅಲ್ಲಿಯ ನಾರಕರಿಗೆ ಅಸಹ್ಯದುಃಖವನ್ನುಂಟು ಮಾಡುತ್ತಾರೆ. ಅದು ದನುಜೋದೀರಿತವು.

ದರ್ಶನಮೋಹನೀಯತ್ರಿಕದ ನಿರ್ಮೂಲನ (೧೦-೧೪ ವ.)—ದರ್ಶನಮೋಹನೀಯತ್ರಿಕ:— ಮಿಥ್ಯಾತ್ವ ಸಮ್ಯಗ್‌ಮಿಥ್ಯಾತ್ವ ಮತ್ತು ಸಮ್ಯಕ್ತ್ವ ಪ್ರಕೃತಿಗಳು ಕೂಡಿ ದರ್ಶನಮೋಹನೀಯತ್ರಿಕವಾಗುತ್ತದೆ.– ಅನಿವೃತ್ತಿಕರಣದ ಅಂತರ್ಮುಹೂರ್ತಕಾಲಕ್ಕೆ ಸಂಖ್ಯಾತದಿಂದ ಭಾಗಿಸಿ ಬಹುಭಾಗವ್ಯತೀತವಾದ ಮೇಲೆ ಉಳಿದ ಒಂದು ಭಾಗದ ಮೊದಲನೆಯ ಸಮಯದಿಂದ ಮಿಥ್ಯಾತ್ವದ ಕ್ಷಯವಾಗುತ್ತದೆ. ಅದಾದ ಮೇಲೆ ಮಿಥ್ಯಾಪ್ರಕೃತಿಯ ಮತ್ತು ಸಮ್ಯಗ್‌ಮಿಥ್ಯಾಪ್ರಕೃತಿಯ ಕ್ಷಯವಾಗುತ್ತದೆ. ಇದಾದ ಮೇಲೆ ಸಮ್ಯಕ್ತ್ವಪ್ರಕೃತಿಯು ನಾಶವಾಗುತ್ತದೆ. ಹೀಗೆ ಜೀವನು ಕ್ಷಾಯಿಕಸಮ್ಯಗ್‌ದೃಷ್ಟಿಯಾಗುತ್ತಾನೆ. ಕ್ಷಾಯಿಕಸಮ್ಯಗ್‌ದೃಷ್ಟಿ ಜೀವನೇ ಕ್ಷಪಕಶ್ರೇಣಿಯನ್ನು ಏರಲು ಸಮರ್ಥನಾಗಿರುತ್ತಾನೆ. ಉಪಶಮಸಮ್ಯಕ್ತ್ವಧಾರಿಯಾದ ಜೀವನು ಉಪಶಮಶ್ರೇಣಿಯನ್ನು ಏರಿ ಹನ್ನೊಂದನೆಯ ಉಪಶಾಂತಕಷಾಯಗುಣಸ್ಥಾನವನ್ನು ಧರಿಸುತ್ತಾನೆ. ಮತ್ತೆ ಚಾರಿತ್ರಮೋಹದ ಉದಯವಾಯಿತೆಂದರೆ ಕೆಳಗೆ ಬರುತ್ತಾನೆ. ಆದರೆ ಕ್ಷಪಕಶ್ರೇಣಿಯ ಮೇಲೆ ಏರಿಹೋದ ಮುನಿಯು ಕೆಳಗೆ ಬರುವುದೇ ಇಲ್ಲ. ಆತನು ಶುಕ್ಲಧ್ಯಾನದಿಂದ ಚಾರಿತ್ರಮೋಹನೀಯವನ್ನು ನಾಶಮಾಡಿ ಕೇವಲಿಯಾಗುತ್ತಾನೆ. ಮತ್ತು ವಿಹಾರಮಾಡಿ ಅಘಾತಿಕರ್ಮಗಳನ್ನು ನಾಶಗೊಳಿಸಿ ಮುಕ್ತನಾಗುತ್ತಾನೆ.

ದರ್ಶನವಿಶುದ್ಧ (೧೦–೯ ವ.)— ನಿರ್ಮಲವಾದ ಸಮ್ಯಗ್‌ದರ್ಶನವುಳ್ಳವನು.

ದರ್ಶನಾವರಣಚತುಷ್ಕ (೧೦–೧೪ ವ.)—ಚಕ್ಷುರ್ದರ್ಶನಾವರಣ ಅಚಕ್ಷುರ್ದರ್ಶನಾವರಣ ಅವಧಿದರ್ಶನಾವರಣ ಮತ್ತು ಕೇವಲದರ್ಶನಾವರಣ.

ದಶಾಂಗಕಲ್ಪಕುಜನಿಲಯ (೨–೨೬)— ಹತ್ತು ವಿಧದ ಕಲ್ಪವೃಕ್ಷಗಳಿರುವ ಭೂಮಿ ಅಂದರೆ ಭೋಗಭೂಮಿ.

ದಶಾಂಗಭೋಗ (೬–೨೪ ವ.)—ದಿವ್ಯನಗರ, ಚತುರ್ದಶರತ್ನಗಳು, ನವನಿಧಿ, ಸೈನ್ಯ, ಭೋಜನ, ಭಾಜನ, ಶಯ್ಯಾ, ಆಸನ, ವಾಹನ, ನಾಟ್ಯ ಇವು ದಶಾಂಗಭೋಗಗಳು.

ದಾನ (೮–೭೩ ವ.)— ಯೋಗ್ಯಪಾತ್ರಕ್ಕೆ ಆಹಾರಾದಿ ದಾನ ಮಾಡುವುದು.

ದಾನವ್ಯಾವರ್ಣನ (೧–೪೨ ವ.)— ಜಿನಮುನಿಗಳಿಗೆ ಆಹಾರದಾನ ಮಾಡಿದ ಕ್ರಮ ಮುಂತಾದವುಗಳ ವರ್ಣನೆ.

ದಾನಾನುಮೋದಪ್ರಭಾವ (೫–೨ ವ.)— ದಾನ ಕೊಡುವ ದಾತೃವಿನ ದಾನದ ವಿಷಯದಲ್ಲಿ ಅನುಮೋದನ ಕೊಡುವುದರಿಂದ ಭೋಗಭೂಮಿಯೊಳಗಿನ ದೀರ್ಘಾಯುಷ್ಯದ ಬಂಧವಾಗುತ್ತದೆ.

ದಿಕ್‌ಸ್ವಸ್ತಿಕ (೧೫–೩ ವ.)— ಭರತನ ಸಭಾಸ್ಥಾನದ ಹೆಸರು.

ದಿಗ್ವಿಜಯ (೧೫–೧೫ ವ.)—ಚಕ್ರರತ್ನವನ್ನು ಮುಂದಿಟ್ಟುಕೊಂಡು ದಿಗ್ವಿಜಯಕ್ಕೆ ಹೊರಟ ಪ್ರಭು ಸಕಲ ಭೂಮಂಡಲವನ್ನು ಗೆದ್ದು ತಿರುಗಿ ಬರುವುದು ದಿಗ್ವಿಜಯ.

ದಿವ್ಯಧ್ವನಿ (೬–೨೪ ವ.)— ಕೇವಲಜ್ಞಾನ ಉಂಟಾದ ಮೇಲೆ ತೀರ್ಥಂಕರರ ಮುಖದೊಳಗಿಂದ ಹುಟ್ಟುವ ಭಾಷೆಗೆ ದಿವ್ಯಧ್ವನಿ ಎನ್ನುತ್ತಾರೆ.

ದೀಕ್ಷಾನ್ವಯಕ್ರಿಯಾ (೧೫–೧೬ ವ.)— ಮಿಥ್ಯಾತ್ವತ್ರಿವರ್ಣಗಳೊಳಗಿನ ಗೃಹಸ್ಥರಿಗೆ ಜೈನದೀಕ್ಷೆ ಕೊಡುವ ಕ್ರಿಯೆ.

ದೀಪಾಂಗಕಲ್ಪಕುಜ (೫–೪೦)— ಈ ಕಲ್ಪವೃಕ್ಷಗಳು ದೀಪಗಳನ್ನು ಕೊಡುತ್ತವೆ.

ದುಃಷಮ (೬–೪೮ ವ.)— ಇದು ಐದನೆಯ ಕಾಲ. ಇದರ ಪರಿಮಿತಿ ಇಪ್ಪತ್ತೊಂದು ಸಾವಿರ ವರ್ಷ.

ದುಃಷಮಸುಷಮ (೬–೪೮ ವ.)—ಇದು ಅವಸರ್ಪಿಣಿಯ ನಾಲ್ಕನೆಯ ಕಾಲವು. ಇದರ ಪರಿಮಿತಿ ಒಂದು ಕೋಟಾಕೋಟಿಸಾಗರಕ್ಕೆ ನಾಲ್ವತ್ತೆರಡು ಸಾವಿರ ವರ್ಷ ಕಡಿಮೆ.

ದುಃಸ್ವರ (೧೬–೪೯ ವ.)— ಈ ಕರ್ಮದ ಉದಯದಿಂದ ಕಂಠವು ಕರ್ಕಶವಾಗುತ್ತದೆ.

ದುರ್ಭಗ (೧೬–೪೯ ವ.)— ಈ ಕರ್ಮೋದಯದಿಂದ ಒಬ್ಬನಲ್ಲಿ ರೂಪಲಾವಣ್ಯವಿದ್ದರೂ ಇತರರ ಮನಸ್ಸಿನಲ್ಲಿ ಆತನ ವಿಷಯವಾಗಿ ಅಪ್ರೀತಿ ಉಂಟಾಗುತ್ತದೆ.

ದೃಢಚರ್ಯಾ (೧೫–೧೬ ವ.) — ಭವ್ಯನು ಸಾಮಾಯಿಕಾದಿಗಳ ವರ್ಣನೆಗಳಿರುವ ಬಾಹ್ಯಶ್ರುತಜ್ಞಾನದ ಗ್ರಂಥಗಳ ಶ್ರವಣ ಮಾಡಬೇಕು. ಹೀಗೆ ಪೂಜಾರಾಧ್ಯಪುಣ್ಯಯಜ್ಞ ದೃಢಚರ್ಯಾ ಈ ಮೂರು ಕ್ರಿಯೆಗಳಿಂದ ಆತನ ವ್ರತಾಚರಣವು ದೃಢವಾಗುತ್ತದೆ.

ದೃಷ್ಟಕಥಾ (೨–೧೧ ವ.) — ತಾನು ಸ್ವತಃ ನೋಡಿದ ಸಂಗತಿಯ ವರ್ಣನೆ ಮಾಡುವುದು ದೃಷ್ಟಕಥೆಯು.

ದೃಷ್ಟಿಮೋಹ (೫–೫೨)— ಸಮ್ಯಗ್‌ದರ್ಶನಕ್ಕೆ ದೃಷ್ಟಿಯೆನ್ನುತ್ತಾರೆ. ಅದನ್ನು ಮೋಹಿತಗೊಳಿಸುವ ಅಥವಾ ನಷ್ಟಪಡಿಸುವ ಕರ್ಮಗಳು ದೃಷ್ಟಿಮೋಹಗಳು.

ದೇವಗತಿ (೧೬–೪೯ ವ.)— ಈ ಕರ್ಮದ ಉದಯದಿಂದ ದೇವತ್ವವು ಪ್ರಾಪ್ತವಾಗುತ್ತವೆ.

ದೇವಗತಿಪ್ರಾಯೋಗ್ಯಾನುಪೂರ್ವಿ (೧೬–೪೯ ವ.)— ಈ ಕರ್ಮದ ಉದಯದಿಂದ ಪೂರ್ವಶರೀರದ ಆಕಾರದ ನಾಶವಾಗುವದಿಲ್ಲ. ಆ ಕರ್ಮವು ಆನುಪೂರ್ವಿಯಾಗಿರುತ್ತದೆ. ದೇವಗತಿಯನ್ನು ಪಡೆಯುವ ಪೂರ್ವದಲ್ಲಿ ವಿಗ್ರಹಗತಿಯಲ್ಲಿರುವ ಪೂರ್ವ ಶರೀರದ ಆಕಾರವು.

ದೇವರಮ್ಯ (೧೫–೩ ವ.)— ಭರತಚಕ್ರವರ್ತಿಯ ದೊಡ್ಡ ಗೂಡಾರ.

ದ್ವಾದಶಸಂಗ್ರಹಕೃಷ್ಟಿ (೧೦–೧೪ ವ.)—ಅಪ್ರತ್ಯಾಖ್ಯಾನ, ಪ್ರತ್ಯಾಖ್ಯಾನ ಮತ್ತು ಸಂಜ್ವಲನ ಈ ಹನ್ನೆರಡು ಕಷಾಯಗಳ ಫಲಕೊಡುವ ಸಾಮರ್ಥ್ಯವನ್ನು ಕಡಿಮೆ ಮಾಡುವುದು.

ದ್ವಾದಶಾಂಗ (೧೫–೧೫ ವ.)— ಇದರಲ್ಲಿ– (೧) ಆಚಾರಾಂಗ, (೨) ಸೂತ್ರಕೃತಾಂಗ, (೩) ಸ್ಥಾನಾಂಗ, (೪) ಸಮವಾಯಾಂಗ, (೫) ವ್ಯಾಖ್ಯಾಪ್ರಜ್ಞಪ್ತ್ಯಂಗ, (೬) ಜ್ಞಾತೃಕಥಾಂಗ, (೭) ಉಪಾಸಕಾಧ್ಯಾಯನಾಂಗ, (೮) ಅಂತಕೃದ್ದಶಾಂಗ, (೯) ಅನುತ್ತರೋಪಪಾದೇಯದಶಾಂಗ, (೧೦) ಪ್ರಶ್ನವ್ಯಾಕರಣಾಂಗ, (೧೧) ವಿಪಾಕಸೂತ್ರಾಂಗ, (೧೨) ದೃಷ್ಟಿವಾದಾಂಗ ಎಂಬ ಅಂಗಗಳು ಬರುತ್ತವೆ.

ದ್ವಾದಶಾನುಪ್ರೇಕ್ಷೆ (೬–೩೪ ವ.)— ಅನಿತ್ಯಾನುಪ್ರೇಕ್ಷೆ, ಅಶರಣಾನುಪ್ರೇಕ್ಷೆ, ಸಂಸಾರಾನುಪ್ರೇಕ್ಷೆ, ಏಕತ್ವಾನುಪ್ರೇಕ್ಷೆ, ಅನ್ಯತ್ವಾನುಪ್ರೇಕ್ಷೆ, ಅಶುಚಿತ್ವಾನುಪ್ರೇಕ್ಷೆ, ಆಸ್ರವಾನುಪ್ರೇಕ್ಷೆ, ಸಂವರಾನುಪ್ರೇಕ್ಷೆ, ನಿರ್ಜರಾನುಪ್ರೇಕ್ಷೆ, ಲೋಕಾನುಪ್ರೇಕ್ಷೆ, ಬೋಧಿದುರ್ಲಭಾನುಪ್ರೇಕ್ಷೆ, ಧರ್ಮಾನುಪ್ರೇಕ್ಷೆ ಎಂದು ಇವು ಹನ್ನೆರಡು ವಿಧವಾಗಿವೆ.

ದ್ವಿತೀಯಕೃಷ್ಟಿಗತಾನುಭಾಗಭೇದ (೧೦-೧೪ ವ.)— ಸೂಕ್ಷ್ಮಕೃಷ್ಟಿಯಿಂದ ಫಲದಾನಶಕ್ತಿಯನ್ನು ನಾಶಗೊಳಿಸಿ ರಸಹೀನಮಾಡುವುದು.

ದ್ವೀಂದ್ರಿಯ (೧೦-೬೩ ವ.)- ಸ್ಪರ್ಶನ ರಸನೇಂದ್ರಿಯಗಳುಳ್ಳ ಜೀವಗಳು. ಉದಾ:- ಶಂಖ.

ದ್ವೀಪ (೧–೪೮)— ನೀರಿನಿಂದ ಸುತ್ತಲ್ಪಟ್ಟ ಪ್ರದೇಶಕ್ಕೆ ದ್ವೀಪವೆನ್ನುತ್ತಾರೆ. ಜಂಬುದ್ವೀಪದ ಸುತ್ತಲು ಲವಣಸಮುದ್ರವಿರುವದರಿಂದ ಅದಕ್ಕೆ ದ್ವೀಪವೆನ್ನುತ್ತಾರೆ.

## ಧ

ಧರ್ಮ (೧) (೫–೭೭)— ಸಂಸಾರದುಃಖವನ್ನು ಬಿಡಿಸಿ ಉತ್ತಮ ಸುಖದಲ್ಲಿ ಅಂದರೆ ಇಂದ್ರಾದಿಗಳ ಸುಖದಲ್ಲಿ ಮತ್ತು ಮೋಕ್ಷಸುಖದಲ್ಲಿ ಇರಿಸುವ ಗುಣವು. (೨) (೧೦–೬೩ ವ.)— ಜೀವ ಮತ್ತು ಪುದ್ಗಲಗಳ ಗತಿಗೆ ಸಹಾಯಕವಾಗುವ ದ್ರವ್ಯ.

ಧೂಮಪ್ರಭಾ (೫-೮೧)— ಐದನೆಯ ನರಕ.

ಧೃತಿ (೧೫–೧೫ ವ.)— ಈ ಧಾರ್ಮಿಕ ವಿಧಿಯನ್ನು ಗರ್ಭಿಣಿಯು ಏಳನೆಯ ತಿಂಗಳಲ್ಲಿ ಆಚರಿಸುತ್ತಾರೆ.

ಧ್ಯಾನ (೬–೩೩ ವ.)— ಮನಸ್ಸನ್ನು ಏಕಾಗ್ರಗೊಳಿಸಿ ಶ್ರುತಪದಗಳ ಚಿಂತನ ಮಾಡುವುದು.

ಧ್ಯಾನಚಕ್ರ (೬–೨೪ ವ.)— ಕರ್ಮರಿಪುಗಳನ್ನು ಮುನಿಗಳು ಧರ್ಮಧ್ಯಾನ ಶುಕ್ಲಧ್ಯಾನಗಳಿಂದ ನಷ್ಟಗೊಳಿಸುತ್ತಾರೆ. ಆ ಕರಣದಿಂದ ಈ ಧ್ಯಾನ ಗಳಿಗೆ ಚಕ್ರವೆಂದು ಹೇಳಲಾಗಿದೆ.

ಧ್ರೌವ್ಯಾತ್ಮಕ (೨-೧೦ ವ.)— ನಿತ್ಯಾತ್ಮಕ ಅಥವಾ ಅವಿನಾಶ.

## ನ

ನಂದನವನ (೧–೪೯ ವ.)— ಮೇರುಪರ್ವತದಲ್ಲಿ ಭದ್ರಶಾಲವನದಿಂದ ಮೇಲೆ ಐದುನೂರು ಯೋಜನ ಎತ್ತರದ ಮೇಲೆ ಹೋದರೆ ನಂದನವನವು ಹತ್ತುತ್ತದೆ.

ನಂದೀಶ್ವರದ್ವೀಪ (೧೬-೬೯)— ಇದು ಎಂಟನೆಯ ದ್ವೀಪ ಇದರ ನಟ್ಟನಡುವೆ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಅಂಜನಪರ್ವತಗಳಿರುತ್ತವೆ.

ನಂದೀಶ್ವರಮಹಾಮಹಿಮೆ (೨-೭೭ ವ.)— ಆಷಾಢ ಶುದ್ಧ ಅಷ್ಟಮಿಯಿಂದ ಹುಣ್ಣಿಮೆಯ ವರೆಗೆ ಕಾರ್ತಿಕ ಶುದ್ಧ ಅಷ್ಟಮಿಯಿಂದ ಹುಣ್ಣಿಮೆಯ ವರೆಗೆ ಮತ್ತು ಫಾಲ್ಗುಣ ಶುದ್ಧ ಅಷ್ಟಮಿಯಿಂದ ಹುಣ್ಣಿಮೆಯ ವರೆಗೆ ಕಲ್ಪಜರು ನಂದೀಶ್ವರದ್ವೀಪದೊಳಗಿನ ಐವತ್ತೆರಡು ಚೈತ್ಯಾಲಯಗಳ ಬಹು ದೊಡ್ಡ ಪೂಜೆಮಾಡುತ್ತಾರೆ. ಆ ಪೂಜೆಗಳು ನಂದೀಶ್ವರಮಹಾಮಹಿಮೆಗಳು.

ನಂದ್ಯಾವರ್ತ (೧) (೬-೧೦೬ ವ.)— ನಂದ್ಯಾವರ್ತಹೂವಿನ ಆಕಾರದ ಮನೆ. (೨) (೧೫-೩ ವ.)—ಭರತನ ಶಿಬಿರದೊಳಗಿನ ವಾಸಸ್ಥಾನದ ಹೆಸರು. ಇದರ ಆಕಾರವು ನಂದ್ಯಾವರ್ತದ ಹೂವಿನಂತಹದು.

ನರಕಾಯುಷ್ಯ (೨-೧೧ ವ.)— ಇದರ ಉದಯದಿಂದ ದೀರ್ಘಕಾಲದ ವರೆಗೆ ಜೀವನು ನರಕದಲ್ಲಿ ಉಳಿಯಬೇಕಾಗುತ್ತದೆ.

ನವನೋಕಷಾಯ (೧೦-೧೪ ವ.)— ಹಾಸ್ಯ, ರತಿ, ಅರತಿ, ಶೋಕ, ಭಯ, ಜಿಗುಪ್ಸೆ, ಸ್ತ್ರೀವೇದ, ಪುಂವೇದ ಮತ್ತು ನಪುಂಸಕವೇದ.

ನವವಿಧಪುಣ್ಯ (೪-೯೬)— ಮುನಿಗಳು ಚರಿಗೆಗೆ ಬಂದಾಗ ಅವರಿಗೆ ದಾನ ಮಾಡುವ ಕ್ರಮಗಳು ಒಂಬತ್ತು ಇರುತ್ತವೆ. ಅವುಗಳಿಗೆ ನವವಿಧ ಪುಣ್ಯವೆನ್ನುತ್ತಾರೆ. ಅವು ಹೀಗೆ:— (೧) ಮೂರುಸಲ ಪ್ರದಕ್ಷಿಣೆ, (೨) ಉಚ್ಚಸ್ಥಾನ, (೩) ಪಾದೋದಕ, (೪) ಅರ್ಚನ, (೫) ಪ್ರಣಾಮ (೬) ವಚನಶುದ್ಧಿ, (೭) ಕಾಯಶುದ್ಧಿ, (೮) ಮನಶ್ಶುದ್ಧಿ, (೯) ಏಷಣಾಶುದ್ಧಿ.

ನಾಕಲೋಕಚ್ಯುತಿ (೩-೩ ವ)— ಆಯುಷ್ಯ ತೀರಿತೆಂದರೆ ದೇವರು ಸ್ವರ್ಗ ಬಿಟ್ಟು ಭೂಲೋಕದಲ್ಲಿ ಜನ್ಮವೆತ್ತುವರು. ಆಗ ಅವರ ಶರೀರವು ವಿದ್ಯುತ್ ಅಥವಾ ಮೋಡಗಳ ಹಾಗೆ ಕರಗಿ ಹೋಗುತ್ತವೆ. ಇದು

ನಾಡಿಕಾ (೬-೪೮ ವ.)—ಮೂವತ್ತೆಂಟುವರೆ ನಿಮೇಷಗಳಿಂದ ಒಂದು ನಾಡಿಕೆ.

ನಾಭಿನಗ (೧-೪೮ ವ.)— ಎರಡೂವರೆ ದ್ವೀಪಗಳಲ್ಲಿರುವ ಜಘನ್ಯ ಮತ್ತು ಮಧ್ಯಮ ಭೋಗಭೂಮಿಗಳಲ್ಲಿ ಇರುವ ಇಪ್ಪತ್ತು ಪರ್ವತಗಳಿಗೆ ನಾಭಿನಗಗಳೆನ್ನುತ್ತಾರೆ ಇವುಗಳ ಎತ್ತರ ಒಂದು ಸಾವಿರ ಯೋಜನ. ಮತ್ತು ಬಣ್ಣ ಬಿಳಿದು.

ನಾಲ್ಕು ಉಪಧೆ (೧-೮೧ ವ.)— ದೇಶ, ಜನ್ಮ, ಆಚಾರ ಮತ್ತು ಕುಲ ಇವು ನಾಲ್ಕು ಉಪಧೆಗಳು.

ನಿಮೇಷ (೬-೪೮ ವ.)— ಏಳು ಸ್ತೋಕಗಳಿಂದ ಒಂದು ನಿಮೇಷ. ಅದಕ್ಕೆ ಲವವೆಂದು ಮತ್ತೊಂದು ಹೆಸರು.

ನಿಃಪ್ರವೀಚಾರ (೬-೪೩)— ಮೈಥುನೇಚ್ಛೆ ಇಲ್ಲದಿರುವುದು.

ನಿರ್ಜರಣಕರಣ (೧-೮೦ ವ.)— ಕರ್ಮಗಳು ತುಸುತುಸು ಉದುರಿ ಹೋಗುತ್ತಿರುವ ಸಾಧನಗಳಾದ ಸಮ್ಯಗ್ದೃಷ್ಟಿ ಮುಂತಾದ ಜೀವನ ಪರಿಣಾಮಗಳು.

ನಿರ್ಜರೆ (೧೦-೬೩ ವ.)— ಬದ್ಧಕರ್ಮಗಳು ತುಸುತುಸು ಉದಯವಾಗಿ ಉರುಳಿ ಹೋಗುವುದು.

ನಿರ್ಮಾಣ (೧೬-೪೯ ವ.)— ಈ ಕರ್ಮದ ಉದಯದಿಂದ ಶರೀರದೊಳಗಿನ ಅವಯವಗಳು ಯೋಗ್ಯ ಸ್ಥಳಗಳಲ್ಲಿ ಯೋಗ್ಯ ಪ್ರಮಾಣಗಳಿಂದ ಉಂಟಾಗುತ್ತವೆ.

ನಿರ್ಯಾಪಕಾಚಾರ್ಯ (೨-೫೧ ವ.)— ಸಲ್ಲೇಖನ ವ್ರತವನ್ನು ಅಂಗೀಕರಿಸುವ ಮುನಿಗಳಿಗೆ ಸಲ್ಲೇಖನವನ್ನು ಉಪದೇಶಮಾಡುವ ಮತ್ತು ಅದನ್ನು ಸಾಧಿಸಿಕೊಡುವವರಿಗೆ ನಿರ್ಯಾಪಕಾಚಾರ್ಯರೆಂದು ಹೆಸರು.

ನಿರ್ವೃತಿ (೧೫-೧೫ ವ.)— ಸಂಪೂರ್ಣಯೋಗನಿರೋಧ ಮಾಡಿದ ಜಿನೇಶ್ವರರಿಗೆ ಹದಿನೆಂಟು ಸಾವಿರ ಶೀಲಗಳು ಮತ್ತು ಎಂಬತ್ತು ನಾಲ್ಕುಲಕ್ಷ ಉತ್ತರಗುಣಗಳು ಪ್ರಾಪ್ತವಾಗುತ್ತವೆ. ಎಲ್ಲ ಅಘಾತಿಕರ್ಮಗಳು ನಾಶಹೊಂದುತ್ತವೆ. ಆಗ ಅವರಿಗೆ ಪರಮನಿರ್ವಾಣವು ಪ್ರಾಪ್ತವಾಗುತ್ತದೆ. ಇದು ನಿರ್ವೃತಿ.

ನಿಷದ್ಯಾ (೧೫-೧೫ ವ.)— ಕೂಸನ್ನು ಯೋಗ್ಯವಾದ ಹಾಸಗೆಯ ಮೇಲೆ ಕೂಡ್ರಿಸುವುದು.

ನಿಷಧಪರ್ವತ (೧-೪೮ ವ.)— ಹರಿಕ್ಷೇತ್ರ ಮತ್ತು ವಿದೇಹಕ್ಷೇತ್ರ ಇವುಗಳ ಮೇರೆಯಲ್ಲಿರುವ ಈ ಪರ್ವತವು ೪೦೦ ಯೋಜನ ಎತ್ತರವಾಗಿದೆ. ಇದರ ಬಣ್ಣವು ಕಾಸಿದ ಬಂಗಾರದಂತೆ ಇದೆ.

ನಿಸ್ಸಂಗತ್ವಾತ್ಮಭಾವನಾ (೧೫-೧೫ ವ.)—ಏಕವಿಹಾರಿಯಾಗಿ ನಿಸ್ಸಂಗಭಾವನೆಯನ್ನು ಬೆಳೆಯಿಸಿಕೊಳ್ಳಬೇಕು.

ನೀಚೈರ್ಗೋತ್ರ (೧೬-೪೯ವ.)— ಈ ಕರ್ಮದ ಉದಯದಿಂದ ನಿಂದಿತ-ದರಿದ್ರ-ಭ್ರಷ್ಟ ಮುಂತಾದ ಕುಲಗಳಲ್ಲಿ ಜನ್ಮ ಉಂಟಾಗುತ್ತದೆ.

ನೀಲಪರ್ವತ (೧-೪೮ ವ.)— ವಿದೇಹ ಮತ್ತು ರಮ್ಯಕ ಈ ಕ್ಷೇತ್ರಗಳ ಮೇರೆಯಲ್ಲಿರುವ ಈ ಪರ್ವತವು ನಾಲ್ಕುನೂರು ಯೋಜನ ಎತ್ತರವಾಗಿದೆ. ಇದರ ಬಣ್ಣವು ವೈಡೂರ್ಯರತ್ನದಂತೆ ಇದೆ.

ನೀಲಲೇಶ್ಯಾ (೫-೮೩ ವ.)— ಆಲಸ್ಯ, ಬುದ್ಧಿಹೀನತೆ, ಅವಿವೇಕ, ವಿಷಯ ಲಂಪಟತೆ, ಅಭಿಮಾನ, ಕಪಟ, ಅತಿನಿದ್ರೆ, ಧನಧಾನ್ಯಗಳಲ್ಲಿ ತೀವ್ರ ಅಭಿಲಾಷೆ ಇವು ನೀಲಲೇಶ್ಯೆಯ ಪರಿಣಾಮಗಳು.

ನೋಂಪಿ (೫-೪೮)— ವ್ರತ.

## ಪ

ಪಂಕಪ್ರಭೆ (೫-೪)— ನಾಲ್ಕನೆಯ ನರಕವು.

ಪಂಚದಶಪ್ರಮಾದ (೬-೨೯ ವ.)— ಕ್ರೋಧ, ಮಾನ, ಮಾಯಾ, ಲೋಭ ಇವು ನಾಲ್ಕು ಕಷಾಯಗಳು. ಸ್ತ್ರೀಕಥಾ, ಭೋಜನಕಥಾ, ರಾಷ್ಟ್ರಕಥಾ ಮತ್ತು ರಾಜಕಥಾ ಇವು ನಾಲ್ಕು ವಿಕಥೆಗಳು. ಸ್ಪರ್ಶೇಂದ್ರಿಯ ರಸನೇಂದ್ರಿಯ ಘ್ರಾಣೇಂದ್ರಿಯ ಚಕ್ಷುರಿಂದ್ರಿಯ ಕರ್ಣೇಂದ್ರಿಯ ಇವು ಐದು ಇಂದ್ರಿಯಗಳು. ಇವುಗಳಲ್ಲಿ ನಿದ್ರೆ ಮತ್ತು ಸ್ನೇಹ ಕೂಡಿ ಇವು ಹದಿನೈದು ಪ್ರಮಾದಗಳಾಗುತ್ತವೆ. ಇವುಗಳಿಂದ ಧರ್ಮಕ್ರಿಯೆಗಳಲ್ಲಿ ಅನಾದರವು ಹುಟ್ಟುತ್ತದೆ.

ಪಂಚಪದ (೨-೫೪)— ಪಂಚಪರಮೇಷ್ಠಿಗಳ ಮಂತ್ರಕ್ಕೆ ಪಂಚಪದವೆನ್ನುತ್ತಾರೆ.

ಪಂಚಮಹಾಕಲ್ಯಾಣ (೩-೪೦ ವ.)—(೧) ಗರ್ಭಕಲ್ಯಾಣ, (೨) ಜನ್ಮಕಲ್ಯಾಣ (೩) ದೀಕ್ಷಾಕಲ್ಯಾಣ, (೪) ಕೇವಲಜ್ಞಾನಕಲ್ಯಾಣ, (೫) ಮೋಕ್ಷಕಲ್ಯಾಣ.

ಪಂಚಾಚಾರ (೧-೩)— ಜ್ಞಾನಾಚಾರ, ದರ್ಶನಾಚಾರ, ಚಾರಿತ್ರಾಚಾರ, ತಪಾಚಾರ ಮತ್ತು ವೀರ್ಯಾಚಾರ. ಇವು ಐದು ಆಚಾರಗಳು.

ಪಂಚಾಣೂತ್ತರ (೧೬-೬೬)— ಅನುದಿಶೆಗಳ ತರುವಾಯ ಅನೇಕ ಲಕ್ಷಯೋಜನದ ಮೇಲೆ ಪಂಚಾಣೂತ್ತರ ವಿಮಾನಗಳಿವೆ.

ಪಂಚಾಶ್ಚರ್ಯ (೪-೯೮)— ತೀರ್ಥಂಕರರಂಥ ಉತ್ತಮ ಪಾತ್ರಕ್ಕೆ ಆಹಾರ ದಾನ ಮಾಡಿದಾಗ ದೇವರುಗಳು ಮಾಡುವ (೧) ದೇವದುಂದುಭಿ, (೨) ರೈವೃಷ್ಟಿ, (೩) ಸುರಭಿಶೀತಲವಾಯು, (೪) ಕುಸುಮವೃಷ್ಟಿ, (೫) ದಾನ, ದಾನಿ ಮತ್ತು ಪಾತ್ರಸ್ತುತಿ.

ಪಂಚೇಂದ್ರಿಯ (೧೨-೬೩ವ.)—ಸ್ಪರ್ಶನ, ರಸನ, ಘ್ರಾಣ, ಚಕ್ಷು, ಶ್ರೋತ್ರೇಂದ್ರಿಯಗಳುಳ್ಳ ಜೀವಗಳು. ಉದಾ:– ಮನುಷ್ಯ, ಆಕಳು, ಎಮ್ಮೆ, ಕುದುರೆ ಮುಂ.

ಪದಾರ್ಥ (೫–೫೪)— ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರಾ, ಮೋಕ್ಷ. ಪಾಪ ಮತ್ತು ಪುಣ್ಯ ಇವು ೯ ಪದಾರ್ಥಗಳು.

ಪದಿನಾಱುಕರ್ಮಪ್ರಕೃತಿಗಳು (೧೦–೧೪)— (೧) ನಿದ್ರಾನಿದ್ರಾ, (೨) ಪ್ರಚಲಾ ಪ್ರಚಲಾ, (೩) ಸ್ತ್ಯಾನಗೃದ್ಧಿ, (೪) ನರಕಗತಿ, (೫) ತಿರ್ಯಗ್‌ಗತಿ, (೬) ಏಕೇಂದ್ರಿಯ ಜಾತಿ, (೭) ದ್ವೀಂದ್ರಿಯ ಜಾತಿ, (೮) ತ್ರೀಂದ್ರಿಯ ಜಾತಿ, (೯) ಚತುರಿಂದ್ರಿಯಜಾತಿ, (೧೦) ನರಕಗತಿಪ್ರಾಯೋಗ್ಯಾನುಪೂರ್ವಿ, (೧೧) ತಿರ್ಯಗ್‌ಗತಿಪ್ರಾಯೋಗ್ಯಾನುಪೂರ್ವಿ, (೧೨)ಆತಪ, (೧೩) ಉದ್ಯೋತ, (೧೪) ಸ್ಥಾವರ, (೧೫) ಸೂಕ್ಷ್ಮ, (೧೬) ಸಾಧಾರಣ.

ಪರಮಾಯು (೧-೫೨)— ಭೋಗಭೂಮಿಯಲ್ಲಿ ಭೋಗಭೂಮಿಜನ ಉತ್ಕೃಷ್ಟ ಆಯುಷ್ಯವು ಮೂರು ಪಲ್ಯೋಪಮ. ತಿರ್ಯಂಚರ ಆಯುಷ್ಯವೂ ಅಷ್ಟೇ ಇರುತ್ತದೆ. ವಿದೇಹದಲ್ಲಿ ಭೋಗಭೂಮಿಜನ ಉತ್ಕೃಷ್ಟ ಆಯುಷ್ಯವು ಒಂದು ಪೂರ್ವಕೋಟಿ.

ಪರಮಾರ್ಹಂತ್ಯ (೧೫–೧೬ ವ.)— ಶ್ರೇಷ್ಠವಾದ ಅರಹಂತ ಪರಮೇಶ್ವರರ ಪದವು. ಸ್ವರ್ಗಾವತರಣ ಮುಂತಾದ ಮಹಾಕಲ್ಯಾಣಗಳು ಇದರಲ್ಲಿ ಪ್ರಾಪ್ತವಾಗುತ್ತವೆ. ಇದು ಆರನೆಯ ಪರಮಸ್ಥಾನವು.

ಪರಮಾವಧಿ (೩–೩೭)—ಅವಧಿಜ್ಞಾನದಲ್ಲಿ ದೇಶಾವಧಿ, ಪರಮಾವಧಿ, ಸರ್ವಾವಧಿ ಎಂದು ಮೂರು ಭೇದಗಳಿವೆ. ಪರಮಾವಧಿ ಮತ್ತು ಸರ್ವಾವಧಿ ಜ್ಞಾನಗಳು ಚರಮಶರೀರಿಯಾದ ಅಥವಾ ತದ್ಭವಮೋಕ್ಷಗಾಮಿಯಾದ ಮುನಿಗಳಿಗೆ ಮಾತ್ರ ದೊರಕುತ್ತವೆ.

ಪರಸ್ಪರೋದೀರಿತ (೫–೮೫ ವ.)— ನಾರಕರು ಒಬ್ಬರಿಗೊಬ್ಬರು ದುಃಖಕೊಡುತ್ತಾರೆ. ಅದು ಪರಸ್ಪರೋದೀರಿತ ದುಃಖವು.

ಪರಿಗ್ರಹ (೩–೬೨)— ಇದು ಬಾಹ್ಯ ಮತ್ತು ಅಭ್ಯಂತರ ಎಂದು ಎರಡು ವಿಧವಾಗಿದೆ. ಧನಧಾನ್ಯವು ಬಾಹ್ಯಪರಿಗ್ರಹವು. ಮಿಥ್ಯಾತ್ವ, ಕ್ರೋಧಾದಿ ಕಷಾಯ, ಹಾಸ್ಯಾದಿ ನೋಕಷಾಯ ಇವುಗಳಿಗೆ ಅಭ್ಯಂತರ ಪರಿಗ್ರಹವೆನ್ನುತ್ತಾರೆ.

ಪರಿನಿರ್ವಾಣ (೧೫–೧೬ ವ.)— ಸಂಸಾರಬಂಧನದಿಂದ ಮುಕ್ತನಾದ ಆತ್ಮನ ಅವಸ್ಥೆಯು. ಇದು ೭ನೆಯ ಪರಮಸ್ಥಾನವು.

ಪರಿನಿರ್ವಾಣಪೂಜೆ (೩–೫೮ ವ.)—ತೀರ್ಥಂಕರರು ಮೋಕ್ಷಕ್ಕೆ ಹೋದ ಮೇಲೆ ಚತುರ್ನಿಕಾಯದೇವರುಗಳು ಅವರ ಶರೀರವನ್ನು ಪೂಜಿಸುತ್ತಾರೆ. ಚಂದನ ಮುಂತಾದ ಕಟ್ಟಿಗೆಗಳಿಂದ ಚಿತೆಯನ್ನು ರಚಿಸಿ ಅದರ ಮೇಲೆ ಅವರ ಶರೀರವನ್ನು ಇಡುತ್ತಾರೆ. ಅಗ್ನಿ ಕುಮಾರರು ವಂದಿಸುವಾಗ ಅವರ ಕಿರೀಟಗಳೊಳಗಿನ ಅಗ್ನಿಯಿಂದ ಚಿತೆಗೆ ಬೆಂಕಿ ಹತ್ತಿ ಅವರ ಶರೀರವು ಭಸ್ಮವಾಗುತ್ತದೆ. ಆ ಭಸ್ಮವನ್ನು ಎಲ್ಲ ದೇವತೆಗಳು ಧರಿಸಿಕೊಂಡು ಸ್ತುತಿಸಿ ತಮ್ಮ ತಮ್ಮ ಸ್ಥಳಗಳಿಗೆ ಹೋಗುತ್ತಾರೆ. ಇದು ಪರಿನಿರ್ವಾಣಪೂಜೆ. ಅಥವಾ ಪರಿನಿರ್ವಾಣಮಹಾಕಲ್ಯಾಣಪೂಜೆ.

ಪರಿನಿಷ್ಕ್ರಮಣಕಲ್ಯಾಣ (೬–೨೩ ವ.)— ತೀರ್ಥಂಕರರು ದೀಕ್ಷೆ ತೆಗೆದುಕೊಳ್ಳುವುದಕ್ಕೆ ವನಕ್ಕೆ ಹೋಗುವುದು ಪರಿನಿಷ್ಕ್ರಮಣವು. ಆ ಸಮಯದಲ್ಲಿ ದೇವತೆಗಳು ಮಾಡುವ ಉತ್ಸವವು ಪರಿನಿಷ್ಕ್ರಮಣಕಲ್ಯಾಣವು.

ಪರಿವಾರದೇವಿ (೩–೪)—ಮುಖ್ಯ ದೇವಾಂಗನೆಯ ಹತ್ತಿರ ಇರುವ ಬೇರೆ ದೇವಿ.

ಪರಿಹಾರವಿಶುದ್ಧಿ (೧೦–೬೩ ವ.)–ಮೂವತ್ತು ವರ್ಷದ ವಯಸ್ಸಿನವನೂ ತೀರ್ಥಂಕರರ ಪಾದಗಳ ಹತ್ತಿರ ಇದ್ದುಕೊಂಡು ಎಷ್ಟೋ ವರ್ಷಗಳ ವರೆಗೆ ಅವರ ಸೇವೆ ಮಾಡಿದಂಥವನೂ ಪ್ರತ್ಯಾಖ್ಯಾನ ಪೂರ್ವದ ವರೆಗೆ ಅಧ್ಯಯನ ಮಾಡಿದವನೂ ಪ್ರಮಾದ ರಹಿತನೂ ದಿನಾಲು ಮೂರು ಸಂಧ್ಯಾಕಾಲಗಳನ್ನು ಬಿಟ್ಟು ಎರಡು ಹರದಾರಿ ವಿಹಾರ ಮಾಡುವವನೂ ಆದ ಮುನಿಗೆ ಈ ಚಾರಿತ್ರ ಉಂಟಾಗುತ್ತದೆ.

ಪರೀಷಹ (೨–೫೨)— ಹಸಿವು, ನೀರಡಿಕೆ, ಚಳಿ, ಬಿಸಿಲು ಮುಂತಾದ ಇಪ್ಪತ್ತೆರಡು ಉಪದ್ರವಗಳು.

ಪರ್ಯಾಪ್ತಿನಾಮಕರ್ಮ (೧೬–೪೯ ವ.)— ಈ ಕರ್ಮದ ಉದಯದಿಂದ ಜೀವನಿಗೆ ಪ್ರಾಪ್ತವಾಗಿರಬೇಕಾದ ಎಲ್ಲ ಪರ್ಯಾಪ್ತಿಗಳು ಪ್ರಾಪ್ತವಾಗುತ್ತವೆ.

ಪಲ್ಯಂಕಾಸನ (೧೦–೧೩ ವ.)— ಬಲಪಾದವನ್ನು ಎಡತೊಡೆಯ ಮೇಲೆ ಇಟ್ಟುಕೊಂಡು ಕುಳಿತುಕೊಳ್ಳುವುದು.

ಪಾಟಲೀಗ್ರಾಮ (೩–೩೩ ವ.)— ಗಂಧಿಳದೇಶದೊಳಗಿನ ಒಂದು ಊರು.

ಪಾಂಡುಕವನ (೧–೪೯ ವ.)— ಸೌಮನಸವನದ ಮೇಲೆ ಮೂವತ್ತೈದುವರೆ ಸಾವಿರ ಯೋಜನದ ಮೇಲೆ ಪಾಂಡುಕವನವಿದೆ.

ಪಾಂಡುಕಶಿಲಾತಲ (೭–೭೪)— ಮೇರು ಪರ್ವತದ ಮೇಲೆ ಪಾಂಡುಕ ಶಿಲೆಯು ಅರ್ಧಚಂದ್ರಾಕೃತಿ ಆಗಿದೆ. ಅದು ಹತ್ತು ಯೋಜನ ಉದ್ದ, ೫೦ ಯೋಜನ ವ್ಯಾಸವುಳ್ಳದ್ದಾಗಿ, ಎಂಟು ಯೋಜನ ಎತ್ತರವಾಗಿರುತ್ತದೆ.

ಪಾತ್ರ (೧೦–೯ ವ.)— ಮುಕ್ತಿಗೆ ಕಾರಣವಾಗುವ ರತ್ನತ್ರಯಗುಣಗಳು ವಾಸವಾಗಿರುವವನು.

ಪಾತ್ರದತ್ತಿ (೧೫–೧೩ ವ.)— ಮಹಾತಪೋಧನರಾದ ಮುನಿಗಳ ಪೂಜೆಮಾಡಿ ಅವರಿಗೆ ಶುದ್ಧವಾದ ಆಹಾರಾದಿಗಳನ್ನು ಕೊಡುವುದು.

ಪಾರಿವ್ರಾಜ್ಯ (೧೫–೧೬ ವ.)— ವೈರಾಗ್ಯಸಂಪನ್ನನಾದ ಶ್ರಾವಕನು ನಿರ್ವಾಣ ದೀಕ್ಷೆಯನ್ನು ತೆಗೆದುಕೊಳ್ಳುವುದು.

ಪುಂಡರೀಕಿಣಿ (೩–೧೭ ವ.)— ಒಂದು ರಾಜಧಾನಿಯ ಹೆಸರು. ಅಲ್ಲಿ ವಜ್ರದಂತಚಕ್ರವರ್ತಿಯು ರಾಜ್ಯವಾಳುತ್ತಿದ್ದನು.

ಪುಣ್ಯಯಜ್ಞ (೧೫–೧೬ ವ.)—ಇದರಿಂದ ಪುಣ್ಯವೃದ್ಧಿಯಾಗುತ್ತದೆ. ಜಿನದೀಕ್ಷೆಗೊಂಡ ಭವ್ಯನು ಚತುರ್ದಶಪೂರ್ವಗಳ ಅರ್ಥ ಹೇಳಿದ ಗ್ರಂಥಗಳನ್ನು ಪಠಣಮಾಡಬೇಕು ಅಥವಾ ಶ್ರವಣಮಾಡಬೇಕು.

ಪುದ್ಗಲ (೧೦–೬೩ ವ.)— ಸ್ಪರ್ಶ, ರಸ, ಗಂಧ ವರ್ಣಗಳುಳ್ಳ ದ್ರವ್ಯ.

ಪುಬ್ಬ (೨–೨೩ ವ.)— ತ್ಸ–ಪೂರ್ವ. ಪೂರ್ವವೆಂದರೆ ಎಪ್ಪತ್ತು ಲಕ್ಷ ಕೋಟಿ ಮತ್ತು ಐವತ್ತಾರುಸಾವಿರ ಕೋಟಿ, ೭೦೫೬೦೦೦೦೦೦೦೦೦೦.

ಪುರೋಹಿತರತ್ನ (೧೧–೩ ವ.)— ಇದು ಸಜೀವ ರತ್ನವು. ಇವನು ಚಕ್ರವರ್ತಿಗೆ ಶುಭಾಶುಭಗಳನ್ನು ಹೇಳುತ್ತಾನೆ.

ಪುಷ್ಕರವರದ್ವೀಪ (೩–೫೦ ವ.)— ಇದು ಮೂರನೆಯ ದ್ವೀಪವು.

ಪುಷ್ಕಲಾವತೀ (೧೫–೩ ವ.)— ಭರತಚಕ್ರವರ್ತಿಯ ಶಯನಗೃಹ.

ಪುಷ್ಕಳಾವತೀವಿಷಯ (೩–೮ ವ.)— ಈ ಹೆಸರಿನ ದೇಶ.

ಪೂಜಾರಾಧ್ಯ (೧೫–೧೬ ವ.)— ಜಿನದೀಕ್ಷೆಗೊಂಡ ಭವ್ಯನು ಜಿನಪೂಜೆ ಮಾಡಬೇಕು; ವ್ರತೋಪವಾಸ ಮಾಡಬೇಕು; ಮತ್ತು ದ್ವಾದಶಾಂಗ ಶ್ರವಣ ಮಾಡಬೇಕು. ಇದಕ್ಕೆ ಪೂಜಾರಾಧ್ಯಕ್ರಿಯೆಯೆನ್ನುತ್ತಾರೆ.

ಪೂರ್ವಭವಸ್ನೇಹ (೬–೪)— ಪೂರ್ವಜನ್ಮದೊಳಗಿನ ಪ್ರೀತಿ.

ಪೂರ್ವಭವಸ್ಮರಣ (೩–೨೨ ವ.)— ಪೂರ್ವಜನ್ಮದಲ್ಲಿ ನಡೆದು ಹೋದ ಸಂಗತಿಗಳನ್ನು ತಿಳಿಸುವ ಜ್ಞಾನ. ಇದಕ್ಕೆ ಜಾತಿಸ್ಮರಣವೆಂದು ಎನ್ನುತ್ತಾರೆ.

ಪೂರ್ವ ಅಥವಾ ಮೂಡಣ ವಿದೇಹ (೩-೮ ವ.)— ವಿದೇಹದೊಳಗಿನ ಪೂರ್ವ ಭಾಗದ ದೇಶ.

ಪೃಥಕ್ತ್ವವಿತರ್ಕವಿಚಾರ (೬-೩೪ ವ.)— ಗುಪ್ತಿ ಮುಂತಾದವುಗಳ ಅಭ್ಯಾಸ ಮಾಡಿದವನು ಮತ್ತು ದ್ರವ್ಯಪರ್ಯಾಯಗಳ ಚಿಂತನೆಯಲ್ಲಿ ನಿಪುಣ ರಾದ ಮುನಿಗಳು ಅರ್ಥ, ವ್ಯಂಜನ, ಕಾಯಯೋಗ, ವಚನಯೋಗ ಇವುಗಳ ಪೃಥಕ್‌ಪೃಥಕ್ ರೂಪದಿಂದ ಸಂಕ್ರಮಣ ಮಾಡುವ ಮನ ಸ್ಸಿನ ಮುಖಾಂತರವಾಗಿ ಮೋಹನೀಯಕರ್ಮಪ್ರಕೃತಿಗಳ ಉಪಶಮ ಅಥವಾ ಕ್ಷಯಮಾಡುವುದಕ್ಕೋಸುಗ ಉದ್ಯುಕ್ತರಾಗುತ್ತಾರೆ. ಅಂಥ ವರಲ್ಲಿ ಈ ಶುಕ್ಲಧ್ಯಾನವು ಉದಯವಾಗುತ್ತದೆ.

ಪೌಲಸ್ತ್ಯಜಿನಭವನ (೨-೩೨ವ.)—ಕುಬೇರನ ವಿಮಾನದಲ್ಲಿರುವ ಜಿನಮಂದಿರ.

ಪ್ರಕೀರ್ಣಕ (೫-೮೩ ವ.)— ಎಲ್ಲ ಕಡೆಯಲ್ಲಿ ಅಸ್ತಾವ್ಯಸ್ತವಾಗಿರುವ ನರಕ ಬಿಲಗಳು.

ಪ್ರತರಕ್ರಿಯೆ (೧೬-೪೯ ವ.)— ಪ್ರತರಾವಸ್ಥೆಯಲ್ಲಿ ಲೋಕದ ಅಸಂಖ್ಯಾತ ಭಾಗಗಳು ಕೇವಲಿಯ ಪ್ರತರಾಕಾರದ ಆತ್ಮಪ್ರದೇಶಗಳಿಂದ ವ್ಯಾಪ್ತ ವಾಗುತ್ತವೆ.

ಪ್ರತಿಗ್ರಹ (೧) (೮-೭೩ ವ.)— ದಾನ ಸ್ವೀಕಾರಮಾಡುವುದು. (೨) (೧೦-೧ ವ.)— ಮುನಿಗಳು ಆಹಾರದಾನಕ್ಕೆಂದು ಬಂದಾಗ ಆದರದಿಂದ ಅವ ರನ್ನು ಸತ್ಕರಿಸಿ ಮೂರು ಸಲ ಪ್ರದಕ್ಷಿಣೆ ಹಾಕಿ ಅವರನ್ನು ಮನೆಯೊ ಳಗೆ ಕರೆದುಕೊಂಡು ಹೋಗುವುದು.

ಪ್ರತಿಜ್ಞಾಭಂಗ (೨-೧೦ ವ.)— ಸಾಧ್ಯವನ್ನು ಸಿದ್ಧ ಮಾಡುವಾಗ ಸಿದ್ಧಗೊಳಿ ಸುವ ಹೇತುವನ್ನು ಕೊಡದೆ ವಿರುದ್ಧ ಹೇತುವನ್ನು ಕೊಡುವುದರಿಂದ ಪ್ರತಿಜ್ಞಾಭಂಗ ದೋಷವುಂಟಾಗುತ್ತದೆ. ಉದಾ:— ಶಬ್ದೋ ನಿತ್ಯಃ ಕೃತಕತ್ವಾತ್. ಈ ಅನುಮಾನವಾಕ್ಯದಲ್ಲಿ ಕೊಟ್ಟ ಕೃತಕತ್ವ ಹೇತು ಶಬ್ದವು ನಿತ್ಯವಾಗಿರುತ್ತದೆ. ಈ ಪ್ರತಿಜ್ಞೆಯ ಭಂಗಮಾಡಿ ಅದರ ಅನಿತ್ಯ ತ್ವವನ್ನು ಸಿದ್ಧಗೊಳಿಸುತ್ತದೆ.

ಪ್ರತಿಮಾಯೋಗ (೧೪-೧೩೯ ವ.)— ಆಹಾರ ತ್ಯಾಗ ಮಾಡಿ ಒಂದು ವರ್ಷದ ವರೆಗೆ ಒಂದೇ ಸ್ಥಳದಲ್ಲಿ ನಿಂತುಕೊಂಡು ತಪಮಾಡುವುದು. ಅದರೊ ಳಗೆ ಅಭ್ರಾವಕಾಶಯೋಗ, ಆತಾಪನಯೋಗ, ವರ್ಷಾಯೋಗವೆಂದು ಮೂರು ಭೇದಗಳಿವೆ.

ಪ್ರತೀಂದ್ರ (೩–೫೮ ವ.)—ಇಂದ್ರನಂತೆಯೇ ಆಯುಷ್ಯ, ಐಶ್ವರ್ಯ, ಪರಿವಾರ, ಆಜ್ಞೆ ಮುಂತಾದ ಗುಣಗಳಿರುವ ದೇವರು.

ಪ್ರತ್ಯೇಕಶರೀರ (೧೬–೪೯ ವ.)—ಈ ಕರ್ಮದ ಉದಯದಿಂದ ಒಂದು ಶರೀರದ ಒಡೆಯನು ಒಬ್ಬನೇ ಆಗಿರುತ್ತಾನೆ.

ಪ್ರಥಮಕಲ್ಯಾಣ (೭–೩೨ ವ.)— ಇದಕ್ಕೆ ಗರ್ಭಕಲ್ಯಾಣವೆಂದು ಅನ್ನುತ್ತಾರೆ. ಇದರಲ್ಲಿ ಇಂದ್ರನು ಸ್ವರ್ಗದಿಂದ ಬಂದು ಜಿನಮಾತಾಪಿತ್ರರಿಗೆ ನಮಸ್ಕರಿಸಿ ವಸ್ತ್ರಾಲಂಕಾರಗಳಿಂದ ಅವರನ್ನು ಸನ್ಮಾನಿಸಿ ಸ್ತುತಿಮಾಡಿ ತಿರುಗಿ ಸ್ವರ್ಗಕ್ಕೆ ಹೋಗುತ್ತಾನೆ.

ಪ್ರಥಮಶುಕ್ಲಧ್ಯಾನಪರಿಣತ (೧೦–೧೪ ವ.)— ಅನಿವೃತ್ತಿಕರಣಪರಿಣಾಮವು ಬಹಳೇ ನಿರ್ಮಲವಾದಾಗ ಅನಿವೃತ್ತಿಬಾದರಸಾಂಪರಾಯ-ಕ್ಷಪಕ-ಗುಣಸ್ಥಾನದ ಮೇಲೆ ಮುನಿಯು ಆರೋಹಣ ಮಾಡುತ್ತಾನೆ. ಇಲ್ಲಿ ಅಪ್ರತ್ಯಾಖ್ಯಾನಕ್ರೋಧ–ಮಾನ–ಮಾಯಾ–ಲೋಭ ಮತ್ತು ಪ್ರತ್ಯಾಖ್ಯಾನಕ್ರೋಧ–ಮಾನ– ಮಾಯಾ– ಲೋಭ ಈ ಎಂಟು ಕಷಾಯಗಳನ್ನು ಅವನು ನಾಶಗೊಳಿಸುತ್ತಾನೆ. ಚಾರಿತ್ರಮೋಹನೀಯದ ಅಪ್ರತ್ಯಾಖ್ಯಾನಾದಿ ಹನ್ನೆರಡು ಕಷಾಯ ಮತ್ತು ಒಂಬತ್ತು ನೋಕಷಾಯ ಇವುಗಳಲ್ಲಿ ಎಂಟು ಕಷಾಯಗಳನ್ನು ಹಿಂದಿಯೇ ಕೆಡಿಸಿರುವುದರಿಂದ ಇಲ್ಲಿ ಅಂದರೆ ಅನಿವೃತ್ತಿಬಾದರಸಾಂಪರಾಯಕ್ಷಪಕ ಗುಣಸ್ಥಾನದಲ್ಲಿ ನಾಶಮಾಡಬೇಕಾದವುಗಳೆಂದರೆ ನಾಲ್ಕು ಸಂಜ್ವಲನಕಷಾಯ ಮತ್ತು ಒಂಬತ್ತು ನೋಕಷಾಯಗಳು.

ಪ್ರಭಾಕರಿ (೩–೫೮ ವ.)— ವತ್ಸಕಾವತಿವಿಷಯದಲ್ಲಿ ಇದೊಂದು ಮೂಲ ನಗರವು.

ಪ್ರಮತ್ತಾಪ್ರಮತ್ತಪರಿವರ್ತನಸಹಸ್ರ (೧೦–೧೪)— ಪ್ರಮತ್ತಗುಣಸ್ಥಾನದೊಳಗಿಂದ ಸ್ವಸ್ಥಾನವಾದ ಅಪ್ರಮತ್ತಗುಣಸ್ಥಾನವನ್ನು ಪ್ರವೇಶಿಸುವುದು; ಮತ್ತು ಅಲ್ಲಿಂದ ಪ್ರಮತ್ತಗುಣಸ್ಥಾನವನ್ನು ಪ್ರವೇಶಿಸುವುದು. ಹೀಗೆ ಸಾವಿರಾರು ಸಲ ಸುತ್ತುವುದು.

ಪ್ರಾಗ್‌ಭಾರ (೧೬–೫೧ ವ.)—ಮೋಕ್ಷಶಿಲೆಯು ಇರುವ ಎಂಟನೆಯ ಪೃಥ್ವಿಯ ಹೆಸರು.

ಪ್ರಾಗ್‌ವಿದೇಹ (೫–೯೬ ವ.)— ಪೂರ್ವವಿದೇಹ.

ಪ್ರಾಣತ (೩–೭೭.)— ಹದಿನಾಲ್ಕನೆಯ ಸ್ವರ್ಗ.

ಪ್ರಾಯಶ್ಚಿತ್ತ (೬–೩೩ ವ.)— ಆಚರಣದಲ್ಲಿ ದೋಷವುಂಟಾಗಿದ್ದರೆ ಪ್ರಾಯಶ್ಚಿತ್ತ ತೆಗೆದುಕೊಂಡು ಶುದ್ಧವಾಗುವುದು.

ಪ್ರಾಯೋಪಗಮನ ( ೨–೫೩ )— ತನ್ನ ವೈಯ್ಯಾವೃತ್ಯವನ್ನು ತಾನು ಮಾಡದೆ ಎರಡನೆಯವರಿಗೂ ಮಾಡಗೊಡದೆ ಸನ್ಯಾಸಧರಿಸಿದಲ್ಲಿಯೇ ಸ್ಥಿರವಾಗಿ ನಿಂತುಕೊಂಡು ಆತ್ಮಚಿಂತನೆ ಮಾಡುತ್ತ ಪ್ರಾಣತ್ಯಾಗ ಮಾಡುವುದು ಪ್ರಾಯೋಪಗಮನವು.

ಪ್ರಾಯೋಪಗಮನವಿಧಿ (೬–೩೩ ವ.)–ಸ್ವತಃ ತನ್ನ ವೈಯ್ಯಾವೃತ್ಯವನ್ನುಮಾಡದೆ ಎರಡನೆಯವರಿಗೆ ಮಾಡಗೊಡದೆ ಒಂದೇ ಸ್ಥಳದಲ್ಲಿ ಉಪಸರ್ಗಾದಿಗಳನ್ನು ಸಹಿಸಿಕೊಂಡು ಆತ್ಮಧ್ಯಾನದಲ್ಲಿ ನಿರತನಾಗಿದ್ದುಕೊಂಡು ಪ್ರಾಣತ್ಯಾಗಮಾಡುವುದು.

ಪ್ರಿಯೋದ್ಭವ ( ೧೫–೧೫ ವ. )— ಬಾಲಕನ ಜನ್ಮವಾದ ಕೂಡಲೆ ಈ ವಿಧಿಯನ್ನು ಆಚರಿಸುತ್ತಾರೆ.

ಪ್ರೀತಿ ೧೫–೧೫ ವ. )—ಗರ್ಭಧಾರಣವಾದ ಮೇಲೆ ಮೂರು ತಿಂಗಳಾದ ನಂತರ ಈ ವಿಧಿಯನ್ನು ಆಚರಿಸುತ್ತಾರೆ.

## ಬ

ಬಂಧ ( ೧೦–೬೩ ವ. )— ಜೀವನಲ್ಲಿ ಕರ್ಮವು ಹಾಲಿನಲ್ಲಿ ನೀರು ಬೆರೆತುಕೊಳ್ಳುವಂತೆ ಬೆರೆತು ಹೋಗುವುದು.

ಬಂಧನ ( ೧೬–೪೯ ವ. )— ಶರೀರನಾಮಕರ್ಮದ ಉದಯದಿಂದ ಕೂಡಿದ ಪುದ್ಗಲಪ್ರದೇಶಗಳು ಒಂದರೊಳಗೊಂದು ಬೆರೆತು ಹೋಗುವುದು.

ಬಲಋದ್ಧಿ ( ೬–೩೩ ವ. )— ಈ ಋದ್ಧಿಯು ಪ್ರಾಪ್ತವಾಗಿರುವ ಮುನಿಗಳಿಗೆ ಅಂತರ್ಮುಹೂರ್ತದಲ್ಲಿ ದ್ವಾದಶಾಂಗವನ್ನು ಪಠಣಮಾಡಲಿಕ್ಕೆ ಬರುತ್ತದೆ. ತಮ್ಮ ಕಿರುಬೆರಳಿನಿಂದ ಅವರು ಮೂರು ಲೋಕಗಳನ್ನು ಎತ್ತಲು ಸಮರ್ಥರಾಗಿರುತ್ತಾರೆ.

ಬಲದೇವ ( ೩–೫೦ ವ. )— ಅರವತ್ತುಮೂರು ಶಲಾಕಾಪುರುಷರಲ್ಲಿ ಒಬ್ಬನು. ಬಲದೇವರು ತಪಶ್ಚರ್ಯವನ್ನು ಆಚರಿಸಿ ಸ್ವರ್ಗಕ್ಕೆ ಹೋಗುತ್ತಾರೆ, ಅಥವಾ ಮೋಕ್ಷದೊರಕಿಸಿಕೊಳ್ಳುತ್ತಾರೆ.

ಬಾದರಕಾಯಯೋಗ ( ೧೬–೪೯ ವ. )— ಕೇವಲಿಗಳು ವಿಹಾರ ಮಾಡುವಾಗ ಅವರ ಮನೋವಚನಕಾಯಯೋಗಗಳು ಬಾದರವಾಗಿರುತ್ತವೆ. ಆಗ ಅವರಲ್ಲಿ ಏಕತ್ವವಿತರ್ಕವೆಂಬ ಎರಡನೆಯ ಶುಕ್ಲಧ್ಯಾನವಿರುತ್ತದೆ. ಈ ಧ್ಯಾನದಿಂದ ಮೊದಲು ಕ್ಷೀಣಕಷಾಯವೆಂಬ ಹನ್ನೆರಡನೆಯ ಗುಣಸ್ಥಾನದಲ್ಲಿ ಮೋಹನೀಯಕರ್ಮಗಳನ್ನು ಸಂಪೂರ್ಣವಾಗಿ ನಷ್ಟಗೊಳಿಸಿ

ಆತ್ಮನು ಕೇವಲಜ್ಞಾನಿಯಾಗುತ್ತಾನೆ, ಮತ್ತು ವಿಹಾರ ಮಾಡುತ್ತಾನೆ. ಬಾದರವೆಂದರೆ ಸ್ಥೂಲ.

ಬಾದರಕೃಷ್ಟಿ (೧೦-೧೪ ವ.)— ಅನಿವೃತ್ತಿಕರಣಗುಣಸ್ಥಾನದಲ್ಲಿ ಸಂಜ್ವಲನ ಕ್ರೋಧ-ಮಾನ- ಮಾಯಾ-ಲೋಭಗಳ ಅನುಭಾಗಗಳನ್ನು ಕಡಿಮೆ ಮಾಡಿ ಸ್ಥೂಲ ಖಂಡ ಮಾಡುವುದು. ಕೃಷ್ಟಿ:- ಕರ್ಮವನ್ನು ಕೃಶ ಮಾಡುವ ಉಪಾಯ.

ಬಾದರನಾಮಕರ್ಮ (೧೬-೪೯ ವ.)— ಈ ಕರ್ಮದ ಉದಯದಿಂದ ಅನ್ಯರಿಗೆ ಬಾಧೆಯನ್ನುಂಟುಮಾಡುವ ಶರೀರವು ಪ್ರಾಪ್ತವಾಗುತ್ತದೆ.

ಬಾದರಲೋಭಸಂಜ್ವಲನ (೧೦-೧೪ ವ.)— ಸ್ಥೂಲಲೋಭರೂಪದ ಸಂಜ್ವಲನ ಕಷಾಯ.

ಬಾದರಸಾಂಪರಾಯಕೃಷ್ಟಿರೂಪಾನುಭಾಗ (೧೦-೧೪ ವ.)— ಅನಿವೃತ್ತಿಕರಣ ದಲ್ಲಿ ಇರುವ ಕಷಾಯಗಳ ಅನುಭಾಗರಸವನ್ನು ಕಡಿಮೆ ಮಾಡುವುದು.

ಬಾಹ್ಯಾಭ್ಯಂತರಪರಿಗ್ರಹ (೨-೫೧ ವ.)— ಹೊಲ, ಮನೆ, ಬೆಳ್ಳಿ, ಬಂಗಾರ, ದಾಸ, ದಾಸಿ, ಧಾನ್ಯ, ವಸ್ತ್ರ ಮುಂತಾದವುಗಳು ಬಾಹ್ಯಪರಿಗ್ರಹಗಳು. ಮಿಥ್ಯಾತ್ವ, ಕ್ರೋಧ, ಮಾನ, ಮಾಯೆ, ಲೋಭ, ಹಾಸ್ಯ, ರತಿ, ಅರತಿ, ಶೋಕ, ಭಯ, ಜಿಗುಪ್ಸೆ, ಸ್ತ್ರೀವೇದ, ಪುಂವೇದ, ನಪುಂಸಕ ವೇದ ಇವು ಅಂತರಂಗ ಪರಿಗ್ರಹಗಳು.

ಬುದ್ಧಿಋದ್ಧಿ (೬-೩೩ ವ.)— ಇದರ ಹದಿನೆಂಟು ಭೇದಗಳಿವೆ. ಅವು:— ಅವಧಿಜ್ಞಾನ, ಮನಃಪರ್ಯಯಜ್ಞಾನ, ಕೇವಲಜ್ಞಾನ, ಬೀಜಬುದ್ಧಿ, ಕೋಷ್ಠಬುದ್ಧಿ, ಸಂಭಿನ್ನಶ್ರೋತಬುದ್ಧಿ, ಪದಾನುಸಾರಣಿ, ದೂರಸ್ಪ ರ್ಶನ, ದೂರರಸನ, ದೂರಘ್ರಾಣ, ದೂರಶ್ರವಣ, ದೂರಾವಲೋಕನ, ಅಭಿನ್ನದಶಪೂರ್ವಿತ್ವ, ಚತುರ್ದಶಪೂರ್ವಿತ್ವ, ಅಷ್ಟಾಂಗಮಹಾನಿಮಿತ್ತ ಜ್ಞತಾ, ಪ್ರತ್ಯೇಕಬುದ್ಧತಾ, ವಾದಿತ್ವ ಮತ್ತು ಪ್ರಜ್ಞಾಶ್ರಮಣತ್ವ.

ಬುದ್ಧಿಸಾಗರ (೧೫-೩ ವ.)— ಭರತಚಕ್ರವರ್ತಿಯ ಪುರೋಹಿತ.

ಬೃಹಸ್ಪತಿಮತ (೨-೯ ವ.)— ಲೋಕಾಯತಿಕ ಮತ ನೋಡಿ.

ಬ್ರಹ್ಮಚರ್ಯ (೬-೩೦ ವ.)— ಸ್ವಚ್ಛಂದವನ್ನು ಇಲ್ಲದಂತೆ ಮಾಡುವುದಕ್ಕಾಗಿ ಗುರುಕುಲದಲ್ಲಿ ವಾಸಿಸುವುದು,

ಬ್ರಹ್ಮಸೂತ್ರ (೧೫-೧೧ ವ.)— ಯಜ್ಞೋಪವೀತ.

ಬ್ರಹ್ಮೇಂದ್ರ (೩-೭೩)— ಬ್ರಹ್ಮ ಮತ್ತು ಬ್ರಹ್ಮೋತ್ತರ ಕಲ್ಪಗಳ ಅಧಿಪತಿ.

## ಭ

ಭದ್ರಮುಖ (೧೫-೩ ವ.)— ಭರತಚಕ್ರವರ್ತಿಯ ಶಿಲ್ಪಿ.

ಭದ್ರಶಾಲವನ (೧-೪೯ ವ.)— ಇದು ಮೇರುಪರ್ವತದ ಅಡಿಯಲ್ಲಿದೆ.

ಭರತ (೧-೪೮ ವ.)— ಹಿಮವತ್ ಪರ್ವತದ ದಕ್ಷಿಣಕ್ಕೆ ಮೂರು ಪರ್ವತಗಳ ನಡುವೆ ಬಿಲ್ಲಿನ, ಆಕಾರದಂತೆ ಇರುವ ಭೂಮಿಗೆ ಭರತಕ್ಷೇತ್ರವೆನ್ನುತ್ತಾರೆ. ವಿಜಯಾರ್ಧ ಪರ್ವತ ಗಂಗಾ ಮತ್ತು ಸಿಂಧುನದಿಗಳಿಂದ ಇದರಲ್ಲಿ ಆರು ಭಾಗಗಳಾಗಿವೆ.

ಭವನಾಮರ (೧೦-೧೮ ವ.)— ಅಸುರ, ನಾಗ, ಸುಪರ್ಣಾದಿ ಹತ್ತು ಪ್ರಕಾರದ ದೇವರು ಭವನದೊಳಗೆ ಅಂದರೆ ಪಾತಾಳದೊಳಗೆ ವಾಸಿಸುತ್ತಾರೆ.

ಭವಪ್ರತ್ಯಯಜ್ಞಾನ (೨-೬೬)— (ಭವಪ್ರತ್ಯಯೋऽವಧಿರ್ದೇವನಾರಕಣಾಂ. ತ. ಸು. ಅ. ೧).

ಭವಾವಳಿ (೫-೨ ವ.)— ಪೂರ್ವಜನ್ಮಗಳ ಕಥನ.

ಭವ್ಯ (೨-೩೪)— ಸಮ್ಯಗ್‌ಜ್ಞಾನ, ಸಮ್ಯಗ್‌ದರ್ಶನ, ಸಮ್ಯಕ್‌ಚಾರಿತ್ರಗಳಿಂದ ಪರಿಣತನಾಗುವವನು.

ಭವ್ಯಮಾಲೆ (೧-೧೫)— ರತ್ನತ್ರಯ ಪ್ರಾಪ್ತವಾಗುವ ಯೋಗ್ಯತೆಗೆ ಭವ್ಯತೆಯೆನ್ನುತ್ತಾರೆ. ಈ ಭವ್ಯತೆಯಿಂದ ಕೂಡಿದ ಜೀವಸಮೂಹಕ್ಕೆ ಭವ್ಯಮಾಲೆಯೆನ್ನುತ್ತಾರೆ.

ಭವ್ಯಸಸ್ಯಸಮೃದ್ಧಿ (೭-೧೨೭ ವ.)— ಭವ್ಯ ಜೀವಗಳ ಸಮೃದ್ಧಿ.

ಭಾಜನಾಂಗ (೪-೩೫)— ಬೇಕಾದ ಪಾತ್ರೆಗಳನ್ನು ಕೊಡುವ ಕಲ್ಪವೃಕ್ಷ.

ಭಾಷಾಪರ್ಯಾಪ್ತಿ (೫-೮೩ ವ.)— ಕೆಲವು ನೋಕರ್ಮಸ್ಕಂಧಗಳನ್ನು ವಚನರೂಪಪರಿಣತಗೊಳಿಸುವ ಜೀವನ ಶಕ್ತಿಯು ಪೂರ್ಣವಾಗುವುದು.

ಭೂತಮುಖ (೧೫-೩ ವ.)— ಭರತಚಕ್ರವರ್ತಿಯ ಢಾಲು.

ಭೂಷಣಾಂಗ (೪-೩೫)—ನಾನಾತರದ ಆಭರಣಗಳನ್ನು ಕೊಡುವ ಕಲ್ಪವೃಕ್ಷ.

ಭೈಷಜ್ಯದಾನ (೧೦-೯ ವ.)— ಔಷಧದಾನ ಮಾಡುವುದು.

ಭೋಗಭೂಮಿ (೧೦-೧೦ ವ.)— ಇಲ್ಲಿ ಹತ್ತು ಪ್ರಕಾರದ ಕಲ್ಪವೃಕ್ಷಗಳಿಂದ ಭೋಗೋಪಭೋಗದ ಸಾಧನಗಳು ದೊರೆಯುತ್ತವೆ.

ಭೋಜನಾಂಗಕಲ್ಪಾವನಿಜ (೫-೩೯)— ನಾನಾತರದ ಭಕ್ಷ್ಯಭೋಜ್ಯಗಳನ್ನು ಕೊಡುವ ಕಲ್ಪವೃಕ್ಷ.

### ಮ

ಮಂಗಲಾವತಿ ವಿಷಯ (೩-೫೦ ವ.)— ಈ ದೇಶವು ಸೀತಾನದಿಯ ದಕ್ಷಿಣ ದಂಡೆಯ ಮೇಲೆ ಇದೆ.

ಮಣಿರತ್ನ (೧೧-೩ ವ.)— ಇದು ಚೂಡಾಮಣಿರತ್ನವು. ಚಕ್ರವರ್ತಿಯು ಇದನ್ನು ಮಸ್ತಕದ ಮೇಲೆ ಧರಿಸುತ್ತಾನೆ.

ಮಂತ್ರದೇವತಾ (೧-೬೯)— ಮಂತ್ರಾರಾಧನೆಯಿಂದ ವಶರಾಗುವ ಜಯಾ, ವಿಜಯಾ ಮುಂತಾದ ದೇವತೆಗಳು.

ಮದ್ಯಾಂಗಕುಜ (೫-೩೨)— ಭೋಗಭೂಮಿಯಲ್ಲಿ ಇರುವ ಕಲ್ಪವೃಕ್ಷವು. ಇದರಿಂದ ಹಾಲು, ತುಪ್ಪ, ಮೊಸರು, ಸುಗಂಧಿಜಲ ಮುಂತಾದ ರಸಪದಾರ್ಥಗಳು ದೊರೆಯುತ್ತವೆ. ಮದ್ಯದಂತೆ ಅವು ಕಾಮಶಕ್ತಿಯನ್ನುಂಟು ಮಾಡುತ್ತವೆ. ಆ ಕಾರಣ ಈ ಕಲ್ಪವೃಕ್ಷಕ್ಕೆ ಮದ್ಯಾಂಗವೆಂದು ಹೆಸರು.

ಮಂದರಪರ್ವತ (೧-೫೦)— ಮೇರುಪರ್ವತ. ಇದರ ಎತ್ತರವು ಒಂದು ಲಕ್ಷ ನಾಲ್ವತ್ತು ಯೋಜನ. ಜಂಬೂದ್ವೀಪದ ಮಧ್ಯಭಾಗದಲ್ಲಿ ಒಂದು ಲಕ್ಷ ಯೋಜನದ ಸುಮೇರು ಪರ್ವತವಿದೆ.

ಮಧ್ಯಮಜಘನ್ಯಪಾತ್ರದಾನ (೧೦-೧೦ ವ.)— ವ್ರತೀ ಶ್ರಾವಕನು ಮಧ್ಯಮ ಪಾತ್ರನು; ವ್ರತಹೀನ ಸಮ್ಯಗ್ದೃಷ್ಟಿಯು ಜಘನ್ಯಪಾತ್ರನು. ಈ ಪಾತ್ರಗಳಿಗೆ ದಾನ ಮಾಡುವುದರಿಂದ ಕ್ರಮವಾಗಿ ಮಧ್ಯಮ ಮತ್ತು ಜಘನ್ಯಭೋಗಭೂಮಿಗಳಲ್ಲಿ ಮನುಷ್ಯನು ಜನ್ಮವೆತ್ತುತ್ತಾನೆ.

ಮಧ್ಯಮಜಘನ್ಯಭೋಗಭೂಮಿ (೧೦-೧೦ ವ.)— ಹರಿವರ್ಷ ಮತ್ತು ರಮ್ಯಕ ಕ್ಷೇತ್ರಗಳು ಮಧ್ಯಮ ಭೋಗಭೂಮಿಗಳು. ಹೈಮವತ ಮತ್ತು ಹೈರಣ್ಯವತ ಕ್ಷೇತ್ರಗಳು ಜಘನ್ಯಭೋಗಭೂಮಿಗಳು.

ಮಧ್ಯಮಭೋಗಭೂಮಿಸ್ಥಿತಿ (೬-೪೮ ವ.)— ಆರ್ಯಾಖಂಡದಲ್ಲಿ ಸುಷಮ ಕಾಲವಿರುವಾಗ ಮಧ್ಯಮ ಭೋಗಭೂಮಿ ಇದ್ದಿತು. ಅಲ್ಲಿ ಮನುಷ್ಯನ ಆಯುಷ್ಯವು ಆರಂಭದಲ್ಲಿ ಎರಡು ಪಲ್ಯೋಪಮ. ಶರೀರದ ನಿಲುವಿಕೆ ಎರಡು ಕ್ರೋಶ, ಎರಡು ದಿವಸಕ್ಕೊಮ್ಮೆ ಅವರು ಆಹಾರ ಸ್ವೀಕರಿಸುತ್ತಿದ್ದರು.

ಮನು (೬-೫೩ ವ.)— ೬-೫೫ ವ. ನೋಡಿ.

ಮನುಷ್ಯಗತಿ (೧೬-೪೯ ವ.)— ಈ ಕರ್ಮದ ಉದಯದಿಂದ ಮನುಷ್ಯಗತಿ ಉಂಟಾಗುತ್ತದೆ.

ಮನುಷ್ಯಗತಿಪ್ರಾಯೋಗ್ಯಾನುಪೂರ್ವಿ (೧೬-೪೯ ವ.)— ಮನುಷ್ಯಪರ್ಯಾಯವು ಪ್ರಾಪ್ತವಾಗುವ ಮೊದಲು ವಿಗ್ರಹಗತಿಯಲ್ಲಿ. ಪೂರ್ವಪರ್ಯಾಯದ ಆಕಾರವು ಆತ್ಮಪ್ರದೇಶಕ್ಕೆ ಇರುತ್ತದೆ.

ಮನಃಪ್ರವೀಚಾರ (೬-೧೪)— ಮನಸ್ಸಿನಿಂದ ಮೈಥುನವನ್ನು ಅನುಭವಿಸುವುದು.

ಮಂದರಾದ್ರೀಂದ್ರಾಭಿಷೇಕ (೧೫-೧೫ ವ.)— ಜಿನಶಿಶುವಿನ ಜನ್ಮವಾದ ಕೂಡಲೆ ಇಂದ್ರಸಹಿತರಾದ ದೇವರು ಮೇರುಪರ್ವತದ ಮೇಲೆ ಜಿನಬಾಲಕನಿಗೆ ಅಭಿಷೇಕ ಮಾಡುತ್ತಾರೆ.

ಮರುತ್ತ್ರಿಕಾವೇಷ್ಟಿತ (೧-೪೪)— ಲೋಕತ್ರಯದ ಸುತ್ತಲು ಘನೋದಧಿ, ಘನವಾತ, ತನುವಾತ ಎಂಬ ಮೂರು ವಾತವೇಷ್ಟನಗಳು ಒಂದರ ಮೇಲೊಂದು ಇವೆ.

ಮರುಭವ (೨-೯)— ಆತ್ಮನು ಸಂಸಾರಾವಸ್ಥೆಯಲ್ಲಿ ಮನುಷ್ಯಾದಿ ರೂಪಪರ್ಯಾಯಗಳನ್ನು ಬಿಟ್ಟು ದೇವ, ಪಶು ಮುಂತಾದ ರೂಪಗಳನ್ನು ಪಡೆಯುವುದು ಮರುಭವವು ಅಥವಾ ಪುನರ್ಜನ್ಮವು. ಮುಂದಿನ ಜನ್ಮ.

ಮಹತ್ತರದೇವಿಯರ್ (೨-೬೭ ವ.)— ವೃದ್ಧ ಮತ್ತು ಪೂಜ್ಯರಾದ ತಂದೆ, ಗುರು, ಉಪಾಧ್ಯಾಯರಿಗೆ ಸಮಾನರಾದ ದೇವರಿಗೆ ಸಾಮಾನಿಕ ದೇವರೆನ್ನುತ್ತಾರೆ. ಅವರಿಗೆ ಮಹತ್ತರದೇವರೆಂದೂ ಹೆಸರು. ಇಂಥ ದೇವಿಯರಿಗೆ ಮಹತ್ತರದೇವಿಯರೆನ್ನುವರು.

ಮಹಾಕಚ್ಛ (೨-೩೩ ವ.)— ಪಶ್ಚಿಮ ವಿದೇಹದೊಳಗಿನ ಒಂದು ದೇಶ.

ಮಹಾಘರ್ಮಾಂತಕ (೧೫-೩ ವ.)— ಬಿಸಿಲಿನ ಉಷ್ಣತೆಯು ಎಷ್ಟೂ ತಾಕದಂತೆ ಬಹಳೇ ತಂಪಾಗಿರುವ ಮನೆ.

ಮಹಾತಮಃಪ್ರಭಾ (೫-೮೧ ವ.)— ಏಳನೆಯ ನರಕ.

ಮಹಾಮಹ (೨-೪೯ ವ.)— ಚತುರ್ಮುಖ ಮಂಟಪದಲ್ಲಿ ಮಕುಟಬದ್ಧರಾಜರು ಮಾಡುವ ಜಿನೇಶ್ವರನ ಮಹಾಪೂಜೆ.

ಮಹಾವ್ರತ (೩-೭೭)— ಹಿಂಸಾದಿ ಐದು ಪಾಪಗಳನ್ನು ಸ್ವತಃ ಮನಸ್ಸಿನಿಂದ ಮತ್ತು ಮಾತಿನಿಂದ ಮಾಡದಿರುವುದು, ಮಾಡಿಸದಿರುವುದು ಮತ್ತು ಒಪ್ಪಿಗೆ ಕೊಡದಿರುವುದು. ಹೀಗೆ ಒಂಬತ್ತು ಪ್ರಕಾರದ ಹಿಂಸಾದಿ ಪಾಪಗಳ ತ್ಯಾಗವು ಮಹಾವ್ರತವು.

ಮಹಾಹಿಮವತ್ಪರ್ವತ (೧-೪೮ ವ.)— ಇದು ಹೈಮವತ-ಹರಿ-ಕ್ಷೇತ್ರಗಳ ಮೇರೆಯಲ್ಲಿದೆ. ಇದರ ಎತ್ತರ ಎರಡುನೂರು ಯೋಜನ. ಇದರ ಬಣ್ಣ ಬೆಳ್ಳಿಯಂತೆ ಬಿಳಿದು.

ಮಾಹೇಂದ್ರಕಲ್ಪ (೨-೧೯ ವ.)— ಹದಿನಾರು ಸ್ವರ್ಗಗಳಲ್ಲಿ ನಾಲ್ಕನೆಯ ಸ್ವರ್ಗ.

ಮಾಧ್ಯಮಿಕಮತ ( ೨-೭ ವ. )—ಬಾಹ್ಯಾರ್ಥಪರಮಾಣುಗಳು ಮತ್ತು ಜ್ಞಾನಪರಮಾಣುಗಳು ಉಂಟು. ಅವು ಕ್ಷಣಿಕವಾಗಿವೆ. ಆದರೆ ಆತ್ಮನು ಮತ್ತು ಘಟಾದಿಪದಾರ್ಥಗಳು ಇಲ್ಲ ಎಂಬುದು ಮಾಧ್ಯಮಿಕರ ಮತವು. ದೀವಿಗೆಯೂ, ಮೋಡವೂ ಪೂರ್ಣವಾಗಿ ಇಲ್ಲವಾಗುವಂತೆ ಜ್ಞಾನಪರಮಾಣುಗಳು ಮತ್ತು ಬಾಹ್ಯಪರಮಾಣುಗಳು ಪ್ರತಿ ಕ್ಷಣದಲ್ಲಿ ನಾಶಹೊಂದುತ್ತವೆ. ಮತ್ತು ಹುಟ್ಟುತ್ತಿರುವ ಇಂಥ ಪರಮಾಣುಗಳ ಸಂಬಂಧವು ನಾಶಪಡೆದವುಗಳಿಗೆ ಇರುವದಿಲ್ಲ. ಹುಟ್ಟಿದ ಪರಮಾಣುಗಳು ಮತ್ತು ಬಾಹ್ಯಾರ್ಥಪರಮಾಣುಗಳು ತೀರ ಸ್ವತಂತ್ರವಾಗಿರುತ್ತವೆ ಎಂಬುದು ಮಾಧ್ಯಮಿಕರ ಮತ.

ಮಾನಕಷಾಯ ( ೧೪-೧೪೫ )—ದುರಭಿಮಾನ.

ಮಾನಸೋದೀರಿತ ( ೫-೮೮ ವ. )—ಮನಸ್ಸಿಗೆ ಹತ್ತುವಂತಹ ಮಾತುಗಳಿಂದ ಮತ್ತು ವಿಚಾರಗಳಿಂದ ಉಂಟಾಗುವ ದುಃಖ.

ಮಾನುಷೋತ್ತರಗಿರಿ ( ೧೬-೬೭ )— ಈ ಪರ್ವತವು ಪುಷ್ಕರದ್ವೀಪದ ನಟ್ಟನಡುವೆ ಗೋಲಾಕಾರವಾಗಿರುತ್ತದೆ. ಈ ಪರ್ವತವನ್ನು ದಾಟಿ ವಿದ್ಯಾಧರರು ಮತ್ತು ಋದ್ಧಿಪ್ರಾಪ್ತ ಮುನಿಗಳು ಹೋಗಲಾರರು. ಆದುದರಿಂದ ಇದಕ್ಕೆ ಮಾನುಷೋತ್ತರವೆಂಬ ಹೆಸರು.

ಮಾರಮಥನ ( ೪-೨ )—ಕಾಮವಿಕಾರವನ್ನು ನಷ್ಟಗೊಳಿಸಿದ ಜಿನೇಶ್ವರ.

ಮಾರ್ಗಪ್ರಭಾವನೆ ( ೨-೨೨ ವ. )— ಜ್ಞಾನ, ದಾನ, ಜಿನಪೂಜಾವಿಧಾನ, ತಪೋನುಷ್ಠಾನ ಮುಂತಾದವುಗಳಿಂದ ಜಿನಧರ್ಮವನ್ನು ಪ್ರಕಾಶನಗೊಳಿಸುವುದು.

ಮಾರ್ಗಸ್ಥಿತಿ ( ೧೦-೮ ವ. )— ರತ್ನತ್ರಯಮಾರ್ಗವು ಸ್ಥಿರವಾಗಿ ಉಳಿಯುವಂತೆ ಮಾಡುವ ಆಹಾರ.

ಮಾರ್ದವ ( ೬-೩೦ ವ. )— ಜ್ಞಾನ, ಆದರಸತ್ಕಾರ, ಕುಲ, ಜಾತಿ, ಬಲ, ಐಶ್ವರ್ಯ, ತಪ ಮತ್ತು ಶರೀರಸೌಂದರ್ಯ ಇವುಗಳ ಅಭಿಮಾನವಿಲ್ಲದೆ ಇರುವುದು.

ಮಿಥ್ಯಾಕಳಂಕ ( ೨-೨೨ )—ಸುಳ್ಳು ಆರೋಪಮಾಡುವುದು.

ಮಿಥ್ಯಾಜ್ಞಾನ ( ೫-೭೪ )— ಮಿಥ್ಯಾತ್ವಕರ್ಮಗಳ ಉದಯದಿಂದ ಕೂಡಿದ ಜ್ಞಾನ. ಅದು ಏಕಾಂತರೂಪ ವಸ್ತುಸ್ವರೂಪವನ್ನು ಸತ್ಯವೆಂದು ತಿಳಿಯುತ್ತದೆ. ಆದರೆ ನಿಜವಾಗಿ ಹಾಗೆ ಇರುವುದಿಲ್ಲ.

ಮಿಥ್ಯಾಜ್ಞಾನಿ ( ೩-೭ )— ಮಿಥ್ಯಾತ್ವದ ಉದಯದಿಂದ ಆತ್ಮಾದಿಕ ವಸ್ತು ಸರ್ವಥಾ ನಿತ್ಯ, ಸರ್ವಥಾ ಅನಿತ್ಯ, ಸರ್ವಥಾ ಭಿನ್ನ ಅಥವಾ ಸರ್ವಥಾ ಅಭಿನ್ನ ಎಂದು ತಿಳಿಯುವ ಜ್ಞಾನವುಳ್ಳ ಜೀವವು.

ಮಿಥ್ಯಾತ್ವ (೧ ೧೬)— ಇದರ ಉದಯದಿಂದ ಜೀವನು ಆಪ್ತರು ತೀರ್ಥಂಕರರು ಹೇಳಿದ ಮೋಕ್ಷಮಾರ್ಗದಿಂದ ಪರಾಙ್ಮುಖನಾಗುತ್ತಾನೆ. ಸಮ್ಯಕ್ತ್ವ ರಹಿತನಾಗುತ್ತಾನೆ. ಅರ್ಥಾತ್ ಮಿಥ್ಯಾದೃಷ್ಟಿಯಾಗುತ್ತಾನೆ. ಅದಕ್ಕೆ ಮಿಥ್ಯಾತ್ವ ಕರ್ಮವೆನ್ನುತ್ತಾರೆ. ಅಂದರೆ ಅತತ್ವಶ್ರದ್ಧಾನ. ( ೫—೫೨ )

ಮಿಥ್ಯಾದೃಷ್ಟಿ ( ೧೦—೯ ವ. )-ಜೀವಾದಿ ಸಪ್ತತತ್ವಗಳ ಮೇಲೆ ಶ್ರದ್ಧೆಯಿಲ್ಲದವನು.

ಮುಕ್ತಾವಲೀತಪ ( ೩-೫೮ ವ.)—ಇದರಲ್ಲಿ ಒಂದು ಉಪವಾಸ ಒಂದು ಪಾರಣೆ; ಎರಡು ಉ. ಒಂದು ಪಾ, ಮೂರು ಉ. ಒಂದು ಪಾ, ನಾಲ್ಕು ಉ. ಒಂದು ಪಾ, ಐದು ಉ. ಒಂದು ಪಾ, ಆ ಮೇಲೆ ನಾಲ್ಕು ಮೂರು ಎರಡು ಒಂದು ಉಪವಾಸ ಮಾಡಿ ಒಂದೊಂದು ಪಾರಣೆ ಮಾಡಬೇಕು. ಇದರಲ್ಲಿ ೨೫ ಉಪವಾಸಗಳು ಮತ್ತು ೯ ಪಾರಣೆಗಳು ಆಗುತ್ತವೆ.

ಮುಖ್ಯಕಾಲ ( ೬—೪೮ ವ. )—ಜೀವಾದಿ ದ್ರವ್ಯಗಳ ಪರಿಣಮನದಲ್ಲಿ ಸಹಕಾರಿಯಾಗಿರುವ ಕಾಲ. ಉದಾ:-ಕುಂಬಾರನ ತಿಗರಿ ತಿರುಗುವದಕ್ಕೆ ಆಧಾರವಾಗಿರುವ ಕಬ್ಬಿಣದ ಮೊಳೆಯ ಹಾಗೆ.

ಮುಹೂರ್ತ ( ೬—೪೮ ವ. )— ಎರಡು ನಾಡಿಕೆಗಳಿಂದ ಒಂದು ಮುಹೂರ್ತ.

ಮೂಡಣಮಂದರ ( ೩-೩೩ ವ. )—ಧಾತಕೀಖಂಡದೊಳಗಿನ ಪೂರ್ವ ಮಂದರ ಪರ್ವತವು.

ಮೂಢತ್ರಯ ( ೫-೫೬ )—ದೇವಮೂಢ, ಲೋಕಮೂಢ, ಗುರುಮೂಢ ಇವು ಮೂಢತ್ರಯಗಳು. ದೇವಮೂಢಃ— ಮಿಥ್ಯಾದೇವರ ಉಪಾಸನೆ. ಲೋಕಮೂಢ:-ನದಿಸ್ನಾನ ಪರ್ವತದ ಮೇಲಿಂದ ಬೀಳುವುದು ಮುಂತಾದವುಗಳು ಪುಣ್ಯಕರವೆಂದು ಭಾವಿಸುವುದು. ಗುರುಮೂಢಃ—ಆರಂಭ ಪರಿಗ್ರಹಗಳುಳ್ಳ ವಿಷಯವಾಸನೆಯಿಂದ ಕೂಡಿದ ಪಾಖಂಡಿಗಳನ್ನು ಮುನಿಗಳೆಂದು ಭಾವಿಸಿ ಪೂಜಿಸುವುದು. ಇದಕ್ಕೆ ಪಾಖಂಡಿಮೂಢವೆಂದು ಅನ್ನುತ್ತಾರೆ.

ಮೂಱುರತ್ನ ( ೬-೨೪ ವ. )— ಸಮ್ಯಗ್‌ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್ ಚಾರಿತ್ರ ಇವುಗಳಿಗೆ ರತ್ನತ್ರಯಗಳೆನ್ನುತ್ತಾರೆ.

ಮೂವತ್ತಾಱುಗುಣ ( ೧–೩ )—ಆಚಾರ್ಯರ ಮೂವತ್ತಾರುಗುಣಗಳು ಹೀಗಿರುತ್ತವೆಃ— ಅನಶನಾದಿ ೧೨ ತಪಗಳು, ಸಾಮಾಯಿಕಪ್ರತಿಕ್ರಮಣಾದಿ ೬ ಆವಶ್ಯಕಗಳು, ಉತ್ತಮಕ್ಷಮಾದಿ ೧೦ ಧರ್ಮಗಳು, ಜ್ಞಾನಾಚಾರಾದಿ ೫ ಆಚಾರಗಳು ಮತ್ತು ಮನೋಗುಪ್ತ್ಯಾದಿ ಮೂರು ಗುಪ್ತಿಗಳು ಇವೆಲ್ಲ ಕೂಡಿ ಆಚಾರ್ಯರ ೩೬ ಗುಣಗಳು ಆಗುತ್ತವೆ.

ಮೂಪತ್ತೆರಟ್ನಾಡುಗಳ್ ( ೧-೫೧ )— ವಿದೇಹಕ್ಷೇತ್ರದಲ್ಲಿ ಸೀತಾ, ಸಿತೋದಾ, ವಕ್ಷಾರಗಿರಿ ಮತ್ತು ವಿಭಂಗನದಿಗಳ ಮೂಲಕವಾಗಿ ಮೂವತ್ತೆರಡು ದೇಶಗಳಾಗಿವೆ.

ಮೋಕ್ಷ ( ೧೦–೬೩ ವ. )—ಜೀವನಿಂದ ಎಲ್ಲ ಕರ್ಮಗಳು ಬೇರೆಯಾಗಿ ಶುದ್ಧ ಅವಸ್ಥೆ ಪ್ರಾಪ್ತವಾಗುವುದು.

ಮೋದ ( ೧೫–೧೫ ವ. )—ಗರ್ಭಿಣಿಗೆ ಒಂಬತ್ತನೆಯ ತಿಂಗಳು ಸಮೀಪಿಸಿದಾಗ ಈ ವಿಧಿಯನ್ನು ಆಚರಿಸುತ್ತಾರೆ.

ಮೋಹನೀಯಕರ್ಮೋಪಶಮ ( ೬–೩೩ ವ. )— ದರ್ಶನಮೋಹನಿಯ ಮತ್ತು ಚಾರಿತ್ರಮೋಹನಿಯ ಕರ್ಮಗಳ ಉಪಶಮಮಾಡುವುದು ಅಂದರೆ ಅವುಗಳ ಉದಯವಾಗಗೊಡದಿರುವುದು.

## ಯ

ಯಜನ ( ೮–೭೩ ವ. )—ನಿತ್ಯಜಿನಪೂಜೆ.

ಯಥಾಖ್ಯಾತಚಾರಿತ್ರ ( ೧೦–೬೩ ವ. )—ಹನ್ನೊಂದನೆಯ, ಹನ್ನೆರಡನೆಯ, ಹದಿಮೂರನೆಯ, ಮತ್ತು ಹದಿನಾಲ್ಕನೆಯ, ಗುಣಸ್ಥಾನಗಳಲ್ಲಿ ಈಚಾರಿತ್ರವು ಪ್ರಾಪ್ತವಾಗುತ್ತದೆ. ಆತ್ಮನ ನಿಜವಾದ ಶುದ್ಧ ಸ್ವಭಾವವು ಈ ಗುಣಸ್ಥಾನದೊಳಗಿನ ಜೀವನಿಗೆ ಪ್ರಾಪ್ತವಾಗುತ್ತದೆ.

ಯಶಸ್ಕೀರ್ತಿ ( ೧೫–೪೯ ವ. )—ಈ ನಾಮಕರ್ಮದ ಉದಯದಿಂದ ಎಲ್ಲ ಕಡೆಯಲ್ಲಿ ಪುಣ್ಯಗುಣಗಳ ಪ್ರಶಂಶೆಯಾಗುತ್ತದೆ.

ಯಾಜನ ( ೮–೭೩ ವ. )—ಜಿನಪ್ರತಿಷ್ಠಾದಿ ಕಾರ್ಯಗಳನ್ನು ಮಾಡಿಸುವುದು.

ಯೋಗತ್ಯಾಗ ( ೧೫–೧೫ ವ. )—ವಿಹಾರ ಮುಗಿದ ಮೇಲೆ ಸಮವಸರಣವು ಅದೃಶ್ಯವಾಗುತ್ತದೆ. ಮತ್ತು ಯೋಗರೋಧಕ್ರಿಯೆಗೆ ಆರಂಭವಾಗುತ್ತದೆ. ಅಂತೆಯೇ ಇದಕ್ಕೆ ಯೋಗತ್ಯಾಗವೆನ್ನುತ್ತಾರೆ. ಆಗ ಲೋಕಪೂರಣ, ದಂಡಾಕಾರ, ಕವಾಟಾಕಾರ ಮತ್ತು ಪ್ರತರಾಕಾರಗಳಾಗಿ, ಆಮೇಲೆ ಜಿನರು ಸರ್ವಲೋಕ ವ್ಯಾಪ್ತರಾಗುತ್ತಾರೆ. ಇದು ಯೋಗತ್ಯಾಗವು.

ಯೋಗನಿರ್ವಾಣ ( ೧೫-೧೫ ವ. )— ಯೋಗ-ಧ್ಯಾನ—ಸಂವೇಗಪೂರ್ವಕವಾಗಿ ಮಾಡುವ ಪ್ರಯತ್ನವು ಯೋಗನಿರ್ವಾಣವು. ಯೋಗನಿರ್ವಾಣ ಪ್ರಾಪ್ತಿಯು ಉತ್ತಮತಪವು.

ಯೋಗಸಮ್ಮೃಹ ( ೧೫-೧೫ ವ. )—ಜ್ಞಾನ ಮತ್ತು ಧ್ಯಾನ ಇವುಗಳ ಸಮಯೋಗಕ್ಕೆ ಯೋಗವೆನ್ನುತ್ತಾರೆ. ಅದರ ವಿಷಯಕವಾದ ಪೂಜೆ ಅಥವಾ ಉತ್ಸವಕ್ಕೆ ಯೋಗಸಮ್ಮೃಹವೆನ್ನುತ್ತಾರೆ.

ಯೋಗಾಚಾರಮತ ( ೨-೭ ವ. )– ಈ ಲೋಕದಲ್ಲಿ ಜ್ಞಾನಪರಮಾಣುಗಳು ಇವೆ. ಅವು ಪ್ರತಿಕ್ಷಣದಲ್ಲಿಯೂ ನಾಶವಾಗುತ್ತವೆ. ಬಾಹ್ಯಾರ್ಥಪರಮಾಣುಗಳೆಂದರೆ ಘಟಪಟಾದಿ ವಸ್ತುಗಳಾಗಿರುವಂಥ ಅತೀಂದ್ರಿಯ ಪರಮಾಣುಗಳೇ ಇಲ್ಲ. ಅದರಿಂದ ಪದಾರ್ಥಗಳೊಳಗಿನ ಅವಯವೀ ಕಲ್ಪನೆಯು ಮಿಥ್ಯವು. ಅವರ ಈ ಅಭಿಪ್ರಾಯವು ಮಿಥ್ಯವಾಗಿದೆ. ಯಾಕೆಂದರೆ ಸ್ವಯಂವೇದನ ಪ್ರತ್ಯಕ್ಷದಿಂದ ಈ ಜ್ಞಾನಪರಮಾಣುಗಳ ಅನುಭವ ಉಂಟಾಗುವುದಿಲ್ಲ. ಆದರೆ ಅವುಗಳಿಂದ ಸುಖದುಃಖಾದಿ ಅನೇಕ ಅವಸ್ಥೆಗಳಿಂದ ಕೂಡಿದ ಅಂತರಾತ್ಮನದೇ ಅನುಭವ ಆಗುತ್ತದೆ. ಆತ್ಮನಿಲ್ಲ, ಜ್ಞಾನಪರಮಾಣುಗಳೇ ಇವೆ ಎಂಬ ಅನುಭವ ಎಂದೂ ಉಂಟಾಗುವುದಿಲ್ಲ.

## ರ

ರಜ್ಜು ( ೧-೪೮ )–ಜಗತ್‌ಶ್ರೇಣಿಯ ಏಳರಲ್ಲೊಂದು ಭಾಗಕ್ಕೆ ರಜ್ಜುವೆನ್ನುತ್ತಾರೆ. ಪಲ್ಯದ ಅರ್ಧಚ್ಛೇದಗಳಿಗೆ ಅಸಂಖ್ಯಾತಗಳಿಂದ ಭಾಗಿಸಲು ಬರುವ ಲಬ್ಧದಷ್ಟು ಘನಾಂಗುಲಗಳನ್ನು ಬರೆದು ಪರಸ್ಪರ ಗುಣಾಕಾರ ಮಾಡಬೇಕು. ಹೀಗೆ ಬಂದ ಗುಣಾಕಾರವು ಜಗತ್‌ಶ್ರೇಣಿಯ ಅಳತೆ.

ರತ್ನತ್ರಯ ( ೧-೪ )–ಸಮ್ಯಗ್‌ದರ್ಶನ, ಸಮ್ಯಗ್‌ಜ್ಞಾನ, ಮತ್ತು ಸಮ್ಯಕ್‌ಚಾರಿತ್ರ ಇವುಗಳಿಗೆ ರತ್ನತ್ರಯವೆನ್ನುತ್ತಾರೆ. ಯಾಕೆಂದರೆ ಈ ಗುಣಗಳು ಸರ್ವೋತ್ಕೃಷ್ಟವಾಗಿವೆ.

ರತ್ನಪುಷ್ಪಧಾರಾಸಾರ ( ೧೦-೩ )—ರತ್ನವೃಷ್ಟಿ, ಪುಷ್ಪವೃಷ್ಟಿ, ಗಂಧೋದಕವೃಷ್ಟಿಯಾಗುವುದು ಮತ್ತು ಮಂದಮಾರುತ ಬೀಸುವುದು.

ರತ್ನಪ್ರಭಾ ( ೫-೮೧ ಪ. )—ಮೊದಲನೆಯ ನರಕ.

ರತ್ನಸಂಚಯಪುರ ( ೩-೫೦ ವ. )— ಮಂಗಳಾವತಿವಿಷಯದಲ್ಲಿ ಇದು ಮೂಲ ನಗರವು.

ರತ್ನಾವಳೀತಪ ( ೩-೫೮ ವ. )—ಇದರಲ್ಲಿ ಒಂದು ಉ. ೧ ಪಾ, ೨ ಉ. ೧ ಪಾ, ೩ ಉ. ೧ ಪಾ, ೪ ಉ. ೧ ಪಾ, ೫ ಉ. ೧ ಪಾ, ೫ ಉ. ೧ ಪಾ, ೪, ೩, ೨, ೧, ಉಪವಾಸಮಾಡಿ ಒಂದೊಂದು ಪಾರಣೆಮಾಡಬೇಕು. ಇದರಲ್ಲಿ ೩೦ ಉಪವಾಸಗಳು ೧೦ ಪಾರಣೆಗಳು ಆಗುತ್ತವೆ.

ರಥನೂಪುರಚಕ್ರವಾಲ ( ೧-೬೨ ವ. ) ವಿಜಯಾರ್ಧಪರ್ವತದ ದಕ್ಷಿಣವಿದ್ಯಾಧರ ಶ್ರೇಣಿಯ ರಾಜಧಾನಿ.

ರಮ್ಯಕ ( ೧-೪೮ ವ. )-ನೀಲ ಮತ್ತು ರುಕ್ಮಿ ಪರ್ವತಗಳ ಮತ್ತು ಪೂರ್ವ ಪಶ್ಚಿಮ ಸಮುದ್ರಗಳ ನಡುವಿನ ಪ್ರದೇಶ ಇದು ಮಧ್ಯಮಭೋಗಭೂಮಿ.

ರಸಪರಿತ್ಯಾಗ (೬-೩೦ ವ.)-ಹಾಲು, ಮೊಸರು, ಸಕ್ಕರೆ ಮುಂತಾದ ರಸಪದಾರ್ಥ ಗಳನ್ನು ತ್ಯಾಗಮಾಡುವುದು.

ರಸರ್ಧಿ ( ೬-೩೩ ವ. )— ಈ ಋದ್ಧಿಯು ಪ್ರಾಪ್ತವಾಗಿರುವ ಮುನಿಗಳ ಕೈ ಯೊಳಗಿನ ನೀರಸ ಆಹಾರವು ಹಾಲು ತುಪ್ಪ ಮುಂತಾದವುಗಳಂತೆ ರಸಯುಕ್ತವಾಗುತ್ತದೆ.

ರುಕ್ಮಿಪರ್ವತ (೧-೪೮ ವ.)—ಇದು ರಮ್ಯಕ ಮತ್ತು ಹೈರಣ್ಯವತಕ್ಷೇತ್ರಗಳ ನಡು ವಿನ ಕುಲಗಿರಿ.

ರೈವೃಷ್ಟಿ ( ೭-೨೪ )—ನಾನಾ ಪ್ರಕಾರದ ರತ್ನಗಳ ಮಳೆ.

ರೌದ್ರಧ್ಯಾನ ( ೨-೧೧ ವ. )—ಬಹಳೇ ಸಿಟ್ಟಿನಿಂದ ಹಿಂಸೆಮಾಡುವ ಭರದಲ್ಲಿ ತನ್ಮಯನಾಗಿರುವ ಅವಸ್ಥೆ.

## ಲ

ಲವಣಜಲಧಿ ( ೧-೪೮ )—ಜಂಬೂದ್ವೀಪದ ಸುತ್ತಲು ವ್ಯಾಪಿಸಿರುವ ಸಮುದ್ರ. ಇದು ಎರಡು ಲಕ್ಷಯೋಜನ ಅಗಲವಾಗಿದೆ.

ಲಾಂತವೇಂದ್ರ ( ೩-೭೩ ವ. )—ಲಾಂತವ ಮತ್ತು ಕಾಪಿಷ್ಠಕಲ್ಪಗಳ ಅಧಿಪತಿ.

ಲೇಶ್ಯಾವಿಶುದ್ಧಿ ( ೧೦-೧೪ ವ. )—ಲೇಶ್ಯೆಯು ಹೆಚ್ಚು ಹೆಚ್ಚು ಮಂದವಾಗುತ್ತ ಹೋಗಿ ಅದು ಇಲ್ಲವಾಯಿತೆಂದರೆ ಅದು ಲೇಶ್ಯಾವಿಶುದ್ಧಿ. ಹದಿನಾಲ್ಕ ನೆಯ ಗುಣಸ್ಥಾನದಲ್ಲಿ ಲೇಶ್ಯೆಯು ಸಂಪೂರ್ಣ ನಷ್ಟವಾಗಿರುತ್ತದೆ. ಆ ಸ್ಥಿತಿಯೇ ಲೇಶ್ಯಾವಿಶುದ್ಧಿ.

ಲೋಕಪೂರಣಕ್ರಿಯೆ ( ೧೬-೪೯ ವ. )— ಇದರಲ್ಲಿ ಮೂರೂ ಲೋಕಗಳನ್ನು ಕೇವಲಿಯ ಆತ್ಮಪ್ರದೇಶಗಳು ವ್ಯಾಪಿಸುತ್ತವೆ.

ಲೋಕಾಕಾರಕಥನ ( ೧-೪೨ ವ. )—ಸಪ್ತನರಕಾದಿಗಳಿಂದ ಕೂಡಿದ ಅಧೋ- ಲೋಕ, ಅಸಂಖ್ಯದ್ವೀಪಸಮುದ್ರಗಳಿಂದ ಕೂಡಿದ ಮಧ್ಯಲೋಕ,

ಕಲ್ಪ, ಗ್ರೈವೇಯಕ, ಅನುದಿಶ ಮತ್ತು ಅನುತ್ತರಗಳಿಂದ ಕೂಡಿದ ಊರ್ಧ್ವಲೋಕ ಇವೆಲ್ಲವುಗಳಿಗೆ ಲೋಕವೆನ್ನುತ್ತಾರೆ. ಇವುಗಳ ವರ್ಣನೆಗೆ ಲೋಕಾಕಾರಕಥನವೆನ್ನುತ್ತಾರೆ.

ಲೋಕಾಕಾಶ (೬-೪೮ ವ.)—ಧರ್ಮ, ಅಧರ್ಮ, ಪುದ್ಗಲ, ಜೀವ ಮತ್ತು ಕಾಲ ಇವು ಎಲ್ಲಿಯ ವರೆಗೆ ಇರುವವೋ ಅಲ್ಲಿಯ ವರೆಗಿನ ಆಕಾಶ.

ಲೋಕಾಂತಿಕಾಮರವೃಂದ (೬-೨೩ ವ.)-ಬ್ರಹ್ಮಸ್ವರ್ಗದ ಕೊನೆಯ ಪಟಲದಲ್ಲಿ ಸಾರಸ್ವತ, ಆದಿತ್ಯ ಮುಂತಾದ ಎಂಟು ತರದ ದೇವರು ಇರುತ್ತಾರೆ. ಅವರು ಬ್ರಹ್ಮಚಾರಿಗಳು ಚತುರ್ದಶಪೂರ್ವಧರರೂ ವಿಷಯವಿರಕ್ತರೂ ಆಗಿರುತ್ತಾರೆ. ತೀರ್ಥಂಕರರಿಗೆ ವೈರಾಗ್ಯವುಂಟಾದಾಗ ಅವರ ಪ್ರಶಂಸೆ ಮಾಡುವುದಕ್ಕಾಗಿ ಈ ದೇವತೆಗಳು ಭೂಲೋಕಕ್ಕೆ ಬರುತ್ತಾರೆ.

ಲೋಕಾಯತಿಕಮತ (೨-೭ ವ.)— ಇದು ಚಾರ್ವಾಕಮತದ ಮತ್ತೊಂದು ಹೆಸರು. ಇದರಲ್ಲಿ ದೇಹವೇ ಆತ್ಮವೆಂದೂ, ಪರಲೋಕವಿಲ್ಲವೆಂದೂ ಪಾಪಪುಣ್ಯಗಳಿಲ್ಲವೆಂದೂ, ಇಂದ್ರಿಯ ಇಚ್ಛೆಯನ್ನೇ ತೃಪ್ತಪಡಿಸುವುದು ಸುಖವೆಂದೂ ಬಗೆಯುವ ವಿಚಾರಗಳಿರುತ್ತವೆ. ಇದಕ್ಕೆ ಬೃಹಸ್ಪತಿ ಮತವೆಂದು ಮತ್ತೊಂದು ಹೆಸರು ಅದೆ.

ಲೋಭಸಂಜ್ವಲನ ಮೊದಲ ಕೃಷ್ಟಿ (೧೦-೧೪ ವ)-ಹತ್ತನೆಯ ಸೂಕ್ಷ್ಮಸಾಂಪ-ರಾಯಗುಣಸ್ಥಾನದಲ್ಲಿ ಲೋಭಸಂಜ್ವಲನವನ್ನು ಅನಿವೃತ್ತಿಕರಣಕ್ಕಿಂತ ಕಡಿಮೆ ಫಲಕೊಡುವ ಶಕ್ತಿಯುಳ್ಳದ್ದನ್ನು ಮಾಡುವುದು. ಕೃಷ್ಟಿ=ಕರ್ಮವನ್ನು ಕೃಷಮಾಡುವ ಉಪಾಯ.

ಲೋಹವಾಹಿನಿ (೧೫-೩ ವ)—ಭರತಚಕ್ರವರ್ತಿಯ ಡೊಂಕ ಕತ್ತಿ.

## ವ

ವಕ್ಷಾರ (೧೬-೬೮)-ಗಂಧಮಾದನ, ವಿಜಯವಾನ್, ಶ್ರದ್ಧಾವಾನ್ ಮುಂತಾದ ಹೆಸರಿನ ಪರ್ವತಗಳು ಪೂರ್ವ ಮತ್ತು ಪಶ್ಚಿಮವಿದೇಹಗಳಲ್ಲಿ ಇರುತ್ತವೆ. ಇವುಗಳಿಗೆ ವಕ್ಷಾರ ಪರ್ವತಗಳೆಂದೆನ್ನುತ್ತಾರೆ.

ವಕ್ಷಾರಾದ್ರಿ (೧-೫೬)—ವಕ್ಷಾರ ನೋಡಿ.

ವಜ್ರತುಂಡ (೧೫-೩ ವ.)—ಭರತಚಕ್ರವರ್ತಿಯ ಶಕ್ತ್ಯಾಯುಧ.

ವಜ್ರವೃಷಭನಾರಾಚಸಂಹನನ (೧೫-೩)—ಶರೀರದೊಳಗಿನ ಎಲುಬು, ಎಲು-ಬುಗಳ ಕೀಲು, ಸ್ನಾಯುಗಳು ವಜ್ರದಂತೆ ಸಬಲವಾಗಿರುವದು.

ವತ್ಸಕಾವತಿವಿಷಯ ( ೩-೫೮ )— ವಿದೇಹಕ್ಷೇತ್ರದೊಳಗಿನ ಸೀತಾನದಿಯ ದಕ್ಷಿಣದಂಡೆಯ ಮೇಲೆ ಈ ದೇಶವಿದೆ.

ವರ್ಣಲಾಭ ( ೧೫-೧೫ )—ಶ್ರಾವಕನು ಗುರುವಿನ ಹತ್ತಿರ ವಿದ್ಯಾಭ್ಯಾಸಮಾಡಿ, ವ್ರತಗಳನ್ನು ಸ್ವೀಕರಿಸಿ, ಯೋಗ್ಯ ಕನ್ಯೆಯನ್ನು ಮದುವೆ ಮಾಡಿಕೊಂಡ ಮೇಲೆ ಜೈನ ಸಮಾಜದಲ್ಲಿ ಆತನು ವ್ಯವಹರಿಸಲು ಅನುಮತಿ ಪಡೆಯುತ್ತಾನೆ. ಅದು ವರ್ಣಲಾಭ.

ವರ್ತನಾಲಕ್ಷಣ ( ೬-೪೮ ವ. )-ವರ್ತನೆಯು ಕಾಲದ ಲಕ್ಷಣವು. ಪ್ರತಿಯೊಂದು ದ್ರವ್ಯವು ತನ್ನ ಪರ್ಯಾಯದಿಂದ ಪರಿಣತವಾಗಿರುತ್ತದೆ. ಆದರೆ ಬಾಹ್ಯಕಾರಣವು ದೊರೆಯದ ಹೊರತು ಅದು ಪರಿಣತವಾಗುತ್ತಿರುವದಿಲ್ಲ. ಆದುದರಿಂದ ಕಾಲವು ಆ ಪರ್ಯಾಯಗಳಿಗೆ ಪರಿಣತಗೊಳಿಸುವ ಸಹಕಾರಿ ಕಾರಣವಾಗುತ್ತದೆ. ಅದರ ಈ ಸ್ವಭಾವಕ್ಕೆ ವರ್ತನವೆನ್ನುತ್ತಾರೆ.

ವರ್ಧಮಾನ ( ೧೫-೩ ವ. )—ಭರತನಿಗಾಗಿ ಕಟ್ಟಿದ ನಾಟಕಗೃಹ.

ವರ್ಷಧರ ( ೧-೪೮ ವ. )—ಭರತಾದಿಕ್ಷೇತ್ರಗಳಿಗೆ ವರ್ಷವೆನ್ನುತ್ತಾರೆ. ಇವುಗಳನ್ನು ವಿಭಾಗಿಸುವ ಹಿಮವದಾದಿ ಪರ್ವತಗಳಿಗೆ ವರ್ಷಧರ ಪರ್ವತವೆನ್ನುತ್ತಾರೆ.

ವಸನಾಂಗಕುಜ ( ೫-೩೪ )-ನಾನಾತರದ ವಸ್ತ್ರಗಳನ್ನು ಕೊಡುವ ಕಲ್ಪವೃಕ್ಷವು.

ವಸುಧಾರಕ ( ೧೫-೩ ವ. )—ಭರತ ಚಕ್ರವರ್ತಿಯ ಕೋಶಿಯ ಮನೆ.

ವಸುಧಾರೆ ( ೭-೩ )— ತೀರ್ಥಂಕರರು ಗರ್ಭವಾಸಿಗಳಾಗುವ ಪೂರ್ವದಲ್ಲಿ ಆರು ತಿಂಗಳು ಮತ್ತು ಗರ್ಭಕ್ಕೆ ಬಂದ ಮೇಲೆ ಒಂಬತ್ತು ತಿಂಗಳ ವರೆಗೆ ಜಿನಮಾತೆಯ ಅಂಗಳದಲ್ಲಿ ವಸುಧಾರೆ ರತ್ನವೃಷ್ಟಿಗಳಾಗುತ್ತವೆ. (೨) ಸತ್ಪಾತ್ರದಾನ ಮಾಡಿದ ಮೇಲೆ ದೇವತೆಗಳಿಂದ ಆಗುವ ರತ್ನವೃಷ್ಟಿ.

ವಸ್ತ್ರಾಂಗ ( ೪-೩೫ )—ಬೇಡಿದಂಥ ವಸ್ತ್ರಗಳನ್ನು ಕೊಡುವ ಕಲ್ಪವೃಕ್ಷ.

ವಾನವ್ಯಂತರ ( ೧೦-೧೮ ವ. )—ಕಿನ್ನರಕಿಂಪುರುಷಾದಿ ದೇವರು.

ವಾರ್ತೆ (೧೫-೧೩ವ)- ಒಕ್ಕಲತನ ಮುಂತಾದ ಉಪಜೀವನದ ಉದ್ಯೋಗಗಳು.

ವಾಲುಕಾಪ್ರಭಾ ( ೫-೮೧ ವ. )— ಮೂರನೆಯ ನರಕ.

ವಾಸುದೇವ ( ೩-೫೦ ವ. )—ಇವರಿಗೆ ನಾರಾಯಣ ಎಂದು ಹೆಸರಿದೆ. ಇವರು ತ್ರಿಖಂಡಕ್ಕೆ ಒಡೆಯರಾಗಿರುತ್ತಾರೆ. ಆದುದರಿಂದ ಇವರಿಗೆ ಅರ್ಧಚಕ್ರವರ್ತಿಗಳೆನ್ನುತ್ತಾರೆ.

ವಿಕರಣಸಂಭವದೇವಿ ( ೬-೧೫ )—ವಿಕ್ರಿಯಾಸಾಮರ್ಥ್ಯದಿಂದ ದೇವಾಂಗನೆಯರು ಅನೇಕ ರೂಪಗಳನ್ನು ಧರಿಸಿ ತಮ್ಮ ಪತಿಗಳನ್ನು ಸಂತುಷ್ಟಗೊಳಿಸುವರು. ಆವರು ವಿಕರಣ ಸಂಭವದೇವಿಯರು. ವಿಕರಣ=ವಿಕ್ರಿಯೆ.

ವಿಕಿಯರ್ಧಿ ( ೬-೩೩ ವ )— ಶರೀರವನ್ನು ಸಣ್ಣದು ಮಾಡುವುದು, ಹಗುರು ಮಾಡುವುದು, ಬಹಳ ಜಡಮಾಡುವುದು ಮುಂತಾದ ಸಾಮರ್ಥ್ಯವು.

ವಿಜಯಾರ್ಧಕುಮಾರ ( ೧-೬೨ ವ. )— ವಿಜಯಾರ್ಧಪರ್ವತದ ಒಡೆಯರಾದ ವ್ಯಂತರದೇವರು.

ವಿಜಯಾರ್ಧಪರ್ವತ ( ೧—೪೮ ವ. )—( ೧ ) ಭರತಕ್ಷೇತ್ರದ ಮಧ್ಯಭಾಗದಲ್ಲಿ ವಿಜಯಾರ್ಧಪರ್ವತವಿದೆ. ಅದರಂತೆ ಐರಾವತ ಕ್ಷೇತ್ರದಲ್ಲಿಯೂ ಒಂದು ವಿಜಯಾರ್ಧಪರ್ವತವಿದೆ. ಐದು ಮೇರುಪರ್ವತಗಳ ಸಂಬಂಧದಿಂದ ಐದು ಭರತ ಮತ್ತು ಐದು ಐರಾವತ ಕ್ಷೇತ್ರಗಳಾಗಿ ಅವುಗಳಲ್ಲಿ ಒಟ್ಟು ಹತ್ತು ವಿಜಯಾರ್ಧಪರ್ವತಗಳಿವೆ. ಮತ್ತೆ ಐದು ಮೇರುಪರ್ವತಗ ಸಂಬಂಧದಿಂದ ಐದು ವಿದೇಹ ಕ್ಷೇತ್ರಗಳಲ್ಲಿ ಸೀತಾ ಮತ್ತು ಸಿತೋದಾ ನದಿಗಳಿಂದಾಗಿ ಐದು ಪೂರ್ವವಿದೇಹಗಳು ಮತ್ತು ಐದು ಪಶ್ಚಿಮವಿದೇಹಗಳು ಆಗಿವೆ. ಈ ನದಿಗಳ ಎರಡೂ ದಂಡೆಯ ಮೇಲೆ ಇರುವ ಪ್ರದೇಶದಲ್ಲಿ ಹದಿನಾರು ಹದಿನಾರು ವಿಭಾಗಗಳಾಗಿ ಅವೆಲ್ಲ ಕೂಡಿ ೧೬೦ ಆಗುತ್ತವೆ. ಇಂಥ ಪ್ರತಿಯೊಂದು ವಿಭಾಗವಲ್ಲಿ ಒಂದೊಂದು ವಿಜಯಾರ್ಧಪರ್ವತದಂತೆ ವಿದೇಹ ಕ್ಷೇತ್ರದಲ್ಲಿ ೧೬೦ ವಿಜಯಾರ್ಧಪರ್ವತಗಳಿವೆ.

( ೨ ) ( ೧೫-೩ ವ. )—ಭರತಚಕ್ರವರ್ತಿಯ ಪಟ್ಟದಾನೆ.

ವಿಜಯಾರ್ಧಪರ್ವತದುತ್ತರಶ್ರೇಢಿ ( ೩-೫೮ವ. )—ವಿಜಯಾರ್ಧಪರ್ವತದ ಮೇಲೆ ಹತ್ತು ಯೋಜನ ಎತ್ತರ ಹೋದ ಮೇಲೆ ವಿದ್ಯಾಧರರು ಇರುವ ಎರಡು ಶ್ರೇಢಿಗಳಿವೆ. ಅವುಗಳಲ್ಲಿ ದಕ್ಷಿಣ ಶ್ರೇಢಿಯಲ್ಲಿ ಐವತ್ತು ಮತ್ತು ಉತ್ತರ ಶ್ರೇಢಿಯಲ್ಲಿ ಅರವತ್ತು ನಗರಗಳಿವೆ.

ವಿಜ್ಞಾನವಾದ ( ೨-೯ ವ. )—ಯೋಗಾಚಾರಮತ ನೋಡಿ.

ವಿದೇಹ ( ೧-೪೮ )—ನಿಷಧ ಮತ್ತು ನೀಲ ಪರ್ವತಗಳ ಮತ್ತು ಪೂರ್ವ ಪಶ್ಚಿಮ ಸಮುದ್ರಗಳ ನಡುವೆ ಈ ಕ್ಷೇತ್ರವಿರುತ್ತದೆ. ಇಲ್ಲಿ ಜೈನಧರ್ಮಾಚಾರದಿಂದ ಪ್ರಾಯಶಃ ಮನುಷ್ಯನಿಗೆ ಮೋಕ್ಷವು ದೊರೆಯುತ್ತದೆ. ಈ ಕಾರಣದಿಂದ ಈ ಕ್ಷೇತ್ರಕ್ಕೆ ವಿದೇಹವೆಂದು ಹೆಸರು ಬಂದಿದೆ. ಮೇರುಪರ್ವತದ ಪೂರ್ವಕ್ಕೆ ಪೂರ್ವವಿದೇಹವು ಪಶ್ಚಿಮಕ್ಕೆ ಪಶ್ಚಿಮವಿದೇಹವು, ದಕ್ಷಿಣಕ್ಕೆ ದೇವಕುರು ಮತ್ತು ಉತ್ತರಕ್ಕೆ ಉತ್ತರಕುರು ಎಂಬ ಪ್ರದೇಶಗಳಿವೆ. ದೇವಕುರುಉತ್ತರಕುರುಗಳು ಉತ್ತಮಭೋಗಭೂಮಿಗಳು.

ವಿದ್ಯಾಧರಶ್ರೇಣಿ ( ೧–೭೬ )—ವಿಜಯಾರ್ಧಪರ್ವತದ ಮೇಲೆ ಹತ್ತುಯೋಜನ ಗಳನ್ನು ದಾಟಿ ವಿದ್ಯಾಧರನಿವಾಸಗಳುಳ್ಳ ಎರಡು ಗುಂಪುಗಳಿವೆ. ಉತ್ತರಕ್ಕೆ ಇರುವ ಶ್ರೇಣಿಗೆ ಉತ್ತರವಿದ್ಯಾಧರಶ್ರೇಣಿಯೆಂದೂ ದಕ್ಷಿಣಕ್ಕೆ ಇರುವ ಶ್ರೇಣಿಗೆ ದಕ್ಷಿಣವಿದ್ಯಾಧರಶ್ರೇಣಿಯೆಂದೂ ಹೆಸರು. ಇಲ್ಲಿಯ ವಿದ್ಯಾಧರರು ಪ್ರಜ್ಞಪ್ತಿ ಮುಂತಾದ ವಿದ್ಯೆಗಳನ್ನು ಸಾಧಿಸಿಕೊಳ್ಳುತ್ತಿರು ವುದರಿಂದ ಅವರಿಗೆ ವಿದ್ಯಾಧರರೆನ್ನುತ್ತಾರೆ.

ವಿದ್ಯುತ್‌ಪ್ರಭ ( ೧೫–೩ ವ )—ಭರತಚಕ್ರವರ್ತಿಯ ಕರ್ಣಕುಂಡಲಗಳು.

ವಿನಯ ( ೬–೩೩ ವ. )—ರತ್ನತ್ರಯಧಾರಕರಾದ ಮುನಿಗಳಿಗೆ ಯೋಗ್ಯವಾದ ಆದರತೋರಿಸುವುದು.

ವಿನೇಯಸಂತತಿ ( ೬–೧೧೯ )—ಶಿಷ್ಯಪರಂಪರೆ, ಶಿಷ್ಯಸಮೂಹ, ಅಥವಾ ಭವ್ಯ ಜೀವರ ಪರಂಪರೆ.

ವಿಪರ್ಯಯ ( ೧೦–೬೩ ವ. )–ವಿಪರೀತವಾದ ಒಂದು ಕೋಟಿಯನ್ನು ನಿಶ್ಚಯಿ ಸುವ ಜ್ಞಾನ. ಉದಾ:–ಸಿಂಪೆಯನ್ನು ಬೆಳ್ಳಿಯೆಂದು ಭಾವಿಸುವುದು.

ವಿಪಾಕವಿಚಯ ( ೧೨–೧೪ ವ. )—ದ್ರವ್ಯ, ಕ್ಷೇತ್ರ, ಕಾಲ, ಭಾವಗಳ ಅಪೇಕ್ಷೆ ಯಿಂದ ಜ್ಞಾನಾವರಣಾದಿ ಕರ್ಮಗಳ ಫಲಾನುಭವ ಉಂಟಾಗುತ್ತಿದೆ. ಅದರ ಚಿಂತನೆಮಾಡುವುದು ವಿಪಾಕವಿಚಯವೆಂಬ ಮೂರನೆಯ ಧರ್ಮಧ್ಯಾನವು.

ವಿಭಂಗಜ್ಞಾನ ( ೨–೧೪ ವ. )— ಮಿಥ್ಯಾತ್ವಕರ್ಮಗಳ ಉದಯದಿಂದ ಇದು ಹುಟ್ಟುತ್ತದೆ. ಇದಕ್ಕೆ ಕುಅವಧಿಜ್ಞಾನವೆಂದು ಮತ್ತೊಂದು ಹೆಸರು. ಆತ್ಮನಿಗೆ ಅಹಿತವನ್ನುಂಟುಮಾಡುವ ಪದಾರ್ಥಗಳನ್ನು ಇದು ಪ್ರತ್ಯಕ್ಷ ತಿಳಿಯಬಲ್ಲದು. ಆದರೆ ಹಿತಕರ ಪದಾರ್ಥಗಳ ಸ್ವರೂಪವು ಇದಕ್ಕೆ ತಿಳಿಯುವುದಿಲ್ಲ.

ವಿಮಾನ ( ೩–೪ )—ದೇವರು ವಾಸವಾಗಿರುವ ಅರಮನೆ.

ವಿವಿಕ್ತಾವಾಸ ( ೬–೩೦ ವ. )—ಸ್ತ್ರೀ, ಪಶು, ನಪುಂಸಕ ಮುಂತಾದವರು ಇಲ್ಲದಿ ರುವ ಏಕಾಂತ ಸ್ಥಳದಲ್ಲಿ ವಾಸಿಸುವುದು.

ವಿಷಮೋಚಿಕೆ ( ೧೫–೩ ವ. )—ಭರತ ಚಕ್ರವರ್ತಿಯ ಹಾವುಗೆಗಳು ಇತರರ ಪಾದಸ್ಪರ್ಶ ಇವಕ್ಕೆ ಆದರೆ ಇವುಗಳಿಂದ ವಿಷದ ಜ್ವಾಲೆಗಳು ಹೊರ ಬೀಳುತ್ತಿದ್ದುವು.

ವಿಹಾಯೋಗತಿ ( ೧೬–೪೯ ವ. )—ಇದರ ಉದಯದಿಂದ ಆಕಾಶದಲ್ಲಿ ಗಮನ ಮಾಡಲಿಕ್ಕೆ ಬರುತ್ತದೆ.

ವೀತರಾಗಛದ್ಮಸ್ಥ ( ೧೦–೧೪ ವ. )—ಎಲ್ಲ ಮೋಹಕರ್ಮಗಳು ನಾಶವಾಗಿರುವ ಅಥವಾ ಉಪಶಾಂತವಾಗಿರುವ ಯಥಾಖ್ಯಾತಚಾರಿತ್ರಧಾರಕರಾದ ಮತ್ತು ಕೇವಲಜ್ಞಾನವುಂಟಾಗದಿರುವ ಮುನಿಗಳು.

ವೀತರಾಗಛದ್ಮಸ್ಥಗುಣಸ್ಥಾನಿ ( ೧೦–೧೪ ವ )— ಸೂಕ್ಷ್ಮಸಾಂಪರಾಯಕ್ಷಪಕ ನೋಡಿ.

ವೀರಶಯ್ಯಾತಲಗತ ( ೨–೫೮ ವ )—ವೀರಶಯ್ಯೆಯ ಮೇಲೆ ಸ್ಥಿರವಾಗಿ ಮಲಗಿರುವವನು. ಸಲ್ಲೇಖನ ವ್ರತವನ್ನು ತೆಗೆದುಕೊಂಡಂದಿನಿಂದ ಪರೀಷಹಗಳನ್ನು ಅನುಭವಿಸಿಯೂ ಆ ವ್ರತದಿಂದ ಚ್ಯುತನಾಗದವನು.

ವೀರಸಂಸ್ತರಾರೂಢ ( ೨–೫೦ ವ. )—ವೀರಸಂಸ್ತರ-ಇದಕ್ಕೆ ವೀರಶಯ್ಯೆಯೆನ್ನುತ್ತಾರೆ. ಈ ವೀರಶಯ್ಯೆಯ ಮೇಲೆ ಆರೂಢನಾಗಿ ಆಹಾರ ತ್ಯಾಗಮಾಡಿ ಮರಣಸಾಧಿಸುವ ಕ್ರಮ.

ವೃತ್ತಿಪರಿಸಂಖ್ಯಾನ (೬–೩೦ ವ. )— ಈಹೊತ್ತು ಇಂಥವರು ಇಂಥಲ್ಲಿ ನಿಲ್ಲಿಸಿದರೆ ಆಹಾರಸ್ವೀಕರಿಸುತ್ತೇನೆಂದು ನಿಯಮಮಾಡಿಕೊಂಡು, ಹಾಗೆ ನಿಲ್ಲಿಸಿದರೆ ಮಾತ್ರ ಆಹಾರ ಸ್ವೀಕಾರಮಾಡುವುದು.

ವೃತ್ತಿಲಾಭ ( ೧೫-೧೬ ವ.)—ಮೊದಲನೆಯ ದಿನ ಉಪವಾಸವಿದ್ದು ಎರಡನೆಯ ದಿನ ಜಿನಬಿಂಬದ ಎದುರಿನಲ್ಲಿ ಗುರುವು ಜಿನದೀಕ್ಷೆ ಕೊಟ್ಟ ಮೇಲೆ ಪಾರಣೆಗಾಗಿ ಮನೆಗೆ ಕಳುಹುತ್ತಾನೆ. ಆ ಪಾರಣೆಯು ಅವನ ವೃತ್ತಿಲಾಭವು.

ವೃಷಭಯಕ್ಷ (೧–೮)— ಆದಿನಾಥರ ಶಾಸನದೇವ. ಇವರಿಗೆ ಗೋಮುಖನೆಂದು ಹೆಸರಿದೆ.

ವೃಷಭಾದ್ರಿ (೧–೪೮ ವ )— ವಿಜಯಾರ್ಧಪರ್ವತಗಳಷ್ಟೇ ವೃಷಭಾದ್ರಿಗಳಿರುತ್ತವೆ. ಚಕ್ರವರ್ತಿಗಳು ಅವುಗಳ ಮೇಲೆ ತಮ್ಮ ಷಟ್‌ಖಂಡವಿಜಯ ಪ್ರಶಸ್ತಿಯನ್ನು ಬರೆಯಿಸುತ್ತಾರೆ.

ವೇದನೀಯ ( ೧೬–೪೯ ವ )—ಇದರ ಉದಯದಿಂದ ಜೀವನಿಗೆ ಸುಖದುಃಖಗಳು ಒದಗುತ್ತವೆ.

ವೈಕ್ರಿಯಕ ( ೫–೭೦ )—ಅನೇಕ ರೂಪಗಳನ್ನು ಧರಿಸುವ ಸಾಮರ್ಥ್ಯ. ಇದು ದೇವ ಮತ್ತು ನಾರಕರ ಶರೀರದಲ್ಲಿರುತ್ತದೆ. ಆ ಶರೀರವು ಅವರಿಗೆ ವೈಕ್ರಿಯಕನಾಮಕರ್ಮದ ಉದಯದಿಂದ ಬರುತ್ತದೆ.

ವೈಜಯಂತಿ ( ೧೫–೩ ವ )—ಭರತನ ಅರಮನೆಯ ಹೆಸರು.

ವೈತರಣಿ ( ೫-೮೭ ವ )—ನರಕದೊಳಗಿನ ನದಿ. ಇದರ ನೀರು ಮಲಿನ ಮತ್ತು ಸವಳು ಆಗಿರುತ್ತದೆ. ನಾರಕರು ಇದರೊಳಗೆ ಅನೇಕ ಜಲಚರರೂಪ ಧರಿಸಿ ಅದರೊಳಗೆ ಬಿದ್ದ ನಾರಕರಿಗೆ ನರಕದುಃಖಕೊಡುತ್ತಾರೆ.

ವೈಯಾವೃತ್ಯ ( ೬-೩೩ ವ )-ಮುನಿಗಳ ಸಂಕಟ, ರೋಗ ಮುಂತಾದವುಗಳನ್ನು ದೂರಮಾಡುವುದಕ್ಕಾಗಿ ಅವರ ಶುಶ್ರೂಷೆಮಾಡುವುದು.

ವೈಶಾಖಸ್ಥಾನ ( ೧-೪೫ )-ಎರಡೂ ಪಾದಗಳನ್ನು ಪಸರಿಸಿಟ್ಟು ನಡುವಿನ ಮೇಲೆ ಕೈಗಳನ್ನು ಇಟ್ಟುಕೊಂಡಿರುವ ಮನುಷ್ಯನ ಆಕಾರಕ್ಕೆ ವೈಶಾಖಸ್ಥಾನ ವೆನ್ನುತ್ತಾರೆ.

ವ್ಯಂತರಚೈತ್ಯಗೇಹ ( ೧೬-೭೧ )— ವ್ಯಂತರದೇವರಿರುವ ಸ್ಥಳದಲ್ಲಿ ಇರುವ ಜಿನಮಂದಿರಗಳು.

ವ್ಯಂತರಾಧೀಶ್ವರ ( ೩-೪೬ )— ವ್ಯಂತರದೇವತೆಗಳ ಇಂದ್ರ ಇವರು ಮೂವತ್ತೆರಡು ದೇವರುಗಳು.

ವ್ಯಯ ( ೨-೧೦ ವ. )— ಪೂರ್ವಾವಸ್ಥೆಯ ತ್ಯಾಗಮಾಡುವುದಕ್ಕೆ ವ್ಯಯವೆನ್ನುತ್ತಾರೆ.

ವ್ಯವಹಾರಕಾಲ ( ೬-೪೮ ವ. )— ಕಾಲದ್ರವ್ಯದ ಗಳಿಗೆ, ದಿವಸ, ತಿಂಗಳು ಮುಂತಾದ ಪರ್ಯಾಯಗಳು.

ವ್ಯುತ್ಸರ್ಗ ( ೬-೩೩ ವ. )-ಬಾಹ್ಯಾಭ್ಯಂತರಪರಿಗ್ರಹತ್ಯಾಗ ಮಾಡುವುದು.

ವ್ರತಚರ್ಯಾ ( ೧೫-೧೫ ವ. )— ಉಪನಯನವಾದ ಮೇಲೆ ಆತನು ಗುರುವಿನ ಹತ್ತರ ಜೈನಧರ್ಮ ಗ್ರಂಥಗಳ ಅಭ್ಯಾಸ ಮಾಡಬೇಕು. ಶ್ರಾವಕ ವ್ರತಗಳನ್ನು ಸ್ವೀಕರಿಸಬೇಕು. ಮತ್ತು ಅವುಗಳನ್ನು ಯೋಗ್ಯರೀತಿಯಿಂದ ಪಾಲಿಸಬೇಕು. ಇದು ವ್ರತಚರ್ಯಾ.

## ಶ

ಶಚೀ ( ೭-೫೩ )— ಸೌಧರ್ಮೇಂದ್ರನ ಅಗ್ರದೇವಿ. ಇವಳು ಒಂದು ಭವಧರಿಸಿ ಮುಕ್ತಳಾಗುತ್ತಾಳೆ.

ಶರೀರನಾಮಕರ್ಮ ( ೧೬-೪೯ ವ )— ಈ ಕರ್ಮದ ಉದಯದಿಂದ ಜೀವನಿಗೆ ಶರೀರವು ಪ್ರಾಪ್ತವಾಗುತ್ತದೆ.

ಶರೀರಪರ್ಯಾಪ್ತಿ ( ೫-೮೩ ವ. )— ಶರೀರಕ್ಕೆ ರಕ್ತ, ಮಾಂಸ, ಎಲುಬು ಮುಂತಾದವುಗಳ ರೂಪಕೊಡುವ ಜೀವಶಕ್ತಿಯು ಪೂರ್ಣವಾಗುವುದು.

ಶರ್ಕರಾಪ್ರಭಾ (೫-೮೧ ವ.)— ಎರಡನೆಯ ನರಕ.

ಶಾರೀರೋದೀರಿತ (೫-೮೮ ವ.)— ಶರೀರದೊಳಗೆ ಅನೇಕ ರೋಗಗಳಿರುತ್ತವೆ. ಮತ್ತು ನಾರಕರು ಶರೀರವನ್ನು ಗಾಯಗೊಳಿಸುತ್ತಾರೆ. ಇವುಗಳಿಂದ ಉಂಟಾಗುವ ದುಃಖ.

ಶಾಸ್ತ್ರದಾನ (೧೦-೯ ವ.)— ಯೋಗ್ಯ ಭವ್ಯನಿಗೆ ಶಾಸ್ತ್ರ ಕಲಿಸುವುದು.

ಶಿಕ್ಷಾವ್ರತ (೬-೯)— ಇವು ನಾಲ್ಕು ಅವೆ. (೧) ದೇಶಾವಕಾಶಿಕ—ಪ್ರದೇಶದ ಮರ್ಯಾದೆ ಮಾಡಿಕೊಂಡು ಅದರ ಹೊರಗೆ ಹೋಗದೆ ಇರುವುದು, (೨) ಸಾಮಯಿಕ— ಹಿಂಸಾದಿ ಐದು ಪಾಪಗಳನ್ನು ನಾನು ಯಾವಾಗಲೂ ತ್ಯಾಗಮಾಡುತ್ತೇನೆ ಎಂದು ಪ್ರತಿಜ್ಞೆ ಮಾಡಿ ಅಂತರ್ಮುಹೂರ್ತ ಘಟಿಕಾ ಮುಂತಾದ ಕಾಲಮರ್ಯಾದೆಯಿಂದ ಆತ್ಮನ ವಿಚಾರ ಮಾಡುವುದು, (೩) ಪ್ರೋಷಧೋಪವಾಸ— ಅಷ್ಟಮಿ ಚತುರ್ದಶಿ ಈ ದಿವಸಗಳಲ್ಲಿ ಉಪವಾಸ ಮಾಡುವುದು ಮತ್ತು ಸಪ್ತಮಿ, ತ್ರಯೋದಶಿಗಳಲ್ಲಿ ಏಕಾಶನ ಮಾಡಿ ಆರಂಭಾದಿಗಳನ್ನು ತ್ಯಾಗ ಮಾಡಿ ಆ ದಿವಸಗಳನ್ನು ಸಾಮಾಯಿಕ ಧರ್ಮೋಪದೇಶಗಳಲ್ಲಿ ಕಳೆಯುವುದು, (೪) ವೈಯ್ಯಾವೃತ್ಯ—ಮುನಿಗಳ ಶುಶ್ರೂಷೆ ಮಾಡಿ ಅವರ ಮಾರ್ಗ ಶ್ರಮವನ್ನು ಕಳೆಯುವುದು. ಅವರಿಗೆ ಔಷಧ ಕೊಟ್ಟು ರೋಗಮುಕ್ತ ಮಾಡುವುದು. ಜಿನಪೂಜೆ ಮಾಡುವುದು. ಸತ್ಪಾತ್ರಗಳಿಗೆ ಆಹಾರ ದಾನ ಮಾಡುವುದು. ಇವು ನಾಲ್ಕು ಶಿಕ್ಷಾವ್ರತಗಳು.

ಶಿಖರಿ (೧-೪೮ ವ.)— ಈ ಪರ್ವತವು ಹಿಮವತ್‌ಪರ್ವತದಂತೆ ಇದೆ. ಇದು ಆರನೆಯ ಕುಲಗಿರಿ.

ಶಿವಪದ (೧-೬)— ಮುಕ್ತಜೀವಗಳು ಹೋಗಿ ನೆಲಸುವ ಸಿದ್ಧಶಿಲೆ.

ಶೀಲ (೧-೫)—ವ್ರತಪರಿರಕ್ಷಣಂ ಶೀಲಂ. ಮೂರು ಗುಣವ್ರತಗಳಿಂದ ಮತ್ತು ನಾಲ್ಕು ಶಿಕ್ಷಾವ್ರತಗಳಿಂದ ಅಣುವ್ರತಗಳ ರಕ್ಷಣಪೋಷಣೆಯಾಗುತ್ತದೆ. ಆದುದರಿಂದ ದಿಗ್‌ವ್ರತ, ದೇಶವ್ರತಾದಿಗಳಿಗೆ ಮತ್ತು ಸಾಮಾಯಿಕ ಪ್ರೋಷಧೋಪವಾಸಾದಿಗಳಿಗೆ ಶೀಲವೆನ್ನುತ್ತಾರೆ.

ಶೀಲವ್ರತಭಾವನಾ (೧೦-೯ ವ.)—ಸಪ್ತಶೀಲ ಮತ್ತು ಪ್ರತಿಯೊಂದು ವ್ರತದ ಕ್ರೋಧ, ತ್ಯಾಗಾದಿ ಐದೈದು ಭಾವನೆಗಳು.

ಶುಕ್ಲಧ್ಯಾನ (೧೦-೧೪ ವ.)— ಅತ್ಯಂತ ನಿರ್ಮಲವಾದ ಧ್ಯಾನ.

ಶುಕ್ಲಲೇಶ್ಯಾ (೬-೪೨)— ಶರೀರದ ಶುಭ್ರವರ್ಣವು ದ್ರವ್ಯಶುಕ್ಲಲೇಶ್ಯೆ. ಪಕ್ಷಪಾತ ಮಾಡದಿರುವುದು, ಸರ್ವ ಜೀವಗಳಲ್ಲಿ ಸಮತೆ, ಇಷ್ಟಮಿತ್ರರಲ್ಲಿ ಪ್ರೀತಿ ಮತ್ತು ಅನಿಷ್ಟರಲ್ಲಿ ದ್ವೇಷಮಾಡದಿರುವುದು, ಮುಂತಾದ ಭಾವಶುಕ್ಲಲೇಶ್ಯೆ.

ಶುದ್ಧಿಸಂಯಮಾನುಗತಾನಿವೃತ್ತಿಕರಣಸ್ಥಾನ (೧೦-೧೪ ವ)— ಸೂಕ್ಷ್ಮಸಾಂಪರಾಯಚಾರಿತ್ರವನ್ನು ಅನುಸರಿಸುವ ಅನಿವೃತ್ತಿಕರಣಪರಿಣಾಮ ಉಂಟಾಗುವುದರಿಂದ ಬೇಗನೆ ಸೂಕ್ಷ್ಮಸಾಂಪರಾಯಗುಣಸ್ಥಾನವನ್ನು ಪ್ರವೇಶಗೊಳಿಸುವಂತಹ ಪರಿಣಾಮ.

ಶುಭ (೧೬-೪೯ ವ)— ಈ ಕರ್ಮದ ಉದಯದಿಂದ ಶರೀರವು ಅಂದವಾಗಿ ಉಳಿಯುತ್ತದೆ.

ಶುಭಭಾವ (೬-೪೨)— ಪ್ರಾಣಿಗಳ ರಕ್ಷಣೆ, ಬ್ರಹ್ಮಚರ್ಯ ಮುಂತಾದವು ಶುಭಭಾವಗಳು.

ಶುಭಾಶುಭವರ್ಣಪಂಚಕ (೧೬-೪೯ ವ.)—ಈ ಕರ್ಮದ ಉದಯದಿಂದ ಶುಭಾಶುಭವರ್ಣಗಳು ಅಂದರೆ ಕರಿದು ಬಿಳಿದು ಮುಂತಾದ ಮೈಬಣ್ಣಗಳುಂಟಾಗುತ್ತವೆ

ಶೂನ್ಯವಾದ (೨-೯ ವ)— ವಸ್ತುವಿಗೆ ನಾಶವೂ ಇಲ್ಲ; ಉತ್ಪತ್ತಿಯೂ ಇಲ್ಲ; ಆತ್ಮನಿಲ್ಲ; ಬದ್ಧಬಂಧಕಭಾವವಿಲ್ಲ; ಮುಕ್ತಿಯಿಲ್ಲ; ಮತ್ತು ಸಂಸಾರವಿಲ್ಲವೆಂದು ಬಗೆಯುವ ಮತ ಶೂನ್ಯವಾದವು.

ಶೌಚ (೬-೩೦ ವ)—ಅತಿಶಯಿತವಾದ ಲೋಭವನ್ನು ನಾಶಗೊಳಿಸುವುದು.

ಶ್ರದ್ಧಾದಿಸಪ್ತಗುಣ (೧೦-೧)— (೧) ಶ್ರದ್ಧಾ, (೨) ಭಕ್ತಿ, (೩) ಅಲುಬ್ಧತಾ, (೪) ಜ್ಞಾನ, (೫) ಸತ್ವ, (೬) ದಯಾ, (೭) ಕ್ಷಮಾ ಇವು ದಾತೃವಿನ ಏಳು ಗುಣಗಳು.

ಶ್ರಾವಕ (೧೦-೬೫ ವ.)—ಹನ್ನೆರಡು ಉಪಾಸಕವ್ರತಗಳನ್ನು ಪಾಲಿಸುವ ಜೈನ ಗೃಹಸ್ಥನು.

ಶ್ರಾವಕವ್ರತಾರೋಪಣ (೨-೩೩ ವ)—ಶ್ರಾವಕರು ಆವಶ್ಯಕವಾದ ಅಣುವ್ರತ ಗುಣವ್ರತಶಿಕ್ಷಾವ್ರತಗಳನ್ನು ಕೈಕೊಳ್ಳುವುದು.

ಶ್ರಾವಿಕಾ (೧೦-೬೫ ವ)-ಶ್ರಾವಕನ ಹನ್ನೆರಡು ವ್ರತಗಳನ್ನು ಪಾಲಿಸುವವಳು.

ಶ್ರೀಮತಿಚರ (೬-೨ ವ)—ಪೂರ್ವಜನ್ಮದಲ್ಲಿ ಶ್ರೀಮತಿಯಾಗಿದ್ದ ಜೀವನು.

ಶ್ರುತಕಥಾ (೨-೧೧ ವ)—ಹಿರಿಯರು ಹೇಳಿದ ಕಥೆ.

ಶ್ರುತಜ್ಞಾನನೋಂಪಿ (೩-೪೦ ವ)—ಈ ವ್ರತವು ೧೫೮ ಉಪವಾಸಗಳುಳ್ಳುದು. ಒಂದು ಉಪವಾಸ ಒಂದು ಪಾರಣೆಯಂತೆ ಇದನ್ನು ಆಚರಿಸಬೇಕು. ಮತಿಜ್ಞಾನದ ೨೮ ಭೇದಗಳು, ಆಚಾರಾದಿ ೧೧ಅಂಗಗಳು, ೨ ಪರಿಕರ್ಮ

ಗಳು, ೮೮ ಸೂತ್ರಗಳು, ೧ ಪ್ರಥಮಾನುಯೋಗ, ೧೪ ಪೂರ್ವಗಳು, ೫ ಚೂಳಿಕೆಗಳು, ೬ ಅವಧಿಜ್ಞಾನಗಳು, ಮನಃಪರ್ಯಯದ ೨ ಭೇದ ಗಳು, ಕೇವಲಜ್ಞಾನ ೧– ಇವೆಲ್ಲ ಕೂಡಿ ೧೫೮ ಭೇದಗಳಾಗುತ್ತವೆ. ಈ ವ್ರತವನ್ನು ಅನಾಮಿಕೆಯು ಈ ಭೇದಗಳ ಸ್ಮರಣೆ ಮಾಡುತ್ತ ಆಚರಿಸಿ ದಳು. ಅದರ ಪ್ರಭಾವದಿಂದ ಅವಳು ಲಲಿತಾಂಗದೇವನ ವಲ್ಲಭೆಯಾದಳು.

ಶ್ರುತಸ್ಕಂಧ (೧-೩೯)—ತೀರ್ಥಂಕರರ ದಿವ್ಯಧ್ವನಿಯನ್ನು ಹೃದಯದಲ್ಲಿ ಧರಿಸಿ ಕೊಂಡು ಗಣಧರರು ರಚಿಸಿದ ದ್ವಾದಶಾಂಗ ರೂಪದ ಸೂತ್ರಗಳಿಗೆ ಶ್ರುತಸ್ಕಂಧವೆನ್ನುತ್ತಾರೆ.

ಶ್ರೇಢೀಬದ್ಧ (೫-೮೩ ವ)–ಇಂದ್ರಕಬಿಲದ ನಾಲ್ಕೂ ದಿಕ್ಕುಗಳಲ್ಲಿ ಸಾಲಾಗಿರುವ ಬಿಲಗಳು ಶ್ರೇಢೀಬದ್ಧಗಳು.

ಷೋಡಶತೀರ್ಥಂಕರಭಾವನೆಗಳು (೩-೪೦ ವ)— ಇವು ದರ್ಶನವಿಶುದ್ಧಾದಿ ಹದಿನಾರು ಇರುತ್ತವೆ.

ಷೋಡಶಸ್ವಪ್ನ (೭-೨೭)-ಜಿನಮಾತೆಯು ಜಿನಗರ್ಭಾವತರಣ ಕಾಲದಲ್ಲಿ ಕನಸಿ ನಲ್ಲಿ ೧೬ ದೃಶ್ಯಗಳನ್ನು ಕಾಣುತ್ತಾಳೆ. ಅವು:—(೧) ಐರಾವತ (೨) ಬಿಳಿ ಎತ್ತು (೩) ಸಿಂಹ (೪) ಲಕ್ಷ್ಮಿ (೫) ಎರಡು ಹೂವಿನ ಮಾಲೆ ಗಳು (೬) ಚಂದ್ರ (೭) ಸೂರ್ಯ (೮) ಎರಡು ಮೀನಗಳು (೯) ಎರಡು ಕುಂಭಗಳು (೧೦) ಕಮಲಾಕರ (೧೧) ಸಮುದ್ರ (೧೨) ಸಿಂಹಾಸನ (೧೩) ದೇವವಿಮಾನ (೧೪) ನಾಗವಿಮಾನ (೧೫) ರತ್ನವೃಷ್ಟಿ (೧೬) ನಿರ್ಧೂಮ ಅಗ್ನಿ.

## ಸ

ಸಕಲಕರ್ಮನಿರ್ಮೂಲನಕರ (೨-೧೦ ವ.)—ತನ್ನ ಅತ್ಯಂತ ಶುದ್ಧಪರಿಣಾಮ ದಿಂದ ಹೊಸಕರ್ಮಗಳು ಅಂಟುವುದನ್ನು ನಿಲ್ಲಿಸಿ, ಈ ಪೂರ್ವದಲ್ಲಿ ಬದ್ಧ ವಾದ ಕರ್ಮಗಳನ್ನು ನಿರ್ಜರಗೊಳಿಸುವ ಆತ್ಮನು ಕರ್ಮಗಳನ್ನು ಸಂಪೂರ್ಣವಾಗಿ ನಾಶಗೊಳಿಸುತ್ತಾನೆ.

ಸಕಳದತ್ತಿ (೧೫-೧೩ ವ)—ಯೋಗ್ಯನಾದ ತನ್ನ ಮಗನಿಗೆ ಅಥವಾ ಅವನು ಇಲ್ಲದಿದ್ದರೆ ಯೋಗ್ಯನಾದ ಅಣ್ಣತಮ್ಮಂದಿರಲ್ಲಿ ಒಬ್ಬನಿಗೆ ತನ್ನ ವಂಶದ ಪರಂಪರೆ ಮತ್ತು ಧರ್ಮವು ನಡೆಯಬೇಕೆಂದು ತನ್ನ ಸರ್ವಸ್ವವನ್ನು ಕೊಡುವುದು.

ಸಂಘಾತ (೧೬–೪೯ ವ)—ಈ ಕರ್ಮದ ಉದಯದಿಂದ ಪ್ರದೇಶಗಳು ಛಿದ್ರ ರಹಿತವಾಗಿ ಒಂದರೊಳಗೊಂದು ಬೆರೆತುಕೊಂಡು ಶರೀರವು ಒಂದೇ ಸವನೆ ಆಗುತ್ತವೆ.

ಸಜ್ಜಾತಿ (೧೫–೧೬ ವ)— ಬೇಗನೆ ಮೋಕ್ಷಪ್ರಾಪ್ತವಾಗುವ ಭವ್ಯಜೀವನಿಗೆ ಉತ್ತಮ ಜಾತಿಯಲ್ಲಿ ಜನ್ಮವು ದೊರೆಯುತ್ತದೆ. ಅದು ಸಜ್ಜಾತಿಕ್ರಿಯೆ.

ಸತ್ಯ (೬–೩೦ ವ)—ಧರ್ಮಪ್ರಭಾವನೆಗೋಸುಗ ಸಾಧರ್ಮಿಕರ ಕೂಡ ಯೋಗ್ಯವಾಗಿ ಮಾತಾಡುವುದು.

ಸದ್ಗೃಹಿತ್ವ (೧೫–೧೬ ವ)— ಮೋಕ್ಷಗಾಮಿಯಾದ ಜೀವನು ಆರ್ಯಷಟ್ ಕರ್ಮಗಳನ್ನು ಪಾಲಿಸಿ ಸದ್ಗೃಹಸ್ಥನಾಗುತ್ತಾನೆ. ಅವನ ಆಚರಣವು ಸದ್ಗೃಹಿತ್ವವು.

ಸಂತಾನರೂಪ (೨–೯ ವ)—ಅನುಭವಕ್ಕೆ ಬಾರದಿರುವ ಪೂರ್ವೋತ್ತರಕ್ಷಣಗಳ ಸಮೂಹವು ಸಂತಾನವು. ಇಂಥ ಸಂತಾನಗಳ ಸಮೂಹವು ಸಂತಾನ ರೂಪವು.

ಸಂತಾನಾಂತರನಿರಸನ (೨–೧೦ ವ)—ಸರ್ವವಿಜ್ಞಾನಗಳು ಕ್ಷಣಿಕವಾಗಿರುತ್ತವೆ. ಮತ್ತು ಉತ್ಪನ್ನವಾದ ಕೂಡಲೇ ನಾಶಹೊಂದುತ್ತವೆ. ಅವುಗಳಲ್ಲಿ ಪೂರ್ವಾಪರ ಸಂಬಂಧವಿಲ್ಲದ್ದರಿಂದ ಮುಂದಿನ ವಿಜ್ಞಾನ ಕ್ಷಣಗಳು ಸಂತಾನಾಂತರವಾಗುತ್ತವೆ.ಅವುಗಳಲ್ಲಿ ಅವೇ ಇವು ಎಂದು ಉಂಟಾಗುತ್ತಿರುವ ಜ್ಞಾನವು ಮಿಥ್ಯವು. ಕತ್ತರಿಸಿದ ಕೂದಲುಗಳು ಅಥವಾ ಉಗುರುಗಳು ಅವೇ ಇವು ಎಂದು ತೋರುತ್ತವೆ. ಆದರೆ ಕತ್ತರಿಸಿದುವು ನಾಶಹೊಂದಿದುವು. ಈಗ ಹುಟ್ಟಿದ ಕೂದಲುಗಳು ಮತ್ತು ಉಗುರುಗಳು ಹೊಸವು. ಆದರೆ ಅವುಗಳಲ್ಲಿ ಏಕತ್ವಬುದ್ಧಿವುಂಟಾಗುವುದು ಭ್ರಾಂತಿಯಾಗಿರುವುದರಿಂದ ಅದು ಅಪ್ರಮಾಣವು. ಹೀಗೆ ಅಭಿಪ್ರಾಯ ಪಡುವುದು ಯೋಗ್ಯವಲ್ಲ. ಆತ್ಮಾ ಮುಂತಾದ ವಸ್ತುಗಳು ಕಥಂಚಿತ್ ಕ್ಷಣಿಕವಾಗಿವೆ. ಯಾಕೆಂದರೆ ಜೀವನಿಗೆ ನರ ನರಕಾದಿ ಪರ್ಯಾಯಗಳು ಪ್ರಾಪ್ತವಾಗುತ್ತವೆ ಮತ್ತು ಕಥಂಚಿತ್ ಅಕ್ಷಣಿಕ-ನಿತ್ಯವಾಗಿವೆ. ಯಾಕೆಂದರೆ ಮೊದಲು ತರುಣನಾಗಿದ್ದು ನಾನೇ ಈಗ ಮುದುಕನಾಗಿದ್ದೇನೆ, ಎಂಬುವ ಏಕತ್ವಬುದ್ಧಿಯು ಭ್ರಾಂತಿಯಲ್ಲ. ಒಮ್ಮೊಮ್ಮೆ ಈ ಜ್ಞಾನವು ಭ್ರಾಂತವಾದರೆ ಅದು ಯಾವಾಗಲೂ ಭ್ರಾಂತವಾಗುತ್ತದೆ, ಎಂದು ಬಗೆಯುವುದು ತಪ್ಪಾದೀತು. ಈ ಕಾರಣದಿಂದ ಆತ್ಮಾದಿಕ ಪದಾರ್ಥಗಳು ಪ್ರತಿಕ್ಷಣದಲ್ಲಿ ಬೇರೆ ಬೇರೆಯಾಗಿ ಉತ್ಪನ್ನವಾಗುತ್ತವೆ. ಎಂದು ಬಗೆಯುವುದು ತಪ್ಪು.

ಸನ್ಯಸನವಿಧಾನ (೨–೧೯ ವ)-ಕಷಾಯಗಳನ್ನು ಕಡಿಮೆ ಮಾಡುವುದು ಆಹಾರಾದಿಗಳನ್ನು ಕಡಿಮೆ ಕಡಿಮೆ ಮಾಡುತ್ತ ಹೋಗುವುದು ಮತ್ತು ಪಂಚ ಪರಮೇಷ್ಠಿಗಳ ಧ್ಯಾನದಲ್ಲಿ ತತ್ಪರರಾಗಿ ಪ್ರಾಣತ್ಯಾಗಮಾಡುವುದು ಸನ್ಯಸನವಿಧಾನ. ಈ ವ್ರತವನ್ನು ಘೋರೋಪಸರ್ಗ, ದುರ್ಭಿಕ್ಷ, ಮುಪ್ಪು, ಅಸಾಧ್ಯರೋಗ ಇವುಗಳ ಬಗೆಗೆ ಪ್ರತೀಕಾರವು ನಡೆಯುವುದಿಲ್ಲವೆಂದಿರುವಾಗ ಆಚರಿಸುತ್ತಾರೆ.

ಸಪ್ತಘನರಜ್ಜು (೧೬–೪೯ ವ)— ೩೪೩ ರಜ್ಜು ಪ್ರಮಾಣದ ಲೋಕ.

ಸಪ್ತರ್ಧಿ (೬–೩೩ ವ)—ಋದ್ಧಿಗಳು ಏಳು. (೧) ಬುದ್ಧಿ, (೨) ಕ್ರಿಯೆ, (೩) ವಿಕ್ರಿಯಾ, (೪) ತಪ, (೫) ಬಲ, (೬) ಔಷಧ, (೭) ರಸ.

ಸಪ್ತಪರಮಸ್ಥಾನಗಳು (೫-೬೩)—(೧) ಸಜ್ಜಾತಿ, (೨) ಸದ್ಗೃಹಸ್ಥತ್ವ, (೩) ಮುನಿವ್ರತಧಾರಣಮಾಡುವುದು, (೪) ತಪವನ್ನಾಚರಿಸಿ ಇಂದ್ರಪದದೊರಕಿಸುವುದು, (೫) ಸಾಮ್ರಾಜ್ಯಪ್ರಾಪ್ತಗೊಳಿಸುವುದು, (೬) ತೀರ್ಥಂಕರಪದವಿಯನ್ನು ದೊರಕಿಸುವುದು ಮತ್ತು (೭) ಸಿದ್ಧಪದವನ್ನು ಗಳಿಸುವುದು.

ಸಮಚತುರಸ್ರಸಂಸ್ಥಾನ (೫–೪೧ ವ)—ಈ ಕರ್ಮದ ಉದಯದಿಂದ ಶರೀರದೊಳಗಿನ ಅಂಗಾಂಗಗಳು ಪ್ರಮಾಣಬದ್ಧವಾಗಿ ಶರೀರದ ಆಕಾರವು ಸುಂದರವಾಗುತ್ತದೆ.

ಸಮದತ್ತಿ (೧೫–೧೩ ವ)—ತನ್ನ ಸಾಧರ್ಮಿಕರಿಗೆ ಆಹಾರ ಮುಂತಾದವುಗಳನ್ನು ಕೊಡುವುದು.

ಸಮಯ (೬–೪೮ ವ)— ಆಕಾಶದ ಒಂದು ಪ್ರದೇಶದಲ್ಲಿರುವ ಪರಮಾಣು ಮಂದಗತಿಯಿಂದ ಪ್ರಯಾಣ ಮಾಡಿ ಮತ್ತೊಂದು ಪ್ರದೇಶದ ಮೇಲೆ ಎಷ್ಟು ಕಾಲದಲ್ಲಿ ಹೋಗಿ ಮುಟ್ಟುತ್ತದೆಯೋ ಅದು ಒಂದು ಸಮಯವು.

ಸಮಾಧಿವಿಧಿ (೨–೬೦)—ಅನ್ನ, ಕಷಾಯ ಮುಂತಾದವುಗಳನ್ನು ತ್ಯಾಗಮಾಡಿ ರತ್ನತ್ರಯಗಳಲ್ಲಿ ಸ್ಥಿರನಾಗಿ ಪ್ರಾಣತ್ಯಾಗಮಾಡುವ ಕ್ರಮ.

ಸಮ್ಯಕ್‌ಚಾರಿತ್ರ (೫-೪೯)— ಪಾಪಾಗಮನಕ್ಕೆ ಕಾರಣವಾಗುವ ಹಿಂಸಾದಿ ಕಾರ್ಯಗಳಿಂದ ವಿರಕ್ತನಾಗಿರುವುದು.

ಸಮ್ಯಕ್‌ಜ್ಞಾನ (೫-೪೯)—ಜೀವಾದಿಗಳ ಸ್ವರೂಪವನ್ನು ನಿಸ್ಸಂಶಯವಾಗಿ ತಿಳಿದುಕೊಳ್ಳುವುದು.

ಸಮ್ಯಕ್ತ್ವ (೫-೫೨)—ಅನಂತಾನುಬಂಧಿಕ್ರೋಧ, ಮಾನ, ಮಾಯಾ ಮತ್ತು ಲೋಭ, ಮಿಥ್ಯಾತ್ವ ಮತ್ತು ಸಮ್ಯಗ್ ಮಿಥ್ಯಾತ್ವ ಈ ಆರು ಕರ್ಮಗಳ ಉದಯ ಭಾವವು ಭವಿಷ್ಯಕಾಲದ ಅಪೇಕ್ಷೆಯಿಂದ ಉಪಶಮ ಮತ್ತು ವರ್ತಮಾನಕಾಲದಲ್ಲಿ ಸಮ್ಯಕ್ತ್ವಪ್ರಕೃತಿಯ ಉದಯವಾಗಿ ಪ್ರಾಪ್ತವಾಗುವ ಸಮ್ಯಗ್‌ದರ್ಶನವು ಸಮ್ಯಕ್ತ್ವವು. ಅದಕ್ಕೆ ಕ್ಷಯೋಪಶಮಿಕ ಸಮ್ಯಕ್ತ್ವ ಅಥವಾ ವೇದಕ ಸಮ್ಯಕ್ತ್ವವು ಎನ್ನುತ್ತಾರೆ.

ಸಮ್ಯಗ್‌ದರ್ಶನವಿಶುದ್ಧ (೧೦-೯ ವ)— ಸಮ್ಯಗ್‌ದರ್ಶನದಿಂದ ಪವಿತ್ರನು.

ಸಮ್ಯಗ್‌ಮಿಥ್ಯಾತ್ವ (೧೦-೧೪ ವ)— ಇದರ ಉದಯದಿಂದ ಜೀವನ ಕೇವಲ ಸಮ್ಯಕ್ತ್ವರೂಪದ ಪರಿಣಾಮಗಳು ಉಂಟಾಗುವುದಿಲ್ಲ ಅಥವಾ ಮಿಥ್ಯಾತ್ವರೂಪದ ಪರಿಣಾಮಗಳೂ ಉಂಟಾಗುವುದಿಲ್ಲ.

ಸಂಯತ (೧೧-೯ ವ.)— ಪ್ರಾಣಸಂಯಮ ಮತ್ತು ಇಂದ್ರಿಯಸಂಯಮ ಪಾಲಿಸುವವರು, ಮುನಿಗಳು.

ಸಂಯಮ (೬-೩೦ ವ)—ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳುವುದು ಮತ್ತು ಪ್ರಾಣಿರಕ್ಷಣೆ ಮಾಡುವುದು.

ಸಂವರ (೧೦-೬೩ ವ)— ಜೀವನ ಗುಪ್ತಿಸಮಿತಿಗಳ ರೂಪಪರಿಣಾಮದಿಂದ ಜೀವನಲ್ಲಿ ಕರ್ಮಗಳು ಬೆರೆತುಕೊಳ್ಳುವುದಿಲ್ಲ. ಈ ಸ್ಥಿತಿಗೆ ಸಂವರವೆನ್ನುತ್ತಾರೆ.

ಸಂಶಯ (೧೦-೬೩ ವ)—ವಿರುದ್ಧವಾದ ಅನೇಕ ಕೋಟಿಗಳನ್ನು ಸ್ಪರ್ಶಿಸುವ ಜ್ಞಾನ. ಉದಾ:— ಇದು ಸಿಂಪೆಯೋ ಅಥವಾ ಬೆಳ್ಳಿಯೋ ಎಂಬ ಅನಿಶ್ಚಿತ ಭಾವ.

ಸಂಸಾರಕ್ಷಪಕನ್ (೬-೧೧ ವ)— ಸಂಸಾರದ ನಾಶಮಾಡುವವನು.

ಸಂಸಾರನಿರ್ವೇಗ (೧-೭೯ ವ)-ನಾಲ್ಕು ಗತಿಗಳಲ್ಲಿ ತಿರುಗಿಸುವ ಐದು ಸಂಸಾರಗಳಿಂದ ವೈರಾಗ್ಯಪ್ರಾಪ್ತಿ.

ಸಂಸ್ಥಾನ (೫-೮೯)—ಶರೀರದ ಆಕೃತಿಯು ರೂಪುಗೊಳ್ಳುವ ಕರ್ಮದ ಉದಯವು ಅಥವಾ ಮೈಕಟ್ಟು.

ಸಂಸ್ಥಾನವಿಚಯ (೧೦-೧೪ ವ)— ತ್ರೈಲೋಕ್ಯದ ಆಕಾರ ಮತ್ತು ಅದರ ಸ್ವರೂಪವನ್ನು ಮೇಲಿಂದ ಮೇಲೆ ಚಿಂತನಮಾಡುವುದು. ಸಂಸ್ಥಾನವಿಚಯವೆಂಬ ಮೂರನೆಯ ಧರ್ಮಧ್ಯಾನವು.

ಸಂಹನನ ( ಸಂವಾಹನ ೫-೪೧ ವ )—ಭೋಗಭೂಮಿಜರ ಶರೀರವು ಮೊದಲ ನೆಯ ಸಂಹನನದ್ದು ಆಗಿರುತ್ತದೆ. ಅಂದರೆ ಅವರ ಶರೀರದೊಳಗಿನ ಎಲುಬು, ಸ್ನಾಯು, ಸಂದುಗಳು ವಜ್ರದಹಾಗೆ ಗಟ್ಟಿಮುಟ್ಟಾಗಿರುತ್ತವೆ.

ಸಂಹನನಷಟ್ಕ (೧೬-೪೯ ವ)-(೧) ವಜ್ರವೃಷಭನಾರಾಚಸಂಹನನ (೨) ವಜ್ರ ನಾರಾಚಸಂಹನನ (೩) ನಾರಾಚಸಂಹನನ (೪) ಅರ್ಧನಾರಾಚ ಸಂಹನನ (೫) ಕೀಲಕ ಸಂಹನನ (೬) ಅಸಂಪ್ರಾಪ್ತಾಸೃಪಾಟಿಕಾ ಸಂಹನನ.

ಸಂಹರಣವಿಸರ್ಪಣಸ್ವರೂಪ ( ೨-೧೦ ವ )--ಆತ್ಮನನ್ನು ಬಂಧಿಸಿದ ಶರೀರನಾಮ ಕರ್ಮದ ಉದಯವಾದಾಗ ಆತನ ಪ್ರದೇಶವು ಸಣ್ಣದೂ ದೊಡ್ಡದೂ ಇರುವಂತೆ ಆತನು ಸಂಕುಚಿತ ಮತ್ತು ವಿಸ್ತರಿತನಾಗುತ್ತಾನೆ. ಇರುವೆ ಯಾದಾಗ ಆತನ ಪ್ರದೇಶವು ಸಂಕುಚಿತವಾಗಿ ಸಣ್ಣದಾಗಿರುತ್ತದೆ; ಮತ್ತು ಆನೆಯಾದಾಗ ಅದು ವಿಸ್ತಾರಗೊಳ್ಳುತ್ತದೆ.

ಸರ್ವತೋಭದ್ರ ( ೧-೫೭ ವ )-(೧) ಇದೊಂದು ಉಪವಾಸ ವ್ರತವು. ಇದರ ವಿಧಿ ಹೀಗೆ:-ಒಂದು ಉಪವಾಸ ಒಂದು ಪಾರಣೆ; ಎರಡು ಉಪವಾಸ ಒಂದು ಪಾರಣೆ; ಮೂರು ಉಪವಾಸ ಒಂದು ಪಾರಣೆ; ನಾಲ್ಕು ಉಪವಾಸ ಒಂದು ಪಾರಣೆ; ಐದು ಉಪವಾಸ ಒಂದು ಪಾರಣೆ; ಒಂದು ಉ. ಒಂದು ಪಾರಣೆ; ಎರಡು ಉ ಒಂದು ಪಾರಣೆ. ಮೂರು ಉ. ಒಂದು ಪಾರಣೆ. ಇದಾದ ಮೇಲೆ ೨, ೩, ೪, ೫ ಉ. ಮಾಡಿ ಒಂದೊಂದು ಪಾರಣೆ ಮಾಡಬೇಕು. ಆ ಮೇಲೆ ೫, ೧, ೨, ೩, ೪, ಉಪವಾಸ ಮತ್ತು ಒಂದೊಂದು ಪಾ; ಆ ಮೇಲೆ ೩, ೪, ೫, ೧, ೨ ಉ. ಮಾಡಿ ಒಂದೊಂದು ಪಾರಣೆ ಮಾಡಬೇಕು. ಈ ವ್ರತದಲ್ಲಿ ೭೫ ಉಪವಾಸಗಳು, ಮತ್ತು ೨೫ ಪಾರಣೆಗಳು ಆಗುತ್ತವೆ.

ಸರ್ವತೋಭದ್ರ ( ೧೫-೩ ವ) (೨)–ಭರತ ಚಕ್ರವರ್ತಿಯ ಅರಮನೆಯ ಸುತ್ತಲೂ ಇರುವ ಕೋಟೆಯ ಹೆಬ್ಬಾಗಿಲಿನ ಮೇಲೆ ಇರುವ ಗೋಪುರ. ಅದು ವರ್ತುಲಾಕಾರವಾಗಿದ್ದರೂ ಅನೇಕ ಮೂಲೆಗಳುಳ್ಳದ್ದಾಗಿತ್ತು.

ಸರ್ವತೋಭದ್ರ ( ೧೫-೧೩ ವ)—(೩) ಅರ್ಧಮಂಡಲಿಕರು ಮಾಡುವ ಪೂಜೆ.

ಸರ್ವತೋಭದ್ರ ( ೬-೧೦೬ ವ )-(೪) ಅನೇಕ ಮೂಲೆಗಳಿಂದ ಕೂಡಿ ವರ್ತುಲಾ ಕಾರವಾಗಿ ಕಟ್ಟಿದ ಮನೆ.

ಸರ್ವಪ್ರತ್ಯಯನಿರಾಲಂಬನವಾದ (೨-೧೦ ವ)— ಸರ್ವಜ್ಞಾನಗಳು ನಿರಾಲಂಬನ ನಿರಾಧಾರವಾಗಿರುತ್ತವೆ, ಎಂಬುವ ಮತವು ಸರ್ವಪ್ರತ್ಯಯವು. ಉದಾ:– ಸ್ವಪ್ನದಲ್ಲಿ ಆನೆ, ಕುದುರೆ ಮುಂತಾದ ಪದಾರ್ಥಗಳನ್ನು ಕಾಣು ತ್ತೇವೆ. ಆದರೆ ಎಚ್ಚರಾದ ಮೇಲೆ ಅವುಗಳಲ್ಲಿ ಯಾವ ವಸ್ತುವೂ ಕಾಣುವುದಿಲ್ಲ. ಇದರಂತೆ ಜ್ಞಾನಕ್ಕೆ ಆಧಾರವಾದ ಯಾವ ಪದಾರ್ಥವೂ ಇಲ್ಲದಿರುವಾಗ ಜ್ಞಾನವುಂಟಾಗುತ್ತದೆ ಎಂದು ತಿಳಿಯುವ ಮತವು ಯೋಗ್ಯವಲ್ಲ ಯಾಕೆಂದರೆ— ಇಬ್ಬರು ಚಂದ್ರರು ಇರುವರೆಂದು ಉಂಟಾಗುವ ಜ್ಞಾನವು ಚಂದ್ರನಿಲ್ಲದಿದ್ದರೆ ಉಂಟಾಗುತ್ತಿರಲಿಲ್ಲ. ಆದರೆ ಚಂದ್ರನಿದ್ದುದರಿಂದಲೇ ಇಬ್ಬರು ಚಂದ್ರರ ಜ್ಞಾನವುಂಟಾಗುತ್ತದೆ. ಇದರ ಮೇಲಿಂದ ಪದಾರ್ಥದ ಅಭಾವದಲ್ಲಿಯೇ ಅದರ ಜ್ಞಾನವುಂಟಾಗುತ್ತದೆ ಎಂಬ ಮತವು ತಪ್ಪು.

ಸರ್ವಸಾಧು (೧-೫)-ಎಲ್ಲ ಕರ್ಮಗಳನ್ನು ನಾಶಮಾಡುವುದಕ್ಕೆಂದು ಧ್ಯಾನಮಗ್ನ ನಾಗಿರುವ, ರತ್ನತ್ರಯುವನ್ನು ಆರಾಧಿಸುವ, ಮತ್ತು ಸಿದ್ಧಿಯನ್ನು ಸಾಧಿಸುತ್ತಿರುವ ಜಿನಮುನಿಗಳಿಗೆ ಸರ್ವಸಾಧುಗಳೆನ್ನುತ್ತಾರೆ.

ಸರ್ವಾರ್ಥಸಿದ್ಧಿ ( ೬-೩೪ ವ )— ಇದು ಐದನೆಯ ಅನುತ್ತರ ವಿಮಾನವು. ಇದರೊಳಗೆ ಹುಟ್ಟಿದ ಜೀವನು ಒಂದೇ ಭವಾವತಾರಿಯಾಗಿರುತ್ತಾನೆ.

ಸವನ ( ೧೫-೧೩ ವ )—ಪಂಚಾಮೃತದಿಂದ ಮಾಡುವ ಜಿನೇಶ್ವರನ ಅಭಿಷೇಕ. ಪಂಚಾಮೃತದಲ್ಲಿ ಹಾಲು, ತುಪ್ಪ, ಮೊಸರು, ತೆಂಗಿನ ನೀರು, ಮಾವಿನ ರಸ, ಕಬ್ಬಿನ ರಸಗಳು ಬರುತ್ತವೆ.

ಸವಿಪಾಕನಿರ್ಜರೆ ( ೧೦-೬೩ ವ )—ಕರ್ಮವು ಫಲೋನ್ಮುಖವಾಗಿ ಸುಖದುಃಖಗ ಳನ್ನು ಕೊಟ್ಟು ತುಸು ತುಸು ಉದುರಿ ಹೋಗುತ್ತಿರುವ ಸ್ಥಿತಿ.

ಸಾಕಾರನಿರಾಕಾರಗತಅನಶನತಪ ( ೬-೩೦ ವ. )—ಅನಶನ ತಪವು ಸಾಕಾರ ವೆಂದೂ ನಿರಾಕಾರವೆಂದೂ ಎರಡು ವಿಧವು. ಇಷ್ಟು ಕಾಲದ ವರೆಗೆ ಆಹಾರವನ್ನು ತೆಗೆದುಕೊಳ್ಳುವುದಿಲ್ಲವೆಂದು ಆಹಾರ ತ್ಯಾಗಮಾಡುವುದು ಸಾಕಾರ ಅನಶನತಪವು. ಯಾವತ್ ಜೀವ ಆಹಾರತ್ಯಾಗಮಾಡು ವುದು ನಿರಾಕಾರ ಅನಶನತಪವು. ಅದೇ ಸಲ್ಲೇಖನವು.

ಸಾಗರ (೬-೪೮ ವ)— ಹತ್ತುಕೋಟಾಕೋಟಿ ಅದ್ಧಾಪಲ್ಯದಿಂದ ಒಂದು ಸಾಗರವಾಗುತ್ತದೆ.

ಸಾಮಾನಿಕದೇವ (೩-೫ ವ)—ಇಂದ್ರನಿಗೆ ಇರುವಂತೆ ಆಯುಷ್ಯ, ಶಕ್ತಿ, ಪರಿವಾರ, ಭೋಗೋಪಭೋಗಾದಿವಿಷಯಗಳು ಇವರಿಗೆ ಇರುತ್ತವೆ. ಆದರೆ ಇಂದ್ರನಂತೆ ಐಶ್ವರ್ಯ ಮತ್ತು ಆಜ್ಞಾಶಕ್ತಿಗಳು ಇರುವುದಿಲ್ಲ. ಇಂತಹ ಗುರು, ಪಿತಾ, ಉಪಾಧ್ಯಾಯ ಮುಂತಾದ ಹಿರಿಯರ ಹಾಗೆ ಪೂಜ್ಯರಾದ ದೇವರುಗಳು ಸಾಮಾನಿಕದೇವರು.

ಸಾಮಾಯಿಕ (೧೦-೧೪ ವ)-ಎಲ್ಲ ಪ್ರಾಣಿಮಾತ್ರಗಳ ವಿಷಯದಲ್ಲಿ ರಾಗದ್ವೇಷಾದಿ ಭಾವನೆಗಳನ್ನು ತ್ಯಾಗಮಾಡಿ ಆತ್ಮಚಿಂತನೆಮಾಡುವುದು. ಕೆಲವು ಹೊತ್ತಿನ ವರೆಗೆ ಹಿಂಸಾದಿ ಐದು ಪಾಪಗಳನ್ನು ಪೂರ್ಣವಾಗಿ ತ್ಯಾಗ ಮಾಡುವುದು

ಸಾಮ್ರಾಜ್ಯ (೧೫-೧೬ ವ)-ಚಕ್ರವರ್ತಿಪದವು. ಇದು ಐದನೆಯ ಪರಮಸ್ಥಾನವು.

ಸಿದ್ಧ (೧-೨)— ಯಾವಾಗಲೂ ಕರ್ಮಮಲಗಳಿಲ್ಲದ ಶುದ್ಧಜೀವ. ಇವರಿಗೆ ಅನಂತಜ್ಞಾನಾದಿಗುಣ ತಮ್ಮ ಸ್ವರೂಪ ಪ್ರಾಪ್ತವಾಗಿರುತ್ತವೆ.

ಸಿದ್ಧಪರಮೇಷ್ಠಿ (೧೦-೧೪ ವ)—ಜ್ಞಾನಾವರಣಾದಿ ಅಷ್ಟಕರ್ಮಗಳನ್ನು ನಾಶಪಡಿಸಿ ಶುದ್ಧನಾದ ಆತ್ಮನು.

ಸಿದ್ಧಪರಮೇಷ್ಠಿಗಳ ಗುಣ (೧೦-೧೪ ವ)—ಅನಂತಜ್ಞಾನ, ಅನಂತದರ್ಶನ, ಅವ್ಯಾಬಾಧಗುಣ, ಸಮ್ಯಗ್‌ದರ್ಶನ, ಅವಗಾಹ, ಸೂಕ್ಷ್ಮತ್ವ, ಅಗುರುಲಘುತ್ವ ಮತ್ತು ಅನಂತವೀರ್ಯ ಇವು ಎಂಟು ಸಿದ್ಧಪರಮೇಷ್ಠಿಗಳ ಗುಣಗಳು.

ಸಿದ್ಧಾಯತನ (೧-೩೨ ವ)—ಹಿಮವತ್, ವಿಜಯಾರ್ಧ ಮುಂತಾದ ಪರ್ವತಗಳ ಮೇಲಿರುವ ಅಕೃತ್ರಿಮ ಜಿನಾಲಯಗಳಿಗೆ ಸಿದ್ಧಾಯತನಗಳೆನ್ನುತ್ತಾರೆ.

ಸಿಂಹಪುರ (೨-೩೫ ವ)—ಗಂಧಿಳದೇಶದೊಳಗಿನ ಒಂದು ಮೂಲಪಟ್ಟಣ.

ಸಿಂಹವಾಹಿನಿ (೧೫-೩ ವ)—ಭರತ ಚಕ್ರವರ್ತಿಯ ಪರ್ಯಂಕ.

ಸಿಂಹವಿಕ್ರೀಡಿತ (೩-೫೭ ವ)—ಜಘನ್ಯಸಿಂಹವಿಕ್ರೀಡಿತ ವ್ರತದಲ್ಲಿ ೬೦ ಉಪವಾಸಗಳು ಮತ್ತು ೨೦ ಪಾರಣೆಗಳು ಆಗುತ್ತವೆ. ಮಧ್ಯಮಸಿಂಹ ವಿಕ್ರೀಡಿತದಲ್ಲಿ ೧೫೩ ಉಪವಾಸಗಳು ಮತ್ತು ೩೩ ಪಾರಣೆಗಳು ಆಗುತ್ತವೆ. ಉತ್ತಮಸಿಂಹ ವಿಕ್ರೀಡಿತದಲ್ಲಿ ೪೯೬ ಉಪವಾಸಗಳು ಮತ್ತು ೬೧ ಪಾರಣೆಗಳು ಆಗುತ್ತವೆ. ಮಧ್ಯಮಸಿಂಹವಿಕ್ರೀಡಿತದಕ್ರಮಃ—

ಪಾರಣೆಃ—೧೧೧೧೧೧೧೧೧೧೧೧೧೧೧೧೧೧೧೧

ಉಪವಾಸ:—೧೨೧೩೨೪೩೫೪೬೫೭೬೮೭೯೮೯೭೮೬೭೫೬೪೫೩

ಪಾರಣೆ:—೧೧೧೧೧೧

ಉಪವಾಸಃ—೪೨೩೧೨೧ ಇದರಂತೆ ಉಪವಾಸಗಳು ೧೫೩ ಮತ್ತು ಪಾರಣೆಗಳು ೩೩ ಆಗುತ್ತವೆ.

ಸಿಂಹಾಟಕ (೧೫-೩ ವ)—ಭರತ ಚಕ್ರವರ್ತಿಯ ಈಟಿ.

ಸೀತಾನದಿ (೨-೧೪ ವ)—ನೀಲಕುಲಪರ್ವತದ ಮೇಲೆ ಇರುವ ಕೇಶರಿ ಸರೋವರದ ದಕ್ಷಿಣ ತೋರಣದಲ್ಲಿ ಸೀತಾನದಿಯು ಹುಟ್ಟಿ ಉತ್ತಮಭೋಗ ಭೂಮಿಯೊಳಗಿಂದ ಪೂರ್ವವಿದೇಹದಲ್ಲಿ ಹರಿದು ಹೋಗಿ ಪೂರ್ವಸಮುದ್ರಕ್ಕೆ ಕೂಡುತ್ತದೆ.

ಸೀತೋದಾ (೧-೫೩)— ಅಪರವಿದೇಹಕ್ಷೇತ್ರದೊಳಗೆ ಹರಿದು ಪಶ್ಚಿಮ ಸಮುದ್ರಕ್ಕೆ ಕೂಡುವ ನದಿ.

ಸುಕೃತದುಷ್ಕೃತಕರ್ಮೋಪಾರ್ಜನ (೨-೧೦ ವ)— ಆತ್ಮನು ನಿತ್ಯನೇ ಆಗಿದ್ದರೆ ಅವನು ಯಾವಾಗಲೂ ಏಕಸ್ವರೂಪಿಯಾಗಿರುತ್ತಿದ್ದನು. ಪಾಪಿಯು ಯಾವಾಗಲೂ ಪಾಪಿಯೇ ಆಗಿರುತ್ತಾನೆ. ಅವನಿಗೆ ಪಾಪಕ್ಷಯವನ್ನು ಮಾಡಿಕೊಳ್ಳಲು ಬರುತ್ತಿದ್ದಿಲ್ಲ. ಆದರೆ ಆತ್ಮನು ಪರಿಣಾಮಿ ಆಗಿರುವದರಿಂದ ಅವನಿಗೆ ಶುಭಾಶುಭಾದಿಪರಿಣಾಮಗಳುಂಟಾಗುತ್ತವೆ. ಆಕಾರಣದಿಂದ ಆತನಿಗೆ ಪಾಪಪುಣ್ಯಗಳ ಬಂಧವುಂಟಾಗುತ್ತದೆ.

ಸುಪ್ರೀತಿ (೧೫-೧೫ ವ)—ಈ ಸಂಸ್ಕಾರವನ್ನು ಗರ್ಭಿಣಿಯು ಐದನೆಯ ತಿಂಗಳಲ್ಲಿ ಆಚರಿಸುತ್ತಾರೆ.

ಸುಭಗ (೧೬-೪೯ ವ)—ಈ ಕರ್ಮದ ಉದಯದಿಂದ ಆತನ ವಿಷಯವಾಗಿ ಅನ್ಯರ ಮನಸ್ಸಿನಲ್ಲಿ ಪ್ರೀತಿಯುಂಟಾಗುತ್ತದೆ.

ಸುರೇಂದ್ರತ್ವ (೧೫-೧೬ ವ)—ಮಹಾವ್ರತದ ದೀಕ್ಷೆತೆಗೆದುಕೊಂಡು ತೀವ್ರತಪವನ್ನು, ಆಚರಿಸಿ ಮರಣಸಮಯದಲ್ಲಿ ಸಲ್ಲೇಖನಾವ್ರತವನ್ನು ಸ್ವೀಕ

ರಿಸುವುದರಿಂದ ಸ್ವರ್ಗದಲ್ಲಿ ಇಂದ್ರಪದವು ಪ್ರಾಪ್ತವಾಗುತ್ತದೆ. ಅದು ಸುರೇಂದ್ರತ್ವವು. ಇದು ನಾಲ್ಕನೆಯ ಪರಮಸ್ಥಾನವು

ಸುಷಮ (೬-೪೮ ವ)—ಇದು ಅವಸರ್ಪಿಣಿಯ ಎರಡನೆಯ ಕಾಲವು. ಇದರ ಪರಿಮಿತಿ ಮೂರು ಕೋಟಾಕೋಟಿಸಾಗರೋಪಮ.

ಸುಷಮದುಃಷಮ (೬-೪೮ ವ)— ಅವಸರ್ಪಿಣಿಯ ಮೂರನೆಯ ಕಾಲವು. ಇದರ ಪರಿಮಿತಿ ಎರಡು ಕೋಟಾಕೋಟಿಸಾಗರರೋಪಮ,

ಸುಷಮಸುಷಮ (೬-೪೮ ವ)—ಇದು ಅವಸರ್ಪಿಣಿಯ ಮೊದಲನೆಯ ಕಾಲವು. ಅದು ನಾಲ್ಕು ಕೋಟಾಕೋಟಿಸಾಗರಪರಿಮಿತಿ ವರ್ಷವಷ್ಟು ಇರುತ್ತದೆ.

ಸುಸೀಮಾನಗರ (೩-೭೩ ವ)—ಸೀತಾನದಿಯ ದಕ್ಷಿಣ ದಂಡೆಯ ಮೇಲೆ ಇರುವ ವತ್ಸಕಾವತಿವಿಷಯದೊಳಗಿನ ಒಂದು ಮೂಲ ನಗರ.

ಸುಸ್ವರ (೧೬-೪೯ ವ)-ಈ ಕರ್ಮದ ಉದಯದಿಂದ ಕಂಠವು ಮಧುರವಾಗುತ್ತದೆ.

ಸೂಕ್ಷ್ಮ (೧೬-೪೯ ವ)— ಆಯುಃಕರ್ಮದ ನಾಶದಿಂದ ಶುದ್ಧಾತ್ಮನಿಗೆ ಸೂಕ್ಷ್ಮ ಗುಣ ಉಂಟಾಗುತ್ತದೆ.

ಸೂಕ್ಷ್ಮಕಾಯಯೋಗ (೧೬-೪೯ ವ)—ಇದರಲ್ಲಿ ಪಾದವಿಹರಣಾತ್ಮಕ ಕ್ರಿಯೆಯು ರಹಿತವಾಗಿ ಪದ್ಮಾಸನದಿಂದಲೇ ಗಮನಕ್ರಿಯೆ ಸಾಗುತ್ತದೆ. ಆಗ ಮೂರನೆಯ ಶುಕ್ಲಧ್ಯಾನ ಸೂಕ್ಷ್ಮಕ್ರಿಯಾಪ್ರತಿಪಾತಿಯು ಇರುತ್ತದೆ.

ಸೂಕ್ಷ್ಮಕೃಷ್ಟಿ (೧೦-೧೪ ವ)—ಕರ್ಮದ ಅನುಭಾಗವನ್ನು ಇಳಿಸಿ ಸೂಕ್ಷ್ಮಮಾಡುವುದು. ಅಂದರೆ ಕರ್ಮಫಲವನ್ನು ಭೋಗಿಸಿದರೂ ಆ ಕರ್ಮಪುದ್ಗಲಗಳು ಸಂಪೂರ್ಣನಾಶವಾಗದೆ ಅವು ಸೂಕ್ಷ್ಮವಾಗಿ ಉಳಿಯುತ್ತವೆ. ಇದಕ್ಕೆ ಬೆಣ್ಣೆಯನ್ನು ಕಾಸಿ ತುಪ್ಪ ಮಾಡಿದಾಗ ಪಾತ್ರೆಯಲ್ಲಿ ಕೆಳಗೆ ಉಳಿಯುವ ಗಸಿಯ ಉಪಮೆ ಕೊಡುತ್ತಾರೆ. ಆ ಗಸಿಯಿಂದ ತುಪ್ಪವಾಗುವುದಿಲ್ಲ. ಅದರಂತೆ ಸೂಕ್ಷ್ಮಪುದ್ಗಲಗಳಿಗೆ ಫಲವಿರುವುದಿಲ್ಲ.

ಸೂಕ್ಷ್ಮಕ್ರಿಯಾಪ್ರತಿಪಾತಿ (೧೬-೪೯ ವ)—ಕೇವಲಿಯ ಆಯುಃಕರ್ಮವು ಅಂತರ್ಮುಹೂರ್ತದ್ದಿರುವಾಗ ಮಿಕ್ಕ ಕರ್ಮಗಳು ಅದೇ ಪ್ರಮಾಣದವಿರುತ್ತವೆ. ಆಗ ಆತನು ಎಲ್ಲ ಮನೋವಚನಕಾಯಯೋಗಗಳನ್ನು ತ್ಯಾಗ ಮಾಡಿ ಸೂಕ್ಷ್ಮಕಾಯಯೋಗದಲ್ಲಿ ನಿಂತುಕೊಂಡು ಸೂಕ್ಷ್ಮಕ್ರಿಯಾ ಪ್ರತಿಪಾತಿಧ್ಯಾನದ ಆಶ್ರಯಪಡೆಯುತ್ತಾನೆ. ಅಲ್ಲಿ ಅವನು ದಂಡಕವಾಟ

ಪ್ರತರಲೋಕಪೂರಣಕ್ರಿಯೆಗಳಿಂದ ಆಯು, ನಾಮ, ಗೋತ್ರ, ವೇದನೀಯಕರ್ಮಗಳ ಸ್ಥಿತಿಯನ್ನು ಸಮಾನಗೊಳಿಸುತ್ತಾನೆ.

ಸೂಕ್ಷ್ಮರೂಪ (೨-೧೦ ವ)—ಆತ್ಮನು ಕರ್ಮಕ್ಷಯಮಾಡಿಕೊಂಡು ಮುಕ್ತನಾದಾಗ ಆತನ ಸೂಕ್ಷ್ಮಸ್ವಭಾವವು ಪ್ರಕಟವಾಗುತ್ತದೆ. ಕರ್ಮಬಂಧದಿಂದ ಆತನಲ್ಲಿ ಮೂರ್ತಿಕತ್ವವು ಕಂಡುಬರುತ್ತದೆ. ಆದರೆ ಕರ್ಮನಾಶದಿಂದ ಆತನು ಅಮೂರ್ತಿಕಸೂಕ್ಷ್ಮನಾಗುತ್ತಾನೆ.

ಸೂಕ್ಷ್ಮಲೋಭ (೧೦-೬೩ ವ)—ಹತ್ತನೆಯ ಗುಣಸ್ಥಾನವನ್ನು ಪ್ರವೇಶಿಸುವ ಮುನಿಯಲ್ಲಿ ಇದು ಉಂಟಾಗುತ್ತದೆ. ಸಂಜ್ವಲನಸೂಕ್ಷ್ಮಲೋಭದ ಹೊರತು ಮಿಕ್ಕ ಎಲ್ಲ ಕಷಾಯಗಳು ಉಪಶಮವಾಗಿರುವ ಅಥವಾ ಕ್ಷಯಗೊಂಡಿರುವ ಮುನಿಯಲ್ಲಿ ಇದು ಉಂಟಾಗುತ್ತದೆ.

ಸೂಕ್ಷ್ಮಸಾಂಪರಾಯ (೧೦-೧೪ವ)-ಈಗುಣಸ್ಥಾನವನ್ನು ಪ್ರವೇಶಿಸಿದ ಮುನಿಯು ಸಾಮಾಯಿಕ ಮತ್ತು ಛೇದೋಪಸ್ಥಾಪನಾಚಾರಿತ್ರವು ಇಲ್ಲದಂತಾಗಿ ಅಧಿಕ ಪರಿಣಾಮಶುದ್ಧಿಯಾಗಿರುವುದರಿಂದ ಸೂಕ್ಷ್ಮಸಾಂಪರಾಯ ಚರಿತ್ರಯುಕ್ತವಾದ ಸೂಕ್ಷ್ಮಸಾಂಪರಾಯಕ್ಷಪಕಗುಣಸ್ಥಾನಿಯಾಗುತ್ತಾನೆ. ಇಲ್ಲಿ ಸೂಕ್ಷ್ಮಸಂಜ್ವಲನಲೋಭವನ್ನು ಸಹ ನಾಶಮಾಡಿ ಆ ಮುನಿಯು ಸಂಪೂರ್ಣಮೋಹದ ನಾಶವಾದುದರಿಂದ ವೀತರಾಗದ್ವೇಷ ಭಾವನೆಗಳಿಂದ ಯಥಾಖ್ಯಾತಚಾರಿತ್ರಧಾರಕನಾಗುತ್ತಾನೆ. ಆದರೆ ಕೇವಲಜ್ಞಾನದ ಉದಯವಾಗದೆ ಇರುವುದರಿಂದ ಕ್ಷೀಣಕಷಾಯ ವೀತರಾಗಛದ್ಮಸ್ಥನೆಂದು ಹೇಳಿಸಿಕೊಳ್ಳುತ್ತಾನೆ.

ಸೂಕ್ಷ್ಮಸಾಂಪರಾಯಕ್ಷಪಕ (೧೦-೧೪ ವ)—ಕ್ಷಪಕಶ್ರೇಣಿಯನ್ನು ಏರಿದ ಹತ್ತನೆಯ ಗುಣಸ್ಥಾನದಲ್ಲಿರುವ ಆತ್ಮನು. ಅವನು ಸಂಜ್ವಲನಲೋಭವನ್ನು ಕ್ಷೀಣಗೊಳಿಸಿರುತ್ತಾನೆ.

ಸೂಕ್ಷ್ಮಸಾಂಪರಾಯಸಂಯಮಸಮನ್ವಿತಸೂಕ್ಷ್ಮಸಾಂಪರಾಯಕ್ಷಪಕ (೧೦-೧೪ ವ)— ಸೂಕ್ಷ್ಮಸಾಂಪರಾಯಚಾರಿತ್ರದಿಂದ ಕೂಡಿದ ಸೂಕ್ಷ್ಮಲೋಭವನ್ನು ಸಹ ನಾಶಮಾಡುವ ಮುನಿಗಳು ಅಂದರೆ ಸೂಕ್ಷ್ಮಲೋಭ ಸಂಜ್ವಲನವನ್ನು ನಾಶಮಾಡಿ ಯಥಾಖ್ಯಾತಚಾರಿತ್ರವನ್ನು ದೊರಕಿಸಿಕೊಳ್ಳುವ ಪರಿಣಾಮವು ಪ್ರಾಪ್ತವಾಗಿರುವ ಮುನಿಗಳು.

ಸೂರ್ಯಪ್ರಭ (೧೫-೩ ವ)—ಭರತ ಚಕ್ರವರ್ತಿಯ ಬೆಳ್ಗೊಡೆ.

ಸೇನಾನಿರತ್ನ (೧೧-೩ ವ)—ಇದು ಸಜೀವರತ್ನವು. ಇವನು ಚಕ್ರವರ್ತಿಯ ಸೇನಾಪತಿ.

ಸೌಧರ್ಮಕಲ್ಪ (೨-೧೭ ವ)- ಊರ್ಧ್ವಲೋಕದೊಳಗಿನ ಮೊದಲನೆಯ ಸ್ವರ್ಗ.

ಸೌಧರ್ಮೇಂದ್ರ (೭-೪೧)— ಮೊದಲನೆಯ ಸ್ವರ್ಗದ ಇಂದ್ರನು. ಇವನು ಒಂದು ಭವಧಾರಣಮಾಡಿ ಮೋಕ್ಷಕ್ಕೆ ಹೋಗುತ್ತಾನೆ.

ಸೌನಂದಕ (೧೧-೩ ವ)—ಇದು ಚಕ್ರವರ್ತಿಯ ಆಯುಧಶಾಲೆಯಲ್ಲಿ ಹುಟ್ಟಿದ ಗದೆ. ಇದು ವಜ್ರಮಯವಾಗಿರುತ್ತದೆ.

ಸೌಮನಸ (೩-೭೮ ವ)—ಇದು ಊರ್ಧ್ವಗ್ರೈವೇಯಕದ ಮೂರು ಭಾಗಗಳಲ್ಲಿ ಎರಡನೆಯದು. ಇದಕ್ಕೆ ಊರ್ಧ್ವಮಧ್ಯಮನವಮಗ್ರೈವೇಯಕವೆನ್ನುತ್ತಾರೆ.

ಸೌಮನಸವನ (೧-೪೯ ವ)—ಮೇರುಪರ್ವತದ ನಂದನವನದ ಮೇಲೆ ಅರವತ್ತು-ಮೂರುಸಾವಿರ ಯೋಜನದ ಮೇಲೆ ಸೌಮನಸವನವಿದೆ.

ಸ್ತೋಕ (೬-೪೮ ವ)—ಏಳು ಉಚ್ಛ್ವಾಸಗಳಿಂದ ಒಂದು ಸ್ತೋಕವು.

ಸ್ತ್ರೀರತ್ನ (೧೧-೩ ವ)— ವಿದ್ಯಾಧರ ಕುಲದಲ್ಲಿ ಹುಟ್ಟಿದ ಸುಂದರ ಯುವತಿ. ಇವಳು ಚಕ್ರವರ್ತಿಯ ಪಟ್ಟದ ಅರಸಿಯಾಗುತ್ತಾಳೆ.

ಸ್ಥಾನಲಾಭ (೧೫-೧೬ ವ)— ಜಿನದೀಕ್ಷೆಪಡೆದ ಭವ್ಯನು ಪಾರಣೆಗಾಗಿ ತನ್ನ ಮನೆಗೆ ಹೋಗುತ್ತಾನೆ. ಅದು ಆತನ ಸ್ಥಾನಲಾಭ.

ಸ್ಥಿತಿ (೧೬-೪೯ ವ)— ಎದ್ದು ನಿಂತು ಶರೀರದ ಮೇಲಿನ ಮಮತ್ವವನ್ನು ತ್ಯಜಿಸುವುದು.

ಸ್ಥಿತಿಖಂಡನ (೧೦-೧೪ ವ)-ಪೂರ್ವದ ಕರ್ಮನಿಷೇಕಗಳ ಶಕ್ತಿಯನ್ನು ಕುಂದಿಸಿ ಅವುಗಳನ್ನು ಕೆಳಮಟ್ಟಕ್ಕೆ ತರುವುದು. ಇಲ್ಲಿ ನಿಷೇಕವೆಂದರೆ ಒಂದು ಸಮಯದಲ್ಲಿ ಹುಟ್ಟುವ ಎಲ್ಲ ಕರ್ಮಪುದ್ಗಲಗಳು.

ಸ್ಥಿರ (೧೬-೪೯ ವ)— ಈ ಕರ್ಮದ ಉದಯದಿಂದ ಶರೀರದೊಳಗಿನ ಧಾತು ಮತ್ತು ಉಪಧಾತುಗಳು ಸ್ಥಿರವಾಗಿ ಉಳಿಯುತ್ತವೆ.

ಸ್ಯಾದ್ವಾದ (೧೬-೧೯) ಸಪ್ತಭಂಗಿನ್ಯಾಯ.

ಸ್ವಗುರುಸ್ಥಾನಸಂಕ್ರಾಂತಿ (೧೫-೧೫ ವ)- ಈ ಕ್ರಿಯೆಯಲ್ಲಿ ಆಚಾರ್ಯಪದವನ್ನು ತ್ಯಾಗಮಾಡಿ ಶ್ರೇಷ್ಠಮುನಿಗಳಿಗೆ ಮಾನ್ಯವಾದ ಯೋಗ್ಯ ಶಿಷ್ಯನನು ಕರೆದು ಅವನ ಮೇಲೆ ಗಣೋಪಗ್ರಹಣ ಭಾರವನ್ನು ಇರಿಸುವುದು.

ಸ್ವಸ್ತಿಕ (೬-೧೦೬ ವ) ಸ್ವಸ್ತಿಕಾಕಾರದ ಮನೆ.

ಸ್ವಾಧ್ಯಾಯ (೬-೩೩ ವ)-ಆತ್ಮನ ಹಿತದ ದಿಸೆಯಿಂದ ಆಗಮಗಳ ಪಠಣ, ಮನನ ಮಾಡುವುದು.

ಹರಿವರ್ಷ (೧-೪೮ ವ)— ಈ ಕ್ಷೇತ್ರವೂ ಮಹಾಮಹಿವತ್ ಮತ್ತು ನಿಷಧ ಪರ್ವತಗಳ ಮತ್ತು ಪೂರ್ವಪಶ್ಚಿಮ ಸಮುದ್ರಗಳ ನಡುವೆ ಇರುತ್ತದೆ. ಇದು ಮಧ್ಯಮ ಭೋಗಭೂಮಿ.

ಹಸ್ತಿರತ್ನ (೧೧-೩ ವ)-ಸಿಂಹಾದಿಗಳಿಗೆ ಅಜಿಂಕ್ಯವಾದ ಆನೆಯೆಂಬ ರತ್ನ. ಇದು ವಿಜಯಾರ್ಧಪರ್ವತದಲ್ಲಿ ಹುಟ್ಟುತ್ತದೆ. ಇದು ಸಜೀವರತ್ನ.

ಹಾಮಾಧಿಕ್ಕಾರದಂಡ (೮-೭೪)— ಮೊದಲನೆಯ ಐದು ಮನುಗಳು " ಹಾ " ಶಬ್ದೋಚ್ಚಾರದಿಂದ ಪ್ರಜೆಗಳನ್ನು ಅಪರಾಧಗಳಿಂದ ಪರಾವೃತ್ತಗೊಳಿಸಿದರು. ಎರಡನೆಯ ಐದು ಮನುಗಳು ' ಹಾಮಾ ' ಶಬ್ದೋಚ್ಚಾರದಿಂದ ಆ ಕಾರ್ಯಮಾಡಿದರು. ಮೂರನೆಯ ಐದು ಮನುಗಳು ಈ ಕಾರ್ಯಕ್ಕೆ " ಹಾಮಾಧಿಕ್ " ಎಂಬ ಶಬ್ದಗಳನ್ನು ಉಪಯೋಗಿಸಿದರು. ಭರತ ರಾಜನು ಅನೇಕ ಶಿಕ್ಷೆಗಳನ್ನು ವಿಧಿಸಿ ಪ್ರಜೆಗಳನ್ನು ಅಪರಾಧಗಳಿಂದ ಪರಾವೃತ್ತಗೊಳಿಸಿದನು.

ಹಿಮವಾನ್ ಪರ್ವತ (೧-೪೮ ವ)-ಈ ಪರ್ವತವು ಪೂರ್ವ-ಪಶ್ಚಿಮವಾಗಿ ಹಬ್ಬಿದೆ. ಇದರ ಎರಡೂ ತುದಿಗಳು ಲವಣಸಮುದ್ರವನ್ನು ಮುಟ್ಟಿವೆ. ಇದು ಭರತಹೈಮವತ ಕ್ಷೇತ್ರಗಳ ಮೇರೆಯಲ್ಲಿದೆ. ಇದಕ್ಕೆ ಬಂಗಾರದ ಬಣ್ಣ ವಿದೆ. ಇದರ ನಿಲುವಿಕೆ ನೂರು ಯೋಜನ.

ಹಿರಣ್ಯಗರ್ಭ (೭-೨೬)—(೧) ಪ್ರಭುವು ಗರ್ಭದಲ್ಲಿರುವಾಗ ಸುವರ್ಣವೃಷ್ಟಿಯಾಗಿರುವುದರಿಂದ ಅವರಿಗೆ ಹಿರಣ್ಯಗರ್ಭವೆಂದು ಹೆಸರು ಬಂದಿದೆ.

ಹಿರಣ್ಯಗರ್ಭ ( ೧೩-೧೫ ವ )—(೨) ಇಂದ್ರನು ಶ್ರೀ-ಹ್ರೀ. ಮುಂತಾದ ದೇವತೆಗಳು ಶೋಧಿಸಿದ ಮಹಾದೇವಿಯ ಗರ್ಭದಲ್ಲಿ ಪ್ರವೇಶಿಸುತ್ತಾನೆ. ಅದಕ್ಕೂ ಪೂರ್ವದಲ್ಲಿ ಆರು ತಿಂಗಳ ವರೆಗೆ ಕುಬೇರನು ಮಹಾದೇವಿಯ ಅಂತಃಪುರದ ಅಂಗಳದಲ್ಲಿ ರತ್ನವೃಷ್ಟಿಮಾಡುತ್ತಾನೆ. ಆ ಮೇಲೆ ಇಂದ್ರನು ಗರ್ಭವನ್ನು ಪ್ರವೇಶಿಸುತ್ತಾನೆ. ಇದಕ್ಕೆ ಹಿರಣ್ಯಗರ್ಭವೆಂದು ಹೇಸರು.

ಹುಂಡಸಂಸ್ಥಾನ (೫–೯೦)—ಶರೀರದ ಅಂಗೋಪಾಂಗಗಳನ್ನು ಅತಿಕುರೂಪಗೊಳಿಸುವ ಕರ್ಮಗಳ ಉದಯವು.

ಹೇಯ (೧-೪)—ಮಿಥ್ಯಾತ್ವಾದಿ ದೋಷಗಳಿಗೆ ಹೇಯವೆನ್ನುತ್ತಾರೆ.

ಹೈಮವತ ( ೧–೪೮ ವ )— ಈ ಕ್ಷೇತ್ರದ ದಕ್ಷಿಣಕ್ಕೆ ಹಿಮವತ್ ಪರ್ವತವೂ ಉತ್ತರಕ್ಕೆ ಮಹಾಹಿಮವತ್ ಪರ್ವತವೂ ಪೂರ್ವಪಶ್ಚಿಮಗಳಲ್ಲಿ ಸಮುದ್ರಗಳೂ ಇರುತ್ತವೆ. ಇದು ಜಘನ್ಯಭೋಗಭೂಮಿಯು.

(೧–೪೮ ವ)—ರುಕ್ಮಿ ಮತ್ತು ಶಿಖರಿ ಪರ್ವತಗಳ ಮತ್ತು ಪೂರ್ವ ಪಶ್ಚಿಮ ಸಮುದ್ರಗಳ ನಡುವಿನ ಕ್ಷೇತ್ರ ಇದು ಜಘನ್ಯ ಭೋಗಭೂಮಿ.



## ಅನುಬಂಧ ೩

# ಆದಿಪುರಾಣದೊಳಗಿನ

## ಕಠಿಣಶಬ್ದಗಳ ಕೋಶ.

### ಅ

ಅಕೃಷ್ಟಪಚ್ಯ (೬-೨೭ ವ)-ಕೃಷಿಮಾಡದೆ ಬೆಳೆಯುವ

ಅಕ್ಷೂಣ (೧೦-೬)- ಕೊರತೆಯಿಲ್ಲದ, ಕಡಿಮೆಯಿಲ್ಲದ.

ಅಗಲು (೨-೭೧ ವ)-ತಟ್ಟೆ, ಬಡಿಸಿದ

ಅಗುಂದಲೆ (೧-೫೦)-ಅತಿಶಯ (೪-೮೮)

ಅಗುರ್ವು (೧-೨)-ಭಯಂಕರ (೫-೮೭)

ಅಗ್ಗಲಿಸು (೨-೧೧೩)-ಹೆಚ್ಚಿಸು. (೮-೪) ಉನ್ನತಿ ಹೊಂದು.

ಅಂಕ (೬-೮೯)-ಪ್ರಸಿದ್ಧ.

ಅಂಕೆಗೊಳ್ (೪-೧೮)-ಕೈವಶವಾಗು, ಆಳುವಿಗೆ ಬರು

ಅಂಗಡ (೨-೧೦೬ ವ)-ರಟ್ಟೆಬಳೆ.

ಅಂಗಹಾರ (೯-೭೯)-ನಟನೆ, ನೃತ್ಯ.

ಅಚ್ಚಿಗ (೧೭-೭೭)-ವ್ಯಥೆ, ಭ್ರಮೆ.

ಅಚ್ಚಿಱು (೧೭-೬)-ಅಚ್ಚೊತ್ತು, ಮುದ್ರೆಹಾಕು ಪಂ. ಭಾ. ೪-೫೦

ಅಜ್ಜರಿಗಟ್ಟಿ (೪-೫೪ ವ)-ಹೇಸರಗತ್ತೆ

ಅಂಜವೆ (೧೪-೨೫)-ಅಂಜುಬುರುಕತನ

ಅಟ್ಟಾಲ (೬-೧೦೪)-ಬುರುಜು.

ಅಡಗು (೩-೩೪)-ವೈಗರೆ

ಅಡಗು (೫-೮೬)-ಮಾಂಸ.

ಅಡಪ (೩-೭೩ ವ)-ಸಂಚಿ, ಎಲೆ ಅಡಕೆ ಹಾಕುವ ಚೀಲ, ಚಂಚಿ.

ಅಡರ್ (೭-೧೪ ವ)-ಏರು.

ಅಡರ್ಪು (೬-೭೭ ವ)-ಆಶ್ರಯ.

ಅಣ್ಪು (೧೭-೧೭)-ಲೇಪನ

ಅತ್ತಳಗ (೪-೧೦)-ವ್ಯಥೆ, ಕಳವಳ. (ಪಂ. ಭಾ. ೪-೨೯, ೧೦೦; ೫-೧೦).

ಅತ್ಯಾಸನ್ನ (೯-೮ ವ)- ಬಹಳ ಸಮೀಪಿಸಿದುದು.

ಅದಗುಂತಿ (೭-೨೫)-ಅತಿಶಯ.

ಅದವಳಲ್ (೧೭-೭೭)-ದುಃಖ.

ಅದಿಮುರ್ತ್ತೆ (೧೧-೧೬೮)-ಆದಿರ್ಗಂತಿ ಮಾಧವಿ, ವಸಂತದೂತಿ.

ಅಧಿವಾಸ (೮-೬೯ ವ)-ಕಲಶದ ಮೇಲೆ ಮುಚ್ಚಿದ ವಸ್ತ್ರ.

ಅಧಿವಾಸಿತ (೧೭-೨೪)-ಮುಚ್ಚಿದ.

ಅಧಿಷ್ಠಿಸು (೮-೬೯ ವ)-ಸ್ಥಾಪಿಸು.

ಅಧ್ಯಾಸಿತ (೯-೬೦ ವ)- ನಿಶ್ಚಯಿಸಿದ.

ಅನಪವರ್ತಿ (೮-೪ ವ)-?

ಅನಾಗತಮತಿ (೫-೨)-ಭವಿಷ್ಯಜ್ಞ.

ಅನಾರತ (೧೬-೪೪)-ತಡೆಯಿಲ್ಲದ.

ಅನೀಕ (೧೪-೪೩) ಸೈನ್ಯ.

ಅನುಗೆಯ್ದು (೧೭-೧೩)-ಸಿದ್ಧನಾಗಿ.

ಅನುಭಾವ (೯-೭೨)-ವಿಶಿಷ್ಟಭಾವಗಳ ಮೂಲಕ ಅಶ್ರು, ರೋಮಾಂಚ ಮು. ಬಾಹ್ಯಪರಿಣಾಮಗಳು ಗೋಚರವಾಗುವುದು.

ಅನುವದಿಸು (೧-೧೪)-ಉಚ್ಚರಿಸು.

ಅನುವಿಸು ( ೧೨-೪೧; ೯-೧೦೬ ) ಅನುಸರಿಸು. (ಪಂ ಭಾ. ೪-೧೦೩)

ಅನೂಪ ( ೮-೬೩ ವ )-ನೀರುಣ್ಣುವ ಭೂಮಿ.

ಅನೇಕಪ ( ೩-೪೦ ವ )-ಆನೆ.

ಅಂತರೀಯ ( ೧೧-೧೪೮ )-ಉಟ್ಟುಕೊಳ್ಳುವ ವಸ್ತ್ರ, ಉಡುಪು.

ಅಂತರ್ಮುಹೂರ್ತ ( ೧೬-೪೯ ವ )- ಸಮಯಂಕೂಡೆ ಮುಹೂರ್ತದೊಳಂತರ್ಮುಹೂರ್ತಮಕ್ಕುಂ ( ಪಂ. ರಾ. ೧-೫೧ )

ಅಂತರ್ವತ್ನಿ ( ೭-೩೧ )-ಗರ್ಭಿಣಿ.

ಅಂತರ್ವಂಶಿಕ ( ೨-೨ ವ)-ಬಂಧುಜನ, ಬಾಂಧವ.

ಅನ್ವವಾಯ ( ೪-೫೫ )-ವಂಶ.

ಅಪಘನ ( ೪-೬೫ )-ಅವಯವ.

ಅಪ್ಪಯಿಸು ( ೫-೨೧ ವ)-ಒಪ್ಪಿಸು.

ಅಭವ (೯-೧೧೧) ಜನ್ಮವಿಲ್ಲದವ. ಜಿನ.

ಅಭವ್ಯ ( ೨-೩೪ )-ಮೋಕ್ಷಗಾಮಿಯಲ್ಲದವನು.

ಅಭಿಚಾರ ( ೧೧-೫ )-ಮಾರಣ.

ಅಮರ್ ( ೧-೩ )-ಹೊಂದಿಕೊಂಡಿರು.

ಅಯುತ ( ೬-೧೩ ವ )-ಸಾವಿರ.

ಅರರೀಪುಟ (೧೩-೩೭)--ಕವಾಟಪುಟ, ಬಾಕಿಲ ಹಲಗೆ.

ಅರವುರಂ-( ೪-೧೭ )-ಅರ್ಧಮರ್ಧ.

ಅರೆಪೊರೆಕ ( ೧೧-೬೪ವ )-ಅರ್ಧವ್ಯಾಪಿಸಿದುದು. ಪಂ. ಭಾ. ೩-೫

ಅಱಿಕೆ ( ೬-೫ )--ಪ್ರಸಿದ್ಧಿ, ಶ್ರೇಷ್ಠ ಪಂ. ಭಾ. ೧-೨೫

ಅಱಿವಂಕುಡಲ್ ( ೫-೫೦ )— ಪ್ರತಿಬೋಧಿಸಲು.

ಅಱಿ ( ೧-೫೨ )-ರೂಪಗೇಡು.

ಅರ್ತಿವಡು ( ೧೪-೪೩ ವ )-ಪ್ರೀತಿಸು.

ಅರ್ಥ ( ೫-೫೪ )-ಅಭಿಪ್ರಾಯ.

ಅರ್ಧಗುಚ್ಛ(೮-೫೪ವ)-ಇಪ್ಪತ್ತುನಾಲ್ಕು ಎಳೆಗಳುಳ್ಳ ಹಾರ ( ಪೂ. ಪು. ೧೬-೬೧)

ಅರ್ಧಮಾಣವಕ ( ೮-೫೪ ವ )-ಹತ್ತು ಎಳೆಗಳುಳ್ಳ ಮುತ್ತಿನ ಹಾರ ( ಪೂ. ಪು. ೧೬-೬೧ ).

ಅರ್ಧಹಾರ(೮-೫೪ವ) ಅರವತ್ತುನಾಲ್ಕು ಎಳೆಗಳುಳ್ಳ ಹಾರ ( ಪೂ. ಪು. ೧೬-೫೯ ),

ಅಲಕ್ತಕ ( ೧೧-೧೨೬ ವ )-ಅಲತಿಗೆ.

ಅಲಂಪು ( ೭-೪೭ )-ಸೊಗಸು.

ಅಲಾಬೂ ( ೨-೯ ವ ). ಹಾಲುಗುಂಬಳ

ಅಲೆದು ( ೬-೪ )-ತಿರುಗಾಡಿಸಿ.

ಅಲೆಪ ( ೪-೨೧ ವ)-ಬೀಸುವಿಕೆ, ತೀಟ.

ಅವಗಾಹ ( ೧-೬೨ ವ ) ಉದ್ದಳತೆ.

ಅವಘಾಟಕ (೮-೫೪ ವ)— ಮಧ್ಯದಲ್ಲಿ ಕ್ರಮವಾಗಿ ಒಂದಕ್ಕಿಂತ ಒಂದು ಸಣ್ಣನಾಗಿರುವ ಮುತ್ತುಗಳಿಂದ ಮಾಡಲ್ಪಟ್ಟ ಯಷ್ಟಿಗೆ ( ಹಾರಕ್ಕೆ) ಅವಘಾಟಕವೆಂಬ ಹೆಸರು. (ಪೂ. ಪು. ೧೬-೫೩).

ಅವಚಱಿತು (೨-೩೭)-ಜುಗುಪ್ಸೆಪಟ್ಟು, ಅಸಹ್ಯಪಟ್ಟು. ( ಪಂ. ರಾ. ೧೦-೧೨೧ ).

ಅವಷ್ಟಂಭಿಸು ( ೧೩-೫೬ವ )— ಆತುಕೊಳ್ಳು.

ಅವಸರ ( ೯–೧೦ )–ಸಮಯ.
ಅವಹಿತ ( ೨–೪೮ ವ )–ವಕ್ಷ, ಗಮನ ಕೊಟ್ಟ.
ಅವಿನಾಣ (೩–೪೩ಪ)–ಗುರುತು, ಕುರುಹು, ಅಭಿಜ್ಞಾನ (ಶಾಂ. ಪು.) ೮–೧೪೫ (ಪಂ. ಭಾ. ೩.೪ ವ)
ಅವ್ವಳಿಸು ( ೪–೧೨ )— ಮೇಲೆ ಬೀಳು ಮುಸುಕು, ವ್ಯಾಪಿಸು, ಹರಡು. (ಪಂ. ಭಾ. ೩–೫೩, ೬–೫೯ )
ಅಸಕಟಿ (೮–೧೫ವ)–ಕೈಮೀರು, ಮೀರು, ದಾಟು (ಪಂ, ರಾ. ೬–೧೨೦)
ಅಸವಸ ( ೩–೩೬ ವ )–ತ್ವರೆ.
ಅಸಿಧೇನು (೨–೧೪ ವ)–ಸುರಿಗೆ, ಮಚ್ಚೆ.
ಅಸಿರು (೭–೩೧)–ತೆಳುವಾದ(೧೨–೧೫)
ಅಳಚು ( ೧೦–೧೫ )–ನಾಶವಾಗು, ಭಯಪಡು.
ಅಳವಡಿಸು ( ೬–೫೬ )—ಸರಿಪಡಿಸಿ ಕೊಳ್ಳು ( ಪಂ. ರಾ. ೫–೬೦ )
ಅಳವು ( ೬–೨೨ ವ )–ಶಕ್ತಿ.
ಅಳೀಕ ( ೧೪–೮೧ ವ )–ಸುಳ್ಳು.
ಅಳುಂಬಂ(೭–೧೦೧)–ಅತಿಶಯ, ವಿಶೇಷ
ಅಳುರ್ವ ( ೨–೫೯ )–ವ್ಯಾಪಿಸುವ (ಪಂ.ಭಾ. ೧–೨೩ ೫–೮೬ ಗ,)
ಅಳುರ್–ವ್ಯಾಪಿಸು(ಆವರಣೇ.ಶ.ಮ.ದ)
ಅಳ್ಪು (ಅಟ್ಟು) ( ೮–೬೨ )–ದಹನ, ಮಿತಿಮೀರು.
ಅಳ್ಳಾಡು ( ೮–೭೦ )–ತೂಗು.
ಅಳ್ಳಿಟು ( ೮–೨೪ ವ )–ಅದುರು. ( ಸ್ಪಂದನೇ. ಶ. ಮ. ದ. )
ಅಳ್ಳೆರ್ದೆ (೨–೭೩)–ನಡುಗುವ ಹೃದಯ ( ೧೨–೧೬ ).
ಅಳ್ಳೆವಿಳ್ಳೆಯಾಗು (೧೧–೬೮ ವ)–ಅತ್ಯಾಯಾಸ ಹೊಂದು ( ಪಂ. ಭಾ. ೧೨–೪ ವ ).
ಅಳ್ಳೀಚು ( ೭–೧೨೧)–ಅಳ್ಳಾಟದ ಏಟು. ( ಪಂ. ಭಾ. ೫ ೬೨ ).
ಅಱಿವೆ ( ೬–೯೫ )–ಬಿಡುಗಂಡಿ.
ಅಱ್ಕುಮೆ ( ೧೧–೧೧೫ )–ಅಜೀರ್ಣ. (ಪಂ. ಭಾ. ೧–೫೬, ೧೨–೨೧೯)
ಅಱ್ಪು–( ೧೩–೮೬ )–ಸುಡು.

**ಆ**

ಆಕೃತಿಸಂವೃತಿ (೯–೧೦೦ ವ )–ರೂಪು ಅಡಗಿಸುವಿಕೆ.
ಆಖಂಡಲ ( ೪–೩ )–ಇಂದ್ರ (೭–೧೭ ವ)
ಆಘಾಟ ( ೬–೫೭ ವ )–ಸೀಮೆ, ಮೇರೆ.
ಆಂಗಿಕ(೯–೨೮)–ಶರೀರಕ್ಕೆಸಂಬಂಧಿಸಿದ.
ಅಜವಂಜವ ( ೪–೬೭ ವ )–ಸಂಸಾರ. ( ಶಾ. ಪು. ೯–೧೮ ಅ. ಟೀ. ) ಪು. ೨–೬೯ ).
ಆಜಿ ( ೧೪–೮೨)–ಯುದ್ಧ.
ಆಟಂದು ( ೯–೬೦ )—ಮೇಲೆ ಬಿದ್ದು. (ಪಂ. ಭಾ. ೪–೧೧ ) ( ಶಾಂ. ಪು. ೬–೩೪ ವ ).
ಆಟಿಸು ( ೫–೭೯ ) ಬಯಸು, ಇಚ್ಛಿಸು. ( ೭–೨೭ ವ ರಗಳೆ)
ಆಟೋಪ ( ೭–೫೭ ವ )–ಶಕ್ತಿ, ಆವೇಶ.
ಆತೋದ್ಯ ( ೮–೩ ವ )–ವಾದ್ಯ ವಿಶೇಷ.
ಆದರದೆ ( ೬–೮೦ )–ಪ್ರಯತ್ನದಿಂದ ( ಕು. ಸಂ. ೬–೪೧ ).
ಆದೃಷ್ಟ (೮–೪೯ )–ಸೊಕ್ಕಿದ.
ಆದೊರೆಯ ( ೭–೧೧೧ )–ಅಂತಹ.
ಆಧೇಯ(೧೪–೪೩ವ)ಆಶ್ರಯ, ಶ್ರದ್ಧೇಯ ನಂಬಬಹುದಾದ.

ಅನಕ (೭-೩೯)-ದುಂದುಭಿ.

ಅಂತುಕೊಳ್ (೯-೭೯ ವ) ಹಿಡಿದು ಕೊಳ್ಳು, ಇಟ್ಟುಕೊಳ್ಳು.

ಅಂದೋಳ (೪-೫೪ ವ)-ಮೇಣೆ.

ಅಪ್ರೊತ್ತುಂ (೮-೧)-ಸದಾಕಾಲ.

ಆಮಲಕ (೧೩-೮೫)-ನೆಲ್ಲಿ.

ಆಮ್ನಾಯ (೨-೧೮)-ವಂಶಪರಂಪರೆ. (೮-೩೪)-ವಂಶ.

ಆಯಿಲ (೧-೫೨)-ರೋಗ?

ಆಯೋಧನ (೮-೩ ವ)-ಯುದ್ಧ.

ಆರಭಟ (೯-೨೬)-ಮಾಯೆ, ಇಂದ್ರಜಾಲ, ಜಗಳ, ಕೋಪ, ಕಳವಳ, ಇವುಗಳಿಂದ ಕೂಡಿ ಉದ್ಧತವಾಗಿರುವುದು.

ಆರಂಭ (೩-೬೮)-ಉದ್ಯೋಗ, ಒಕ್ಕಲುತನ.

ಆರಯ (೧೨-೪೫)-ವಿಚಾರಣೆ.

ಆರಾವ (೧೦-೧೮ ವ)-ಧ್ವನಿ.

ಆರೊಗಿಸು (೧೧-೨೭)-ಊಟಮಾಡು.

ಆರ್ಮ (೨-೨೦)-ಸಂರಕ್ಷಣೆ.

ಆಲಯ್ಸು (೧೧-೪೦)-ಕಿವಿಗೊಟ್ಟು ಕೇಳು.

ಆಲಾನಸ್ತಂಭ (೭-೧೨೪)- ಆನೆಕಟ್ಟುವ ಕಂಬ.

ಆಲೀಢ (೫-೭೧)-ನಿಲ್ಲುವ ಒಂದು ಕ್ರಮ.

ಆಷಾಢಕೀ (೬-೭೨ ವ)-ತೊಗರೆ.

ಆಸಂದಿ (೭-೨೭ ವ ರಗಳೆ)- ಆಸನ. (೭-೧೧೦).

ಆಸ್ಥಾಯಿಕೆ (೯-೫)-ಆಸ್ಥಾನ, ಸಭೆ.

ಆಳಿಸು (೪-೨೪ ವ)-ಬಂಧಿಸು. (ಪಂ. ರಾ; ೯-೫೭).

ಆಳುಮಿರ್ (೩-೩೦)-ಸೇವಕನಾಗು.

**ಇ**

ಇಡುವು (೭-೭೩) ·ರಾಶಿ? (ಪಂ. ಭಾ. ೧೨-೫೮ ವ. ೧೩-೫೩ ವ.).

ಇದುರಿತು (೨-೩೧)-ಎದುರಿಗಿರುವುದು.

ಇಂದೋಳ (೪-೯)-ರಾಗವಿಶೇಷ.

ಇಂದ್ರಕೋಶ (೧೩-೫೭ ವ)-ತವಗ.

ಇಂದ್ರಚ್ಛಂದ (೮-೫೪ ವ) ಸಾವಿರದ ಎಂಟು ಎಳೆಗಳುಳ್ಳ ಹಾರವು (ಪೂ. ಪು. ೧೬-೫೬) ಇದನ್ನು ದೇವೇಂದ್ರ ಚಕ್ರವರ್ತಿ ಮತ್ತು ತೀರ್ಥಂಕರರು ಧರಿಸುತ್ತಾರೆ.

ಇಂಬುಕೆಯ್ (೩-೪೩)- ಒಪ್ಪಿಕೊಳ್ಳು (೮-೧೫).

ಇಂಬುಕ್ಕೈಸು (೧೨-೧೭)-ವ್ಯಾಪಿಸು.

ಇಮ್ಮನೆ (೬-೨೦)-ಸುಮ್ಮನೆ.

ಇಱಿಸಿಲ್ (೧೧-೭೭)-ತಂಗುಮನೆ.

ಇಱುಂಬು (೪-೯೨ ವ)-ಇಕ್ಕಟ್ಟಾದ ಪ್ರದೇಶ.

ಇರ್ಕುಳಿಗೊಳ್ (೮-೨೫)-ಆಕರ್ಷಿಸು (ಪಂ. ಭಾ. ೨-೮, ೭-೬೮).

ಇರ್ಕೆ (೫-೪೫)-ಮನೆ.

ಇರ್ಪೋಡು (೩-೩)-ಬಾಡು.

ಇಸುವೆಸ (೭-೨೧ ವ.)-ಆಜ್ಞಾಕಾರ್ಯ (ಪಂ. ರಾ. ೬-೧೭೪).

ಇಱಸು (೯-೧೫)-ಹೀನಾಯಗೊಳಿಸು.

ಇಟ್ಟು (೧-೫೨)-ಲೂಟಿ.

**ಈ**

ಈಟಿಕ್ಕೊಳ್ (೧-೮೪)- ಸೆಳೆದುಕೊಳ್ಳು.

**ಉ**

ಉಗಿ (೫-೮೫ ವ)-ಸುಲಿ, ಕೀಳು.

ಉಗಿಬಗಿಮಾಡು (೯-೪)-ಭೇದಿಸು, ಛಿದ್ರಿಸು.

ಉಚ್ಛಿತ್ತಿ (೧೦-೬೩ ವ)-ತುಂಡರಿಸುವುದು ನಾಶ.

ಉಡಿ ( ೫-೨೦ )-ಮುರಿ ( ಮೋಟನೇ. ಶ. ಮ. ದ. ).

ಉಡುಕ ( ೬-೫೧ )-ಕುಂದುವಿಕೆ.

ಉಡುಕು ( ೧೪-೧೦೩ )-ವಿಸ್ತಾರ, ಸುತ್ತಿಕೊಳ್ಳುವಿಕೆ.

ಉಡುಗು ( ೨-೧೪ )-ಕಡಿಮೆಮಾಡು, ಕಡಿಮೆಯಾಗು.

ಉಣಿಸು ( ೬-೧೮ )-ಊಟ. ( ಮ. ಉಣಾಸ ).

ಉಂಡಿಗೆ ( ೧೫-೩ ವ )-ಮುದ್ರೆ.

ಉತ್ಕ ( ೧-೬೩ )-ಬಯಸುವ.

ಉತ್ಕೀರ್ಣ (೧೪-೫೯ ವ)-ಕಂಡರಿಸಿದ.

ಉತ್ಥಾಪಿತ ( ೪-೭೮ ವ )-ನಿಲ್ಲಿಸಿದ.

ಉತ್ಸಂಗ ( ೭-೧೦೬ ವ )-ತೊಡೆ.

ಉತ್ಸೇಧ ( ೧-೬೨ ವ )-ಎತ್ತರ.

ಉದಂತ ( ೩-೮೮ ವ )-ವಾರ್ತೆ.

ಉದೀರ್ಣ ( ೮-೫೫ ವ )-ಹೆಚ್ಚಾದ. ( ಪಂ. ಭಾ. ೧೨-೧೧೬ ವ ).

ಉದ್ದಾನಿ ( ೫-೯೦ )-ಅತಿಶಯ.

ಉದ್ದೆಸ ( ೭-೮೫ )-ಹೇತು. ( ತ್ಸ. ) ಉದ್ದೇಶ.

ಉನ್ಮಗ್ನ ( ೧೩-೫೦ ವ)-ನೀರೊಳಗಿಂದ ಮೇಲೆ ಎದ್ದ.

ಉಪಚಿತ ( ೯-೬೦ ವ )-ಹೆಚ್ಚಾದ. ( ಪಂ. ಭಾ. ೧೧-೬೯ ).

ಉಪಪತ್ತಿ ( ೨-೨೨ ವ )-ಸಾಧನೆ, ಆಧಾರ, ತತ್ತ್ವ.

ಉಪಪದಪಂಚಕ ( ೮-೫೪ ವ )--ಸಮ ಅಥವಾ ಸದೃಶ ಆಕಾರದ ಐದು ವಸ್ತುಗಳ ಪ್ರಕಾರಗಳು. ( ಪೂ. ಪು.೧೬-೬೨, ೬೩, ೬೪ ).

ಉಪಪಾತತಲ್ಪ ( ೨-೭೨ ವ )—ಕಲ್ಪಗಳಲ್ಲಿ ದಿವಿಜರು ಹುಟ್ಟುವ ಹಾಸಗೆ.

ಉಪಭೋಗ ( ೮-೩ ವ )-ಒಂದು ಸಲ ಮಾತ್ರ ಅನುಭವಿಸಲು ಬರುವ ವಸ್ತು. ಹಣ್ಣು ಮುಂತಾದವು.

ಉಪರೋಧ ( ೮-೧೫ ವ )-ಒತ್ತಾಯ, ಬಲಾತ್ಕಾರ.

ಉಪಶೀರ್ಷಕ ( ೮-೫೪ ವ)—ಮಧ್ಯದಲ್ಲಿ ಕ್ರಮವಾಗಿ ಒಂದಕ್ಕಿಂತ ಒಂದು ದೊಡ್ಡದಾಗಿರುವ ಮೂರು ಮುತ್ತುಗಳುಳ್ಳ ಹಾರ ( ಪೂ. ಪು. ೧೬-೫೨ ).

ಉಪಹಾರ ( ೧೩-೮೨ ವ )-ಕಾಣಿಕೆ, ಮುಡಿಪು.

ಉಪಾಯನ ( ೪-೮೪ ವ )-ಕಾಣಿಕೆ, ಪಾವುಡ.

ಉಪಾಸಕ ( ೬-೬ )-ಶ್ರಾವಕ.

ಉಪ್ಪವಡಿಸು (೭-೨೮)-ನಿದ್ದೆಯಿಂದೇಳು.

ಉಬ್ಬದಿಗ, ಉಬ್ಬುದಿಗ (೧೩-೨೫)-ಅತಿಶಯ, ಪಿರಿದು.

ಉಬ್ಬರಿಸು ( ೧೪-೮೫ )-ಏಳು.

ಉರೋರುಹ ( ೮-೫೫ ವ )-ಮೊಲೆ.

ಉಚಿಚಲ್ಲಿ ( ೭-೧೯ )-( 'ಉರಚಲ್ಲಿ' ಯೆಂದಿರಬೇಕು ) ಎದೆಯೆಂಬ ಕನ್ನಡಿ.

ಉರ್ಕು ( ೩-೭೫ )-ಗರ್ವ, ಕೆಚ್ಚು, ಪರಾಕ್ರಮ.

ಉರ್ಚು ( ೬-೨೩ )-ಹೊರದೆಗೆ.

ಉಳ್ಕು (೧೨-೯೦)-ಬೀಳುತ್ತಿರುವ ಚುಕ್ಕೆ ( ತ್ಸ ). ಉಲ್ಕಾ.

## ಎ

ಎಗ್ಗ ( ೧೧-೧೩೭ )-ಮೂಢ.
ಎಂಜಲಿವೃಟು ( ೩-೩೪ ವ )-ತಿಂದುಳಿದುದು.
ಎಡಪು ( ೭-೧೨೬ ವ )-ಎಡಹು.
ಎಡಗಲಿಸು ( ೪-೮೫ )-ಹಿಂದೆಹಾಕು.
ಎಡಗಿಜ್ಝು (೭-೩೭ ವ)-ತುಂಬಾತುಂಬು.
ಎಡೆಯಾಡು ( ೮-೨೨ )-ಅಡ್ಡಾಡು, ಅಲೆದಾಡು.
ಎಡೆಯುಡುಗು ( ೩-೬೧ )-ಸಮಯಕಳೆ
ಎಡೆಯುಡುಗದೆ (೫-೩೨)-ಒಂದೇಸವನೆ, ಸಮಯ ತಪ್ಪಿಸದೆ.
ಎಡೆವೆತ್ತು ( ೨-೩೮ ವ )-ಸಮಯ ಸಾಧಿಸು.
ಎರೆ ( ೩-೪೩ )-ಬೇಡು ( ೮-೧೫ ವ )
ಎಱಕ ( ೭-೪೫ )-ಪ್ರೀತಿ.
ಎಱಂಕೆ ( ೧೧-೬೦ )-ಪಕ್ಕ, ರೆಕ್ಕೆ.
ಎಱೆವಿಱಿನಾಗು (೧೧-೬೮ ವ)-ಬಾಡು. ಕಾಂತಿಹೀನವಾಗು.
ಎಸಕ ( ೬-೮ )-ವ್ರತ, (೭-೮೮)-ಕಾರ್ಯ
ಎೞೆ ( ೭-೧೨೧ )-ಭೂಮಿ.
ಎಟಿಲ್ ( ೯-೩೧ )-ದಣಿ, ಕುಗ್ಗು.

## ಏ

ಏಲಾ ( ೬-೧೦೧ )-ಏಲಕ್ಕಿ.
ಏವ ( ೭-೫೫ )-ಮತ್ಸರ ( ಹ್ಯಾವ )
ಏವಯಿಸು ( ೪-೬೭ ವ )-ಬೇಸರು ( ೧೨-೨೩ ).

## ಒ

ಒಕ್ಕು ( ೬-೭೭ ವ )-ರಾಶಿಮಾಡು.
ಒಗೆ ( ೫-೬೪ )-ಹಾರು.
ಒಟ್ಟಜೆ ( ೪-೫೨ ವ )-ಪರಾಕ್ರಮ, ಗುಂಪು, ರಾಶಿ, (ಪಂ. ರಾ. ೧೩-೧೦೯ ಪ ).
ಒಡನಾಡಿ ( ೭-೧೨೭ ವ )-ಗೆಳೆಯ.
ಒಡಂಬಡು ( ೭-೧೨೫ )-ಹೊಂದಿಕೊಂಡಿರು, ಮೇಳವಾಗಿರು.
ಒಡರಿಸು ( ೭-೯೪ )-ಉಂಟುಮಾಡು.
ಒಡವೇಱು ( ೧-೫೯ )-ತುಂಬ ತುಂಬಿಕೊಳ್ಳು.
ಒಡೆಗಳೆ ( ೫-೨೪ )-ಏಕಕಾಲದಲ್ಲಿ ಮರಣಹೊಂದು.
ಒಡ್ಡಣ ( ೪-೪೧ ವ )-ಸೈನ್ಯ, ಯುದ್ಧ, ರಂಗ, ವ್ಯೂಹ ( ಪಂ. ರಾ. ೧೪-೯ ).
ಒಣರ್ ( ೨-೪೫ )-ತಿಳಿ, ಭಾವಿಸು. ( ಪಂ. ಭಾ. ೧೨-೨೭ ).
ಒತ್ತಂಬ(೪-೫೧)-ಬಲ್ಕಾತಾರ, ಒತ್ತಾಯ.
ಒತ್ತು ( ೯-೩೩ )- (ಸಂಗೀತ )ಕಾಲ.
ಒಸಲ್ ( ೩-೮೬ )-ಸಿಟ್ಟಾಗು.
ಒರಸು (೫-೧೯ )-ತಿಕ್ಕು.
ಒರ್ವೞಿ ( ೬-೪ )-ಏಕಕಾಲಕ್ಕೆ.
ಒವಜ ( ೧೧-೧೨೬ )-ಗುರು (ತ್ಸ), ಉಪಾಧ್ಯಾಯ.
ಒಸಗೆ ( ೧೧-೭ )-ಉತ್ಸವ, ಆನಂದ.

## ಓ

ಓಗಡಿಸು ( ೪-೯೨ )-ಕಳೆದುಹೋಗು, ( ಪಂ. ಭಾ. ೭-೬೯ ಶಾಂ.ಪು. ೮-೪೨, ೭-೧೦ ) ಹಿಂಜರಿ.
ಓಗಂಪಾಡುವ (೧೨-೫೦ )-ದ್ರುತಗತಿಯಿಂದ ಹಾಡುವ.
ಓರಂತೆ ( ೯-೬೦ )-ಒಂದೇ ತೆರನಾಗಿ

ಓವರಿ ( ೩–೨೧ ವ )–ಕೋಣೆ (ತ್ಸ).
ಅಪವರಕ.

ಓಸರಿಸು ( ೩-೩೦ )-ಸರಿಪಡಿಸು, ತಿದ್ದು, ಸವರು, ( ೯-೨೧ )-ದೂರ ಮಾಡು, ಓರೆಮಾಡು.

## ಔ

ಔಪರಿಷ್ಟಕ ( ೪-೧೨ )-ಮೇಲ್ಭಾಗ.

## ಕ

ಕಂಕೇಲಿ(೪–ರಗಳೆ.ಪು. ೮೪)–ಅಶೋಕ ವೃಕ್ಷ.

ಕಂಗು ( ೬–೭೨ ವ )-ಸವಣೆ.

ಕಟಕ (೪-೪೦)-ಕಡಗ. ೨. (೧೧-೩ವ) ದಂಡು. ೩. ಬೆಟ್ಟದ ತಪ್ಪಲು ( ೧೪-೧ ವ ).

ಕಟ್ಟೆಜುಂಪೆ ( ೫-೧೩ (-ಕಟ್ಟಿರುವೆ, ದೊಡ್ಡ ಇರುವೆ.

ಕಡಂಗು ( ೧-೮೧ )-ಆವೇಶಗೊಳ್ಳು, ಸಿಟ್ಟಾಗು.

ಕಡೆಗಣಿಸು(೯-೪೪)- ಅಲಕ್ಷ್ಯಮಾಡು.

ಕಣಿ ( ೯-೯೦ )-ತೊಡಕು. (ಪಂ, ಭಾ. ೭-೯೫ ).

ಕಂಡೂಲ ( ೧೩-೯ )-ಕಜ್ಜಿ.

ಕಣ್ಬೊಲ ( ೫-೬೫ )-ದೃಷ್ಟಿಪಥ, ನೋಟ.

ಕದಂಬಕ ( ೭-೩೦ )-ಸಮೂಹ.

ಕದಲಿಕಾ(೪-೨೪)-ಧ್ವಜ.(೧೧-೬೫ವ)

ಕಂಪಳಿ ( ೧೪-೧೨ ವ )-ಬಾವುಟ.

ಕನ್ನಡಿಸು ( ೭-೧೦ )-ಅಭಿನಯಿಸು.

ಕಪಿತ್ಥ ( ೧೧-೨೬ ವ )-ಬೆಳವಲ.

ಕಮ್ಮಾರಿಯೋಜ ( ೨-೬೧ )-ಕಮ್ಮಾರ.

ಕಯ್ಗೆಯ್ (೧೧-೧೨೪)-ಅಲಂಕರಿಸು.

ಕರಗ ( ೯-೧೨೬ )-ಕೊಡ, ಕಲಶ ( ೭-೨೧ ವ ).

ಕರಟ ( ೭-೨ ವ. ರಗಳೆ )-ಕುಂಭಸ್ಥಳ.

ಕರಟಿ ( ೧-೭೬ )-ಆನೆ.

ಕರಣ ( ೭-೧೨೦ )-ನೃತ್ಯಭಂಗಿ.

ಕರರುಹ ( ೧೨-೧೫ )-ಉಗುರು.

ಕರೆವೆರಸಿದ (೪-೩೬)- ಕರೆಸಹಿತವಾದ.

ಕರ್ಣಿಕಾರ ( ೧೧-೧೧೩ )-ಕೊಸಗು. ಬೆಟ್ಟದಾವರೆ;

ಕರ್ಬಾಳೆ (೧೧-೧೨೩ )-ಬಾಳದ ಬೇರು.

ಕಲಭ ( ೮-೩ ವ )-ಮರಿಯಾನೆ.

ಕಲಿಲ (೫-೪೧ವ)-ಬೆರೆತಿರುವ, ಕೂಡಿದ. ( ಪಂ. ರಾ. ೫-೪೦ ).

ಕಲ್ಲುರಿಗ ( ೫-೧೮ವ)-ಮಿಠಾಯಿಗಾರ, ರೇವಡಿಗಾರ.

ಕವರ್ ( ೨-೧೫ )-ಕಳವುಮಾಡು, ಸುಲಿ, ಸೂರೆಗೊಳ್ಳು.

ಕವರ್ತೆವೋ (೩-೩೪ ವ)-ಲೂಟಿಯಾಗಿ ಹೋಗು, ಕಳವಾಗಿ ಹೋಗು.

ಕವ್ವರೆಗೊಳ್(೧೧-೨೨)-ಭ್ರಮೆಗೊಳ್ಳು.

ಕಳಮ ( ೬-೭೨ )-ಬತ್ತ.

ಕಳ್ಳ ( ೫-೮೬ )-ಹೆಂಡ, ಮದ್ಯ.

ಕಟಿಲೆ ( ೨-೪೩ )-ಬಡವಾಗುವಂತೆ, ಅಂಜುವಂತೆ. ( ತಸುತ್ವೇ. ಶ. ಮ. ದ. ) ಸಡಿಲವಾಗು. ( ಪಂ. ಭಾ. ೬-೧೮ ).

ಕಟೋಮ್ಮ ( ೧-೬೧ )-ಅರಳಿದ ಹೂ.

ಕಾಕಲಿ (೧೩-೬)-ಇಂಪಾದ ಕಿರುದನಿ.

ಕಾಂಡಪಟ ( ೧-೭೧ )-ಪರದೆ.

ಕಾಯಮಾನ ( ೧೧-೭೨ ವ)_ಗೂಡಾರ, ಗುಡಿಸಲು.

ಕಾರ್ಪಾಸ ( ೬-೭೨ ವ )-ಹತ್ತಿ.

ಕಾವಣ(೧೧-೭೧ವ)- ಮಂಟಪ, ಹಂದರ.

ಕಾವಲಿ ( ೫-೮೫ ವ )-ಕಡಾಯಿ.
ಕಾಶ್ಮೀರ ( ೧೧-೧೨೪ )-ಕೇಶರ.
ಕಾಶ್ಯ ( ೮-೭೫ ವ )-ತೇಜ.
ಕಿಂಕಿಣಿ ( ೮-೨ )-ಕಿರುಗೆಜ್ಜೆ.
ಕಿಂಕಿರಾತ ( ೭-೧೧೪ )-ಗೋರಟೆ.
ಕಿಂಜಲ್ಕ ( ೧-೫೮ )-ತಾವರೆ.
ಕಿತ್ತವ್ಮೃ ( ೯-೧೦೨ ) ಉಪಸರ್ಗ.
ಕಿಂಪಾಕ ( ೪-೭೪ )-ವಿಷವೃಕ್ಷ ( ಪೂ. ಪು. ೮-೬೬ ).
ಕಿಱುಯುಂದು ( ೪-೨೧ ವ )-ಚಿಕ್ಕಂದು, ಬಾಲ್ಯ.
ಕಿಶೋರ ( ೮-೩೨ ವ )-ಮರಿ.
ಕಿಸುರ್ (೧೧-೧೨೯ )-ಕಲಹ, ಅಸಹನ ( ಪಂ. ಭಾ. ೨-೯೨ ವ. ದಲ್ಲಿ ಕಿಸುಱ್ ಎಂದಿದೆ).
ಕಿಟಿಲ್ ( ೧೨-೧೩ )-ಕಿತ್ತುಕೊಳ್ಳಲು.
ಕೀಱು ( ೧೩-೮೫ )-ಘೋಷಿಸು.
ಕೀಟಿಲ್ (೮-೩೪ ವ)-ಮನೆಯ ಸೇವಕರಿರುವ ಸ್ಥಳ.
ಕುಕ್ಕು ( ೬-೭೧ )-ಕೊಂಕೆಂಬ ಪಕ್ಷಿ. ( ವಿಶೇಷವಾಗಿ ಕುಸುಬೆಯ ಕಾಯಿಗಳನ್ನು ತಿನ್ನುತ್ತವೆ ).
ಕುಟ್ಟಿಮ ( ೮-೬೭ ವ )-ನೆಲಗಟ್ಟು.
ಕುಡುಪು ( ೯-೩೨ )-ಪಿಟೀಲುಬಾರಿಸುವ ಬಿಲ್ಲು, ವಾದನ ದಂಡ.
ಕುಡ್ಯ ( ೧೦-೩೫ ವ )-ಗೋಡೆ.
ಕುತಪಿ ( ೯-೧೨ )-ವಾದ್ಯಕಾರ.
ಕುತ್ಕೀಲ ( ೧-೫೪ )-ಪರ್ವತ(೬-೩ವ)
ಕುತ್ತು ( ೨.೪೦ )- ಸೇರಿಸು, ಗುದ್ದು, ( ಘಾತನೇ.ಶ. ಮ. ದ. ).
ಕುನುಂಗು ( ೧೦-೧೪ )-ಕುಗ್ಗು.
ಕುಪ್ಯ ( ೧೨-೬೬)-ಹೀನಧಾತು.
ಕುಮತಿ ( ೮-೭೩ )-ಬುದ್ಧಿಹೀನ. ತಿಳಿಗೇಡಿ.
ಕುಂಭೀರ (೧೪-೯೨ )-ಮೊಸಳೆ.
ಕುಮ್ಮು ( ೧-೮೧ )-ಕುಟ್ಟು ( ಮುಸಲ ಕ್ರಿಯಾಯಾಂ ಶ. ಮ. ದ. )
ಕುರರ (೧-೫೭)-ಪಕ್ಷಿವಿಶೇಷ, ಕುರವಕ್ಕಿ.
ಕುರವಕ (೧೧-೧೩೭ ವ)-ವೃಕ್ಷವಿಶೇಷ.
ಕುಱುಂಬ ( ೧೨-೬೮ ವ )-ಎತ್ತರ ಪ್ರದೇಶ, ದಿಬ್ಬ, ಜಿಟ್ಟ.
ಕುಲತ್ಥ ( ೬-೭೨ ವ )-ಹುರುಳಿ.
ಕುಲಿಶಾಯುಧ (೭-೧೦೫)-ಇಂದ್ರ.
ಕುಲ್ಯಾ (೮-೪೧ ವ)-ಹಳ್ಳ, ಕಾಲುವೆ.
ಕುಶೇಶಯ ( ೬-೬೬ )-ಕಮಲ.
ಕುಸಿ ( ೪-೫೦ )-ಕುಗ್ಗಿಸು ( ೬-೭ ) ಜಜ್ಜು, ಬಗ್ಗುಬಡಿ
ಕುಸುಂಭ ( ೬-೭೨ ವ )-ಕುಸುಬೆ.
ಕುಳುಂಪೆ ( ೯-೧೧೮ ವ )-ನೀರು ನಿಂತಿರುವ ಗುಂಡಿ.
ಕೂಪಾರ ( ೯-೧೨೩ )-ಸಮುದ್ರ.
ಕೂರ್ಚಾಲ ( ೪-೯೧ ವ )-ಗಡ್ಡಮೀಸೆಗಳುಳ್ಳ.
ಕೂಸು ( ೩-೮೯ )-ಮಗಳು.
ಕೆಚ್ಚುವಿರ್ದ ( ೪-೫೨ ವ )-ಬಲಿತ ಹೆಣೆದುಕೊಂಡ ( ಪಂ. ಭಾ. ೨-೯೬ ).
ಕೆದಱು ( ೫-೮ )-ಹರಡು, ಪಸರಿಸು.
ಕೇಯೂರ ( ೪-೪೦ )-ಬಾಹುಪೂರ. ರಟ್ಟಿ ಬಳೆ, ತೋಳಬಾಪುರಿ.
ಕೇರ್ ( ೪-೩೧ )-ಗೋಡೆ.
ಕೇಸರದ್ರುಮ ( ೧೧-೧೨೭ )-ಬಕುಳ, ಗೋಳಸರ.

ಕೈಗಣ್ಮು ( ೧೩-೪೩ )-ಮಿತಿಮೀರು, ಅತಿಕ್ರಮಿಸು.
ಕೈಗೆಯ್ ( ೧-೭೧ )-ಸಿಂಗರಿಸು.
ಕೈಪಿಡಿ ( ೨-೭೪ )-ಕನ್ನಡಿ
ಕೈಪೊಡೆ ( ೩-೧೫ )-ಬಾಣದ ಪಂಖ.
ಕೈಶಿಕೆ(೯-೨೬)-ಗೀತ,ನೃತ್ಯ,ವಿಲಾಸಾದಿ ಶೃಂಗಾರ ಚೇಷ್ಟೆಗಳಿಂದ ಕೂಡಿ ಮೃದುವಾಗಿರುವುದು.
ಕೊಕ್ಕರಿಕೆ (೯-೭೪)-ಜುಗುಪ್ಸೆ,ಬೇಸರ, ಸಂಶಯ.
ಕೊಕ್ಕರಿಸು ( ೨-೪೩ ವ. )-ಜಗ್ಗುಪ್ಸೆ ಪಡು. ( ಶಾ. ಪು. ೯-೨೫ವ)
ಕೊಟ್ಟೆಸುಗಟ್ಟು ( ೫-೮೪ )-?
ಕೊದಳ್ ( ೨-೧೦ )-ತೊದಲು ಮಾತಾಡು, ಉಗ್ಗು.
ಕೊಪ್ಪು ( ೫-೩೩ )-ಆಭರಣ ವಿಶೇಷ.
ಕೊಸಗು ( ೧೧-೮೩ )-ಬೆಟ್ಟದಾವರೆ.
ಕೊಸೆ ( ೧೧-೫೫ )-ಕುದುರೆಯ ಸವಾರಿಯ ಒಂದು ರೀತಿ.
ಕೊಳ್ ( ೪-೮೪ )-ತೆಗೆದುಕೊಳ್ಳು, ಅಪಹರಿಸು.
ಕೋಕನದ ( ೭-೬೦ )-ತಾವರೆ.
ಕೋದ್ರವ ( ೬-೭೨ ವ )-ಬರಗು.
ಕೋರ್ಬಿಸು ( ೧೧-೫೩ )-ಕಣ್ಣು ಕುಕ್ಕು.
ಕೋಷ್ಠ ( ೧೦-೩೫ ವ )-ಕೋಣೆ, ಕೊಟ್ಟಿಗೆ, ವಿಭಾಗ.
ಕೋಳ್ ( ೪-೫೧ )-ಹೊಡೆತ, ಏಟು, (ಪಂ. ಭಾ. ೩-೭೦, ಗ.ಯು. ೮-೩೨ ).
ಕೋಟ್ಳುಸುಗು ( ೬-೫೬ )-ಕೊಳ್ಳೆಗಾಗಿ ವಿಜೃಂಭಿಸು ( ಪಂ. ಭಾ. ೧೦-೫೧ ವ ).
ಕೌಂಗು ( ೧-೬೭ )-ಅಡಕೆ.
ಕ್ರಮ ( ೯-೧೧ )-ಪಾದ.
ಕ್ರಮುಕ ( ೧೩-೩ ವ)-ಅಡಕೆ.
ಕ್ಷುತ ( ೫-೬೯ ವ )-ಶೀನು.
ಕ್ಷೋದ ( ೧೧-೧೩೫ ವ )-ಹುಡಿ.
ಕ್ಷೌಮಾಂಬರ (೮-೫೫ ವ)-ರೇಸಿಮೆಯ ಬಟ್ಟೆ.

**ಖ**

ಖಡ್ಗಧೇನುಕ ( ೧೩-೪೫ವ )- ಚೂರಿ, ಕಿರುಗತ್ತಿ,
ಖರತನ ( ೧೧-೭ )-ತೀಕ್ಷ್ಣತೆ, ಹರಿತ.

**ಗ**

ಗಗ್ಗರಿಕೆ ( ೧೨-೨೫ )-ಧ್ವನಿವಿಕಾರ
ಗಣಕ ( ೧೧-೯ ವ )-ಜ್ಯೋತಿಷಿ.
ಗಂಡೂಷ ( ೧೧-೧೨೬ ವ )-ಬಾಯಿ ಮುಕ್ಕುಳಿಸುವಿಕೆ.
ಗಸಣಿ ( ೧-೪೬ )-ತಿಕ್ಕಾಟ.
ಗಾವರಿಸು ( ೨-೫ )-ಧ್ವನಿಮಾಡು, ಝೇಂಕರಿಸು.
ಗಾಳಿಸು ( ೬-೨೪ ವ )-ಉದುರಿಸು.
ಗಿಡಿ ( ೫-೮೬ )-ತುರುಕು.
ಗುಚ್ಛ(೮-೫೪ ವ)-ಮೂವತ್ತೆರಡು ಎಳೆಗಳುಳ್ಳ ಹಾರ (ಪೂ.ಪು.೧೬-೫೯.)
ಗುಂಡು ( ೪-೩ )-ಗುಂಪು, ಸಮೂಹ.
ಗುಣ್ಪು ( ೧-೫೫ )-ಆಳ.
ಗೃಹಕೋಕಿಲ ( ೨-೧೪ ವ )-ಹಲ್ಲಿ.
ಗೆಡೆಗೋಳ್ ( ೪-೪ )-ಸಹಕರಿಸು.
ಗೊಜ್ಜ (.೧೧-೧೨೬ )-ಕುಲಜ, ಕುಲೀನ.
ಗೊಜ್ಜಗೆ ( ೧೧-೧೦೫ )-ಸೇವಂತಿಗೆ.
ಗೊಲೆ ( ೧-೬೭ )-ಗೊನೆ.
ಗೊಲೆಗೊಂಡ ( ೧೨-೨೦ )-ಗೊನೆಬಿಟ್ಟ

ಗೋತ್ರಸ್ಖಲನೆ ( ೪-೯ )-ಭೂಮಿಯ ಮೇಲೆ ಬೀಳುವುದು. ?
ಗೋಥ ( ೧೪-೯೩ ವ )-ಉಡು.
ಗೋರಿ ( ೧೪-೮೦ )-ಆಕರ್ಷಣೆ, ಆಮಿಷ.
ಗೋಲಾಂಗೂಲ ( ೫-೨ ವ )-ಕೋಡಗ, ವಾನರ.
ಗೋಶೀರ್ಷ ( ೭-೧೦೧ವ )-ಗೋರೋಚನ.
ಗೋಸನೆವಿಡಿಸು ( ೧೦-೭ ವ )ಡಂಗುರ, ಹೊಯ್ಯಿಸು.
ಗ್ರಾಮಕೂಟ ( ೩-೩೮ ವ ಗವುಡ.

ಘ

ಘನಾಘನ ( ೪-೬೫ )-ಮೋಡ.
ಘಾಟೆ ( ೧೨-೫೬ ವ )-ಕುತ್ತಿಗೆಯ ಹಿಂಭಾಗ.

ಚ

ಚಕ್ರಾಹ್ವ ( ೩-೬೮ )-ಚಕ್ರವಾಕ.
ಚಚ್ಚಾ ( ೧೨-೧೧೧ )-ಪುಂಗಿ.
ಚಂಚತ್ (೧೦-೨೨ ವ)-ಹೊಳೆಯುವ.
ಚಣಕ ( ೬-೭೨ ವ )-ಕಡಲೆ.
ಚಂದ್ರಕಬಲ (೭-೩೬ ವ)-ಸರ್ಪಗಂಧಾ, ಇದರ ಹೂವು ಬಹಳ ಅಂದ. ( ೩-೯೦ ವ ).
ಚಂದ್ರಕಿ ( ೧೧-೧೦ )-ನವಿಲು.
ಚಪೇಟ-( ೫-೧೬ )-ಅಂಗೈ (ಚಾಪಟ-ಮರಾಠಿ ).
ಚಪ್ಪರಿಸು ( ೪-೮೨)-ಗ ದರಿಸು, ಪ್ರತಿಭಟಿಸು.
ಚರಮದೇಹ ( ೮-೪೫ )-ಕೊನೆಯ ಜನ್ಮಧಾರಿಯಾದ ದೇಹ. ಈಜನ್ಮದಲ್ಲಿ ಮೋಕ್ಷದೊರೆಯುವುದು.
ಚರಿಗೆ ( ೯-೧೨೯ )-ಜಿನಮುನಿಗಳು ಆಹಾರಕ್ಕೆಂದು ಅಲೆಯುವುದು. (ತ್ಸ). ಚರ್ಯಾ.
ಚಲ್ಲಿ ( ೯-೩೯ )-ಚಲನೆ.?
ಚಾದಗೆ ( ೯-೧೦೯ )-ಚಾತಕ ಪಕ್ಷಿ.
ಚಾರಿ ( ೯-೩೯ )-ನೃತ್ಯದಲ್ಲಿ ಹೆಜ್ಜೆ ಹಾಕುತ್ತ ಮುಂದೆ ಸಾಗುವಿಕೆ.
ಚಿತ್ರಾವಳಿ ( ೫-೩೪ ]-ವಸ್ತ್ರವಿಶೇಷ
ಚೂಚುಕ ( ೭-೩೧ )-ತುಂಬು, ತುದಿ.
ಚೂಲಿಕೆ ( ೧೨-೫೬ ವ )-ಹಸ್ತಿಕರ್ಣದ ಮೂಲ.
ಚೌತ ( ೧೧-೧೧೫ )-ಅಪೂಸ್ಯ.

ಜ

ಜಗುಟಿ ( ೩-೮೯ )-ಜಾರು.
ಜಟಮಟಿಕ ( ೩-೪೫ )-ಸಡಗರದವ.
ಜಂಘಾಳ ( ೪-೯೧ )-ತೀವ್ರಗತಿಯುವ, ಓಡುವುದಕ್ಕೆ ಬಲವಾದ ಕಾಲುಗಳುಳ್ಳವನು.
ಜಟಿಳಿತ ( ೬-೧೮ )-ಜಡೆಯಂತೆ ಒಂದನೊಂದು ಅಂಟಿಕೊಂಡ.
ಜಡಿ ( ೧೪-೩೬ )-ಗದರಿಸು.
ಜತಿ ( ೯-೩೭ )-ಮೇಳ್.
ಜತ್ತವಟ್ಟ ( ೭-೧೨೫ ]-ಎರಡೂ ಕಾಲು ಕೂಡಿಸಿ ಜಿಗಿಯುವ ಭಂಗಿ.
ಜಪಾಪ್ರಸವ ( ೧೬-೩ )-ದಾಶಾಳದ ಹೂವು.
ಜಬುಚು ( ೧೩-೮೫ )-ವ್ಯರ್ಥಾಲಾಪ, ಬಡಬಡಿಕೆ,
ಜಲಕನೆ ( ೮-೧೫ )-ಕೂಡಲೆ. ( ಗ್ರಾ. ಜಟಕ್ಕನೆ, ಜಟ್ಟನೆ. )
ಜಲಕ್ಕನೆ (೭-೨)-ಶುದ್ಧವಾಗಿ, ಕೂಡಲೆ ತಟ್ಟನೆ. (ಶಾಂ. ಪು.೧೦-೧೬೭) ಜಲಕನೆ ( ಆ. ಪು.೮-೧೫ ).

ಜವನಿಕೆ ( ೯-೨೦ )-ಪರದೆ.
ಜಳದೆ ( ೨-೧೪ )-ಬಾಳದ ಬೇರಿನ ಬೀಸಣಿಕೆ.
ಜಾಗ(೪-೩೧)-ಮರಕತ, ಹಸುರು ರತ್ನ. ( ಪಂ. ರಾ. ೫-೧೧೨ ).
ಜಾಂಗಲ ( ೫-೮೭ ವ )-ಮಾಂಸ.
ಜಾಂಗಲ ( ೮-೬೩ ವ )-ಬಂಜರು.
ಜಾತರೂಪಧರ (೪-೬೭ವ )-ದಿಗಂಬರ
ಜಾದಿ ( ೧೧-೮೭ )-ಜಾತಿ, ಜಾಜಿ.
ಜಾಸುದಘ್ನ ( ೮-೪೧ ವ )-(೧೪-೫೨ಪ) ಮೊಳಕಾಲುದ್ದ.
ಜಾಯಿಲ ( ೧೧-೩೧ )-ಕುದುರೆ ( ತ್ಸ ) ಯಾಯಿನ್.
ಜಿಗಿಲ್ತಂತೆ ( ೩-೫ )-ಅಂಟಿಕೊಂಡಂತೆ.
ಜೀರಕ ( ೬-೭೨ ವ )-ಜೀರಿಗೆ.
ಜುಂಬುಕ ( ೮-೧೫ ವ )-ಕುಚ್ಚು, ಗೊಂಚಲು, ಗೊಂಡೆಯ, ಲಂಬಣ.
ಜೋಗ ( ೫-೩೪ )-ವಸ್ತ್ರವಿಶೇಷ.
ಜೊಂಪ (೧೩-೮೬)-ಮರಗಳ ಗುಂಪು, ನೆರಳು ( ವಡ್ಡಾರಾಧನೆಯಲ್ಲಿ 'ದೊಂಪ' ಎಂದಿದೆ ).
ಜ್ಯೋತಿರಿಂಗಣಂ (೮-೧೦.)-ನಕ್ಷತ್ರಗಳ ಕುಣಿದಾಟ,

## ಝ

ಝಲ್ಲರಿ (೧೩-೬೫)-ಡಮರು, (೧-೪೭).

## ಟ

ಟಂಕ (೧೪-೫೯ ವ )-ಬೆಟ್ಟದ ಇಳಿಜಾರು ಪ್ರದೇಶ (೨) ಕಲ್ಲನ್ನು ಒಡೆಯುವ ಉಳಿ ( ೧೪-೧೦೩ ವ).

## ಡ

ಡವಕೆ ( ೩-೨೩ ವ )-ಪೀಕದಾನಿ.

## ತ

ತಗವು ( ೭-೮೨ )-ಯೋಗ್ಯವಲ್ಲ.
ತಗುಳ್ (೨-೩೨ ವ )-ಆರಂಭಿಸು, ( ಸಂಧಾನೇ, ಅನುಧಾವನೇ. ಶ. ಮ. ದ. )(೧೦-೬೩ವ )-ಹಿಂದಿಡು, ತಡೆ. ( ಪಂ. ರಾ. ೩-೪೭ ).
ತಗುಳ್ಚು ( ೭-೧೦೬ ವ )-ತೊಡಿಸು.
ತಗುಳ್ಪು (೬-೨೨ )-ಸಂಗತಿ, ಸಂಬಂಧ, ( ೧೨-೧೮ ).
ತಡವರು ( ೯-೩೨ )-ತಡಬಡಿಸು.
ತಣ್ಮಲೆ ( ೨-೫೭ )-ವ್ಯಾಪಿಸು ( ೧-೬೮ ೫-೬ ವ.೬-೨೬). (ಪಂ. ಭಾ. ೩-೨೨ ).
ತತಘನ (೫-೩೫)-ವೀಣೆ.
ತಂದಲ್ ( ೧೩-೫೯ )-ಜಲಕಣ, ಶೀರ್ಪನಿ.
ತರತರದೆ ( ೭-೬೮ )-ಸಾಲಾಗಿ.
ತರಳತರಬಂಧ ( ೮-೫೪ಪ)- ಎಲ್ಲ ಕಡೆಯಲ್ಲಿ ಸಮಾನವಾದ ಮುತ್ತುಗಳುಳ್ಳ ಹಾರ. ( ಪೂ. ಪು. ೧೬-೫೪ ).
ತರಳತೆ ( ೩-೭ )-ಚಾಂಚಲ್ಯ.
ತಱುಂಬು ( ೧೪-೩ ವ )-ನಿಲ್ಲಿಸು, ತಡೆ.
ತವು ( ೫-೪ )-ಕಳೆದುಹೋಗು, ನಾಶವಾಗು, ನಿಲ್ಲು ( ಕ್ಷಯೇ. ( ಶ. ಮ. ದ. ).
ತವುತರು ( ೨-೫೫ )-ಕುಂದುತ್ತಬರು. ( ತವು. ಕ್ಷಯೇ. ಶ. ಮ. ದ.)
ತಳರ್ ( ೭-೬೩ )-ಹೊರಡು, ಚಲಿಸು.
ತಳರ್ನಡೆ ( ೮-೨ )-ತಪ್ಪು ಹೆಜ್ಜೆಯ ನಡುಗೆ.
ತಳವಾರಿ ( ೯-೮೦ )-ಅಂಗೈತುಂಬ.

ತಳಿ ( ೯–೬೪ )–ಸೂಸು, ಚಲ್ಲು, ಚಿಮ್ಮಡಿಸು. ( ೯–೩೫ ಕಾಣಿಸಿಕೊಳ್ಳು ?).

ತಳ್ಪೊಯ್ ( ೨–೧೦ )–ಒತ್ತಾಗಿ ಸೇರು. ( ಶಾಂ. ಪು. ೬–೭೨೬ ) ( ಪಂ. ಭಾ. ೧–೧೦೫ ವ ).

ತಱೆ ( ೧೧–೩೯ )–ಛತ್ರ, ಕೊಡೆ.

ತಾಟಿಸು ( ೫–೧೨ )–ಅಪ್ಪಳಿಸು.

ತಾಱಿಲಾಗು ( ೯–೮೯ )–ಒಣಗು.

ತಿಟ್ಟಮಿಡು ( ೪–೬೩ ವ–)ಚಿತ್ರ ಬರೆಯಲು ಪ್ರಾರಂಭಿಸು.

ತಿದಿ ( ೫–೮೫ )–ತೊಗಲು.

ತಿಂತಿಣಿ ( ೧೦–೭೧ )–ಸಮೂಹ.

ತಿರಿವು (೫–೯೨)–ಅಲೆದಾಟ, ಸುತ್ತಾಟ, ತಿರುಗಾಟ.

ತಿರೀಟ ( ೨–೩೯ )–ಕಿರೀಟ,

ತಿಱಿ ( ೧೧–೧೦೦ )–ಕೊಯ್.

ತೀಟ ( ೨–೪೨ )–ಸ್ಪರ್ಶ.

ತೀಡು ( ೨–೭೫ )–ಬೀಸು.

ತುಡು ( ೮–೫೪ ವ )–ಧರಿಸು.

ತುಡುಗೆ ( ೨–೫ )–ಆಭರಣ.

ತುಂದಿಲ ( ೪–೯೧ ವ )–ಸ್ಥೂಲ.

ತುಱುಗಲ್ ( ೧–೬೨ )–ಗೊಂಚಲು. (೨–೧೧೯) ಸಮೂಹ,ಗುಂಪು, ರಾಶಿ. ( ೫–೮ ).

ತುಱುಂಬು ( ೧೧–೧೦೨ )–ಧರಿಸು, ಸೂಡು, ( ೨–೧೧೪ ).

ತೂರ್ಯ ( ೬–೨೧ )–ವಾದ್ಯ.

ತೂಳ್ ( ೧–೬೭ )–ತೂರು, ಹಾರಿಸು, ಓಡಿಸು. (ಪಂ. ಭಾ ೮–೩೨).

ತೆಗೞ್ ( ೧–೭೧ )–ನಿಂದೆ.

ತೆಮುಳ್ ( ೫–೪೧ ವ )–ತಳ್ಳಿಹೋಗು., ಹೊಟ್ಟಿಹೊಸೆ. ( ಪಂ. ಭಾ. ೬–೭೬ ವ ).

ತೆಮುಳ್ದಿಕೊಂಡು ( ೭–೩೯ )–ಕೂಡಿ ಹಾಕಿಕೊಂಡು, ( ತೆಮುಳ್ದು ಚಯನೇ. ಶ. ಮ. ದ. ).

ತೆಱಪು ( ೪–೨೬ )–ಸಮಯ.

ತೆಲ್ಲಂಟಿ( ೧೭–೪೩ )–ಕಾಣಿಕೆ, ಬಹುಮಾನ.

ತೊಂಗಲ್ ( ೪–೫೯ )–ಗೊಂಚಲು.

ತೊಡರ್ ( ೯–೩೭ )–ಅಡ್ಡಿಯಾಗು, ತೊಡಕಾಗು.

ತೊಱೆ ( ೧–೫೪ )–ನದಿ.

ತೊವಱ್ ( ೧೭–೫೦ )–ಸುವಾಸನೆಯ ಮಣ್ಣು.

ತೋಡು ( ೧೭–೯)–ಸಾಮ್ಯ.

ತ್ರಪು ( ೧೩–೪೫ ವ )–ತವರು.

## ದ

ದಗುಂತಿ ( ೫–೬೩ )– ?

ದಡ್ಡಸ ( ೩–೬೦ )–ಡೊಂಬರವನ ಡೊಳ್ಳು.

ದಂಡ ( ೮–೨೪ )–ಶಿಕ್ಷೆ

ದಂಡಧರ ( ೮–೨೪ ವ )–ರಾಜನಿಯೋಗಿ, ಅಧಿಕಾರಿ.

ದಂದುಗ ( ೧–೫ )–ವ್ಯಥೆ, ಶ್ರಮ. ( ೨–೭೭ ( ೪–೭೨ )–ಗೊಡವೆ,ರಗಳೆ.

ದರಹಸಿತ ( ೮–೩ )–ಮಂದಹಾಸ, ಮುಗುಳು ನಗೆ.

ದರ್ಶನ ( ೫–೬೪ )–ಎದುರಿಸುವುದು.

ದಶನವಸನ ( ೧೧–೧೧೦ ವ )–ತುಟಿ.

ದಳಿಂಬ ( ೪–೪೨ ವ)–ಮುಡಿ.

ದಳಿವಿಡಿ ( ೪-೪೨ )-ಕೊಡಿಸು, ತೆತ್ತಿಸು,

ದಳ್ಳಿಸು ( ೧೧-೮೦ )-ಗರ್ವದಿಂದ ಮೆರೆ.
( ಪಂ. ಭಾ. ೧೩-೮೮ ).

ದಾಂಗುಡಿ ( ೨-೨೪ )-ಉದ್ದವಾಗಿ ಬೆಳೆದ ಚಿಗುರು, ದಾಟುಗುಡಿ.
( ೭-೩೭ ವ ).

ದಾರಕ ( ೮-೧ )-ಬಾಲಕ, ಕುಮಾರ.

ದಾಸೇರಕ (೮-೪೧ ವ)-ದಾಸಿಯ ಮಗ.

ದೀವದ ( ೪-೫೪ )-ಸಾಕಿ ಪಳಗಿಸಿದ

ದೀಹ ( ೩-೮೬ ವ )-ಒಲೆ.

ದೃಷ್ಟಿವಿಭವ ( ೫-೫೩ )-ಸಮ್ಯಕ್ತ್ವದ ವೈಭವ.

ದೇವಚ್ಛಂದ (೮-೫೪ವ -ಎಂಬತ್ತೊಂದು ಮುತ್ತಿನ ಯಷ್ಟಿಗಳುಳ್ಳಹಾರ.
( ಪೂ. ಪು. ೧೬-೫೮ ).

ದೇವಾಂಗ ( ೫-೩೪ )-ವಸ್ತ್ರ, ವಿಶೇಷ.

ದೇಸೆ ( ೪-ರಗಳೆ ಪುಟ ೮೪ )-ಸೊಗಸು.
( ಗ. ಯು. ೧-೬ ).

ದೋಹಳ ( ೮-೩೩ ವ )-ಬಯಕೆ.

ದೌವಾರಿಕ (೧೧-೨೩ ವ)-ದ್ವಾರಪಾಲಕ.

ದೌಹೃದ ( ೮-೩೩ )-ಬಯಕೆ.

ಧನದ (೧೦-೨೨ವ)-ಕುಬೇರ, ದೇವಶಿಲ್ಪಿ.

ಧಾತಕೀ ( ೨-೯ ವ )-ಇಪ್ಪೆಯ ಹೂ.

ಧಾನ್ಯಕ ( ೬-೭೨ ವ )-ಕೊತ್ತುಂಬರಿ ಕಾಳು, ಹವೀಜ.

ನೆಕ್ಕು ( ೯-೫೭ )-ನೆಕ್ಕು.

ನಕ್ಷತ್ರಮಾಲಾ (೮-೫೪ವ)-ಇಪ್ಪತ್ತೇಳು ಎಳೆಗಳುಳ್ಳ ಮುತ್ತಿನಹಾರ.
( ಪೂ. ಪು. ೧೬-೬೦ ).

ನಟ್ಟುವ ( ೪-೧೫ )-ನಟ, ಸೂತ್ರಧಾರ, ನಾಟ್ಯಕಾರ.

ನಡಪು, ಸಾಕು, ಸಲಹು.
( ಪಂ. ಭಾ. ೧೬-೬೮ ವ. ೧೦-೧೮ ).

ನಣ್ಪು ( ೮-೬೪ ವ )-ಬಾಂಧವ್ಯ, ನಂಟುತನ.

ನವೆ ( ೫-೧೩ )-ಬಡವಾಗು, ಸವೆ.

ನಯ ( ೫-೬ )-ನ್ಯಾಯ, ನೀತಿ.

ನಾಡಾಡಿ ( ೧-೪೬ )-ಸಾಮಾನ್ಯ.

ನಾಣ್ ( ೪-೧೫ )-ನಾಚಿಕೆ.

ನಾರಾಚ ( ೧೪-೯೦ ವ )-ಬಾಣ.
( ಪಂ. ಭಾ. ೧೧-೭೩ ವ ರ. ಗ. ಯು. ).

ನಾಳಿಕಾ ( ೬-೪೮ ವ )-ಗಳಿಗೆ.

ನಾಣ್ನುಡಿ( ೮-೧೪ )-ಸಾಮತಿ,ಗಾದೆಯ ಮಾತು.

ನಾಟ್ವರ್ತನ ( ೪-೪೪ )-ದೇಶದ ಗುಣಧರ್ಮ.

ನಿಕೇತನ ( ೧೧-೧೦೪ )-ಮನೆ.

ನಿಗುಂಬಿಸು ( ೪-೩)- ಅ. ಟಿ. ಗುಂಪುಗೂಡು.

ನಿಗೋದ ( ೫-೭೬ )-ನರಕ.

ನಿಚಿತ ( ೪-೨೯ ವ )-ಮುಚ್ಚಿದ, ತುಂಬಿದ.

ನಿತ್ತರಿಸು ( ೯-೮೯ )-ಸಹಿಸು, ನಿರ್ವಹಿಸು.

ನಿದಾಘ ( ೧೧-೮೫ )-ಬೇಸಗೆ.

ನಿಧುವನ (೪-೫೨ ವ)-ಸ್ತ್ರೀಸಂಯೋಗ.
ಪಂ. ರಾ. ೧೫-೪೭ ವ ).

ನಿಷ್ಪುಟಂ (೮-೬೨)-ಸಂಪೂರ್ಣವಾಗಿ.

ನಿಮಗ್ನ ( ೧೩-೫೦ ವ )-ಮುಳುಗಿದ.

ನಿಮಿರಲ್ (೧೨-೫೨)— ಪಸರಿಸಲು, (ಪ್ರಸಾರಣೇ ಶ. ಮ. ದ.)

ನಿಮಿರ್ಚು (೮-೩೦)-ಉಚ್ಚು,(೪-೨೨ ವ) ಬಿಡಿಸು, ವಿಸ್ತರಿಸು, (ಪ್ರಸಾರಣೇ. ಶ.ಮ.ದ.) ಪಂ.ಭಾ.೧-೭.

ನಿಯೋಗ (೯-೧೨೧ ವ.)-ಉದ್ಯೋಗ

ನಿಱಿ (೯-೨೪)— ನೆರಿಗೆ (೬-೯೮) (ಪಂ. ಭಾ. ೪-೩೫)

ನಿಱಿ (೭-೫೨)-ಚಾಚು, ಅಲ್ಲಾಡು.

ನಿಱಿಗ (೬-೯೮)- ಇಪ್ಸ್ಯಾವು.

ನಿಱಿಸು (೫-೧೧)-ನಿಲ್ಲಿಸು, (೮-೭೪ ವ.) ನಿಯಮಿಸು, ಸ್ಥಾಪಿಸು, (೮-೭೩ ವ.) ವಿಧಿಸು.

ನಿರ್ನೆರಂ (೩-೪)— ನಿಷ್ಕಾರಣವಾಗಿ.

ನಿರ್ಭರ (೭-೧೧೨ ವ.)— ತುಂಬಿದ, (ಪಂ. ಭಾ. ೧-೧೨೬ ವ.)

ನಿಷ್ಪಾವ (೬-೭೨ ವ.) ಅವರೆ.

ನಿಳಯ (೬-೧೧)- ನೆಲೆ.

ನೀಡ (೧-೬೨ ವ.)- ಹಕ್ಕಿಗಳ ಗೂಡು.

ನೀಡಿಲ್ಲದೆ (೨-೧೪ ವ.)-ತಡಮಾಡದೆ.

ನೀರಂಜಿಸು (೪-೪೨)— ಅತಿಶೋಭೆಗೊಳಿಸು.

ನೀಱ (೧೧-೯೬)- ಸುಂದರ, ಚೆಲುವ.

ನೀರ್ವರಿ (೧೨-೭೫)— ಕಾಲುವೆ, ಪ್ರವಾಹ.

ನೀವಾರ (೬-೭೨ ವ.)— ತನ್ನಿಂದ ತಾನೇ ಬೆಳೆದ ನೆಲ್ಲು. (ಮರಾಠಿ) ದೇವಭಾತ.

ನೀವೀಬಂಧನ (೪-೬೦)- ನೆರಿಗೆಗಳ ಮೇಲೆ ಗಂಟು ಹಾಕುವುದು.

ನೀಹಾರ (೧೦-೧೯)-ಹಿಮ, ಮಂಜು, ಬರ್ಫ.

ನುಗುಳ್ (೪-೨೫ ವ.)- ಪ್ರವೇಶಿಸು.

ನುಣ್ಚರಲ್ (೧೧-೧೧೨)- ನುಣುಪಾದ ಸರಳು, (ಬಾಣ).

ನುನ್ನಂ (೭-೧೦) - ಅತಿಶಯವಾಗಿ?

ನೂಪುರ (೭-೧೦೬ ವ.) - ಅಂದುಗೆ.

ನೂಲತೊಂಗಲ್ (೧೧-೧೬) - ನಡುಕಟ್ಟು.

ನೆಗಪು, (೪-೫೬)- ಸುರಿಸು.

ನೆಗಱ್ (೬-೧೨)- ಆಚರಿಸು.

ನೆರಪು (೪-೨೬)- ಕೂಡಿಸು, ಮದುವೆ ಮಾಡು.

ನೆಱ (೧೧-೮೯)— ಮರ್ಮ, ಆಯ, ಪರಿಣತಿ.

ನೆಱಪು (೨-೩೬)- ಕಲೆಹಾಕು, ನೆರವೇರಿಸು. (ಪಂ. ಭಾ. ೨-೨೧; ೧೨-೮ ವ.)

ನೆಱೆ (೬-೨೩) (೧೧-೩೪)-ಸಾಕಾಗು, ಸಾಲು, ಪೂರ್ಣವಾಗು, ಯೋಗ್ಯವಾಗು.

ನೆಱೆಗೊಳ್ (೪-೯)- ಸೂರೆಗೊಳ್ಳು.

ನೆರ್ಮ (೫-೭೮)— ಆಶ್ರಯ.

ನೆಲೆ (೧-೫೨)- ಎತ್ತರ, ಉತ್ಸೇಧ.

ನೆಲೆವೆರ್ಚಿಸು (೧೨-೧೧ ವ.)-ಹೆಚ್ಚಿಸು, ಅತಿಶಯಗೊಳಿಸು.

ನೆಲೆವೊಟ್ಟು (೪-೪೧ ವ.)— ಎತ್ತರವಾದ ರಾಶಿ.

ನೇಱು (೩-೪೫ ವ.)— ಬಿಚ್ಚು, ಪಸರಿಸು, ತೂಗಹಾಕು (ನೆಲ್).

ನೇರ್ಗಿಱಿದು (೧-೫೫)— ಪ್ರತ್ಯಕ್ಷ ಸಣ್ಣದು.

ನೇರ್ಪಡು (೬-೯)— ಹೊಂದಿಕೆಯಾಗು.

## ಪ

ಪಕ್ಕುಮಾಡು ( ೭-೪೯ ವ )-ಬದಿಗೆತರು.
ಪಚ್ಚುಗೊಡು (೯-೭೨ವ)-ಹಂಚಿಕೊಡು
ಪಟಲಿಕೆ ( ೯-೭೯ )-ಹಡಲಿಗೆ.
ಪಟವಾಸ (೧೧-೧೫)-ಬುಕ್ಕಿಟ್ಟು. [೭-೩೮
ಪಟ್ಟೆಗೆ (೧೨-೧೨) -ರೇಸಿಮೆಯ ವಸ್ತ್ರ.
ಪಡಲ್ವಡಿಸು ( ೯-೬೧ )-ಚೆಲ್ಲಾಪಿಲ್ಲಿಯಾಗಿ ಕೆಡಹು.
ಪಡಿ ( ೨-೬೩ ) -ಬಾಕಿಲು.
ಪಡಿಸಣ ( ೭-೨೧ ವ )-ಗಮನ, ಲಕ್ಷ್ಯ, ವಿಚಾರಣೆ.
ಪಡೆವು ( ೫-೬ ) —ಲಾಭ.
ಪಣೆ ( ೧೧-೯೫ )-ಬೊಡ್ಡೆ.
ಪತ್ತುಗೆ ( ೬-೨ )-ದೊರೆಯುವಿಕೆ, ಲಾಭ,
ಪತ್ತಿದ ( ೮ ೬೧ ). ಕೂಡಿದ.
ಪತ್ತುವಿಡು( ೫-೭೦ ವ )-ಕಳೆದುಕೊಳ್ಳು ( ೮-೬೧ ಬಿಡು ).
ಪತ್ರಚ್ಛೇದ ( ೮-೬೪ವ )-ಎಲೆಗಳ ಚಿತ್ರ ( ಪಂ. ಭಾ. ೨-೩೪ ವ )
ಪದ ( ೧- ೫೧)-ಸಮಯ.
ಪದಪು ( ೬-೭ )-ಭಕ್ತಿ.
ಪದವಡು ೧೪-೪೩]-ಅನುಕೂಲನಾಗು.
ಪದವಿನ್ಯಾಸ ( ೭-೧೧೯ )-ಹೆಜ್ಜೆ ಹಾಕೋಣ (ನೃತ್ಯದಲ್ಲಿ ).
ಪದೆ ( ೭-೪ )-ಪ್ರೀತಿಸು, ಬಯಸು.
ಪರಪುಷ್ಟ (೫-೨೯ )-ಕೋಗಿಲೆ.
ಪರಭಾಗ (೬-೫೧ ವ)-ಹೆಚ್ಚಾದ ಕಾಂತಿ; ಶೋಭಾತಿಶಯ. (ಪಂ. ಭಾ. ೧೦-೩೧ ), ( ಪಂ. ಶಾ. ೩-೬೭ ವ ).
ಪರಮ ( ೯-೧೦ )-ತೀರ್ಥಂಕರ.
ಪರಾಸು ( ೫-೪೧ ವ )-ನಿರ್ಜೀವ.
ಪರಿಕರ ( ೫-೫೩ )-೧. ಸಂಬಂಧಪಟ್ಟ ಸಾಮುಗ್ರಿ. ( ಪಂ. ಭಾ. ೩-೨೫ ವ ), ೨. ಸಮೂಹ ( ೧೨-೫೩ ).
ಪರಜು ( ೨-೬೦ )-ಗೂಪ.
ಪರಿಣತ (೧೧-೨೬ ವ )-ಹಣ್ಣಾದ, ಪಕ್ವ.
ಪರಿವೆಸ ( ೩-೨ )-ಸೇವೆ, ನಾನಾ ತರದ ಸೇವೆ.
ಪರೆಪು ( ೫-೨೩ )-ವಿಸ್ತಾರ.
ಪರೇತವನ ( ೩-೩೪ ವ )-ಸ್ಮಶಾನ, ಮಸಣ.
ಪಱೆ ( ೭-೧೦೪ )-ಹಲಗೆ, ಭೇರಿ, ಡೊಳ್ಳು, ಮೃದಂಗ, ಮು. ವಾದ್ಯ
ಪಲಾಲ ( ೧೪-೩೩) -ಹುಲ್ಲುಕಡ್ಡಿ.
ಪವಣ ( ೨-೪೩ ವ )- ಆಧಾರ ( ತ್ಸ). ಪ್ರಮಾಣ ).
ಪಸದನಂಗೊಳಿಸು ( ೪-೧೧ ವ)-ಅಲಂಕರಿಸು. (ಪಸವನ-ಅಲಂಕಾರ ತ್ಸ ಪ್ರಸಾಧನ ).
ಪಸರ (೧-೬೬ )-ವಿಸ್ತಾರ(ತ್ಸ) ಪ್ರಸರ.
ಪಸಲೆ ( ೮-೧೫ ಪ )-ಎಳೆ ಹುಲ್ಲು
ಪಸವಟ್ಟಂತೆ(೧೧-೯೯)-ಬರಗೆಟ್ಟಹಾಗೆ ಕ್ಷಾಮ ಪೀಡಿತರಂತೆ.
ಪಸವು ( ೭-೭೦ )-ಬಯಕೆ, ಆಸೆ. ( ಪಂ. ಭಾ. ೧೨-೨೧೧ -ಬರ, ಕ್ಷಾಮ.
ಪುಗೆ ( ೯-೨೭ )-ಭಾಗ, ಪಾಲು.
ಪಸೆ ( ೮-೧೬ )-ಹಸೆ, ಜಗಲಿ.
ಪಳಚ್ಚನೆ ( ೬-೩೭ )-ಅಕಸ್ಮಾತ್ತಾಗಿ.
ಪಳಂಚು ( ೨-೫ )-ಅಪ್ಪಳಿಸು, ಹೊರಸೂಸು. ( ಸಂಘಟ್ಟನೇ ಶ. ಮ. ದ. ).

ಪಳಾಳ ( ೯-೧೦೫ )-ಟೊಳ್ಳು, ನಿಷ್ಫಲ. ( ಪಂ. ರಾ. ೧೧-೮ ).

ಪಳ್ಳಿವಳ್ಳಿ-ಪಳವಳಿ - ಪಟುವಟು— (೧೨-೩೪ವ)-ಅರಣ್ಯ ಪ್ರದೇಶ.

ಪಟು ( ೫-೩೪ )-ವಸ್ತ್ರವಿಶೇಷ.

ಪಟುಕೆಯ್ದು ( ೧೨-೨೮ ವ )-ನಿಂದಿಸಿ. ಬಯ್ದು.

ಪಾಂಗು ( ೮-೧೫ ವ )-ಹೊಂದಿಕೆ,ರೀತಿ. ( ೮-೪೪ ).

ಪಾಟಿಸು ( ೯-೩೮)-ಕಲಿಸು.

ಪಾಠೀನ ( ೧೪-೯೭ )-ಮೀನ.

ಪಾದಾತ (೧೧-೩೩ )-ಕಾಲಾಳು.

ಪಾರೀ - ಪಾಳೀ ( ೨-೩೨ ವ )-ವಡಿ, ಹಳಕು.

ಪಾಱು ( ೪-೪೭ )-ಅಸತಿ, ಸಿತಗೆ

ಪಾರ್ಷ್ಣಿಗ್ರಾಹಕ ( ೪-೮೨ ವ )-ಹಿಂದೆ ಬರುವ ವೈರಿ.

ಪಾಲಿ ( ೩-೯೦ ವ )-ಹಳಕು, ವಡಿ.

ಪಾಳ್ಪಕ್ಕೆ ( ೪-೨೧ )-ಹಾಳುಮನೆ.

ಪಿಂಜರಿತ ( ೭-೧೧೪ )-ಹಳದಿ ಕೆಂಪಾದ

ಪಿನದ್ಧ ( ೩-೪)-ಕೊಡ್ರಿಸಿದ, ಹಚ್ಚಿದ, ಕೆಚ್ಚಿದ.

ಪಿಶಂಗಿತ ( ೭-೧೧೪ )-ಕೆಂದು ಬಣ್ಣದ.

ಪಿಷ್ಟಾತಕ ( ೧೧-೧೫ )-ಅಷ್ಟಗಂಧ. ( ೬-೩೮ )

ಪಿಹಿತ ( ೧೨-೬೧ )-ಮುಚ್ಚಿದ.

ಪುಗಿಲ್ ( ೯-೨೫ )-ಪ್ರವೇಶ.

ಪುರಂಧ್ರಿ ( ೭-೩ ವ )-ಪ್ರೌಢೆ,ಪತಿವ್ರತೆ

ಪುರುಡು ( ೪-೧೦ )-ಸ್ಪರ್ಧೆ ( ಪಂ ಭಾ ೬-೭೬ ).

ಪುರುಳಿ (೬-೯೨ )ಹೆಣ್ಣುಗಿಳಿ.

ಪುಷ್ಕರ ( ೯-೯೭ )-ಆನೆಯ ಕೈಯ ತುದಿ

ಪೂಗ ( ೪-೨೮ )-ಅಡಕೆ.

ಪೂದುಡುಗೆ ( ೧೧-೧೨೪ ವ )-ಹೂವಿನ ಆಭರಣ.

ಪೂಸು (೭-೧೦೬ವ)-ತೊಡೆ, ಲೇಪಿಸು.

ಪೃತನಾ ( ೧೪-೮೭ )-ಸೈನ್ಯ.

ಪೃಷತ್ಕ (೩-೬೧ ವ)-ಬಾಣ.

ಪೆಂಡವಾಸ ( ೧೧-೪೫ )-ಅಂತಃಪುರ

ಪೆಂಪು ( ೪-೯೩ )-ವೈಭವ, ಸಡಗರ.

ಪೆಳಱು ( ೬-೮೨ )-ಭಯಪಡು.

ಪೇಚಕ( ೧೨-೫೬ ವ)-ಆನೆಯ ಬಾಲದ ಮೂಲ.

ಪೇಟಕ ( ೯-೧೦ )-ಸಮೂಹ.

ಪೇೞ್ ( ೧-೩೪ )-ರಚಿಸು.

ಪೊಗಡ ( ೧೧-೧೦೨ )-ವೃಕ್ಷವಿಶೇಷ.

ಪೊಗಸು ( ೩-೬೩ )— ಮುಂಜಾವು.

ಪೊಂಕ ( ೧೧-೧೧೮)-ಬಿಂಕ, ಉಬ್ಬು.

ಪೊಂಗು (೮-೪೬ )— ಉಬ್ಬು.

ಪೊಡರ್ ( ೨-೨೪ )— ಪ್ರಕಾಶಿಸು, ಸಾಮರ್ಥ್ಯ ತೋರಿಸು.

ಪೊಡರ್ಪು ( ೭-೫)-ಹೊಳಪು, ಕಾಂತಿ. ( ಪಂ. ರಾ. ೩-೬೦, ೯-೭೦ ). (೧. ಕ. ೬-೧೧ ). (ಪೊಡರ್-ಸ್ಫುರಣೇ. ಶ. ಮ. ದ.).

ಪೊದಱ್ ( ೮-೩೧)-ವಿಸ್ತಾರವಾಗು, ಹೊರಹೊಮ್ಮು, ವ್ಯಾಪಿಸು. ( ಪಂ. ಭಾ. ೧-೪, ೫-೧೦ ). ( ಪಂ. ರಾ. ೧-೧೦೩ )

ಪೊದೞ್ಚಿಕ್ಕೆವಡೆ(೩-೯ವ) ಹೊರಹೊಮ್ಮು

ಪೊಲ್ಲಮೆ ( ೧೫-೩೬ )-ಅಯೋಗ್ಯವಾದುದು. (ಪಂ. ಭಾ. ೬-೬೮ವ) ( ಪಂ. ರಾ. ೧-೬೧ ).

ಪೊಸಗಾರ್ತ ( ೧೨-೧೪ )-ಆರಂಭದ ಮಳೆಗಾಲದ.

ಪೊಸಯಿಸು ( ೪-೧೨ ವ.)–ಕಡೆ ( ಕಡೆಗೋಲಿನಿಂದ).

ಪೋತ ( ೯-೫೮ )– ವಸ್ತ್ರ, ಬಟ್ಟೆ.

ಪ್ರಕಾಂಡಕ ( ೮-೫೪ ವ. )–ಮಧ್ಯದಲ್ಲಿ ಕ್ರಮವಾಗಿ ದೊಡ್ಡ ದೊಡ್ಡ ಐದು ಮುತ್ತುಗಳಿರುವ ಹಾರ.

ಪ್ರಣಾಲ ( ೮-೨೩ ವ. )– ಹರಿನಾಳಿ.

ಪ್ರತಿಪತ್ತಿ ( ೪-೮೯ ವ. )– ಮರ್ಯಾದೆ. ( ೮-೭೪ ವ. ).

ಪ್ರತಿಬೋಧಿಸು (೨-೧೭ ವ.)–ಎಚ್ಚರಿಸು.

ಪ್ರತೋಲಿ (೧೧-೨೩ ವ.)–ರಾಜಮಾರ್ಗ.

ಪ್ರತ್ಯವಾಯ ( ೧೩-೫೮ ವ. )– ಕೇಡು.

ಪ್ರಭಾವನೆ ( ೨-೨೨ ವ. )– ಹೆಚ್ಚಳ ಮಹತಿ.

ಪ್ರಸೂನ ( ೮-೩ ವ. )— ಹೂವು.

ಪ್ರಹಿತ ( ೮-೩ ವ )– ಕಳುಹಿದ.

ಪ್ರಾತಿಹಾರ್ಯ ( ೧೨-೫೩. )– ಪವಾಡ

ಪ್ರಿಯಂಗು ( ೧೩-೪೫ ವ. )– ಬರಗು.

ಪ್ರೇಂಖತ್ ( ೧೪-೯೨ )— ತೂಗುತ್ತಿರುವ.

ಪ್ರೇಂಖೋಲಿತ (೧೨-೬೦ ವ.)– ತೂಗುತ್ತಿದ್ದ.

ಪ್ಲೋಷ ( ೫-೮೭ )– ಸುಡುವ, ಬಿಸಿ.

ಬ

ಬಗೆ (೮-೧೦ )— ಕಲ್ಪನೆ.

ಬಗೆದಪ್ಪುದು ( ೮-೧೧ ) — ಗ ಮ ನ

ಬಗ್ಗಿಸು ( ೭-೧೫ )— ಗದರಿಸು.

ಬಟ್ಟೆಗೆವಲಗೆ ( ೪-೬೩ ವ. )— ಧೂಳು ಪಾಟಿ (ತ್ಸ.) ವೃತ್ತಿಕಾಫಲಕ.

ಬಡಿ ( ೫–೨೦ ) — ಬಡಿಗೆ, ಗದೆಗೆ, ದೊಣ್ಣೆ.

ಬಣ್ಣವಣ್ಣಿಗೆ ( ೧೧-೧೨೭ ) ?

ಬಣ್ಣಸರ (೯-೩೧)– ಬಣ್ಣದ ಮಣಿಗಳ ಸರ.

ಬತ್ತಲೆಗ (೨-೯ )– ದಿಗಂಬರ ಮುನಿ.

ಬದುಗುಗೆಯ್ ( ೩-೩೪ ವ. ) ದಮ್ಮನೆ ದುಡಿ.

ಬದ್ದವಣ ( ೭-೭೩ ) – ಮಂಗಳವಾದ್ಯ (ತ್ಸ.) ವರ್ಧಮಾನ–ಔಡಲ.

ಬಂಧೂಕ ( ೧೬-೩ )— ಕೆಂಪು ದಾಸಿವಾಳದ ಹೂವು.

ಬಯ್ಕೆ ( ೩-೩೩ )—ಗುಟ್ಟು, ಬಚ್ಚಿಟ್ಟ ವಸ

ಬಯ್ತು ( ೨-೧೫ )— ಅಡಗಿಸಿಟ್ಟ.

ಬಯ್ತಿಡು ( ೬-೭೭ ವ. )— ಬಚ್ಚಿಡು, ಸಂಗ್ರಹ ಮಾಡು.

ಬರಗಲೆ ( ೭-೬೯ )– ಆಭರಣ ವಿಶೇಷ.

ಬರ್ದು ( ೨-೬೫ ವ. )— ಪ್ರೌಢಿ.

ಬವರಿಸು ( ೧೧-೧೪೧)– ಸುತ್ತುಗಟ್ಟು.

ಬಸನಿ ( ೧೧-೯೮ )— ವ್ಯಸನಿ.

ಬಸನಿಗ ( ೫-೮೬ ) ವ್ಯಸನಿ.

ಬಹಿತ್ರ ( ೫-೪೫ ವ. )— ಹಡಗು.

ಬಳಸು ( ೭-೧೧೯ )—ವರ್ತುಲಾಕಾರವಾಗಿ ಸುತ್ತುಹಾಕು.

ಬಳಿವಳಿ ( ೧೩-೮೦ )— ಮದುಮಗಳು ಗಂಡನ ಮನೆಗೆ ಹೋಗುವಾಗ ಕೊಡುವ ವಸ್ತುಗಳು.

ಬಳ್ಕು ( ೧-೬೭ )— ತೂಗು.

ಬಳ್ವಳ ( ೭–೧೧೮)– ಬಳಬಳ, ಒಂದೇ ಸವನೆ, ಹೆಚ್ಚಾಗಿ.

ಬಳ್ವಳಿಕೆ ( ೧೨-೩೮ )— ಬಳಕುವಿಕೆ.

ಬಳ್ಳಿವಳ್ಳಿ ( ೨–೫೦ ) ಹಬ್ಬುಗೆ. ( ಪಂ. ಭಾ. ೧-೫೮ ), ( ಪಂ. ರಾ. ೩-೧೧೫ ).

ಬಟಿ( ೩-೪೬ ವ)—ದೂತ.

ಬಾಣಧಿ ( ೧೨-೮೮ ವ )—ಬತ್ತಳಿಕೆ.

ಬಾದುಗೆಯ್ (೩-೭೫ವ)-ವಾದಮಾಡು.

ಬಾಯುಟು ( ೩-೧೬ )-ಬಾಯಿಸೋತು ಹೋಗು,ದುಃಖಿಸು. (೩-೫೩). ( ಪಂ. ಭಾ. ೨-೨೭ ).

ಬಾಯಿನ ) ೧೧-೧೧೩ )—ಬಾಗಿನ.

ಬಾಯ್ಕೇಳಿಸು (೬-೨೪ ವ-)ಆಜ್ಞಾಧೀನ ಮಾಡು. ( ಪಂ. ಭಾ. ೬-೩೨ ವ ). ( ಶಾಂ. ಪು. ೫-೧೪೦ ).

ಬಾರಿಸು ( ೯-೭೬ )-ತಡೆ, ನಿಲ್ಲಿಸು.

ಬಾಸಿಗ ( ೩-೩ )--ದಂಡೆ, ಮಾಲೆ.

ಬಾಸೆ ( ೭-೩೧ )-ಹೊಟ್ಟೆಯ ಮೇಲಿನ ಕೂದಲು.

ಬಾಟಿ ( ೨-೭೪ )-ಖಡ್ಗ.

ಬಾಳಿಶಿವಾಟಿ ( ೫-೮೫ ವ )-ಬದುಕಿರು ವಾಗಲೆ.

ಬಿಚ್ಚತಂ ( ೨-೯ )-ವಿಸ್ತಾರವಾಗಿ.

ಬಿಚ್ಚಳಿಸು ( ೬-೯೪ )-ಧ್ವನಿಮಾಡು, ಕೂಗು. (ಶಾಂ.ಪು. ೮-೬೫ವ)

ಬಿಜ್ಜೆ ( ೯-೭೫ )-ಪ್ರೋತ್ಸಾಹ ( ಪೂ. ಪು. ೧೭-೧೫೨ ).

ಬಿಡೆ ( ೩-೭೫ )-?

ಬಿನ್ನನೆ ( ೭-೧೦೮ )-ಸುಮ್ಮನೆ.

ಬಿಯ ( ೧೨-೧೭ )-ವೆಚ್ಚ, (ತ್ಸ) ವ್ಯಯ.

ಬಿಸವಂದ (೪-೫)-ಆಶ್ಚರ್ಯ. [೧೨-೨೯]

ಬೀಟ್ಗುಂಡು ( ೧೨-೮೫ ವ )-ಲಂಗುರ.

ಬುಂಭುಕ (೮-೧೫ ವ)-ಅ. ಟಿ. ಕುಚ್ಚು, ಗೊಂಚಲ. (ಪಂ.ಭಾ.೩-೪೧ ವ ೧೦-೭೬ ), ( ಗ. ೧೮-೧೧).

ಬೆಕ್ಕಸಂಬಡು(೨-೪೧ವ)-ಆಶ್ಚರ್ಯಪಡು

ಬೆಟ್ಟು ( ೫-೮೫ ವ )-ಚುಚ್ಚು, ಇರಿ. (ಗಾಢ ಪ್ರವೇಶೇ. ಶ. ಮ.ದ.)

ಬೆಡಂಗು ( ೯-೨೬)-ಸೊಗಸು, ಶೋಭೆ.

ಬೆಸನ ( ೧-೬೯ -ಅಪ್ಪಣೆ ( ೩-೪೪ ).

ಬೆಳ್ಕನೆವೋಗು (೩-೩ವ)ಮೂಢನಾಗು.

ಬೆಳ್ಕುಱು ( ೬-೪೯ )-ಭಯಪಡು. ( ಬೆಳ್ಕುತ್ತು-ಭಯೇ ).

ಬೆಳ್ತನ ( ೯-೫೯ )-ಮೂಢತನ.

ಬೆಳ್ಳಕ್ಕರಿಗ (೧.೨೪)-ಮೂರ್ಖಪಂಡಿತ.

ಬೆಳ್ಳಂಗೆಡೆ ( ೧-೮೨ )-ಕಾಂತಿಹೀನ ನಾಗು, ಬೆಳ್ಳಗಾಗು.

ಬೆಳ್ಳವಾಸ ( ೬-೩೩ )-ಬಿಳಿಯ ಹಾಸುಗಲ್ಲು.

ಬೇಟ (೧೨-೨೩ )-ಪ್ರೀತಿ, ಆಸೆ.

ಬೇವಸ ( ೩-೩೩ )-ಆಯಾಸ, ವ್ಯಥೆ.

ಬೈತ್ರ ( ೧೨-೮೩ ವ )-ಹಡಗು ( ತ್ಸ ) ವಹಿತ್ರ.

ಬೊಜಂಗ ( ೧೨-೧೭ )-ವಿಟ.

ಬೊಂದರಿಗೆ (೧೧-೭೬)-ಹಾಸುಗೆ. ( ಪಂ. ಭಾ. ೪-೪೩ ವ ), ( ಶಾಂ. ಪು, ೩-೫೧ ವ ).

## ಭ

ಭಂಗಿ ( ೯-೨೦ )-ರೀತಿ.

ಭವ ( ೯-೬೦ )-ಜನ್ಮ, ಸಂಸಾರ ( ೯-೬೦ವ ).

( ೧-೮೦ ವ )-ಮೋಕ್ಷಗಾಮಿ.

ಭಾಜನ ( ೪-೩೪ ವ )-ಪಾತ್ರೆ.

ಭಾಗಿನೇಯ ( ೫-೨೧ ವ )-ಅಕ್ಕನ ಅಥವಾ ತಂಗಿಯ ಮಗ, ಸೋದರಳಿಯ.

ಭಾರತಿ ( ೯-೨೬ )-ನಟರು ಆಡುವ ಮಾತಿನ ವೈಚಿತ್ರ್ಯವಿಶೇಷ.

( ಭಾರತೀ ಸಂಸ್ಕೃತ ಪ್ರಾಯೋ ವಾಗ್ವ್ಯಾಪಾರೋ ನಟಾಶ್ರಯಃ (ದಶರೂಪಕ ೩-೫)'ಭಾರತೀ' ತು ಶಬ್ದವೃತ್ತಿಃ ( ದಶರೂಪಕ ೨-೬೦ ವ್ಯಾಖ್ಯಾನ ).

ಭಾರತಿಕ ( ೯-೧೨ )—ಸೂತ್ರಧಾರ.

ಭಾವ ( ೯-೨೭ )-ಚಿತ್ತವಿಕಾರ.

ಭೃಂಗಾರ ( ೪-ರಗಳೆ ಪು. ೮೪ ) ಪಾತ್ರೆ ವಿಶೇಷ.

ಭೃಗಾರು (೭-೩ ವ)-ತೊಟ್ಟಿಯು ಗಿಂಡಿ.

ಭೋಗ ( ೮-೩ ವ.)--ನಿರಂತರ ಉಪ ಭೋಗಿಸುವ ವಸ್ತು.

## ಮ

ಮಗ್ಗು ( ೧೫-೧೯ )— ಬಾಡು.

ಮಜ್ಜನವಳ್ಳ (೭-೧೦೩)—ಸ್ನಾನಾಧಿಕಾರಿ

ಮಂಜೀರಕ ( ೮-೧೮ )—ಅಂದುಗೆ.

ಮಟ್ಟನಾಗು (೧೧-೧೨೫)-ಸರಿಯಾಗು, ಹೊಂದಿಕೆಯಾಗು.

ಮಡ ( ೯-೮೪ )—ಹಿಮ್ಮಡ.

ಮಡಗೂಟಿರ್ (೧೪-೩೨)—ಎಂಜಲು.

ಮಡಲ್ತು ( ೨-೪ )-ಚಿಗಿತು. ( ೯-೨೦ )

ಮತ್ಸ್ಯನ್ಯಾಯ ( ೮-೭೪ ವ.)—ದೊಡ್ಡ ಮೀನು ಸಣ್ಣಮೀನನ್ನು ನುಂಗುವ ಕ್ರಮ.

ಮಧು ( ೧೧-೧೦೩ )—ವಸಂತ.

ಮನಕತ ( ೬-೫೫ )—ಚಿಂತೆ.

ಮನದನ್ನ ( ೧೨-೭೪ ವ.)-ಪ್ರೀತಿಪಾತ್ರ. ( ಪಂ. ಭಾ. ೨-೯೨ ವ.).

ಮನಂಗಲ್ (೩-೨೬ವ. )-ಮನದೊಳಗಿನದನ್ನು ತಿಳಿ.

ಮಂದೈಸು ( ೫-೨೩ )—ದಟ್ಟಾಗು.

ಮಮ್ಮ ( ೨-೨೦ )—ಮೊಮ್ಮಗ.

ಮರವಡು ( ೬-೫೦ )—ಮರೆಗಟ್ಟು, ಶಕ್ತಿಹೀನವಾಗು.

ಮರುಳ್ ( ೩-೧೧ ವ.)-ಹುಚ್ಚ, ಭ್ರಮೆಗೊಂಡವ.

ಮರುಳ್ಚು [೮-೩೮ ]-ಬೆರಗುಗೊಳಿಸು.

ಮಱಲುಂಡು ( ೨-೬೨ )-ಮೈಮರೆತು ನಿದ್ದೆಹೋಗು. ಗಾಢವಾಗಿ ನಿದ್ರಿಸು.(ಪಂ.ಭಾ.೩-೧೫ ವ.)

ಮಱುಭವ ( ೨-೯ )ಪುನರ್ಜನ್ಮ, ಎರಡನೆಯ ಜನ್ಮ

ಮಱೆಯಿಸಿ ( ೭-೪೫ )-ಎಚ್ಚರದಪ್ಪಿಸಿ.

ಮಲರ್ ( ೧-೬೮ )-ಮುಖತಿರುಗು. ( ಪರಾಙ್ಮುಖೇ. ಶ. ಮ. ದ. )

ಮಲೆಪು ( ೧೧-೧೧೮ )-ಗರ್ವ.

ಮಸುರಿಗೆ ( ೧೧-೭೬ )-ಪರದೆ.

ಮಸೂರಿಕಾ ( ೬-೭೨ ವ. )-ಚೆನ್ನಂಗಿ

ಮಸೃಣ ( ೭-೨೭ ವ. )- ನುಣುಪಾದ, ಹೊಳೆಯುವ.

ಮಸೃಣಿತ ( ೮-೭೨ ವ. )-ಕಾಂತಿಯುಕ್ತವಾದ.

ಮಹ ( ೨-೪೯ ವ. )-ಪೂಜೆ, ಉತ್ಸವ.

ಮಹತ್ತರದೇವಿ ( ೨-೬೭ ವ.)-ಹೆಗ್ಗಡಿತಿ. ಮನೆವೆಗ್ಗಡಿತಿ.

ಮಬ್ಬು ( ೯-೫೬. )- ಕಾಂತಿಹೀನವಾಗು, ಕಾಣದಂತಾಗು, ನಾಶವಾಗು.

ಮಾಕಂದ(೧೧-೧೭೮ವ.)-ಮಾವಿನಮರ.

ಮಾಣವಕ ( ೮-೫೪ ವ.)-ಇಪ್ಪತ್ತು ಎಳೆಗಳುಳ್ಳ ಹಾರ. ( ಪೂ. ಪು. ೧೬-೬೧ ].

ಮಾಣಿಕಚಟ್ಟ ( ೪-೪೨ )-ಕೆಂಪು ರತ್ನಕ್ಕೆ ಕಟ್ಟು,

ಮಾತುಲುಂಗ [೧೬-೧೦]-ಮಾದಾಳದ ಹಣ್ಣು.
ಮಾಧವ ( ೪-೨೩ )-ವೈಶಾಖ, " ಮಾಧವಸಮಯ " ವೈಶಾಖಮಾಸ, ವಸಂತಋತು
ಮಾಧವಿ ( ೧೧-೧೦೪ )-ಅದಿರ್ಗಂತಿ, ಅತಿಮುಕ್ತೆ, ವಸಂತದೂತಿ.
ಮಾಂದಿಸು ( ೩-೪೯ )-ತಡೆಮಾಡು, ನಿಲ್ಲಿಸು. ( ಪಂ. ಭಾ. ೮-೩೭ ( ಶಾ. ಪು. ೫-೭೭ ),
ಮಾಜಿಱಾನ್ ( ೩-೬ )-ಎದುರಾಗು, ಎದುರಿಸು.
ಮಾಷ ( ೬-೭೨ ವ )-ಉದ್ದು.
ಮಾಟಿಕ್ಕೆ ( ೮-೭೪ )-ರೀತಿ, ವಿಧ.
ಮಿಡಿ ( ೨-೫೮ )-ಚಿಟಿಕೆ, ಬಾರಿಸು, ಬೆರಳಿನಿಂದ ಚಿಮ್ಮು. (ಅಂಗುಲಿ ತರ್ಜನೇ. ಶ. ಮ. ದ. ).
ಮಿಡಕು ( ೫-೧೩ )-ವ್ಯಥೆಪಡಿಸು. ( ಚೈತನ್ಯಗೊಳಿಸು ಎಂದೂ ಉಂಟು. ಚೈತನ್ಯೇ ಶ.ಮ ದ.)
ಮಿಳಿರ್(೭-೩೭ ವ.)-ಚಲಿಸು.(ಪಂ.ಭಾ. ೧-೫೮ ).
ಮುಕುಂದ ( ೯-೬೬ )- ಮದ್ದಳೆ
ಮುಂಗುರಿ ( ೫-೧೪ )-ಮುಂಗಲಿ.
ಮುಡಿ ( ೭-೧೧೪ )-(ಹೊ. ಮು. ). ತಲೆಯಲ್ಲಿ ಧರಿಸು.
ಮುಡಿಗೆ ( ೧೧-೧೦೫ )-ಟೊಪ್ಪಿ , ಕಿರೀಟ .
ಮುದ್ಗ ( ೬-೭೨ ವ. )-ಹೆಸರು.
ಮುಯ್ಯು ( ೧೪-೧೧೭ )-ಹೆಗಲು.
ಮುಱುಕ ( ೧೧-೯೩ )-ಒಯ್ಯಾರ.
ಮುಸು ( ೨-೪೫ )-ಕೋಡಗ.
ಮುಹೂರ್ತ ( ೬-೪೮ ವ. )-ಎರಡು ಗಳಿಗೆಯಿಂದ ಒಂದು ಮುಹೂರ್ತ.
ಮೂಗವಡು ( ೩-೨೬ )-ಸುಮ್ಮನಿರು, ಮಾತಾಡದಿರು.
ಮೆಟ್ಟು ( ೭-೧೨೩ )-ಹೆಜ್ಜೆ.
ಮೆಯ್ಗಾಪು ( ೯-೯೧ )-ಅಂಗರಕ್ಷಣೆ.
ಮೇಚಕ ( ೮-೨೩ ವ. )-ನೀಲ.
ಮೇಲುದ ( ೧೧-೧೬ )-ಸೆರಗು, ತಲೆಯ ಮೇಲೆ ಹೊದ್ದುಕೊಳ್ಳುವ ವಸ್ತ್ರ. ( ಮೇಲ್ಮುಸುಕು. ೧೨-೧೩ ).
ಮೇಳ ( ೧೪-೩೬ )-ಜೊತೆ.
ಮೈಂದವಾಟಿಕೆ (೧೧-೬೬)-ಒಂದು ತೆರದ ಬಾಳೆ.
ಮೊಕ್ಕಳಂ ( ೭-೬೭ )- ಅತಿಶಯವಾಗಿ.
ಮೊಗಸು ( ೧೧-೭೦ )-ಮುತ್ತಿಕೊಳ್ಳು. ೨. (೧೪-೨ )- ಬಯಸು, ಸಿದ್ಧನಾಗು.
ಮೊಗೆ ( ೭-೮೩ )-ತುಂಬಿಕೊಳ್ಳು.
ಮೊಳೆ ( ೭-೩೩ )-ಮೊಳಕೆ.
ಮೋದು ( ೧-೬೭ )-ತಾಕು, ಬಡಿ. (ಆಘಾತೇ. ಶ. ಮ ದ ),(೪-೯).

**ಯ**

ಯುವ ( ೬-೭೨ ವ )-ಜವೆಗೋದಿ.
ಯವನಿಕಾ ( ೬-೭೨ )-ಪರದೆ.
ಯಾವನಾಳ ( ೬-೭೨ ವ ) ?

**ರ**

ರಥಾಂಗ ( ೧೦-೧೯ )— ಚಕ್ರ, ಚಕ್ರವಾಕ ಪಕ್ಷಿ.
ರಂಭಾ ( ೧೧-೯೩ ವ. )—ಬಾಳೆ.
ರಯ್ಯ ( ೭-೫೮ )-ರಮ್ಯ.

ರಶ್ಮಿಕಲಾಪ (೮-೫೪ ವ.)-ಐವತ್ತುನಾಲ್ಕು ಯಷ್ಟಿಗಳುಳ್ಳ ಹಾರ. ( ಪೂ. ಪು. ೧೬-೫೯ ).
ರಸಿತ ( ೮-೩ ವ. )ದನಿಯಿಂದ ಕೂಡಿದ.
ರಾಜನ್ಯ ( ೮-೬೭ )-ಅರಸು.
ರಾಜಮಾಷ ( ೬-೭೨ ವ )-ಅಲಸಂದಿ.
ರುಂದ್ರ (೧೧-೧೦ವ.) ವಿಶಾಲ, ಮನೋಹರ
ರೇಚಕ (೭-೧೨೦)-ನೃತ್ಯದಲ್ಲಿ ಕೈಯನ್ನು ಒಮ್ಮೆಲೆ ಚಾಚುವುದು.
ರೈವೃಷ್ಟಿ ( ೭-೨೪ )-ಬಂಗಾರದ ಮಳೆ.
ರೋದೋಂತರ್ಭಾಗ ( ೧೧-೧೪ )— ಭೂಮ್ಯಾಕಾಶಗಳ ನಡುವಿನ ಪ್ರದೇಶ.

ಲ

ಲಟಹ (೭-೫೧) ಸೌಂದರ್ಯ (ತ್ಸ), ರಟಭ.
ಲಪನ ( ೬-೧೦೬ ವ.)—ಮುಖ.
ಲಂಬಣಿಗೆ ( ೧೩-೧೩ )—ಉದ್ದವಾದ ಕೊರಳ ಹಾರ.
ಲಂಬೂಷ ( ೭-೭೬ ವ )-ಏಳು ಸರಗಳಿರುವ ಕೊರಳ ಹಾರ.
ಲಯ (೯-೩೩)-ಸಂಗೀತದೊಳಗಿನ ಕಾಲ. ಅದು ದ್ರುತ, ಮಧ್ಯ, ಬಿಲಂಬಿತ ಎಂದು ಮೂರು ವಿಧವಾಗಿದೆ.
ಲಲ್ಲೆ ( ೧೨-೧೭ )-ಪ್ರೀತಿ, ಮೋಹ.
ಲಲ್ಲೈಸು (೧೨-೧೮)-ಪ್ರೀತಿಸು, ಮುದ್ದುಮಾಡು.
ಲವಲಿ ( ೧-೫೪ )—ಕಾಚು ( ಮರ ), ( ೧೩-೨ )-ಅರನೆಲ್ಲಿ.
ಲಳಿತ (೧೧-೯೧)-ಯಕ್ಷಗಾನ, ದೊಡ್ಡಾಟ
ಲಾಸ್ಯ ( ೭-೧೨೬ )-ನೃತ್ಯ.
ಲುಂದುವ ( ೧೨-೨೩ )-ಮಲಗುವ.

ವಂದಾರ ( ೩-೪೫ ವ. )—ಭಕ್ತಿ.
ವಲ್ಲಕೀ ( ೧-೭೮ )-ವೀಣೆ. ( ೯-೧೧೮).
ವಸಂತದೂತಿ ( ೧೧-೧೦೮)-ಆದಿರ್ಮುತ್ತೆ
ವಳಭಿ ( ೬-೧೦೬ ವ. )-ಚಪ್ಪರ.
ವಸುಧಾರೆ ( ೭-೩ )- ಸುವರ್ಣವೃಷ್ಟಿ.
ವಾಚಿಕ ( ೯-೨೮ )-ಮಾತುಗಳಿಗೆ ಸಂಬಂಧಿಸಿದ.
ವಾದಿತ್ರ ( ೧೩-೪೩ )—ವಾದ್ಯವಿಶೇಷ, ನಾಗಸ್ವರ. ?
ವಾಲಧಿ ( ೧೨-೫೬ ವ. )-ಕೂದಲುಗಳುಳ್ಳ ಬಾಲ.
ವಾಸವಾಸೆ ( ೮-೩೦ )-ಪೂರ್ವದಿಕ್ಕು.
ವಿಕರಣಸಂಭವದೇವಿಯರ್ ( ೬-೧೫)—ಅಂಗೋಪಾಂಗಗಳಿಗೆ ಅನುಕೂಲವಾಗುವದಕ್ಕೆ ಹುಟ್ಟಿದ ಉಪದೇವಿಯರು.
ವಿಕಲ್ಪ ( ೪-೧೯ )-ಭೇದ.
ವಿಗುರ್ವಿಸು ( ೪-೩ )—ಭಯಪಡಿಸು.
ವಿಚಿಕಿತ್ಸನ ( ೫-೫೭ )-ಶಂಕೆ.
ವಿಚ್ಛಾಯತೆ ( ೫-೨೭ )-ಕಾಂತಿಹೀನತೆ.
ವಿಜಯಚ್ಛಂದ ( ೮-೫೪ ವ. )-೫೦೪ ಎಳೆಗಳುಳ್ಳ ಹಾರವು (ಪೂ. ಪು. ೧೬-೫೭ ), ಇದನ್ನು ಅರ್ಧಚಕ್ರವರ್ತಿಗಳೂ ಬಲದೇವ, ಕಾಮದೇವ ಮೊದಲಾದವರೂ ಧರಿಸುತ್ತಾರೆ.
ವಿಜೃಂಭಣ (೫-೬೯ ವ )-ಆಕಳಿಸುವಿಕೆ.
ವಿತರಣ (೧೦-೮ವ.)-ಹಂಚುವಿಕೆ, ದಾನ.
ವಿತಾನ (೧೦-೪೭ )-ಮೇಲ್ಕಟ್ಟು ( ೮-೬೭ ವ. ).
ವಿದ್ಧ ( ೩-೮೭ )—ಚಿತ್ರ.

ವಿನಿಹಿತ (೮-೭೧ ವ.)—ಇಟ್ಟ.
ವಿನೇಯ (೭-೨೯)—ಶಿಷ್ಯ.
ವಿಪಂಚಿ (೯-೧೧೯)—ವೀಣೆ.
ವಿಭಾವ (೪-೬೭ ವ.)—(೯-೨೭)—
ಮನೋವಿಕಾರಗಳನ್ನು ಉದ್ದೀ
ಪಿಸುವ ಶೃಂಗಾರ, ಪರಿಮಳ,
ನಗೆಮಾತು, ಮುಂ.
ವಿಭ್ರಮ (೯-೩೩)-ಲಾವಣ್ಯ, ಬೆಡಗು,
ಗಾಡಿ, ಸೊಬಗು.
ವಿಷಾಣ (೧೩-೭೭ ವ.)—ಕೋಡು.
ವಿಸ್ರಂಭ (೧೧-೨೫ ವ.)—ವಿಶ್ವಾಸ.
ವಿಷ್ಕಂಭ (೭-೭೩ ವ.)—ಎತ್ತರ.
ವಿಷ್ಟಪ (೧೪-೪೬ ವ.)-ಲೋಕ, ಸೃಷ್ಟಿ.
ವಿಸ್ತಾರ (೧-೬೨ ವ.)-ಅಗಲಳತೆ
ವೃತ್ತಿ (೮-೭೨ ವ.)—ಉದ್ಯೋಗ,
(೯-೨೬) (೨)—ನಾಯಕ
ಕಾರ್ಯಾದಿ ಘಟನೆಗಳ ಸ್ವಭಾ
ವಕ್ಕೆ ವೃತ್ತಿ (ವ್ಯಾಪಾರ—
ಕೆಲಸ) ಎಂದು ಹೆಸರು.
'ವಿಲಾಸವಿನ್ಯಾಸಕ್ರಮೋ ವೃತ್ತಿಃ'
(ಕಾವ್ಯಮೀಮಾಂಸಾ).
'ಪ್ರವೃತ್ತಿರೂಪೋ ನೇತೃವ್ಯಾ—
ಪಾರ ಸ್ವಭಾವೋವೃತ್ತಿಃ' (ದಶ
ರೂಪಕ ೨-೪೭ ವ್ಯಾಖ್ಯಾನ).
ವೃಂದಾರಕ (೯-೭೦)—ಶ್ರೇಷ್ಠ.
ವೈವಸ್ವತ (೧೧-೧೦)—ಯಮ.
ವೈಶಾಖಸ್ಥಾನ (೭-೧೧೬)— ಎರಡೂ
ಪಾದಗಳನ್ನು ಬಿಡಿಸಿ ನಿಲ್ಲುವುದು.
ವ್ಯಂಜನ (೬-೭೭ವ.)-೧. ನಂಜಿಕೊಳ್ಳುವ
ಪದಾರ್ಥ, ೨. ಲಕ್ಷಣ,
(೮-೪ ವ.)—
ವ್ಯತಿಕರ (೪-೮೧)—ಸಂದರ್ಭ.
ವ್ಯತಿಕ್ರಮ (೬-೬೩ ವ.)-ಅಚೆ, ದಾಟು
ವಿಕೆ, ಕಳೆಯುವಿಕೆ.
ವ್ಯತಿಹಾರ (೪-೨೩ ವ.)-ಪ್ರಪಂಚ.
ವ್ಯಪಾಯ (೬-೭೭ ವ.)-ಅದೃಶ್ಯವಾ
ಗುವಿಕೆ, ಇಲ್ಲದಾಗುವಿಕೆ.
ವ್ಯಾಜ (೫-೬೯ ವ.)-ನಿಮಿತ್ತ, ಕಾರಣ.
ವ್ಯೂಢ (೮-೫೧)—ವಿಶಾಲ.

**ಶ**

ಶಫರ (೧೨-೭೮)-ಮೀನು.
ಶಬಲ (೭-೨೬ ವ.)-ಅನೇಕವರ್ಣದ
ಶಾಕವಾರ್ತಿಕ (೧೧-೨೬ ವ)ವಡಿ, ಫೇಣಿ.
ಶಾಕ್ವರ (೧೫-೩೨)-ಹೋರಿ, ಎತ್ತು.
ಶಾಲ (೬-೧೦೫)-ವಿಶಾಲ, ದೊಡ್ಡ.
ಶಿಖಂಡ (೮-೮ ವ.)-ಚಂಡಿಕೆ, ಮಸ್ತಕ.
ಶಿಖಂಡರತ್ನ— ಮಸ್ತಕಮಣಿ.
ಶಿಖಂಡಿ (೧-೬೩)—ನವಿಲು.
ಶಿಬಿಕೆ (೯-೭೨ ವ.)—ಪಲ್ಲಕ್ಕಿ.
ಶಿಶುಮಾರ (೯-೬೦)—ಮೊಸಳೆ.
ಶಿಂಶುಮಾರ (೫-೮೭ ವ.)-ಮೊಸಳೆ.
ಶೀಕರ (೭-೯೪)-ತುಂತುರ್ವನಿ.
ಶೀರ್ಷಕ(೮-೫೪ ವ.)-ಮಧ್ಯದಲ್ಲಿ ದೊಡ್ಡ
ದಾದ ಮುತ್ತುಗಳುಳ್ಳ ಹಾರ.
(ಪೂ. ಪು. ೧೬-೫೨).
ಶುದ್ಧಾಂತ (೧-೮೦)-ಅಂತಃಪುರ(೧೧-೪೨)
ಶುಶ್ರೂಷೆ (೮-೭೩)—ಸೇವೆ.
ಶೃಂಗಾಟಕ (೧೩-೫೭ ವ.)—ನಾಲ್ಕು
ಬಟ್ಟೆಗಳ ಕೂಟ.
ಶೈಲೂಷ (೩-೮೮)-ನಟ, ಬಹುರೂಪಿ.
ಶ್ರೀತಾಲ(೧೩-೩ವ.)-ಬೀಸಣಿಕೆಯ ತಾಳೆ
ಶ್ವಯು (೨-೧೫)-ಅಜಗರ

**ಷ**

ಷಷ್ಟಿಕಾ (೬-೭೨ವ.)-ಅರವತ್ತುದಿವಸಕ್ಕೆ ಬೆಳೆಬರುವ ಧಾನ್ಯ.

**ಸ**

ಸಕ್ಕಿ ( ೯-೧೧೫ )-ಸಾಕ್ಷಿ.
ಸಂಕ್ರಮಿಸು ೮-೨೯ವ.)ಸೇರು,ಪ್ರವೇಶಿಸು (ಪಂ.ಭಾ. ೨-೬೪ವ.)ಸೇರಿಸು.
ಸಂಘಾತ ( ೭-೧೨೬ )-ಸಮೂಹ.
ಸಂಚಕರ ( ೪-೨ )-ವ್ಯವಹಾರದಲ್ಲಿ ಮುಂಗಡ ಕೊಡುವ ಹಣ.
ಸಣ್ಣಿಗೆ (೫-೯೩ )-ಬೆಬ್ಬುಗಲ್ಲು.
ಸತತಗತಿ ( ೧೩-೩೫ )—ವಾಯು.
ಸತ್ತಿ ( ೮-೧೫ ವ. )-ತ್ಸ. ಛತ್ರ, ಕೊಡೆ.
ಸನಾಭಿ ( ೯-೭೨ ವ.)-ಸಂಬಂಧಿ, ಆಪ್ತ.
ಸಪರ್ಯಾ ( ೨-೨೪ ವ.)-ಸೇವೆ,ಪೂಜೆ.
ಸಪ್ತಚ್ಛದ ( ೧೨-೬೧ ವ )-ಏಳೆಲೆಬಾಳೆ, ಸಪ್ತಪರ್ಣ.
ಸಬ್ಬವ ( ೨-೭೧ )-ಪರಿಹಾಸ.
ಸಮುಕಟ್ಟು ( ೮-೬೫ )-ಏರ್ಪಡಿಸು. ( ಪಂ. ಭಾ. ೧೨-೧೮೨ ). ( ಶಾಂ. ಪು. ೫-೪೯ ವ.) ( ಗ. ಯು. ೨-೬೨ ವ.).
ಸಮುಱುವ ( ೭-೮ )-ಅಂದಗೊಳಿಸುವ.
ಸಮವಕಾರ(೭-೧೧೫ವ.)-ನಾಟಕಭೇದ.
ಸಮವಾಯ (೫-೫೪)-ಸಂಗ,ಪರಿಗ್ರಹಾ. ಸಕ್ತಿ.
ಸಮುದ್ಭಟ ( ೮-೩೨ ವ. )-ಉತ್ಕೃಷ್ಟ.
ಸರತ್ಸರಸೀ ( ೮-೬೮ ವ. )-ಒಂದನ್ನು ದಾಟಿ ಒಂದು ಸರೋವರ.
ಸರಭಸ [ ೮-೩೫ ವ. )-ಅತಿವೇಗ.
ಸರುಗ ( ೧೫-೪೨ )-ಅನ್ನ.(ತ್ಸ). ಚರುಕ.

ಸರ್ಷಪ ( ೬-೭೨ ವ.)—ಸಾಸವೆ.
ಸಲ್ಲಕಿ ( ೧೩-೫೫ )-ತದುಕಿನ ಮರ.
ಸವಂಗ ( ೧೧-೭೩ )-ಕುಪ್ಪುಸ, (ತ್ಸ) ಕವಚ.
ಸವಡಿ ( ೧೧-೪೧ ) ಜೋಡು, ಅವಳಿ.
ಸವನ ( ೭-೬೫ )-ಅಭಿಷೇಕ.
ಸಹಕಾರ ( ೬-೯೫ )-ಮಾವಿನ ಮರ.
ಸಾತ್ವತಿ ( ೯-೨೬ )- ಸತ್ತ್ವ, ಶೌರ್ಯ, ತ್ಯಾಗ, ದಯೆ, ಹರ್ಷ ಮುಂತಾದವುಗಳಿಂದ ಕೂಡಿ ಗೆಲುವಾಗಿರುವುದು.
ಸಾಧನ ( ೪-೯೨ )-ಸೈನ್ಯ ( ಪಂ. ಭಾ. ೧-೧, ೬-೩೨ ).
ಸಿಗ್ಗು ( ೧೪-೧೨೮ )-ನಾಚಿಕೆ.
ಸಿಂದುರ ( ೧೧-೮೮ )-ಲೊಕ್ಕೆ.
ಸಿಂಧುರ ( ೪-೨೩ ವ. )-ಆನೆ.
ಸಿಂಧುವಾರ ( ೧೧-೧೧೭ ವ. )-ಲಕ್ಕಿ.
ಸಿವಿಗೆ (೯-೭೬ ವ )-ಪಲ್ಲಕ್ಕಿ. ತ್ಸ.ಸಿಬಿಕಾ.
ಸಿವುಱು ( ೧೨-೫೯ )-ಚಿವುರು.
ಸೀಂಟು ( ೧೩-೭೧ ವ.) ತಿಕ್ಕು, ಉಜ್ಜು.
ಸುಗಿ ( ೫-೧೩ )—ಅಂಜು.
ಸುಟ್ಟುರೆ ( ೨-೫ )-ಸುಟ್ಟರಗಾಳಿ.
ಸುತ್ರಾಮ ( ೬-೧೦೬ ವ. )—ಇಂದ್ರ.
ಸುರಯಿ ( ೬- ೧೦೦ )—ಸುರಗಿ.
ಸುರುಳ್ ( ೨-೫೯ )-ಸುತ್ತಿಕೊಳ್ಳು.
ಸುಷಿರ ( ೫-೩೫ )—ನಾಗಸ್ವರ.
ಸುಸಿಲ್ ( ೪-೧೨ ವ. )—ಕಾಮಕ್ರೀಡೆ. ಸಂಭೋಗ ( ೧೨-೨೩ ).
ಸೂಡು ( ೯-೪ )—ಧರಿಸು.
ಸೂಸು ( ೭-೧೨೫ )—ತೂಗು, ಅಲೆ.
ಸೆಜ್ಜೆವಳ (೫-೨೨ವ.)-ಶಯ್ಯಾಗೃಹಪತಿ.

ಸೆಣಸು ( ೭–೨೦ )—ಹೋರಾಡು.
ಸೆರಗು (೧–೭೯ವ. )—ಸಹಾಯ.
ಸೇಕ ( ೬–೯೭ )— ಸಿಂಚನ, ಚಿಮ್ಮುಡಿ ಸುವಿಕೆ.
ಸೇದೆಗಿಡು ( ೨–೯ ವ. )—ಬಳಲಿಸು.
ಸೊಡರ್ ( ೧೧-೧೦೫ )— ದೀಪ.
ಸೊಸ್ನಲಿಗೆ ( ೬–೭೧ )—ಕಲಶ.
ಸೊಯುಂಬರ ( ೧೨–೨೮ )—(ತ್ಸ). ಸ್ವಯಂವರ.
ಸೊವಡು ( ೨-೫ )-ವಾಸನೆ,ಪರಿಮಳ.
ಸೋಗೆ ( ೪-೨೦ )-ಗಂಡು ನವಿಲು.
ಸೌಗಂಧಕ ( ೮-೬೩ ವ. )-ಗಂಧಶಾಲಿ.
ಸ್ತಂಬಕರಿ ( ೬–೭೭ ವ. )–ನೆಲ್ಲು.
ಸ್ತಂಭ ( ೮–೭೧ )-ಆಧಾರ.
ಸ್ತೋಭಂಗೊಳ್ ( ೧೧–೨೩ ವ. )— ತಡೆಗೊಳ್ಳು, ಅಡ್ಡಿಯಾಗು.
ಸ್ಥಪತಿ-ರತ್ನ ( ೪-೩೦ ವ. ) ಶಿಲ್ಪಿ, ಚಕ್ರವರ್ತಿಯ ೧೪ ಜೀವಾಜೀವ ರತ್ನಗಳಲ್ಲಿ ಒಬ್ಬನು.
ಸ್ಥಪುಟಿತ ( ೧೩-೫೫ )-ಏರಿಳಿತವಾದ.
ಸ್ಪಂದ ( ೧೧-೧೧ )-–ಅದರುವಿಕೆ.
ಸ್ಥಾಸಕ ( ೧೧-೧೪೧ )–ಲೇಪನ.
ಸ್ಫೂರಿ ( ೧೧–೧೨ ವ. )–ಕುದುರೆ.
ಸ್ಯಾಮಾಕ (.೬–೭೨ ವ. )-ಸಾವೆ.
ಸ್ಫೃತ ( ೧೨-೫೬ ವ. ) ಉಬ್ಬಿದ, ಘನ.

**ಹ**

ಹಯ್ಯಂಗವೀನ ( ೧೧-೫೬ ವ. )—ನಿನ್ನೆ ಹಾಲುಕಾಸಿ, ಹೆಪ್ಪುಹಾಕಿ, ಇಂದು ಕಡೆದು ಬೆಣ್ಣೆತೆಗೆದು, ಅದನ್ನು ಕಾಸಿದ-ತುಪ್ಪ. (ಹ್ಯೋಗೋದೋಹೋದ್ಭವಂ ಘೃತಂ ).
ಹರಿ ( ೧೨-೮೧ )—ಕುದುರೆ.
ಹಾರ ( ೮-೫೪ ವ. )— ನೂರೆಂಟು ಎಳೆಗಳುಳ್ಳ ಸರವು. ( ಪೂ. ಪು. ೧೬–೫೮ ).
ಹೂನ್ಯ ( ೪–ಪುಟ ೮೫ ರಗಳೆ )-ಪುಣ್ಯ.
ಹೃಷೀಕ ( ೫–೯೪) (ಪಂಚ) ಇಂದ್ರಿಯ.

ಅನುಬಂಧ ೪

# ವೃತ್ತಗಳು ಮತ್ತು ಅವುಗಳ ಸಂಖ್ಯೆ.

| ಕ್ರ. ಸಂ. | ವೃತ್ತಗಳ ಹೆಸರು. | ಆಶ್ವಾಸ. | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| | | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ | ೧೩ | ೧೪ | ೧೫ | ೧೬ | ಒಟ್ಟು. |
| ೧ | ಉತ್ಸವ | – | – | – | – | – | – | – | – | – | – | – | ೧ | – | – | – | – | ೧ |
| ೨ | ಮಾಲಿನಿ | – | – | – | – | ೧ | – | ೨ | ೨ | – | – | ೩ | – | – | – | . | . | ೮ |
| ೩ | ಹರಿಣಿ | – | – | – | ೧ | – | – | – | – | – | – | – | – | – | ೧ | . | . | ೨ |
| ೪ | ಪೃಥ್ವಿ | – | ೧ | ೩ | ೩ | – | – | ೨ | ೧ | – | ೧ | ೩ | ೨ | ೮ | – | . | . | ೨೪ |
| ೫ | ಶಾರ್ದೂಲ ವಿಕ್ರೀಡಿತ | ೨ | ೨ | – | – | – | ೧ | ೨ | ೧ | – | – | ೧ | – | . | , | . | ೧೧ | ೨೦ |
| ೬ | ಶಾರ್ಙ್ಗ (ಖಚರಪ್ಲುತ) | – | – | ೧ | – | – | – | – | – | – | – | – | – | – | . | . | . | ೧ |
| ೭ | ತರಳ | – | – | – | – | – | – | – | ೧ | – | – | – | – | – | . | . | . | ೧ |
| ೮ | ಉತ್ಪಲ ಮಾಲೆ | ೪ | ೫ | ೧೨ | ೨ | ೪ | ೧ | – | ೩ | – | ೧ | – | ೨ | . | ೧ | . | ೧ | ೩೬ |
| ೯ | ಮತ್ತೇಭವಿಕ್ರೀಡಿತ | ೨೬ | ೧೩ | ೧೮ | ೧೧ | ೧೦ | ೧೨ | ೨೮ | ೮ | ೧೪ | ೫ | ೧೭ | ೧೬ | ೧೪ | ೯ | ೫ | ೧೨ | ೨೧೮ |
| ೧೦ | ಉಜ್ವಳ (ಅನವದ್ಯ) | – | – | ೧ | ೧ | ೧ | – | ೧ | – | – | – | – | – | – | . | . | . | ೪ |
| ೧೧ | ಚಂಪಕ ಮಾಲೆ | ೯ | ೨೯ | ೧೯ | ೨೧ | ೯ | ೬ | ೬ | ೧೧ | ೮ | ೪ | ೧೭ | ೨೬ | ೫ | ೩ | ೧ | . | ೧೭೪ |
| ೧೨ | ಸ್ರಗ್ಧರೆ | ೨ | – | – | – | – | ೧ | ೧ | – | ೧ | ೧ | ೩ | – | ೧ | ೧ | . | . | ೧೧ |
| ೧೩ | ಮಹಾಸ್ರಗ್ಧರೆ | ೩ | ೨ | ೭ | ೧೫ | ೩ | ೩ | ೬ | ೧೦ | ೩ | ೪ | ೯ | ೬ | ೧೧ | ೨೦ | ೨ | ೪ | ೧೦೮ |
| ೧೪ | ಪುಷ್ಪಿತಾಗ್ರೆ | – | – | – | – | – | – | – | – | – | – | – | – | – | – | . | ೨ | ೨ |
| ೧೫ | ಅನುಷ್ಟುಭ (ಶ್ಲೋಕ) | – | – | – | – | – | – | – | – | – | – | – | – | – | – | . | ೨೪ | ೨೪ |
| ೧೬ | ಕಂದ | ೩೮ | ೨೭ | ೩೧ | ೪೫ | ೭೩ | ೮೨ | ೮೦ | ೪೦ | ೧೦೭ | ೫೨ | ೧೦೩ | ೭೭ | ೫೩ | ೧೧೪ | ೪೨ | ೨೫ | ೯೮೯ |
| ೧೭ | ತ್ರಿಪದಿ | – | – | – | – | – | ೨ | – | – | – | – | – | – | – | – | . | . | ೨ |
| ೧೮ | ಮಂದಾನಿಲ ರಗಳೆ | – | – | – | ೧ | – | – | – | – | – | – | – | . | – | . | . | . | ೧ |
| ೧೯ | ಲಲಿತ ರಗಳೆ | – | – | – | – | – | – | ೧ | – | – | – | – | – | – | . | . | . | ೧ |
| ೨೦ | ಅಕ್ಕರ (ಪಿರಿಯಕ್ಕರ) | – | – | – | – | – | ೧ | – | – | – | – | ೧ | – | – | . | . | ೧ | ೩ |
| | ಒಟ್ಟು | ೮೪ | ೭೯ | ೯೨ | ೧೦೦ | ೧೦೧ | ೧೦೯ | ೧೨೯ | ೭೭ | ೧೯೩ | ೬೮ | ೧೫೭ | ೧೩೦ | ೯೨ | ೧೪೯ | ೫೦ | ೮೦ | ೧೬೩೦ |

## ಅನುಬಂಧ ೫.

# ಪದ್ಯಗಳ ಅನುಕ್ರಮಣಿಕೆ.

—:(o):—

### ಅ

ಇ

## ಫ

ಹ